'ಆನಂದ ಕರ್ಣಾಟಕ ಗ್ರಂಥರತ್ನಮಾಲೆ. ನಂ. ೨.

ಶ್ರೀ ವ್ಯಾಸ ಮಹರ್ಷಿ ಪ್ರಣೀತ

# ಶ್ರೀಮದ್ಭಾಗವತವು

(ಪಂಚಮ ಷಷ್ಠ ಸ್ಕಂಧಗಳು)

ಕರ್ಣಾಟಕ ವಚನವು

---

ಶ್ರೀಮದ್ಯದುಶೈಲನಿವಾಸರಸಿಕ

ಪಂಡಿತ ದೇವಶಿಖಾಮಣಿ ಅಳಸಿಂಗರಾಚಾರ್ಯ ವಿರಚಿತವು.

**VOl. IV.**

ಮುದ್ರಾಸು

ಆನಂದಮುದ್ರಾಕ್ಷರಶಾಲೆಯಲ್ಲಿ ಮುದ್ರಿತವಾಗಿ

ಆರ್. ವೇಂಕಟೇಶ್ವರ ಕಂಪೆನಿಯವರಿಂದ

ಪ್ರಕಟಿಸಲ್ಪಟ್ಟಿದೆ.

---

1921

# ಪಂಚಮ ಷಷ್ಠ ಸ್ಕಂಧಗಳೊಳಗಣ ಚಿತ್ರಪಟಗಳು.

---



---

# ಪಂಚಮಸ್ಕಂಧದ ವಿಷಯಾನುಕ್ರಮಣಿಕೆ.

---

# ಷಷ್ಠಸ್ಕಂಧದ ವಿಷಯಾನುಕ್ರಮಣಿಕೆ.

---



ಶ್ರೀಕೃಷ್ಣಾಯ ಪರಬ್ರಹ್ಮಣೇ ನಮಃ.

# ಶ್ರೀಮದ್ಭಾಗವತವು

## ಪಂಚಮಸ್ಕಂಧವು.

### ಪ್ರಿಯವ್ರತನ ವೃತ್ತಾಂತವು.

ಪರೀಕ್ಷಿದ್ರಾಜನು ಶುಕಮುನಿಯನ್ನು ಪ್ರಶ್ನೆಮಾಡುವನು."ಓ ಮಹರ್ಷೀ! ಪ್ರಿಯವ್ರತನಾದರೋ ಪರಮಭಾಗವತೋತ್ತಮನು! ಯಾವಾಗಲೂ ಆತ್ಮಾನುಭವವೆಂಬ ಆನಂದವನ್ನನುಭವಿಸುತಿದ್ದವನು.ಇಂತವನು ನಾರದನಿಂದ ಆತ್ಮತತ್ವವನ್ನು ಕೇಳಿದಮೇಲೆಯೂ ತಿರುಗಿ ರಾಜ್ಯಭಾರವನ್ನು ನಡೆಸುತಿದ್ದನೆಂದು ಹೇಳಿದೆಯಲ್ಲವೆ? ಆತ್ಮಜ್ಞಾನವನ್ನು ಪಡೆದು, ತನ್ನ ಹೃದಯದಲ್ಲಿಯೇ ಪರಮಾತ್ಮನನ್ನು ಸಾಕ್ಷಾತ್ಕರಿಸಿ, ಆ ಆನಂದಾನುಭವದಲ್ಲಿದ್ದ ರಾಜನಿಗೆ, ದುಃಖಪ್ರಚುರವಾದ ಗೃಹಧರ್ಮದಲ್ಲಿ ಹೇಗೆ ಪ್ರವೇಶವುಂಟಾಯಿತು? ಇದರಿಂದ ಅವನಿಗೆ, ತಿರುಗಿ ಕರ್ಮಬಂಧವೂ, ಜ್ಞಾನಸಂಕೋಚವೂ ಉಂಟಾಗದೆ ಬಿಡುವುದೆ? ಮೊದಲು ಸಂಸಾರಚಿಂತೆಯನ್ನು ಬಿಟ್ಟು, ಪರಮಾತ್ಮಚಿಂತೆಯಲ್ಲಿರುವ ಮಹಾತ್ಮರಿಗೆ, ಹೀಗೆ ಗೃಹಸ್ಥಧರ್ಮದಲ್ಲಿ ಆಸೆಹುಟ್ಟುವುದೇ ಯುಕ್ತವಲ್ಲ. ಭಗವಂತನ ಪಾದಛಾಯೆಯನ್ನು ಹಿಡಿದು ಅದರಿಂದುಂಟಾದ ಮಹಾನಂದವನ್ನನುಭವಿಸತಕ್ಕವರಿಗೆ, ಅಲ್ಪಸುಖಕಾರಣವಾದ ಕುಟುಂಬಧರ್ಮದಲ್ಲಿ ಪ್ರವೃತ್ತಿಯುಂಟಾಯಿತೆಂಬುದು ಅಸಂಭವವಲ್ಲವೆ? ಒಂದುವೇಳೆ "ಪ್ರಾರಬ್ಧಕರ್ಮಶೇಷದಿಂದ ಅಂತಹ ಮ

1921-59 B

ಹಾತ್ಮರಿಗೂ ಸಂಸಾರವು ತಗುಲಿಕೊಳ್ಳಬಾರದೆ?" ಎಂದರೆ, ಹಾಗೆ ಪ್ರಿಯವ್ರತನು ಸಂಸಾರಬಂಧವನ್ನು ಕಟ್ಟಿಕೊಂಡಮೇಲೆ, ಅವನಿಗೆ ಮೋಕ್ಷವುಂಟಾದುದು ಹೇಗೆ? ಹೆಂಡರು ಮಕ್ಕಳು, ಮುಂತಾದ ಸಂಸಾರಬಂಧದಲ್ಲಿ ಸಿಕ್ಕಿ ಬಿದ್ದವರಿಗೆ, ತಿರುಗಿ ಪರಮಾತ್ಮನಲ್ಲಿ ಭಕ್ತಿಯೂ, ಅದರಿಂದ ಮುಕ್ತಿಯೂ ಉಂಟಾಗುವುದೆಂದರೇನು? ಈ ಸಂದೇಹವು ನನ್ನನ್ನು ಬಹಳವಾಗಿ ಬಾಧಿಸುತ್ತಿರುವುದರಿಂದ ಅದನ್ನು ಪರಿಹರಿಸಬೇಕು" ಎಂದನು. ಅದಕ್ಕಾ ಶುಕಮುನಿಯು "ರಾಜೇಂದ್ರಾ! ನೀನು ಕೇಳಿದ ಪ್ರಶ್ನವು ಯುಕ್ತವಾಗಿಯೇ ಇರುವುದು. ಆದರೆ ಇದರಲ್ಲಿ ತಿಳಿಯಬೇಕಾದ ಒಂದು ಸೂಕ್ಷ್ಮಾಂಶವುಂಟು. ಜ್ಞಾನಿಗಳೂಕೂಡ ಕೆಲಕೆಲವು ಸಂದರ್ಭಗಳಲ್ಲಿ ಕುಟುಂಬಧರ್ಮದಲ್ಲಿ ಪ್ರವರ್ತಿಸಬೇಕಾಗಿ ಬರುವುದು. ಆದರೆ ಇತರನಿರ್ಬಂಧಗಳಿಗಾಗಿ ಅವರು ಅದನ್ನಂಗೀಕರಿಸಬೇಕಾಗುವುದೇ ಹೊರತು, ತಾವಾಗಿ ಆಸೆಪಟ್ಟು ಬರುವವರಲ್ಲ ಆದುದರಿಂದ ಭಕ್ತಿಯೋಗವನ್ನು ಸಾಧಿಸಿದವರು ಕುಟುಂಬಧರ್ಮದಲ್ಲಿದ್ದರೂ, ಅವರಿಗೆ ಅದರ ಸಂಬಂಧವಿಲ್ಲದಂತೆಯೇ ಎಣಿಸಬೇಕು. ಗೃಹಸ್ಥಧರ್ಮದಲ್ಲಿದ್ದಮಾತ್ರಕ್ಕೆ ಅವರಿಗೆ ಭಗವದ್ಭಕ್ತಿಯು ನಷ್ಟವಾಗುವುದೆಂದು ತಿಳಿಯಬಾರದು! ಪುಣ್ಯಕೀರ್ತಿಯಾದ ಭಗವಂತನ ಪಾದಾರವಿಂದಗಳ ಮಕರಂದರಸವನ್ನು ಒಂದಾವರ್ತಿ ಸವಿನೋಡಿ, ಅದರಲ್ಲಿಯೇ ನಟ್ಟ ಮನಸ್ಸುಳ್ಳವರಿಗೆ, ಆ ರುಚಿಯು ಎಂದಿಗೂ ತಪ್ಪಿ ಹೋಗದು. ಅವರಿಗೆ ಯಾವಾಗಲೂ ಭಗವಂತನ ಕಥಾಶ್ರವಣಾದಿಗಳಲ್ಲಿಯೇ ಮನಸ್ಸು ಪ್ರವರ್ತಿಸುತ್ತಿರುವುದು. ಒಂದುವೇಳೆ ಆಕಸ್ಮಿಕವಾದ ವಿಘ್ನಗಳಿಂದ ಸ್ವಲ್ಪಕಾಲದವರೆಗೆ ತಪ್ಪಿದರೂ, ಅವರಿಗಿರುವ ಪೂರ್ವವಾಸನೆಯಿಂದ,ಮೋಕ್ಷಕಾರಣವಾದ ಆ ಭಕ್ತಿಯು ಅನುವರ್ತಿಸಿಬರುವುದೇಹೊರತು ಬಿಟ್ಟು ಹೋಗಲಾರದು. ಆದುದರಿಂದ ಕುಟುಂಬಧರ್ಮದಲ್ಲಿದ್ದಮಾತ್ರಕ್ಕೆ, ಭಕ್ತಿಯು ತಪ್ಪಿಹೋಗುವುದೆಂಬ ಮಾತು ಯುಕ್ತವಲ್ಲ. ಹಾಗೆಯೇ ಮನುಪುತ್ರನಾದ ಪ್ರಿಯವ್ರತನೂಕೂಡ, ಮೊದಲು ಭಾಗವತಧರ್ಮದಲ್ಲಿಯೇ ಆಸೆಯುಳ್ಳವನಾಗಿ, ನಾರದಮಹರ್ಷಿಯಲ್ಲಿ ಮರೆಹೊಕ್ಕು, ಅವನಿಂದ ಪರಮಪುರುಷಾರ್ಥಸ್ವರೂಪವನ್ನು ಅನಾಯಾಸ

ವಾಗಿಯೇ ತಿಳಿದುಕೊಂಡನು. ಅದರಂತೆಯೇ ತಾನು ಜ್ಞಾನಯೋಗವನ್ನು ಸಾಧಿಸಬೇಕೆಂಬ ಸಂಕಲ್ಪದಿಂದ, ಎಡೆಬಿಡದೆ ಭಗವದ್ಧ್ಯಾನಪರನಾಗಿಯೇ ಇದ್ದನು. ತನ್ನ ಸಮಸ್ತಕರಣಗಳನ್ನೂ,ಕ್ರಿಯೆಗಳನ್ನೂ ಭಗವಂತನಾದ ಆ ವಾಸುದೇವನಲ್ಲಿಯೇ ಅರ್ಪಿಸುತ್ತಬಂದನು. ಈ ಸಂದರ್ಭದಲ್ಲಿ ಇವನ ತಂದೆ ಯಾದ ಸ್ವಾಯಂಭುವಮನುವು,ತನ್ನ ಪುತ್ರನಾದ ಈ ಪ್ರಿಯವ್ರತನು ರಾಜ ಗುಣಗಳಲ್ಲಿ ತನಗೆ ಸಮಾನನಾಗಿರುವುದನ್ನು ನೋಡಿ, ಅವನನ್ನು ರಾಜ್ಯಪಾ ಲನಮಾಡುವಂತೆ ನಿಯಮಿಸಿದನು. ತಂದೆಯ ಮಾತನ್ನು ತಿರಸ್ಕರಿಸಬಾ ರದಾಗಿದ್ದರೂ, ಪ್ರಿಯವ್ರತನು, ತಾನು ರಾಜ್ಯವನ್ನು ಕೈಕೊಂಡಪಕ್ಷದಲ್ಲಿ, ಅದರಿಂದ ಆತ್ಮಸ್ವರೂಪವು ಮರೆತು, ದೇಹಾಭಿಮಾನವೂ, ಅದರಿಂದ ರಾಗದ್ವೇಷಾದಿಗಳೂ ಹೆಚ್ಚಿಬರುವುವೆಂಬ ಮುಂದಾಲೋಚನೆಯಿಂದ, ಆಗಲೂ ಅದನ್ನೊಪ್ಪದೆ ಹೋದನು. ಇದರಮೇಲೆ ಆದಿದೇವನಾಗಿಯೂ, ತನ್ನ ಜ್ಞಾನಶಕ್ತಿಯಿಂದ ತ್ರಿಗುಣಾತ್ಮಕವಾದ ಸಮಸ್ತಪ್ರಪಂಚವ ನ್ನೂ ವ್ಯಾಪಿಸಿ ಲೋಕದ ಅಭಿಪ್ರಾಯವನ್ನು ತಿಳಿಯಬಲ್ಲವನಾಗಿಯೂ ಇರುವ ಚತುರ್ಮುಖನು, ರಾಜ್ಯವನ್ನು ಕೈಕೊಳ್ಳುವವಿಷಯದಲ್ಲಿ ಈ ಪ್ರಿಯ ವ್ರತನನ್ನೊಪ್ಪಿಸುವುದಕ್ಕಾಗಿ, ವೇದಪುರುಷರೊಡನೆಯೂ, ಮರೀಚಿ ಮೊದ ಲಾದ ತನ್ನ ಪರಿವಾರದೊಡನೆಯೂ ಸತ್ಯಲೋಕದಿಂದ ಹೊರಟು ಭೂ ಲೋಕಕ್ಕೆ ಬಂದನು. ಈ ಚತುರ್ಮುಖನು ಆಕಾಶಮಧ್ಯಗತನಾದ ಚಂದ್ರ ನಂತೆ, ಕಾಂತಿವಿಶೇಷದಿಂದ ಪ್ರಕಾಶಿಸುತ್ತ ಕೆಳಕ್ಕಿಳಿದು ಬರುವಾಗ, ಅಲ್ಲಲ್ಲಿ ದೇವಶ್ರೇಷ್ಠರು ವಿಮಾನಾರೂಢರಾಗಿ ಬಂದು ಪೂಜೆಗಳನ್ನರ್ಪಿಸುತಿದ್ದರು. ದಾರಿಯುದ್ದಕ್ಕೂ, ಸಿದ್ಧರೂ, ಗಂಧರ್ವರೂ, ಚಾರಣರೂ, ಸಾಧ್ಯ ರೂ, ಮಹರ್ಷಿಗಳೂ, ಕಿನ್ನರರೂ,ಗುಂಪುಗುಂಪಾಗಿ ಬಂದು ಅವನ ಗುಣ ಗಳನ್ನು ಸ್ತುತಿಸುತಿದ್ದರು. ಬ್ರಹ್ಮನು ಇವರ ಸತ್ಕಾರಗಳೆಲ್ಲವನ್ನೂ ಪ್ರೀತಿ ಯಿಂದ ಕೈಕೊಳ್ಳುತ್ತ, ತನ್ನ ದೇಹಕಾಂತಿಯಿಂದ ಗಂಧಮಾದನಪರ್ವ ತದ ತಪ್ಪಲುಗಳೆಲ್ಲವನ್ನೂ ಪ್ರಕಾಶಗೊಳಿಸುವಂತೆ, ಪ್ರಿಯವ್ರತನಿದ್ದಸ್ಥಳ ಕ್ಕೆ ಬಂದನು. ಇಷ್ಟರಲ್ಲಿ ಪ್ರಿಯವ್ರತನಿಗೆ ತತ್ವೋಪದೇಶವನ್ನು ಮಾ ಡುವುದಕ್ಕಾಗಿ ಮೊದಲೇ ಆ ಸ್ಥಳಕ್ಕೆ ಬಂದಿದ್ದ ನಾರದಮುನಿಯು, ಹಂ

ಸಾರೂಢನಾಗಿ ಬರುತಿದ್ದ ತನ್ನ ತಂದೆಯಾದ ಬ್ರಹ್ಮನನ್ನು ಕಂಡು, ತಟ್ಟನೆ ಮೇಲೆದ್ದು ಕೈಮುಗಿದು, ವಿಧ್ಯುಕ್ತವಾದ ಪೂಜೆಯಿಂದ ಅವನನ್ನು ಸತ್ಕರಿಸಿದನು. ಅದರಂತೆಯೇ ತಂದೆಮಕ್ಕಳಾದ ಸ್ವಾಯಂಭುವ ಪ್ರಿಯವ್ರತರಿಬ್ಬರೂ ಪ್ರತ್ಯುತ್ಥಾನಾದಿಗಳಿಂದ ಗೌರವಿಸಿ ಬ್ರಹ್ಮನನ್ನು ಬಹುಮಾಡಿಕೊಂಡರು ಇವರ ಸತ್ಕಾರಗಳಿಗೂ, ಸ್ತೋತ್ರಗಳಿಗೂ, ಕುಶಲಪ್ರಶ್ನೆಗಳಿಗೂ ಸಂತುಷ್ಟನಾದ ಬ್ರಹ್ಮನು ದಯಾದೃಷ್ಟಿಯಿಂದ ಪ್ರಿಯವ್ರತನನ್ನು ನೋಡಿ ಹೀಗೆಂದು ಹೇಳುವನು. “ವತ್ಸ ಪ್ರಿಯವ್ರತಾ! ನಾನೊಂದು ಸತ್ಯವಾದ ಮಾತನ್ನು ಹೇಳುವೆನು ಕೇಳು! ನಾನಾಗಲಿ, ನೀನಾಗಲಿ ಈ ನಾರದನಾಗಲಿ, ಈ ಮರೀಚಿ ಮೊದಲಾದವರಾಗಲಿ, ಭಗವಂತನ ಆಜ್ಞಾಧೀನರಾಗಿ ನಡೆಯಬೇಕಾದವರೇಹೊರತು, ಯಾರೂ ಅದನ್ನು ಮೀರಿ ನಡೆಯಲಾರೆವು ಹಾಗೆ ಮೀರಹೋದಪಕ್ಷದಲ್ಲಿ, ಅವನ ಆಗ್ರಹಕ್ಕೆ ಪಾತ್ರರಾಗಬೇಕಾಗುವುದು. ಆದುದರಿಂದ ನೀನೂ ಈಗ ಆ ಭಗವಂತನ ಆಜ್ಞೆಯನ್ನು ಮೀರಿನಡೆಯುವುದು ಯುಕ್ತವಲ್ಲ. ಪ್ರಾಣಿಗಳೆಲ್ಲವೂ ಆ ಭಗವಂತನ ಸಂಕಲ್ಪಾನುಸಾರವಾಗಿಯೇ ಕರಣಕಳೇಬರಗಳನ್ನು ಹೊಂದಿ ಬಂದಿರುವುವು ಆದುದರಿಂದ ಲೋಕದಲ್ಲಿ ಉಪವಾಸಾದಿವ್ರತದಿಂದಾಗಲಿ, ತಪಸ್ಸಿನಿಂದಾಗಲಿ, ಶಾಸ್ತ್ರಜ್ಞಾನದಿಂದಾಗಲಿ, ಯೋಗಬಲದಿಂದಾಗಲಿ, ಬುದ್ಧಿಬಲದಿಂದಾಗಲಿ, ಧನಬಲದಿಂದಾಗಲಿ, ಧರ್ಮಕಾರ್ಯಗಳಿಂದಾಗಲಿ, ಮತ್ತೊಬ್ಬರ ಸಹಾಯದಿಂದಾಗಲಿ, ಅದಕ್ಕಿಂತಲೂ ಉತ್ತಮವಾದ ಬೇರೆ ಉಪಾಯದಿಂದಲೇ ಆಗಲಿ, ಯಾವನೂ ಆ ಭಗವಂತನ ನಿಯಮವನ್ನು ಮೀರಿ ನಡೆಯಲಾರನು. ಲೋಕದಲ್ಲಿ ಸಮಸ್ತ ಜೀವರಾಶಿಗಳೂ, ಮುಂದೆಮುಂದೆ ಜನನಮರಣಗಳಿಗೆ ಕಾರಣಗಳಾದ ಕರ್ಮಗಳನ್ನು ನಡೆಸುವುದಕ್ಕಾಗಿಯೂ, ಸುಖ, ದುಃಖ, ಭಯ, ಶೋಕ, ಮೋಹ, ಮುಂತಾದುವುಗಳನ್ನನುಭವಿಸುವುದಕ್ಕಾಗಿಯೂ, ಆ ಭಗವಂತನ ಸಂಕಲ್ಪಾನುಸಾರವಾಗಿಯೇ ಈ ಶರೀರಗಳನ್ನು ಪಡೆದು ಬರುವುವು. ಆ ಭಗವಂತನ ಉದ್ದೇಶವನ್ನಾಗಲಿ, ಅವನ ಸ್ವರೂಪವನ್ನಾಗಲಿ, ನಾವೊಬ್ಬರೂ ಕಾಣಲಾರೆವು ಮತ್ತು ಮನುಷ್ಯನು ಪಶುಗಳಿಗೆ ಮೂಗುದಾರವನ್ನು ಬೀರಿ ಎಳೆಯುವಂತೆ,

ಭಗವಂತನು ಸಾತ್ವಿಕಾದಿಭೇದಗಳುಳ್ಳ ಆಯಾ ವರ್ಣಾಶ್ರಮಕರ್ಮಗ ಳೆಂಬ ಹಗ್ಗಗಳಿಂದ ನಮ್ಮನ್ನು ಕಟ್ಟಿ, ವೇದವಾಕ್ಯವೆಂಬ ತಂತಿಯಿಂದ ಬೇರೆ ಎಳೆಯುತ್ತಿರುವನು. ಅವನು ಎಳೆದ ದಾರಿಯಲ್ಲಿ ನಾವು ಅವನ ಸೇವೆ ಯನ್ನು ನಡೆಸಬೇಕಾಗಿರುವುದು. ಇದಲ್ಲದೆ ಎಲೆ ವತ್ಸಾ! ಕರ್ಮಾನು ಸಾರವಾಗಿ ಆ ಸರ್ವೇಶ್ವರನು ನಮನಮಗೆ ನಿಯಮಿಸಿಕೊಟ್ಟಂತೆ, ನಾ ವು ಸುಖವನ್ನಾಗಲಿ, ದುಃಖವನ್ನಾಗಲಿ, ದೇವಮನುಷ್ಯಾದಿಶರೀರಗಳ ನ್ನಾಗಲಿ ಅನುಭವಿಸದೆ ತೀರದು! ಕುರುಡನು ಮತ್ತೊಬ್ಬನ ಸಹಾಯದಿಂದ ನಡೆಯುವಾಗ, ಅವನ ಇಷ್ಟಾನುಸಾರವಾಗಿ ಬಿಸಿಲಿನಲ್ಲಿಯೂ, ನೆಳಲಲ್ಲಿಯೂ ನಡೆಯಬೇಕಾಗುವುದಲ್ಲವೆ ? ಅದರಂತೆಯೇ ಭಗವಂತನು ಬಿಟ್ಟ ದಾರಿಯ ಲ್ಲಿ ನಾವು ನಡೆಯಬೇಕೇಹೊರತು, ನಮ್ಮ ಇಷ್ಟದಂತೆ ಹೋಗುವುದಕ್ಕೆ ನಾವು ಸಮರ್ಥರಲ್ಲ! ಆದರೆ "ಸಂಸಾರಿಯಾದವನು ಕರ್ಮಕ್ಕೆ ಕಟ್ಟುಬಿಳ ಬೇಕಾದುದೇನೋ ಸಹಜವಾಗಿದ್ದರೂ, ನಾನು ಆತ್ಮವಿದ್ಯೆಯನ್ನು ತಿಳಿದ ಮೋಕ್ಷಾಪೇಕ್ಷೆಯುಳ್ಳವನಾಗಿರುವಾಗ,ನನಗೆ ಈ ಸಂಸಾರಸಂಬಂಧವೇಕೆ?" ಎಂದು ನೀನು ಕೇಳಬಹುದು. ಯಾರಾದರೇನು ? ಮುಮುಕ್ಷುವಾಗಿದ್ದ ರೂ, ಅಜ್ಞಾನದಶೆಯಲ್ಲಿ ಹೇಗೋಹಾಗೆ ಜ್ಞಾನೋದಯವಾದಮೇಲೆಯೂ ಕೂಡ, ತನ್ನ ಪ್ರಾರಬ್ಧಕರ್ಮಗಳಿಗೆ ಫಲವನ್ನು ಅನುಭವಿಸಿಯೇ ತೀರಸಬೇ ಕು. ಅದಕ್ಕಾಗಿ ಮುಕ್ತನಾಗುವವರೆಗೆ ಆ ದೇಹವನ್ನೂ ಧರಿಸಿ ಯೇ ತೀರಬೇಕು. ಈ ದೇಹಧಾರಣವೂ, ಕರ್ಮಾನುಭವವೂ ಅ ಜ್ಞಾನಿಗಳಿಗೆ ಹೇಗೋಹಾಗೆ ಜ್ಞಾನಿಗಳಿಗೂ ಸಮಾನವಾಗಿದ್ದರೂ, ಇವ ರಬ್ಬರ ಸ್ವಭಾವಗಳಲ್ಲಿ ಬಹಳ ತಾರತಮ್ಯವುಂಟು. ಜ್ಞಾನಿಯಾದವನು ದೇ ಹಾಭಿಮಾನವಿಲ್ಲದೆ, ತನ್ನ ಕರ್ಮಶೇಷವನ್ನು ಕಳೆಯುವುದಕ್ಕಾಗಿಮಾತ್ರವೇ ಆ ದೇಹವನ್ನು ಹೊತ್ತಿದ್ದು, ಕರ್ಮಫಲಗಳನ್ನೂ ಅನುಭವಿಸುತ್ತಿರುವನು. ಅಜ್ಞಾನಿಯಾದರೋ, ತಾನು ಮತ್ತೊಂದು ಜನ್ಮವನ್ನು ಪಡೆಯುವುದಕ್ಕೆ ಬೇಕಾದ ಕರ್ಮಗಳನ್ನೇ ನಡೆಸುತ್ತಬರುವನು. ಆದುದರಿಂದ ವತ್ಸಾ! ನೀ ನು ಜ್ಞಾನೋದಯವನ್ನು ಹೊಂದಿ ಮುಮುಕ್ಷುವಾಗಿದ್ದರೂ, ನಿನ್ನ ಪ್ರಾ ರಬ್ಧಕರ್ಮವನ್ನು ಕಳೆಯುವುದಕ್ಕಾಗಿ,ಈ ದೇಹವನ್ನು ಹೊತ್ತಿರದೆ ತೀರದು.

“ಹಾಗಿದ್ದರೆ ಆ ಜೀವಿತಕಾಲವನ್ನು ಕಾಡಿನಲ್ಲಿದ್ದೇ ಕಳೆಯಬಾರದೆ ? ಅರಮನೆಯಲ್ಲಿ ಸಂಸಾರಭಯಾಸ್ಪದವಾದ ಗೃಹಧರ್ಮದಲ್ಲಿದ್ದೇ ಕಳೆಯಬೇಕಾದುದೇನು?” ಎಂದು ಕೇಳುವೆಯಾ? ಅಡವಿಯಲ್ಲಿದ್ದರೇನು? ಅರಮನೆಯಲ್ಲಿದ್ದರೇನು ? ಎಚ್ಚರತಪ್ಪಿದವನಿಗೆ ಅಡವಿಯಲ್ಲಿದ್ದರೂ ಭಯವು ತಪ್ಪದು. ಎಚ್ಚರವುಳ್ಳವನು ಕುಟುಂಬಸಮೇತನಾಗಿ ಮನೆಯಲ್ಲಿದ್ದರೂ ಅವನಿಗೆ ಭಯವಿಲ್ಲ. ಮನುಷ್ಯನು ನಿರ್ಜನವಾದ ಕಾಡಿಗೆ ಹೋದರೂ, ಮನಸ್ಸು ಮತ್ತು ಪಂಚೇಂದ್ರಿಯಗಳೆಂಬ ಆರು ಮಂದಿ ಶತ್ರುಗಳು ಅವನ ಸಂಗಡಲೇ ಇರುವರು. ಆ ಇಂದ್ರಿಯಗಳನ್ನಡಗಿಸಿ, ಆತ್ಮಾನುಭವವನ್ನೇ ಮುಖ್ಯವಾಗಿಟ್ಟುಕೊಂಡಿರತಕ್ಕವನಿಗೆ,ಆ ಗೃಹಸ್ಥಾಶ್ರಮವುಯಾವ ಕೇಡನ್ನೂ ಮಾಡಲಾರದು. “ಆತ್ಮಜ್ಞಾನಕ್ಕೆ ವಿರೋಧಿಗಳಾದ ಷಡಿಂದ್ರಿಯಗಳನ್ನೂ ಕಾಡಿನಲ್ಲಿದ್ದೇ ಜಯಿಸಬಾರದೆ!” ಎಂದು ಕೇಳುವೆಯಾ? ಅದು ಹಾಗಲ್ಲ. ರಾಜನು ದುರ್ಗಗಳನ್ನಾಶ್ರಯಿಸಿಯೇ ಶತ್ರುಗಳನ್ನು ಜಯಿಸುವಂತೆ, ಇಂದ್ರಿಯಜಯವನ್ನಪೇಕ್ಷಿಸುವವನು, ಮೊದಲು ಗೃಹಧರ್ಮದಲ್ಲಿದ್ದೇ ಅವುಗಳನ್ನು ಜಯಿಸಿ, ಅವುಗಳ ಪ್ರಾಬಲ್ಯವು ಮುರಿದಮೇಲೆ, ಯಥೇಷ್ಟವಾಗಿ ಎಲ್ಲಿರುವುದರೂ ನಿಶ್ಚಿಂತನಾಗಿರಬಹುದು. ರಾಜೇಂದ್ರಾ!ಭ್ರಮರವು ಕಮಲಕೋಶದಲ್ಲಿ ಸೇರಿ, ಮಳೆ,ಗಾಳಿ,ಬಿಸಿಲುಗಳ ಬಾಧೆಯನ್ನು ತಪ್ಪಿಸಿಕೊಳ್ಳುವಂತೆ,ನೀನೂಈಗ ಭಗವಂತನ ಪಾದಾರವಿಂದವೆಂಬ ದುರ್ಗವನ್ನಾಶ್ರಯಿಸಿದರೆ ಜ್ಞಾನವಿರೋಧಿಗಳಾದ ಇಂದ್ರಿಯಗಳು ನಿನ್ನನ್ನು ಬಾಧಿಸಲಾರವು. ಹಾಗಿದ್ದರೂ ಭಗವತ್ಸಂಕಲ್ಪದಿಂದ ನಿನಗೆ ಏರ್ಪಟ್ಟಿರುವ ಈ ಲೋಕದ ಭೋಗಗಳನ್ನು ಕ್ಲ್ಪಪ್ತಕಾಲದವರೆಗೆ ನೀನು ಅನುಭವಿಸಿಯೇ ತೀರಬೇಕು. ಆ ಮೇಲೆ ನೀನು ಸರ್ವಸಂಗಪರಿತ್ಯಾಗಮಾಡಿ, ಭಗವದ್ಭಕ್ತಿಯ ಬಲದಿಂದ ಪಾಪನಿವೃತ್ತಿ ಮೊದಲಾದ ಅಷ್ಟಗುಣಗಳುಳ್ಳ ನಿನ್ನ ಶುದ್ಧಾತ್ಮಸ್ವರೂಪವನ್ನು ಕಾಣಬಹುದು.” ಎಂದನು. ಭಾಗವತೋತ್ತಮನಾದ ಪ್ರಿಯವ್ರತನು, ಲೋಕಗುರುವಾದ ಬ್ರಹ್ಮನ ಈ ಮಾತನ್ನು ಕೇಳಿ, ಆ ಬ್ರಹ್ಮಾಜ್ಞೆಯು ತನಗೆ ಸುಕರವಾಗಿದ್ದುದರಿಂದಲೂ, ಅದನ್ನು ಮೀರಿ ಹೋಗುವುದು ತನಗೆ ಯುಕ್ತವಲ್ಲದುದರಿಂದಲೂ, ಅದನ್ನು ಬಹುಮಾನಪೂರ್ವಕವಾಗಿ ಒಪ್ಪಿ

ಕೊಂಡನು. ಆಮೇಲೆ ಬ್ರಹ್ಮನು ಅಲ್ಲಿ ಸ್ವಾಯಂಭುವಮನುವು ತನಗೆ ಮಾ
ಡಿದ ಸತ್ಕಾರಗಳನ್ನು ಸ್ವೀಕರಿಸಿ, ಪ್ರಿಯವ್ರತ ನಾರದರಿಬ್ಬರೂ ತನ್ನನ್ನು
ಪ್ರೇಮಪೂರ್ವಕವಾಗಿ ನೋಡುತ್ತಿರುವಹಾಗೆಯೇ ಅಂತರ್ಧಾನವನ್ನು
ಹೊಂದಿ, ಮನಸ್ಸಿಗೂ, ವಾಕ್ಕಿಗೂ ಗೋಚರವಲ್ಲದ, ಮತ್ತು ಚಿರಸ್ಥಾಯಿ
ಯಾದ ತನ್ನ ಲೋಕವನ್ನು ಸೇರಿದನು. ಇತ್ತಲಾಗಿ ಸ್ವಾಯಂಭುವಮನು
ವೂ ಕೂಡ, ಬ್ರಹ್ಮಕೃಪೆಯಿಂದ ತನ್ನ ಉದ್ದೇಶವು ಕೈಗೂಡಿದುದಕ್ಕಾಗಿ
ಸಂತೋಷಗೊಂಡು, ನಾರದನ ಅನುಜ್ಞೆಯನ್ನು ಪಡೆದು,ತನ್ನ ಮಗನಾದ
ಪ್ರಿಯವ್ರತನನ್ನು ರಾಜ್ಯಭಾರಕ್ಕಾಗಿ ನಿಯಮಿಸಿ, ವಿಷಜಲದಿಂದ ತುಂ
ಬಿದ ಸಮುದ್ರದಂತೆ ದುರ್ವಿಷಯಗಳಿಂದ ತುಂಬಿ ದುಸ್ತರವಾಗಿರು
ವ ತನ್ನ ಮನೆಯನ್ನೂ, ಭೋಗಸಾಮಗ್ರಿಗಳನ್ನೂ ತೊರೆದು ವನಕ್ಕೆ
ಹೊರಟನು. ಆಮೇಲೆ ಇತ್ತಲಾಗಿ ಪ್ರಿಯವ್ರತನೂಕೂಡ, ತನ್ನ ಕರ್ಮ
ಗಳೆಲ್ಲವನ್ನೂ ಭಗವದರ್ಪಣರೂಪವಾಗಿಯೇ ನಡೆಸುತ್ತ, ಸಮಸ್ತ
ಲೋಕದ ಬಂಧನವನ್ನೂ ಬಿಡಿಸತಕ್ಕ ಮಹಾಮಹಿಮೆಯುಳ್ಳ ಆ ಪರಮಪು
ರುಷನ ಪಾದಾರವಿಂದದಲ್ಲಿಯೇ ನಟ್ಟ ಮನಸ್ಸುಳ್ಳವನಾಗಿ.ಅದರಿಂದ ರಾಗ
ದ್ವೇಷಾದಿದೋಷಗಳನ್ನೂ ನೀಗಿ, ಶುದ್ಧಾತ್ಮನಾಗಿ, ಗೌರವದಿಂದ ರಾ
ಜ್ಯವನ್ನು ನಡೆಸುತಿದ್ದನು ಆಮೇಲೆ ಈತನು ವಿಶ್ವಕರ್ಮನ ಮಗಳಾದ
ಬರ್ಹಿಷ್ಮತಿಯೆಂಬವಳನ್ನು ಮದುವೆಯಾಗಿ, ಅವಳಲ್ಲಿ ಗುಣದಲ್ಲಿಯೂ,
ಶೀಲದಲ್ಲಿಯೂ, ಕರ್ಮಗಳಲ್ಲಿಯೂ, ರೂಪದಲ್ಲಿಯೂ; ವೀರ್ಯದಲ್ಲಿಯೂ ತನಗೆ
ಸಮಾನರಾದ ಹತ್ತುಮಂದಿ ಕುಮಾರರನ್ನೂ, ಕೊನೆಯಲ್ಲಿ ಊರ್ಜಸ್ವತಿ
ಯೆಂಬ ಒಬ್ಬ ಕುಮಾರಿಯನ್ನೂ ಪಡೆದನು, ಮೇಲೆ ಹೇಳಿದ ಹತ್ತುಮಂದಿ
ಮಕ್ಕಳೂ ಕ್ರಮವಾಗಿ, ಆಗ್ನೀಧ್ರ, ಇಧ್ಮಜಿಹ್ವ, ಯಜ್ಞಬಾಹು, ಮಹಾ
ವೀರ, ಹಿರಣ್ಯರೇತಸ್ಸು, ಅಕೃತಪೃಷ್ಠ, ಸವನ, ಮೇಧಾತಿಥಿ,ವೀತಿಹೋತ್ರ,
ಕವಿ, ಎಂಬ ಅಗ್ನಿಪರ್ಯಾಯವಾದ ಹೆಸರುನಿಂದಲೇ ಕರೆಯಲ್ಪಡುತಿದ್ದರು. ಇ
ವರಲ್ಲಿ ಕವಿ, ಮಹಾವೀರ, ಸವನರೆಂಬ ಮೂರುಮಂದಿ ಮಕ್ಕಳು,ಬಾಲ್ಯದಿಂ
ದಲೂ ಆತ್ಮವಿದ್ಯೆಯಲ್ಲಿಯೇ ಪರಿಚಯಹೊಂದಿದವರಾಗಿ, ಇಂದ್ರಿಯಗಳ
ನ್ನು ಜಯಿಸಿ, ಸನ್ಯಾಸಿಗಳಿಗೆ ಯೋಗ್ಯವಾದ ಪರಮಹಂಸಧರ್ಮದಲ್ಲಿಯೇ

ಇದ್ದುಬಿಟ್ಟರು ಇವರು ಈ ಪರಮಹಂಸಾಶ್ರಮದಲ್ಲಿ ಜಿತೇಂದ್ರಿಯರಾಗಿಯೂ, ಜ್ಞಾನಸಂಪನ್ನರಾಗಿಯೂ ಇದ್ದು, ಸಕಲಜೀವಶರೀರಕನಾಗಿಯೂ, ಸಂಸಾರಭಯನಿವಾರಕನಾಗಿಯೂ ಇರುವ ಭಗವಂತನ ಪಾದದಲ್ಲಿಯೇ ನಟ್ಟ ಮನಸ್ಸುಳ್ಳವರಾಗಿ, ಅವಿಚ್ಛಿನ್ನವಾದ ಆ ಭಗವದ್ಭಕ್ತಿಯ ಬಲದಿಂದ, ಹೃದಯಶುದ್ಧಿಯನ್ನು ಹೊಂದಿ, ಸಮಸ್ತಜೀವಗಳಿಗೂ ಅಂತರಾತ್ಮನಾದ ಆ ಪರಮಪುರುಷನನ್ನು ತಮ್ಮ ಮನಸ್ಸಿನಲ್ಲಿಯೇ ಸಾಕ್ಷಾತ್ಕರಿಸಿಕೊಂಡು, ಸರ್ವವಿಧದಲ್ಲಿಯೂ ಆ ಭಗವಂತನೊಡನೆ ಸಮಾನಧರ್ಮವುಳ್ಳವರಾಗಿ ಮುಕ್ತಿಯನ್ನೂ ಹೊಂದಿದರು. ಉಳಿದ ಏಳುಮಂದಿಪುತ್ರರೂ ತಂದೆಗೆ ಅಧೀನರಾಗಿಯೇ ಇರುತಿದ್ದರು. ಈ ಪ್ರಿಯವ್ರತನ ಮತ್ತೊಬ್ಬ ಭಾರ್ಯೆಯಲ್ಲಿ ಉತ್ತಮ,ತಾಮಸ,ರೈವತರೆಂಬ ಬೇರೆ ಮೂರುಮಂದಿ ಕುಮಾರರು ಹುಟ್ಟಿ ಆ ಮೂವರೂ ಮನ್ವಂತರಾಧಿಪತಿಗಳೆನಿಸಿಕೊಂಡರು. ಆಪ್ರಿಯವ್ರತನು ತನಗೆ ಸಮಾನಗುಣವುಳ್ಳ ಆ ಪುತ್ರರೊಡಗೂಡಿ, ಎಣೆಯಿಲ್ಲದ ಬಾಹುಬಲವುಳ್ಳವನಾಗಿ, ತನ್ನ ಧನುಷ್ಟಂಕಾರದಿಂದಲೇ ಧರ್ಮವಿರೋಧಿಗಳಾದ ಶತ್ರುಗಳೆಲ್ಲರನ್ನೂ ಅಡಗಿಸಿ,ಯುದ್ಧಪ್ರಸಕ್ತಿಯೇ ಇಲ್ಲದೆ ರಾಜ್ಯಭೋಗವನ್ನನುಭವಿಸುತ್ತಿದ್ದನು ಮತ್ತು ತನ್ನ ಭಾರ್ಯೆಯಾದ ಬರ್ಹಿಷ್ಮತಿಯು ತನ್ನ ವಿಷಯದಲ್ಲಿ ತೋರಿಸತಕ್ಕ ಹರ್ಷದಿಂದಲೂ, ಅನುವರ್ತನದಿಂದಲೂ, ಸ್ತ್ರೀಯರಿಗೆ ಸಹಜವಾದ ಶೃಂಗಾರವಿಲಾಸದಿಂದಲೂ, ಲಜ್ಜಾಸೂಚಕವಾದ ಮಂದಹಾಸದಿಂದಲೂ, ಕಿವಿಗಿಂಪಾದ ಪರಿಹಾಸವಾಕ್ಯಗಳಿಂದಲೂ, ನಿರಂತರವೂ ತನ್ನನ್ನು ಸಂತೋಷಪಡಿಸುತ್ತಿರಲು,ತನ್ನ ವಿವೇಕವನ್ನೂ, ತನ್ನ ದೇಹವನ್ನೂ ಮರೆತವನಂತೆ,ಕಾಮಸುಖಗಳನ್ನನುಭವಿಸುತ್ತ,ಹನ್ನೊಂದು ಕೋಟಿಸಂವತ್ಸರಗಳವರೆಗೆ ರಾಜ್ಯವನ್ನು ಪರಿಪಾಲಿಸುತ್ತಿದ್ದನು. ಎಲೈ ಪರೀಕ್ಷಿದ್ರಾಜನೆ ! ಈ ಪ್ರಿಯವ್ರತನ ಮತ್ತೊಂದು ಅದ್ಭುತಶಕ್ತಿಯನ್ನು ತಿಳಿಸುವೆನು ಕೇಳು. ಸೂರ್ಯನು ಪ್ರತಿದಿನವೂ ಮೇರುವನ್ನು ಸುತ್ತುವಾಗ, ತನ್ನ ಕಾಂತಿಯಿಂದ ಪ್ರಪಂಚದ ಅರ್ಧಭಾಗವನ್ನು ಮಾತ್ರವೇ ಬೆಳಗುತ್ತಿರುವನಷ್ಟೆ?ಉಳಿದ ಭಾಗವು ಆ ಮೇರುವಿನ ಛಾಯೆಯಿಂದ ಮರೆಸಿ ಹೋಗುವುದು. ಇದರಿಂದ ಒಂದುಕಡೆಯಲ್ಲಿ ಬೆಳಕಿದ್ದಾಗ ಮತ್ತೊಂದು ಕಡೆಯ

ಲ್ಲಿ ಕತ್ತಲೆಕವಿದಿರುವುದು. ಇದರಿಂದಲೇ ಹಗಲಿರುಳೆಂಬ ವಿಭಾಗವೂ ಉಂ ಟಾಗಿರುವುದು. ಇದನ್ನುನೋಡಿ ಪ್ರಿಯವ್ರತನು, ಅಸಮಾಧಾನಗೊಂಡ ವನಾಗಿ, ಸೂರ್ಯಪ್ರಕಾಶವಿಲ್ಲದ ಭಾಗಕ್ಕೂ ಪ್ರಕಾಶವುಂಟಾಗುವಂತೆ, ಪ್ರಪಂಚಕ್ಕೆಲ್ಲವೂ ಯಾವಾಗಲೂ ಬೆಳಕುಂಟುಮಾಡಬೇಕೆಂದು ಸಂ ಕಲ್ಪಿಸಿಕೊಂಡನು. ಇದಕ್ಕಾಗಿ ಆ ಪ್ರಿಯವ್ರತನು ಭಗವದುಪಾಸನವ ನ್ನು ಮಾಡಿ, ಅತಿಮಾನುಷಪ್ರಭಾವವನ್ನು ಪಡೆದು, ಸೂರ್ಯರಥಕ್ಕೆ ಸ ಮಾನವಾದ ತೇಜೋಮಯವಾದ ಒಂದು ರಥವನ್ನೇರಿ, ಎರಡನೆಯ ಸೂ ರ್ಯನಂತೆ ಸುತ್ತುವುದಕ್ಕೆ ತೊಡಗಿದನು. ಸೂರ್ಯನು ಮೇರುವಿನ ಉತ್ತ ರಕ್ಕಿರುವಾಗ ತಾನು ದಕ್ಷಿಣಕ್ಕೂ, ಸೂರ್ಯನು ದಕ್ಷಿಣಕ್ಕೆ ಹೋದಾಗ ತಾನು ಉತ್ತರಕ್ಕೂ ಬರುತ್ತ, ಆಯಾ ಸ್ಥಳಗಳನ್ನು ತನ್ನ ಕಾಂತಿಯಿಂದ ಬೆಳಗುತ್ತಿದ್ದನು. ಹೀಗೆ ಏಳಾವರ್ತಿ ಸೂರ್ಯಗತಿಯನ್ನನುಸರಿಸಿ ಮೇ ರುವನ್ನು ಪ್ರದಕ್ಷಿಣೆಮಾಡಿದನು. ಓ ರಾಜಾ ! ಆ ಪ್ರಿಯವ್ರತನ ರಥವು ಸುತ್ತಿಬಂದಾಗ, ಆ ಚಕ್ರದ ಪಟ್ಟೆಯಿಂದುಂಟಾದ ಹಳ್ಳಗಳೇ ಸಪ್ತಸಮು ದ್ರಗಳಾದುವು. ಆ ಸಮುದ್ರಗಳಿಂದಲೇ ಈ ಭೂಮಂಡಲವು ಏಳುಭಾಗ ಗಳಾಗಿ ಬೇರ್ಪಟ್ಟು, ಕ್ರಮವಾಗಿ ಜಂಬೂ, ಪ್ಲಕ್ಷ, ಶಾಲ್ಮಲಿ, ಕುಶ, ಕ್ರೌಂಚ, ಶಾಕ, ಪುಷ್ಕರಗಳೆಂಬ ಹೆಸರಿನಿಂದ ಏಳುದ್ವೀಪಗಳಾದುವು. ಈ ದ್ವೀಪಗಳಲ್ಲಿ ಕ್ರಮವಾಗಿ ಮೊದಲನೆಯದಕ್ಕಿಂತ ಅದರ ಮುಂದಿನದು ಎರ ಡಷ್ಟು ಹೆಚ್ಚು ಪರಿಮಾಣವುಳ್ಳವುಗಳಾಗಿರುವುವು. ಹಾಗೆಯೇ ಆ ಏಳು ಸಮುದ್ರಗಳೂ ಒಂದಕ್ಕಿಂತಲೂ ಮತ್ತೊಂದು ದ್ವಿಗುಣ ಪರಿಮಾಣವು ಳ್ಳವಾಗಿ, ಲವಣ, ಇಕ್ಷು, ಸುರೆ, ಸರ್ಪಿ, ಕ್ಷೀರ, ದಧಿ, ಶುದ್ಧೋದಕ ಸ ಮುದ್ರಗಳೆಂಬ ಹೆಸರಿನಿಂದ ಪ್ರಸಿದ್ಧವಾಗಿರುವುವು. ಆ ಏಳು ದ್ವೀಪಗಳಿ ಗೂ ಈ ಏಳು ಸಮುದ್ರಗಳು ಅಗುಳುಗಳಂತೆ ಸುತ್ತಿಕೊಂಡಿರುವುವು. ಅ ದರಲ್ಲಿ ಜಂಬೂದ್ವೀಪವೆಂಬುದು ಲಕ್ಷಯೋಜನದ ಅಳತೆಯುಳ್ಳದಾಗಿರು ವುದು. ಅದರಂತೆಯೇ ಲವಣಸಮುದ್ರವೂ ಲಕ್ಷಯೋಜನದ ಅಗಲವುಳ್ಳ ದಾಗಿರುವುದು. ಹೀಗೆ ದ್ವೀಪದ ಅಳತೆಯನ್ನನುಸರಿಸಿ, ಆಯಾ ದ್ವೀಪದ ಸುತ್ತಲೂ ಇರುವ ಸಮುದ್ರಗಳು ಅದೇ ಅಳತೆಯಿಂದಿರುವುವು. ಪ್ರಿಯ

ವ್ರತನು ತನ್ನ ಏಳುಮಂದಿ ಕುಮಾರರಿಗೂ ಕ್ರಮವಾಗಿ ಈ ಸಪ್ತದ್ವೀಪಗಳ
ಅಧಿಕಾರವನ್ನು ಹಂಚಿಕೊಟ್ಟನು ತನ್ನ ಮಗಳಾದ ಊರ್ಜಸ್ವತಿಯನ್ನು ಶುಕ್ರ
ನಿಗೆ ಕೊಟ್ಟು ವಿವಾಹಮಾಡಿದನು. ಶುಕ್ರನಿಗೆ ಅವಳಲ್ಲಿ ದೇವಯಾನಿಯೆಂಬ
ಕನ್ಯಕೆಯು ಹುಟ್ಟಿದಳು. ಓ ಪರೀಕ್ಷಿದ್ರಾಜಾ! ಪ್ರಿಯವ್ರತನಿಗೆ ಇಷ್ಟೊಂ
ದು ಮಹಾಮಹಿಮೆಯುಂಟಾಗುವುದೇನೂ ಅಸಂಭವವಲ್ಲ ತನ್ನ ಪಾದದಿಂ
ದಲೇ ಮೂರು ಲೋಕವನ್ನೂ ಅಳೆದ ಮಹಾಮಹಿಮೆಯುಳ್ಳ ಆ ಭಗವಂ
ತನ ಪಾದಾರವಿಂದಗಳನ್ನು ನಂಬಿ, ಆ ಪಾದಧೂಳಿಯಿಂದ ಹಸಿವು,ಬಾಯಾ
ರಿಕೆ,ಶೋಕ,ಮೋಹ, ಜರಾ ಮರಣಗಳೆಂಬ ಷಡೂರ್ಮಿಗಳನ್ನೂ ಜಯಿಸಿದ
ಮಹಾತ್ಮರಿಗೆ, ಯಾವುದೂ ಅಸಾಧ್ಯವಲ್ಲ. ಅಂತ್ಯಕಾಲದಲ್ಲಿ ಒಂದಾವರ್ತಿ
ಶ್ರೀಮನ್ನಾರಾಯಣಸ್ಮರಣವನ್ನು ಮಾಡಿದ ಮಾತ್ರದಲ್ಲಿಯೂ ಕೂಡ, ಆ ಕ್ಷ
ಣದಲ್ಲಿಯೇ ಮನುಷ್ಯನು ದುಸ್ತರವಾದ ಸಂಸಾರಬಂಧವನ್ನು ನೀಗಿ, ಮೋ
ಕ್ಷವನ್ನೇ ಹೊಂದಬಲ್ಲನು ಹೀಗಿರುವಾಗ ಅಂತವನಿಗೆ ಬೇರೆವಿಧವಾದ ಸಾಮ
ರ್ಥ್ಯವುಂಟಾಗುವುದೇನಸಾಧ್ಯವೆ? ಹೀಗೆ ಅಪರಿಮಿತವಾದ ಬಲಪರಾಕ್ರಮಗ
ಳಿಂದ ರಾಜ್ಯವನ್ನು ನಡೆಸುತ್ತಿದ್ದ ಪ್ರಿಯವ್ರತನು, ಒಮ್ಮೆ ನಾರದಮಹರ್ಷಿ
ಯನ್ನು ಕಂಡು, ಅವನ ಪಾದಸೇವೆಯನ್ನು ಮಾಡುತಿದ್ದನು. ಆಗ ಅವನಿಗೆ
ತಾನು ನಡೆಸುತಿದ್ದ ಕರ್ಮಮಾರ್ಗವು ಫಲಕಾರಿಯಲ್ಲವೆಂದು ತೋರಿ
ಅದರಲ್ಲಿ ಜಿಹಾಸೆ ಹುಟ್ಟಿತು. ಇದರಿಂದ ಅವನು ಮನಸ್ಸಿನಲ್ಲಿ ನೆಮ್ಮದಿಯಿ
ಲ್ಲದೆ ತನ್ನಲ್ಲಿ ತಾನು ಹೀಗೆಂದು ಚಿಂತಿಸುವನು. “ಆಹಾ ! ಇದುವರೆಗೆ
ನಾನುಮಾಡಿದುದೇನು?ಬಹಳ ಅನುಚಿತಕಾರ್ಯವನ್ನು ಮಾಡಿಬಿಟ್ಟೆನು! ಮೊ
ದಲೇ ನಾನು ಮೋಕ್ಷಧರ್ಮವನ್ನು ಹಿಡಿದಿದ್ದರೂ,ಈಗ ಇಂದ್ರಿಯಗಳಿಗೆ ವ
ಶನಾಗಿ,ಹುಲ್ಲು ಮುಚ್ಚಿದ ಹಳೇಬಾವಿಯಂತೆ ಸುಖಭ್ರಾಂತಿಯನ್ನು ಹುಟ್ಟಿಸಿ
ಮನಸ್ಸನ್ನು ಮಲಿನಮಾಡತಕ್ಕ ಈಸಂಸಾರಕ್ಕೆ ಆಸೆಪಟ್ಟೆನಲ್ಲಾ!ಛೀ! ಈ
ನನ್ನ ಪತ್ನಿಗೆ ನಾನು ಕೈಯಾಟದ ಬೊಂಬೆಯಂತಾದೆನು ! ಅಯ್ಯೋ! ನನ್ನ
ಜನ್ಮವನ್ನು ಸುಡಬೇಕು! ಛೀ! ಛೀ ! ಇನ್ನೀ ಸಂಸಾರವು ಸಾಕು!” ಎಂದು
ತನ್ನನ್ನು ತಾನೇ ನಿಂದಿಸಿಕೊಳ್ಳುತಿದ್ದನು. ಕೊನೆಗೆ ಈ ತಾಪತ್ರಯಗ
ಳೆಲ್ಲವನ್ನೂ ಬಿಟ್ಟು, ನಿವೃತ್ತಿಧರ್ಮವನ್ನು ಹಿಡಿದು, ಭಗವಂತನನ್ನಾರಾಧಿಸು

ತ್ತಬಂದನು. ಆದರಿಂದ ಭಗವದನುಗ್ರಹವನ್ನು ಸಂಪಾದಿಸಿ,ಆತ್ಮಸ್ವರೂಪ ವನ್ನು ಧ್ಯಾನಿಸುತ್ತ, ಬಂದಾಗ,ಅವನ ಮನಸ್ಸಿಗೆ ನೆಮ್ಮದಿಯುಂಟಾಯಿತು. ಸಪ್ತದ್ವೀಪಪರಿಮಾಣವುಳ್ಳ ಭೂಮಿಯನ್ನು ಕ್ರಮವಾಗಿ ತನ್ನ ಮಕ್ಕಳಿಗೆ ಹಂಚಿಕೊಟ್ಟಮೇಲೆ,ತನ್ನ ಸಮಸ್ತಭೋಗಗಳಿಗೂ ಮುಖ್ಯಾಶ್ರಯಳಾಗಿದ್ದ ತನ್ನ ಪತ್ನಿಯನ್ನೂ ಶವದಂತೆ ಭಾವಿಸಿ, ರಾಜ್ಯಸಂಪತ್ತುಗಳೆಲ್ಲವನ್ನೂ ತೃ ಣಪ್ರಾಯವಾಗಿ ಎಣಿಸಿ, ತಾನಾಗಿಯೇ ವಿರಕ್ತಿಮಾರ್ಗವನ್ನವಲಂಬಿಸಿ, ನಾರದೋಪದೇಶದಂತೆ ಯಾವಾಗಲೂ ಹೃದಯದಲ್ಲಿ ಆ ಶ್ರೀಹರಿಯ ಪಾ ದಾರವಿಂದಗಳನ್ನೇ ಧ್ಯಾನಿಸುತ್ತ, ತಪಸ್ಸಿದ್ಧಿಯನ್ನು ಪಡೆಯುವುದಕ್ಕಾಗಿ ಗಂಧಮಾದನಪರ್ವತಕ್ಕೆ ಹೋದನು ಓ ರಾಜೇಂದ್ರಾ! ನೋಡಿದೆಯಲ್ಲವೆ? ಭಕ್ತಿಮಾರ್ಗಕ್ಕೆ ಕಾರಣಾಂತರದಿಂದ ನಡುವೆ ವಿಚ್ಛಿತ್ತಿಯುಂಟಾದರೂ, ಅದರ ಸಂಸ್ಕಾರವುಬಿಟ್ಟುಹೋಗದೆ,ತಿರುಗಿ ಅದೇದಾರಿಗೆ ತಂದು ಸೇರಿಸುವು ದು. ಆ ಪ್ರಿಯವ್ರತನ ಮಹಿಮೆಯನ್ನು ಸಂಗ್ರಹವಾಗಿ ತಿಳಿಸತಕ್ಕ ಕೆಲವು ಶ್ಲೋಕಾರ್ಥಗಳನ್ನು ವಿವರಿಸುವೆನು ಕೇಳು!"ಆ ರಾಜನು ತನ್ನ ಅಸಾಧಾರಣ ಸಾಮರ್ಥ್ಯದಿಂದ ರಾತ್ರಿಯನ್ನೂ ಹಗಲಾಗಿ ಮಾಡಿದನು! ತನ್ನ ರಥಚಕ್ರ ದಿಂದ ಸಪ್ತಸಮುದ್ರಗಳನ್ನೇರ್ಪಡಿಸಿದನು. ನದ ನದೀ ಪರ್ವತಗಳಿಂದ ಸಾಂಕರ್ಯವಿಲ್ಲದಂತೆ, ಭೂಮಿಯನ್ನು ಬೇರಬೇರೆ ದ್ವೀಪಗಳಾಗಿ ವಿಭಾಗಿಸಿ, ಪ್ರಾಣಿಗಳ ಸೌಕರ್ಯಕ್ಕಾಗಿ ಎಲ್ಲೆಯನ್ನೂ ಕಲ್ಪಿಸಿದನು. ಮತ್ತು ವಿಷ್ಣುಭ ಕ್ತರಲ್ಲಿ ಅತ್ಯಾದರವುಳ್ಳ ಆ ಮಹಾತ್ಮನು, ಯೋಗಬಲದಿಂದಲೂ, ಕರ್ಮಬ ಲದಿಂದಲೂ ಸಾಧಿಸಲ್ಪಡತಕ್ಕ ಮೂರುಲೋಕದ ಸುಖಗಳನ್ನೂ ನರಕ ಪ್ರಾಯವಾಗಿಯೇ ಭಾವಿಸಿ, ಅವೊಂದಕ್ಕೂ ಆಸೆಪಡದೆ,ಉತ್ತಮಪುರುಷಾ ರ್ಥವಾದ ಮೋಕ್ಷವನ್ನೇ ಸಾಧಿಸಿದನು. ಸಾಕ್ಷಾತ್ಪರಮಪುರುಷನಿಗಲ್ಲದೆ ಇಂ ತಹ ಮಹಾಕಾರ್ಯಗಳು ಬೇರೆ ಯಾರಿಗೆ ತಾನೇ ಸಾಧ್ಯವು?"ಇದು ಮೊದಲನೆ ಯ ಅಧ್ಯಾಯವು.

---

ಪ್ರಿಯವ್ರತಪುತ್ರನಾದ ಅಗ್ನೀಧ್ರನ ಚರಿತ್ರವು.
ಆಗ್ನೀಧ್ರನು ಪೂರ್ವಚಿತ್ತಿಯನ್ನು ನೋಡಿ ಮೋಹಿಸಿ
ಅವಳನ್ನು ವರಿಸಿದುದು.

ತಂದೆಯಾದ ಪ್ರಿಯವ್ರತನು ತಪಸ್ಸಿಗೆ ಹೋದಮೇಲೆ, ಅಗ್ನೀಧ್ರನು, ಅವನ ಆಜ್ಞಾನುಸಾರವಾಗಿ ಜಂಬೂದ್ವೀಪವನ್ನಾಳುತ್ತ, ಅಲ್ಲಿನ ಪ್ರಜೆಗಳನ್ನು ಮಕ್ಕಳಂತೆ ಪ್ರೇಮದಿಂದ, ಪೋಷಿಸುತಿದ್ದನು. ಕೆಲವು ಕಾಲದಮೇಲೆ ಅವನು ಸಂತಾನಾರ್ಥಿಯಾಗಿ, ದೇವಸ್ತ್ರೀಯರಿಗೆ ಕ್ರೀಡಾಸ್ಥಾನವಾದ ಮಂದರಪರ್ವತದ ತಪ್ಪಲಿಗೆ ಹೋಗಿ, ಅಲ್ಲಿ ಪೂಜಾಸಾಮಗ್ರಿಗಳಿಂದಲೂ, ಧ್ಯಾನರೂಪವಾದ ತಪಸ್ಸಿನಿಂದಲೂ ಪ್ರಜಾಪತಿಶ್ರೇಷ್ಠನಾದ ಬ್ರಹ್ಮನನ್ನಾರಾಧಿಸುತಿದ್ದನು ಇವನ ಉದ್ದೇಶವನ್ನು ತಿಳಿದು ಬ್ರಹ್ಮನು, ತನ್ನ ಸಭೆಯಲ್ಲಿ ಗಾನಮಾಡುತಿದ್ದ ಪೂರ್ವಚಿತ್ತಿಯೆಂಬ ಅಪ್ಸರಸೆಯನ್ನು ಅವನ ತಪೋವನಕ್ಕೆ ಕಳುಹಿಸಿದನು. ಪೂರ್ವಚಿತ್ತಿಯು ಬ್ರಹ್ಮಾಜ್ಞೆಯಿಂದ ಈ ತಪೋವನಕ್ಕೆ ಬಂದು, ಅಲ್ಲಿನ ಸರೋವರದ ತೀರದಲ್ಲಿ ಸಂಚರಿಸುತಿದ್ದಳು. ಆ ವನದಲ್ಲಿಯೋ ಎಲ್ಲಿ ನೋಡಿದರೂ ದಟ್ಟವಾಗಿ ತುಂಬಿದ ನಾನಾಬಗೆಯ ಫಲವೃಕ್ಷಗಳು! ಆ ವೃಕ್ಷಗಳ ಒಂದೊಂದು ಕೊಂಬೆಗೂ ಹಬ್ಬಿ ಬೆಳೆದ ಸುವರ್ಣಛಾಯೆಯುಳ್ಳ ಹೂಬಳ್ಳಿಗಳು! ಆ ಬಳ್ಳಿಗಳಮೇಲೆ ಕುಳಿತು ಕಿವಿಗಿಂಪಾಗಿ ಕೂಗುತ್ತಿರುವ ಪಕ್ಷಿಮಿಥುನಗಳು! ಈ ಪಕ್ಷಿಗಳ ಮಧುರಗಾನವನ್ನು ಕೇಳಿ ಪಕ್ಕದ ಸರೋವರದಲ್ಲಿ ಮನೋಹರವಾದ ಕಂಠಧ್ವನಿಯಿಂದ ಕೂಗುತ್ತಿರುವ ಹಂಸಕಾರಂಡವಾದಿ ಜಲಪಕ್ಷಿಗಳು! ಅಲ್ಲಲ್ಲಿ ಈಧ್ವನಿಗೆ ಪ್ರತಿಧ್ವನಿಯನ್ನು ಕೊಡುವಂತೆ ಮೊಳಗುತ್ತಿರುವ ನಿರ್ಮಲಸರೋವರಗಳು! ಹೀಗೆ ಸರ್ವವಿಧದಿಂದಲೂ, ಕಣ್ಣಿಗೂ, ಮನಸ್ಸಿಗೂ ಆನಂದಕರವಾದ ಆ ವನದಲ್ಲಿ, ಪೂರ್ವಚಿತ್ತಿಯು, ಒಂದಾನೊಂದುಸರೋವರದ ಸಮೀಪದಲ್ಲಿ ಸಂಚಾರಮಾಡುತಿದ್ದಳು ಆ ಸರೋವರದ ಸಮೀಪದಲ್ಲಿಯೇ ಮತ್ತೊಂದು ಕಡೆಯಲ್ಲಿ ತಪಸ್ಸುಮಾಡುತಿದ್ದ ಆಗ್ನೀಧ್ರನಿಗೆ, ಇವಳ ಸಂಚಾರದಿಂದುಂಟಾದ ಕಾಲಂದುಗೆಗಳ ಘುಲ್ಘುಲಧ್ವನಿಯು ಆಗಾಗ ಕಿವಿಗೆ ಬೀಳುತಿತ್ತು. ಇದನ್ನು ಕೇಳಿ ಅವನು ತಪಸ್ಸಮಾಧಿಗಾಗಿ ಮುಚ್ಚಿದ್ದ ಕಣ್ಣುಗಳನ್ನು




[illegible], ಅಗ್ನೀಧ್ರನು ಪೂರ್ವಚಿತ್ತಿಯನ್ನು ನೋಡಿ ಮೋಹಿಸಿದುದು.

ಸ್ವಲ್ಪವಾಗಿ ತೆರೆದು ನೋಡುವಾಗ, ಈ ಸುಂದರೀಮಣಿಯು, ಮಕರಂದ ಪಾನಕ್ಕಾಗಿ ಪ್ರತಿಯೊಂದು ಪುಷ್ಪವನ್ನೂ ಸುತ್ತಿಬರುವ ಹೆಣ್ಣುದುಂಬಿಯಂತೆ, ಆ ಉದ್ಯಾನದಲ್ಲಿರುವ ಒಂದೊಂದು ಜಾತಿಯ ಪುಷ್ಪವನ್ನೂ ಆಘ್ರಾಣಿಸುತ್ತ ಅಲ್ಲಲ್ಲಿ ಸುತ್ತುತ್ತಿದ್ದಳು. ಅವಳ ಅಂದವಾದ ನಡೆ! ಸುಂದರವಾದ ವಿಲಾಸಗಳು! ಇಂಪಾದ ಮಾತು! ಮನೋಹರವಾದ ನೋಟ! ಕೋಮಲವಾದ ಅವಯವಗಳು! ಇವೆಲ್ಲವೂ ದೇವತೆಗಳ ಮತ್ತು ಮನುಷ್ಯರ ಮನಸ್ಸನ್ನು ಮೋಹಗೊಳಿಸುವಂತಿದ್ದುವು. ಅವಳನ್ನು ನೋಡಿದಮಾತ್ರದಲ್ಲಿ ಎಂತವರಿಗೂ ಕಾಮವಿಕಾರವುಂಟಾಗುತಿತ್ತು. ಸುಧಾರಸವು ತೊಟ್ಟಿಕ್ಕುವಂತೆ ಅವಳ ಮುಖದಿಂದ ಹೊರಟ ಮಂದಹಾಸಪೂರ್ವಕವಾದ ಮಧುರಭಾಷಣವು ಎಂತವರನ್ನೂ ಮರಳುಮಾಡುತಿತ್ತು! ಅವಳು ಮಾತಾಡುವಾಗ, ಆಕೆಯ ಉಸರಿನ ಗಾಳಿಯ ಸುಗಂಧಕ್ಕಾಗಿ, ನಾನಾಕಡೆಗಳಿಂದ ಭ್ರಮರಗಳು ಬಂದು ಅವಳ ಮುಖದ ಸುತ್ತಲೂ ಮುತ್ತುತ್ತಿದ್ದುವು ಈ ಭ್ರಮರಗಳು ಬಂದು ಮುತ್ತುವುದರಿಂದ ಆ ಸುಂದರೀಮಣಿಯು ಭಯಪಟ್ಟು, ಸಂಭ್ರಮದಿಂದ ಅತ್ತಿತ್ತ ಓಡಾಡುವಾಗ, ಅವಳ ಉಬ್ಬಿದ ಸ್ತನಗಳೂ, ನೀಡಿದ ಕೇಶಪಾಶಗಳೂ, ಕಿರುಗೆಜ್ಜೆಗಳನ್ನು ಕಟ್ಟಿದ ಆಕೆಯ ಕಾಂಚೀದಾಮವೂ ಭಾರದಿಂದ ಬಳುಕುತ್ತ, ನೋಡುವವರಿಗೆ ಮತ್ತಷ್ಟು ಮೋಹಜನಕವಾಗಿದ್ದುವು. ಹೀಗೆ ವಿಲಾಸದಿಂದ ನಡೆಯಾಡುತ್ತಿರುವ ಆ ನಾರೀಮಣಿಯನ್ನು ನೋಡಿದೊಡನೆ, ಆ ರಾಜಕುಮಾರನ ಮನಸ್ಸು ಕಲಗಿತು. ಆಕೆಯ ರೂಪಕ್ಕೆ ಮರುಳಾಗಿ, ಕಾಮಪೀಡಿತನಾದ ಆಗ್ನೀಧ್ರನು, ಹಿಂದೆ ಯಾವಾಗಲೂ ಸ್ತ್ರೀರೂಪವನ್ನು ನೋಡಿಲ್ಲದವನಂತೆಯೂ, ಹುಚ್ಚನಂತೆಯೂ, ಬುದ್ಧಿಗೆಟ್ಟು, ಕಾಡಿನಲ್ಲಿರುವ ಋಷಿಯನ್ನು ಮಾತಾಡಿಸುವಂತೆ ಮಾತಾಡಿಸುವನು "ಎಲೈ ನೀನು ಯಾರು ? ಈ ಪರ್ವತಪ್ರಾಂತದಲ್ಲಿ ನೀನು ನಡೆಸಬೇಕಾದ ಕಾರ್ಯವೇನು ? ಮುನಿವರ್ಯಾ! ಬಂದುವೇಳೆ ನೀನೇ ಆ ಭಗವಂತನ ಮಾಯಾಶಕ್ತಿಯಾಗಿರಬಹುದೆ ? * ನಿನ್ನ

---

* ಇಲ್ಲಿ ನಾಣಿಲ್ಲದ ಎರಡು ಧನುಸ್ಸುಗಳೆಂದರೆ ಹುಬ್ಬುಗಳೆಂದೂ, ಬಾಣಗಳೆಂದರೆ ಕಣ್ಣುಗಳೆಂದೂ ಭಾವವು.

ಕಣ್ಣಿನಮೇಲೆ ನಾಣಿಲ್ಲದ ಎರಡುಧನುಸ್ಸುಗಳು ಕಾಣುತ್ತಿರುವುದೇಕೆ? ಈ ಬಿಲ್ಲುಗಳನ್ನು ನೀನು ಧರಿಸಿರುವುದು ನಿನ್ನ ಮಿತ್ರನಾದ ನನ್ನ ಕಾರ್ಯವನ್ನು ನೆರವೇರಿಸುವುದಕ್ಕಾಗಿಯೋ! ಅಥವಾ ನಿನ್ನ ಕಾರ್ಯಕ್ಕಾಗಿಯೋ? ಅವುಗಳಿಂದ ನಿನಗೆ ಪ್ರಯೋಜನವೇನು ? ಒಂದುವೇಳೆ ಇಂದ್ರಿಯವಶರಾಗಿ ಕಾಡಿನಲ್ಲಿ ಮೃಗಪ್ರಾಯರಾಗಿ ಸಂಚರಿಸುತ್ತಿರುವ ನಮ್ಮಂತವರನ್ನು ಜಯಿಸುವುದಕ್ಕಾಗಿಯೋ ಈ ಬಿಲ್ಲುಗಳನ್ನು ನೀನು ಧರಿಸಿರಬಹುದೆ ? ಇದೇನಿದು ? ಆ ಬಿಲ್ಲುಗಳ ಕೆಳಗೆ ಕಮಲದಳಗಳಿಗೆ ಸಮಾನ ಈ ಎರಡು ಬಾಣಗಳು, ಹಿಡಿಯಿಲ್ಲದಿದ್ದರೂ ಅಂದವಾದ ಗರಿಗಳಿಂದ ಸುಂದರವಾಗಿ ಕಾಣುತ್ತಿರುವುವು. ಅವುಗಳ ಮೊನೆಗಳು ಅತಿತೀಕ್ಷ್ಣವಾಗಿರುವುವು. ಈ ಕಾಡಿನಲ್ಲಿ ಯಾರಮೇಲೆ ಪ್ರಯೋಗಿಸುವುದಕ್ಕಾಗಿ ಈ ಬಾಣಗಳನ್ನಿಟ್ಟಿರುವೆಯೋ ಕಾಣೆನು ! ಹೇಗಾದರೂ ಆಗಲಿ ! ನಿನ್ನ ಈ ಪರಾಕ್ರಮವು ಮಂದಬುದ್ಧಿಯುಳ್ಳ ನಮ್ಮಂತವರಿಗೆ ಅಪಾಯವಿಲ್ಲದೆ ಕ್ಷೇಮವನ್ನುಂಟುಮಾಡಲಿ ! ಓ ಮಹರ್ಷಿಚಂದ್ರಮಾ! ಭ್ರಮರಗಳೆಂಬ ನಾಮದಿಂದ ನಿನ್ನ ಶಿಷ್ಯರು ನಿನ್ನ ಸುತ್ತಲೂ ಸಾಮಗಾನವನ್ನಭ್ಯಸಿಸುವಂತಿವೆ ! ನಿನ್ನ ತಲೆಯಿಂದ ಚದರಿದ ಪುಷ್ಪಗಳು ಕೆಳಗೆ ಬಿದ್ದರೂ, ವೇದಶಾಖೆಗಳನ್ನು ಬಿಡದೆ ಹಿಡಿದಿರುವ ಋಷಿಗಳಂತೆ, ಆನಿನ್ನ ಶಿಷ್ಯವರ್ಗಗಳು ಅವುಗಳನ್ನು ಬಿಡದೆ ಭಜಿಸುತ್ತಿರುವುವು ಓ ಮುನೀಶ್ವರಾ! ನಿನ್ನ ಕಾಲಂದುಗೆಗಳೆಂಬ ತಿತ್ತಿರಪಕ್ಷಿಗಳ ಮಧುರಗಾನವನ್ನು ಸ್ವಲ್ಪಹೊತ್ತಿನವರೆಗೆ ನಮ್ಮ ಕಿವಿಗೆ ಬೀಳಿಸುತ್ತಿರು ! ಈ ನಿನ್ನ ನಿತಂಬಗಳ, ಮತ್ತು ತೊಡೆಗಳಮೇಲೆ ಸುತ್ತಿ ಬಳಿದಂತಿರುವ* ಈ ಕದಂಬಪುಷ್ಪಸಮಾನವಾದ ಕಾಂತಿಯು ನಿನಗೆ ಹೇಗೆ ಲಭಿಸಿತು" ಆ ಕಾಂತಿಯಮೇಲೆ ಅಗ್ನಿಚಕ್ರದಂತೆ ವಲಯಾಕಾರವಾಗಿ ಕಾಣುವ ಈ ರೇಖೆಯೆಲ್ಲಿಯದು ? ಓ ಮುನೀಂದ್ರಾ ! ನಿನ್ನ ನಾರುಮಡಿಯೆಲ್ಲಿ ? ಈ ನಿನ್ನ ಎದೆಯಮೇಲೆ ಕಾಣುತ್ತಿರುವ † ಕೊಂಬುಗಳೆರಡೂ ಬಹಳ ಮನೋ

* ಇಲ್ಲಿ ಆಕೆಯು ಉಟ್ಟಿದ್ದ ದುಕೂಲವನ್ನು ಕದಂಬಕಾಂತಿಯೆಂದು ಭ್ರಮಿಸುವುದಾಗಿ ತಿಳಿಯಬೇಕು.

† ಕೊಂಬುಗಳೆಂದರೆ ಸ್ತನಗಳೆಂದು ಭಾವವು.

ಹರವಾಗಿರುವುವು! ಬಹಳ ಕೃಶವಾದ ಈ ನಿನ್ನ ಮಧ್ಯಭಾಗವು ಈ ದೊಡ್ಡ ಕೊಂಬುಗಳ ಭಾರವನ್ನು ಹೇಗೆ ತಾನೇ ಹೊರಬಲ್ಲುದು ? ಆ ನಿನ್ನ ಕೊಂಬುಗಳಮೇಲೆ ಬಿದ್ದ ನನ್ನ ಕಣ್ಣುಗಳು, ಅದರ ಮೊನೆಯಲ್ಲಿಯೇ ಬಲವಾಗಿ ನಾಟಿಕೊಂಡಿರುವುವು ಅವುಗಳಿಗೆ ಆ ಸಿಕ್ಕನ್ನು ಬಿಡಿಸಿಕೊಂಡು ಬರುವುದೇ ಅಸಾಧ್ಯವೆಂದು ತೋರುವುದು. ಆ ಕೊಂಬುಗಳಮೇಲೆ ಬಳಿದಿರುವ ಕೆಂಪು ಬಣ್ಣದ ಕೆಸರು,*ಈ ನನ್ನ ಆಶ್ರಮಪ್ರದೇಶವೆಲ್ಲವನ್ನೂ ಪರಿಮಳಿಸುತ್ತಿರುವುದಲ್ಲಾ! ಎಲೈ ಮಿತ್ರನೆ! ಒಮ್ಮೆ ನನಗೆ ನಿನ್ನ ವಾಸಸ್ಥಳವನ್ನು ತೋರಿಸಬಾರದೆ? ನಿನ್ನ ಲೋಕದವರೆಲ್ಲರಿಗೂ ನಿನ್ನಂತೆಯೇ ಎದೆಯಮೇಲೆ ನಮ್ಮಂತವರ ಮನಸ್ಸನ್ನು ಕಲಗಿಸತಕ್ಕ ಕೊಂಬುಗಳಿರಬಹುದಲ್ಲವೆ ? ಮತ್ತು ಅವರೆಲ್ಲರಿಗೂ ನಿನ್ನಂತೆಯೇ ಮುಖದಲ್ಲಿ ಈ ಮಧುರಾಲಾಪವೂ, ಈ ವಿಲಾಸವೂ, ಈ ಅಧರಾಮೃತವೂ ಇರಬಹುದಲ್ಲವೆ? ಓ ಮುನೀಂದ್ರಾ ! ನಿಮ್ಮ ಲೋಕದವರು ದೇಹಪೋಷಣಕ್ಕಾಗಿ ತಿನ್ನುವ ಆಹಾರವಾವುದು ! ನೋಡಿದರೆ ನೀವು ಆಹಾರವಿಲ್ಲದೆಯೇ ಜೀವಿಸುವಂತೆಯೂ ತೋರವುದು ! ನಿನ್ನ ಮುಖದಿಂದ ಹೊರಡುವ ಸುಗಂಧವು ಅಪೂರ್ವವಾಗಿರುವುದು. ವಿಷ್ಣುವಿಗಿರುವಂತೆ ನಿನ್ನ ಕಿವಿಯಲ್ಲಿರುವ ಮಕರಕುಂಡಲಗಳನ್ನು ನೋಡಿದರೆ, ನೀನೇ ವಿಷ್ಣುಕಲೆಯಂತೆ ತೋರುವೆ ! ಮೀನಿನಂತಿರುವ ನೇತ್ರಗಳಿಂದಲೂ. ಹಂಸಪಙ್ತಿಯಂತಿರುವ ದಂತಪಙ್ತಿಯಿಂದಲೂ, ಭ್ರಮರದಂತಿರುವ ಕುರುಳುಗಳಿಂದಲೂ ಕೂಡಿದ ನಿನ್ನ ಮುಖವು, ತಾವರೆಗೊಳವನ್ನು ಹೋಲುತ್ತಿರುವುದು. ನೀನು ನಿನ್ನ ಕೈಯಿಂದ ಹೊಡೆಯುವ ಈ ಚಂಡು, ತಾನು ಅತ್ತಿತ್ತ ಪುಟಹಾರುವಹಾಗೆಲ್ಲಾ, ನಿನ್ನ ರೂಪಕ್ಕೆ ಮರುಳುಗೊಂಡ ನನ್ನ ಕಣ್ಣುಗಳನ್ನೂ ಪುಟಹಾರಿಸುತ್ತಿರುವುದು. ಈ ಸಂಭ್ರಮದಲ್ಲಿ ಬಿಚ್ಚಿಹೋದ ನಿನ್ನ ತಲೆಕೂದಲನ್ನೂ ನೀನು ಕಾಣೆಯಾ? ಧೂರ್ತನಾದ ಈ ವಾಯುವು ನಿನ್ನ ನಡುಗಂಟನ್ನು ಸಡಿಲಿಸುತ್ತಿರುವುದೂ ನಿನಗೆ ತಿಳಿಯದೆ ಹೋಯಿತೆ? ಓ ತಾಪಸೋತ್ತಮಾ ! ತಪಸ್ವಿಗಳಿಗೆ ತಪೋವಿಘ್ನವನ್ನುಂಟುಮಾಡತಕ್ಕ ಈ ನಿನ್ನ ರೂಪವನ್ನು, ನೀನು ಯಾವ ತಪೋಬಲದಿಂದ ಸಂಪಾದಿಸಿದೆ ?

---

*ಇಲ್ಲಿ ಕೆಂಪುಬಣ್ಣದ ಕೆಸರೆಂದರೆ ಸ್ತನದಮೇಲಿನ ಕುಂಕುಮಲೇಪನವೆಂದು ತಿಳಿಯಬೇಕು.

ಮಿತ್ರಾ! ನನ್ನೊಡನೆ ನೀನೂ ಇಲ್ಲಿ ತಪಸ್ಸುಮಾಡುತ್ತಿರಬಾರದೆ? ಬ್ರಹ್ಮನು ನನ್ನತಪಸ್ಸಿಗೆ ಮೆಚ್ಚಿ,ನನ್ನ ಸಹಾಯಕ್ಕಾಗಿಯೇ ನಿನ್ನನ್ನು ಕಳುಹಿಸಿರಬಹು ದಲ್ಲವೆ? ಓ ಬ್ರಾಹ್ಮಣೋತ್ತಮಾ! ನಿನ್ನಲ್ಲಿ ನಾಟಿದ ನನ್ನ ಮನಸ್ಸೂ,ಕಣ್ಣು ಗಳೂ ಹಿಂತಿರುಗಿ ಬಾರದಿರುವುವು. ಆದುದರಿಂದ ದೈವಿಕವಾಗಿ ಕೈಗೆ ಸಿಕ್ಕಿ ದ ನಿನ್ನನ್ನು ನಾನು ಬಿಡಲಾರೆನು, ಓ ಚಾರುಶೃಂಗಿ ! ನಿನ್ನ ಮನಸ್ಸನ್ನು ನನಗೆ ವಶಮಾಡು ! ನಿನ್ನ ಸಖಿಯರೂ ನನಗೆ ಅನುಕೂಲರಾಗಿಯೇ ವ ರ್ತಿಸಲಿ!" ಎಂದನು. ಎಲೈ ಪರೀಕ್ಷಿದ್ರಾಜನೆ ! ಹೀಗೆ ಆಗ್ನೀಧ್ರನು ಆ ಕೆಯ ರೂಪಕ್ಕೆ ಮರುಳಾಗಿ, ಅನುನಯವಾಕ್ಯಗಳಿಂದ ಅವಳನ್ನು ವಶಮಾ ಡಿಕೊಂಡನು. ಆಕೆಯೂ ಈ ರಾಜಕುಮಾರನ, ರೂಪ, ಶೀಲ, ವಯಸ್ಸು, ವಿದ್ಯೆ, ಔದಾರ್ಯ ಮುಂತಾದ ಗುಣಗಳಿಗೆ ಮೆಚ್ಚಿ, ಅವನೊಡನೆ ಸೇರಿ, ಭೂಸರ್ಗದಂತೆ ಸಕಲಸುಖಾಸ್ಪದವಾದ ಜಂಬೂದ್ವೀಪದಲ್ಲಿ, ಲಕ್ಷೋಪ ಲಕ್ಷ ಸಂವತ್ಸರಗಳವರೆಗೆ ಸಮಸ್ತ ಭೋಗಗಳನ್ನೂ ಅನುಭವಿಸುತಿದ್ದಳು. ಇವಳಲ್ಲಿ ಅಗ್ನೀಧ್ರನಿಗೆ ನಾಭಿ, ಕಿಂಪುರುಷ, ಹರಿವರ್ಷ, ಇಲಾವೃತ, ರ ಮ್ಯಕ, ಹಿರಣ್ಮಯ,ಕುರು, ಭದ್ರಾಶ್ವ,ಕೇತುಮಾಲರೆಂಬ ಒಂಬತ್ತುಮಂದಿ ಮಕ್ಕಳು ಹುಟ್ಟಿದರು.ಪೂರ್ವಚಿತ್ತಿಯು ವರ್ಷವೊಂದಕ್ಕೆ ಒಬ್ಬ ಮಗನಂತೆ ಈ ಒಂಬತ್ತುಮಕ್ಕಳನ್ನೂ ಹಡೆದು,ಆಮಕ್ಕಳನ್ನು ಅರಮನೆಯಲ್ಲಿಯೇಬಿಟ್ಟು ತಾನುಮಾತ್ರ ತಿರುಗಿ ಬ್ರಹ್ಮನ ಸೇವೆಗಾಗಿ ಸತ್ಯಲೋಕಕ್ಕೆ ಹೊರಟುಹೋ ದಳು.ಆಕುಮಾರರೆಲ್ಲರೂ ತಾಯಿಯ ಅನುಗ್ರಹದಿಂದ ಬಾಲ್ಯದಿಂದಲೇ ಬಲ ಶಾಲಿಗಳಾಗಿದ್ದು, ತಮ್ಮ ತಂದೆಯಿಂದ ತಮಗೆ ಕ್ರಮವಾಗಿ ಹಂಚಿಕೊಡ ಲ್ಪಟ್ಟ ಜಂಬೂದ್ವೀಪದ ಬೇರೆಬೇರೆ ಭಾಗಗಳನ್ನು ಪಾಲಿಸುತ್ತಬಂದರು.ಹೀ ಗೆ ಇವರಿಗೆ ವಿಭಾಗಿಸಿಕೊಡಲ್ಪಟ್ಟದೇಶಭಾಗಗಳೆಲ್ಲವೂ ಅವರವರಹೆಸರಿನಿಂ ದಲೇಪ್ರಖ್ಯಾತಗಳಾಗಿ ವರ್ಷಗಳೆಂದುಕರೆಯಲ್ಪಡುವುವು,ಪೂರ್ವಚಿತ್ತಿಯು ಬಿಟ್ಟುಹೋದಮೇಲೆಯೂ,ಆಗ್ನೀಧ್ರನಿಗೆ ಕಾಮಾಸಕ್ತಿಯು ತಪ್ಪದಿದ್ದುದ ರಿಂದ,ಅವನು ಅವಳನ್ನೇ ಧ್ಯಾನಿಸುತ್ತ,ತಿರುಗಿ ಅವಳೊಡನೆ ಸುಖಿಸಬೇಕೆಂ ಬ ಆಸೆಯಿಂದ,ಅದಕ್ಕಾಗಿ ಅನೇಕಕರ್ಮಗಳನ್ನು ನಡೆಸುತಿದ್ದನು.ಪಿತೃದೇವತೆಗ ಳ ಪ್ರೀತಿಗಾಗಿಮಾಡಿದ ಆ ಕರ್ಮಗಳಿಂದ ಅವನಿಗೆ ಪಿತೃಲೋಕವೇಪ್ರಾಪ್ತ

ವಾಯಿತು.ಆಗ್ನೀಧ್ರನು ಲೋಕಾಂತರವನ್ನು ಹೊಂದಿದಮೇಲೆ,ಅವನ ಒಂ ಬತ್ತುಮಂದಿಮಕ್ಕಳೂ, ಕ್ರಮವಾಗಿ ಮೇರುವಿನ ಕುಮಾರಿಯರಾದ, ಮೇರುದೇವಿ,ಪ್ರತಿರೂಪೆ, ಉದಗ್ರದಂಷ್ಟ್ರೆ, ಲತೆ, ರಮ್ಯೆ, ಶ್ಯಾಮೆ, ನಾರಿ, ಭದ್ರೆ, ದೇವವೀತಿಯೆಂಬ ಒಂಬತ್ತು ಕನ್ಯೆಯರನ್ನು ವಿವಾಹಮಾಡಿಕೊಂ ಡು ಸುಖದಿಂದಿದ್ದರು. ಇಲ್ಲಿಗೆ ಎರಡನೆಯ ಅಧ್ಯಾಯವು.

---

{ ಆಗ್ನೀಧ್ರನ ಮಗನಾದ ನಾಭಿರಾಜನ ವೃತ್ತಾಂತವು.
ನಾಭಿರಾಜನಿಗೆ ಭಗವಂತನು ಪ್ರತ್ಯಕ್ಷನಾದುದು }

ಆಮೇಲೆ ನಾಭಿಯು ತನಗೆ ಸಂತಾನವಿಲ್ಲದುದರಿಂದ, ಪುತ್ರಾರ್ಥಿ ಯಾಗಿ, ತನ್ನ ಭಾರ್ಯೆಯಾದ ಮೇರುದೇವಿಯೊಡಗೂಡಿ, ಯಜ್ಞಗಳ ಮೂಲಕವಾಗಿ ಯಾಗಾರಾಧ್ಯನಾದ ಪರಮಪುರುಷನನ್ನು ಶ್ರದ್ಧೆಯಿಂದಾ ರಾಧಿಸುತಿದ್ದನು. ಹೀಗೆ ನಾಭಿರಾಜನು ಶುದ್ಧಮನಸ್ಸಿನಿಂದಲೂ,ಶ್ರದ್ಧೆಯಿಂ ದಲೂ,ವಿಷ್ಣುಪ್ರೀತ್ಯರ್ಥವಾಗಿ ಅಗ್ನಿಷ್ಟೋಮವೆಂಬ ಯಾಗವನ್ನಾರಂಭಿಸಿ, ಅದಕ್ಕೆ ಅಂಗಭೂತಗಳಾದ ಪ್ರವರ್ಗ್ಯಗಳೆಂಬ ಕರ್ಮಗಳನ್ನು ನಡೆಸುತಿದ್ದ ನು. ಹೋಮದ್ರವ್ಯಗಳು,ವಿಧ್ಯುಕ್ತವಾದ ಯಜ್ಞಭೂಮಿ, ನಿರ್ದುಷ್ಟವಾದ ಕಾಲ, ಶುದ್ಧವಾದ ಯಜ್ಞಮಂತ್ರಗಳು, ಸಮರ್ಥರಾದ ಋತ್ವಿಕ್ಕುಗಳು, ಭೂರಿದಕ್ಷಿಣೆ, ಶಾಸ್ತ್ರೋಕ್ತವಾದ ಅನುಷ್ಠಾನಗಳು, ಈ ಏಳುಬಗೆಯ ಸಾಧನಗಳಲ್ಲಿ,ಯಾವಭಾಗದಲ್ಲಿಯೂ ಲೋಪವಿಲ್ಲದೆ ಎಲ್ಲವೂಸಮರ್ಪಕವಾಗಿ ದ್ದರೂ, ಇಂತಹ ಯಜ್ಞಗಳಿಗೆ ದುರ್ಲಭನಾದ ಭಗವಂತನು, ತನ್ನ ಭಕ್ತ ನಾದ ಈ ನಾಭಿರಾಜನಲ್ಲಿ ಪೂರ್ಣವಾತ್ಸಲ್ಯವುಳ್ಳವನಾಗಿ, ಅವನ ಕೋರಿ ಕೆಯನ್ನು ಕೈಗೂಡಿಸಬೇಕೆಂಬ ಸಂಕಲ್ಪದಿಂದ, ಸುಂದರಾವಯವಗಳುಳ್ಳು ದಾಗಿಯೂ, ಮನಸ್ಸಿಗೂ ಕಣ್ಣಿಗೂ ಅತ್ಯಾನಂದಕರವಾಗಿಯೂ, ಅಪ್ರಾ ಕೃತವಾಗಿಯೂ ಇರುವ ತನ್ನ ದಿವ್ಯಮಂಗಳವಿಗ್ರಹದೊಡನೆ ಅವನ ಕಣ್ಣಿ ಗೆ ಕಾಣಿಸಿಕೊಂಡನು. ಆ ಭಗವಂತನ ದಿವ್ಯಾದ್ಭುತಸ್ವರೂಪವನ್ನು ಕೇಳ ಬೇಕೆ? ಅತ್ಯಂತಪ್ರಕಾಶವಿಶಿಷ್ಟವಾದ ದೇಹಕಾಂತಿ! ಅದರಮೇಲೆ ಸುವರ್ಣ ಮಯವಾದ ಪೀತಾಂಬರವೆಂಬ ಪಟ್ಟೆಮಡಿ! ನೀಡಿದ ನಾಲ್ಕು ಭುಜಗಳು!

ಆನಾಲ್ಕುಭುಜಗಳಲ್ಲಿಯೂ ಕ್ರಮವಾಗಿ ಶಂಖಚಕ್ರಗದಾಪದ್ಮಗಳೆಂಬ ನಾಲ್ಕು ದಿವ್ಯಾಯುಧಗಳು! ಎದೆಯಲ್ಲಿ ಶ್ರೀವತ್ಸವೆಂಬ ಮಚ್ಚೆ! ಅದರಪಕ್ಕದಲ್ಲಿ ಕೌಸ್ತುಭಮಣಿ! ತಲೆಯಿಂದ ಪಾದಾಗ್ರದವರೆಗೆ ಸರ್ವಾವಯವಗಳಲ್ಲಿಯೂ ಕ್ರಮವಾಗಿ, ಕಿರೀಟ, ಕುಂಡಲ, ಹಾರ, ಕೇಯೂರ, ನೂಪುರಗಳೇ ಮೊದಲಾದ ರತ್ನಾಭರಣಗಳು! ಇಂತಹ ದಿವ್ಯಸೌಂದರ್ಯದಿಂದೊಪ್ಪುತ್ತಿರುವ ಭಗವಂತನನ್ನು ಕಂಡೊಡನೆ,ಯಜ್ಞದೀಕ್ಷಿತನಾದ ನಾಭಿರಾಜನೂ,ಆಸಭೆಯಲ್ಲಿದ್ದ ಋತ್ವಿಕ್ಕುಗಳೂ,ಪುರೋಹಿತರೂ,ಸಭಾಸದರೂ,ಗೃಹಸ್ಥರೇಮುಂತಾಗಿ ಸಮಸ್ತಜನರೂ ಥಿಗ್ಗನೆ ಮೇಲೆದ್ದು, ನಿಧಿಯನ್ನು ಕಂಡ ಬಡವರಂತೆ ಅತ್ಯಾನಂದಭರಿತರಾಗಿ, ಆ ಭಗವಂತನಿಗೆ ನಮಸ್ಕರಿಸಿ ಯಥಾವಿಧಿಯಾಗಿ ಪೂಜಿಸಿದರು. ಮತ್ತು ಅಲ್ಲಿದ್ದವರೆಲ್ಲರೂ ಭಗವಂತನನ್ನು ಹೀಗೆಂದು ಸ್ತೋತ್ರಮಾಡುವರು. “ದೇವಾ! ನೀನು ಪೂರ್ಣಕಾಮನಾಗಿದ್ದರೂ ಭಕ್ತರಾದ ನಮ್ಮ ಈ ಅಲ್ಪಸತ್ಕಾರವನ್ನು ಪ್ರೀತಿಯಿಂದ ಸ್ವೀಕರಿಸಬೇಕು. ನಾವು ಮಾಡತಕ್ಕ ಈಅಲ್ಪಪೂಜೆಯನ್ನು ಗ್ರಹಿಸಿದಮಾತ್ರಕ್ಕೆ ಅದರಿಂದ ನಿನಗೇನೂ ಕೊರತೆಯುಂಟಾಗಲಾರದು. ಹೇ ಪ್ರಭೂ! ನಿನ್ನ ಗುಣಸ್ವಭಾವಗಳು ಅಪಾರವಾಗಿರುವುದರಿಂದ, ಅವೆಲ್ಲವನ್ನೂ ಸಂಪೂರ್ಣವಾಗಿ ನುತಿಸುವುದಕ್ಕೆ ಅಲ್ಪಜ್ಞರಾದ ನಮ್ಮಿಂದ ಸಾಧ್ಯವೆ?” ಎಂದಿಗೂ ಇಲ್ಲ. ಆದುದರಿಂದ ಈಗ ನಾವು ನಿನ್ನ ಮುಂದೆ ನಿಂತು “ನಮೋ ನಮಃ” ಎಂಬೀ ಎರಡುಪದಗಳನ್ನು ಮಾತ್ರ ಹೇಳಬಲ್ಲೆವೇ ಹೊರತು, ಇದಕ್ಕೆ ಮೇಲೆ ನಮಗೆ ಮಾತಾಡುವುದಕ್ಕೂ ಶಕ್ತಿ ಸಾಲದು! ನಾವು ಹಿರಿಯರಿಂದ ನಿನ್ನ ವಿಷಯವಾಗಿ ಕೇಳಿ ತಿಳಿದಿರುವುದೂ ಇಷ್ಟೇ! ಓ ದೇವಾ! ಪ್ರಕೃತಿಸಂಬಂಧವಾದ ನಾಮರೂಪಗಳನ್ನು ಹೊಂದಿ, ಪ್ರಕೃತಿಗುಣಗಳಾದ ಶಬ್ದಾದಿವಿಷಯಗಳಲ್ಲಿ ಆಸೆಯುಳ್ಳವರಾಗಿ, ಅದರಿಂದ ಕರ್ಮಕ್ಕೆ ಕಟ್ಟುಬಿದ್ದಿರುವ ಯಾವಮನುಷ್ಯರು ತಾನೇ, ಪ್ರಕೃತಿವಿಲಕ್ಷಣವಾದ ನಿನ್ನಸ್ವರೂಪ ಸ್ವಭಾವಗಳನ್ನು ಚೆನ್ನಾಗಿ ತಿಳಿಯಬಲ್ಲನು? ಆದುದರಿಂದ ಲೋಕದಲ್ಲಿ ಎಷ್ಟೇ ಮಹನೀಯನಾಗಿದ್ದರೂ, ಪಾಪನಿವಾರಕವಾಗಿಯೂ, ಶುಭಕರವಾಗಿಯೂ ಇರುವ ನಿನ್ನ ಗುಣಗಣಗಳಲ್ಲಿ ಲೇಶಮಾತ್ರವನ್ನಲ್ಲದೆ ಸಂಪೂರ್ಣವಾಗಿ

ತಿಳಿಯಲಾರನು. ನೀನು ಹೀಗೆ ಅಪಾರಮಹಿಮೆಯುಳ್ಳವನಾಗಿದ್ದರೂ, ಪೂ ರ್ಣನಾಗಿದ್ದರೂ, ನಿನ್ನಭಕ್ತರು ಒಮ್ಮೆ ನಿನ್ನನ್ನು ಗದ್ಗದಸ್ವರದಿಂದ ನುತಿ ಸಿ,ನಿರ್ಮಲತೀರ್ಥವನ್ನಾಗಲಿ, ಒಂದು ಸಣ್ಣಧಾನ್ಯದ ತೆನೆಯನ್ನಾಗಲಿ, ಎಳೇ ಚಿಗುರನ್ನಾಗಲಿ, ಒಂದು ತುಳಸೀದಳವನ್ನಾಗಲಿ, ಕೊನೆಗೆ ಒಂದು ಎಳಗರಿ ಕೆಯನ್ನಾಗಲಿ, ನಿನ್ನ ಮುಂದೆ ತಂದಿಟ್ಟರೆ,ಅದನ್ನೇ ನೀನು ಆತ್ಯಾದರದಿಂದ ಕೈಕೊಂಡು, ಬಹಳವಾಗಿ ಸಂತೋಷಿಸತಕ್ಕವನು. ನಾವು ಇಷ್ಟುಯಜ್ಞ ಸಂಭಾರಗಳನ್ನೊದಗಿಸಿ, ಇಷ್ಟು ಶ್ರಮಪಟ್ಟು ಯಾಗವನ್ನು ನಡೆಸುವುದೂ ನಿನ್ನ ಅಷ್ಟೇ ಸಂತೋಷಕ್ಕಾಗಿಯೇ ಹೊರತು, ಅವುಗಳಿಂದ ನಿನಗಾಗ ಬೇಕಾದ ಹೆಚ್ಚು ಪ್ರಯೋಜನವೇನೂಇಲ್ಲ. ಓನಾಥಾ! ನೀನು ಸ್ವಯಮಾಗಿ ಯೇ ಸಕಲಪುರುಷಾರ್ಥಸ್ವರೂಪನು. ನಿತ್ಯಾನಂದಮಯನು! ನಮ್ಮ ಈ ಆ ರಾಧನದಿಂದ, ನಿನಗೆ ಯಾವಪ್ರಯೋಜನವೂ ಇಲ್ಲದಿದ್ದರೂ, ನಿನಗೆ ಸಂತು ಷ್ಟಿಯನ್ನುಮಾಡುವುದರಮೂಲಕವಾಗಿ,ಅದು ನಮಗೇ ಫಲಕಾರಿಯಾಗಬೇ ಕು. ಓ ಪರಮಪುರುಷಾ! ನಮ್ಮ ಶ್ರೇಯಸ್ಸಿಗೆ ಸಾಧನವಾದ ಉತ್ತಮಪುರು ಷಾರ್ಥವಾವುದೆಂಬುದನ್ನೇ ನಾವು ಕಾಣೆವು. ಇಂತಹ ಮೂಢರಾದ ನಮ್ಮಲ್ಲಿ ಯೂ ನೀನು ಎಣೆಯಿಲ್ಲದ ವಾತ್ಸಲ್ಯವುಳ್ಳವನಾದುದರಿಂದ, ನಾವು ನಿನ್ನ ಆರಾಧನವನ್ನು ಪೂರ್ಣವಾಗಿಮುಗಿಸುವುದಕ್ಕೆಮುಂಚೆಯೇ,ನಮಗೆ ಬೇಕಾದ ಕೋರಿಕೆಗಳನ್ನೂ,ಶುದ್ಧಾತ್ಮಸ್ವರೂಪವೆಂಬ ಮೋಕ್ಷವನ್ನೂ ಕೈಗೂಡಿಸುವು ದಕ್ಕಾಗಿ,ನಮ್ಮ ಕಣ್ಣಿಗೆ ಗೋಚರಿಸಿದೆಯಲ್ಲವೆ?ಆಹಾ! ಇದಲ್ಲವೇನಿನ್ನ ಭಕ್ತ ವಾತ್ಸಲ್ಯವು ! ಪರಿಪೂರ್ಣನಾಗಿದ್ದರೂ ಅಪೂರ್ಣನಾದ ಇತರ ಮನುಷ್ಯ ನಂತೆ,ನಮ್ಮ ಮುಂದೆ ಬಂದುನಿಂತ ನಿನ್ನಸೌಲಭ್ಯವನ್ನು ನಾವೇನೆಂದು ಹೇ ಳಲಿ! ಓ ಮಹಾತ್ಮಾ ! ನೀನು ನಮ್ಮ ರಾಜನಿಗಿಷ್ಟವಾದ ಅಲ್ಪವರಗಳ ನ್ನು ಕೊಡುವುದಕ್ಕಾಗಿ ಬಂದವನಾಗಿದ್ದರೂ, ಈ ಯಜ್ಞದಲ್ಲಿ ನೀನು ನ ಮ್ಮ ಕಣ್ಣೆದಿರಿಗೆ ಗೋಚರಿಸಿದಾಗಲೇ,ಎಲ್ಲಕ್ಕಿಂತಲೂ ಉತ್ತಮವಾದ ವರ ವನ್ನು ಕೊಟ್ಟಂತಾಯಿತು ! ನಮಗೆ ಈ ಅನುಗ್ರಹವೊಂದೇ ಸಾಕು ! ವೈ ರಾಗ್ಯದಿಂದ ಬಲಿತ ತೀವ್ರಧ್ಯಾನವೆಂಬ ಬೆಂಕಿಯಿಂದ, ತಮ್ಮ ಸಮಸ್ತಪಾ ಪಗಳನ್ನೂದಹಿಸಿದವರಾಗಿಯೂ, ತಮ್ಮ ಆತ್ಮದಲ್ಲಿಯೇ ಬ್ರಹ್ಮಸಾಕ್ಷಾತ್ಕಾರ

ವನ್ನು ಮಾಡಿ ಆ ಆನಂದದಲ್ಲಿರತಕ್ಕವರಾಗಿಯೂ, ನಿನ್ನ ಆರಾಧನದಲ್ಲಿ ನಿರತ ರಾಗಿಯೂ ಇರುವ ಮಹರ್ಷಿಗಳೆಲ್ಲರೂ, ಯಾವಾಗಲೂ ನಿನ್ನ ಗುಣಾನುಭವ ದಲ್ಲಿಯೇ ಇರತಕ್ಕವರು! ನಿನ್ನ ಗುಣಕೀರ್ತನವೇ ಉತ್ತಮಶ್ರೇಯಸ್ಸ ನ್ನು ಕೈಗೂಡಿಸುವಾಗ, ಇನ್ನು ನಿನ್ನ ಸಾಕ್ಷಾದ್ದರ್ಶನದಿಂದುಂಟಾಗುವ ಫಲ ವನ್ನು ಕೇಳಬೇಕೆ? ದೇವಾ! ಎಡವಿಬೀಳುವುದು, ಸೀನುವುದು, ಆಕ ಳಿಸುವುದು, ಮುಂತಾಗಿ ಇನ್ನೂ ಅನೇಕ ದುರವಸ್ಥೆಗಳನ್ನನುಭವಿಸುವಾ ಗಲೂ, ಜ್ವರದಲ್ಲಿಯೂ, ಮರಣಾವಸ್ಥೆಯಲ್ಲಿಯೂ ಪ್ರಜ್ಞೆತಪ್ಪಿದಾ ಗಲೂ, ನಮಗೆ, ಸಕಲಪಾಪನಿವಾರಕಗಳಾಗಿಯೂ, ಸಕಲಕಲ್ಯಾಣ ಗುಣದ್ಯೋತಕಗಳಾಗಿಯೂ ಇರುವ ನಿನ್ನ ನಾಮಗಳು ಉಚ್ಚಾರಣವಿಷ ಯಗಳಾಗುತ್ತಿರಲಿ! ಓ ವರದಾ! ದರಿದ್ರನು ಧನಾಧಿಪತಿಯಾದ ಕುಬೇರನ ಲ್ಲಿಗೆ ಹೋಗಿ ಧಾನ್ಯದ ಹೊಟ್ಟನ್ನು ಯಾಚಿಸುವಂತೆ, ಈ ನಮ್ಮ ರಾಜನು ಸ್ವರ್ಗವನ್ನಾಗಲಿ,ಕೊನೆಗೆ ಮೋಕ್ಷವನ್ನೇ ಆಗಲಿ ಕೊಡುವುದಕ್ಕೆ ಸಮರ್ಥ ನಾದ ನಿನ್ನಲ್ಲಿ, ಅತ್ಯಲ್ಪವಾದ ಸಂತಾನಪ್ರಾಪ್ತಿಯನ್ನಪೇಕ್ಷಿಸಿ, ನಿನ್ನಂತಹ ಪುತ್ರನೊಬ್ಬನನ್ನು ಪ್ರಾರ್ಥಿಸುತ್ತಿರುವನು. ಪುತ್ರಸಂತಾನವೇ ತನಗೆ ಪರ ಮಪುರುಷಾರ್ಥವೆಂದೆಣಿಸುತ್ತಿರುವನು ಆಹಾ! ಇದೂ ನಿನ್ನ ಮಾಯಾಪ್ರಭಾ ವವಲ್ಲವೆ? ಮಹಾತ್ಮರ ಪಾದಸೇವೆಯನ್ನು ಮಾಡಿದ ಪುರುಷನೊಬ್ಬನು ಹೊರತು, ಕರ್ಮವಶ್ಯರಾದ ಬೇರೆ ಯಾರೂ ಸನ್ಮಾರ್ಗವನ್ನು ಮರೆಸತಕ್ಕ ಆ ನಿನ್ನ ಮಾಯೆಯನ್ನು ತಿಳಿಯಲಾರರು! ಆ ಮಾಯಾಶಕ್ತಿಯನ್ನು ದಾಟಲಾರರು. ಅಂತಹ ಮಾಯೆಯಿಂದ ಮರೆಸಲ್ಪಟ್ಟು ವಿಷವೇಗಕ್ಕೆ ಸಮಾನವಾದ ಶಬ್ದಾದಿವಿಷಯಗಳಲ್ಲಿ ಬಿದ್ದು ಬುದ್ಧಿಗೆಟ್ಟವರು, ನಿನ್ನಲ್ಲಿ ಇಂ ತಹ ಅಲ್ಪವರಗಳನ್ನು ಕೋರುವುದರಲ್ಲಿ ಆಶ್ಚರ್ಯವೇನಿದೆ? ಓ ದೇವದೇವಾ! ನಾವಾದರೋ ಈಗ ಅಲ್ಪಫಲವನ್ನೇ ಪುರುಷಾರ್ಥವೆಂದು ಭಾಸಿವಿ, ಅದಕ್ಕಾ ಗಿ ಉದಾರಚರಿತ್ರನಾದ ನಿನ್ನನ್ನು ಇಲ್ಲಿಗೆ ಬರಮಾಡಿಕೊಂಡೆವು. ಉತ್ಕೃಷ್ಟ ವರಗಳನ್ನು ಕೊಡಬಲ್ಲವನಾದ ನಿನ್ನನ್ನು, ನಾವು ಈ ಅಲ್ಪಕಾರ್ಯಕ್ಕಾಗಿ ಕರೆಸಿ ದರೂ, ರಾಜನು ನಿನಗೆ ಸಮಾನನಾದ ಪುತ್ರನನ್ನೇ ಪ್ರಾರ್ಥಿಸುವನಾದುದ ರಿಂದ, ಇದು ನಿನಗೆ ಮೇಲ್ಮೆಯೇ ಹೊರತು ಅವಮಾನಕರವಲ್ಲ" ಎಂದರು.

ಹೀಗೆ ಆ ಸಭಾಸದರೆಲ್ಲರೂ ನಾಭಿರಾಜನೊಡನೆ ಭಗವಂತನ ಪಾದಗಳನ್ನು ಹಿಡಿದು ನಮಸ್ಕರಿಸಲು, ಭಗವಂತನು ದಯಾದೃಷ್ಟಿಯಿಂದ ಅವರನ್ನು ನೋಡಿ "ಎಲೈ ಮಹರ್ಷಿಗಳಿರಾ! ನೀವು ಈ ರಾಜನ ನಿಮಿತ್ತವಾಗಿ ದುರ್ಲಭವಾದ ವರವನ್ನು ಕೇಳುತ್ತಿರುವಿರಿ! ಇವನಲ್ಲಿ ನನಗೆ ಸಮಾನನಾದ ಪುತ್ರನು ಹುಟ್ಟಬೇಕೆಂದು ಕೇಳಿದಿರಲ್ಲವೆ?ಲೋಕದಲ್ಲಿ ನನಗೆ ನಾನೇ ಸಮಾನನೇ ಹೊರತು ನನಗೆ ಸಾಟಿಯಾದವನು ಬೇರೊಬ್ಬನಿಲ್ಲ ! ಜ್ಞಾನಿಗಳಾದ ನೀವು ಈ ವಿಷಯವನ್ನು ತಿಳಿಯದವರಲ್ಲ!ಸತ್ಯವಾಕ್ಕುಳ್ಳ ನೀವೇ ನಿಮ್ಮಬಾಯಿಂದ ಸಾಗದ ಕಾರ್ಯವನ್ನುಕುರಿತು ವರವನ್ನು ಕೇಳಿದುದು ನನಗೆ ಆಶ್ಚರ್ಯವನ್ನುಂಟುಮಾಡುತ್ತಿರುವುದು. ಆದರೂ ಚಿಂತೆಯಿಲ್ಲ. ನಿಮ್ಮಂತಹ ಬ್ರಾಹ್ಮಣರು ನನಗೆ ಮುಖದಂತಿರುವುದರಿಂದ, ನಿಮ್ಮ ಬಾಯಿಂದ ಹೊರಟ ಮಾತು ಸುಳ್ಳಾಗಬಾರದು. ಈ ಕಾರಣಕ್ಕಾಗಿ ನಾಭಿರಾಜನ ಭಾರ್ಯೆಯಾದ ಈ ಮೇರುದೇವಿಯಲ್ಲಿ ನನ್ನ ಅಂಶದಿಂದ ನಾನೇ ಅವತರಿಸುವೆನು? ಎಂದನು. ಮೇರುದೇವಿಯೂ ಕೇಳುತಿದ್ದಹಾಗೆಯೇ ಭಗವಂತನು ರಾಜನಮುಂದೆ ಈ ಮಾತನ್ನು ಹೇಳಿ, ಅಂತರ್ಧಾನವನ್ನು ಹೊಂದಿದನು. ತಾನು ನಾಭಿರಾಜನಿಗೆ ಅನುಗ್ರಹಿಸಿಕೊಟ್ಟ ವರವನ್ನು ನೆರವೇರಿಸುವುದಕ್ಕಾಗಿ ಸ್ವಲ್ಪಕಾಲದೊಳಗಾಗಿಯೇ ಮೇರುದೇವಿಯ ಗರ್ಭದಲ್ಲಿ ಬೆಳೆದನು. ಲೋಕದಲ್ಲಿ ಜ್ಞಾನಿಗಳಾಗಿಯೂ, ದಿಗಂಬರರಾಗಿಯೂ, ಬ್ರಹ್ಮಚಾರಿಗಳಾಗಿಯೂ ಇರುವ ಋಷಿಗಳಿಗೆ, ಧರ್ಮಬೋಧೆಯನ್ನು ಮಾಡಬೇಕೆಂಬ ಉದ್ದೇಶದಿಂದ ಕೇವಲ ಸತ್ವಪ್ರಧಾನವಾದ ಶರೀರವನ್ನವಲಂಬಿಸಿ, ನಾಭಿರಾಜನ ಪುತ್ರನಾಗಿ ಹುಟ್ಟಿದನು. ಓ ಪರೀಕ್ಷಿದ್ರಾಜಾ! ಇದೇ ಆ ಭಗವಂತನ ಋಷಭಾವತಾರವು. ಇಲ್ಲಿಗೆ ಮೂರನೆಯ ಅಧ್ಯಾಯವು.

---

## ಋಷಭಾವತಾರಚರಿತ್ರವು.

ಪರೀಕ್ಷಿದ್ರಾಜನೆ ಕೇಳು! ಹುಟ್ಟಿದಾಗಲೇ ಈ ಶಿಶುವಿನಲ್ಲಿ ಭಗವಂತನ ಲಕ್ಷಣಗಳೆಲ್ಲವೂ ಕಾಣುತಿದ್ದುವು. ಮತ್ತು ಆ ಶಿಶುವು ದಿನದಿನಕ್ಕೆ ಬೆಳೆಯುತ್ತ ಬಂದಹಾಗೆಲ್ಲಾ ಸಮಸ್ತಪ್ರಾಣಿಗಳಲ್ಲಿಯೂ ಸಮಬುದ್ಧಿ, ಇಂದ್ರಿ

ಯನಿಗ್ರಹ, ವಿರಕ್ತಿ, ಎಲ್ಲರನ್ನೂ ಅಡಗಿಸಿ ಆಳತಕ್ಕ ಪ್ರಭುಶಕ್ತಿ, ಯಾವವಿ ಷಯದಲ್ಲಿಯೂ ಕೊರತೆಯಿಲ್ಲದ ಮಹಾವಿಭೂತಿ, ಇವೇ ಮೊದಲಾದ ಗುಣ ಗಳಿಂದ ಅವನ ಮಹಿಮೆಯು ಕ್ರಮಕ್ರಮವಾಗಿ ಬೆಳೆಗುತ್ತಬಂದಿತು. ಈ ಕು ಮಾರನನ್ನು ಕಂಡು ಮಂತ್ರಿ ಮೊದಲಾದ ರಾಜಾಂಗದವರೂ, ಪ್ರಜೆಗಳೂ ಬ್ರಾಹ್ಮಣರೂ, ಭೂಮಂಡಲವನ್ನಾಳುವುದಕ್ಕೆ ಅವನೇ ಇರಬೇಕೆಂದು ಹಾ ರೈಸುತಿದ್ದರು ಹೀಗೆ ಆ ರಾಜಕುಮಾರನು ಸತ್ವಗುಣಪ್ರಧಾನವಾದ ದೇಹ ದಿಂದಲೂ,ಉತ್ತಮಗುಣದಿಂದಲೂ,ಪ್ರಶಸ್ತವಾದ ಕೀರ್ತಿಯಿಂದಲೂ, ಇಂ ದ್ರಿಯಬಲದಿಂದಲೂ, ದೇಹಶಕ್ತಿಯಿಂದಲೂ, ಭಾಗ್ಯದಿಂದಲೂ, ಶೌರ್ಯಾ ದಾರ್ಯವೀರ್ಯಗಳಿಂದಲೂ,ಎಲ್ಲರನ್ನೂ ಮೀರಿದ ಮಹಾಮಹಿಮೆಯುಳ್ಳವನಾ ಗಿದ್ದುದನ್ನು ನೋಡಿ,ಅವನ ತಂದೆಯಾದ ನಾಭಿರಾಜನು ಅವನಿಗೆ ಋಷಭ ನೆಂದು ಹೆಸರಿಟ್ಟನು ಇಂದ್ರನು ಈ ಋಷಭನ ಗುಣಾತಿಶಯವನ್ನು ನೋಡಿ ಸಹಿಸಲಾರದೆ,ಅವನೊಡನೆ ವಿರೋಧಿಸಿ, ಕೆಲವು ಕಾಲದವರೆಗೆ ಆವನ ದೇಶ ದಲ್ಲಿ ಮಳೆಯನ್ನೇ ಸುರಿಸದಿದ್ದನು ಯೋಗೀಶ್ವರನಾದ ಋಷಭನು,ಇದನ್ನು ತಿಳಿದು, ಇಂದ್ರನ ಅಸೂಯೆಗಾಗಿ ತನ್ನಲ್ಲಿ ತಾನೇ ನಗುತ್ತ,ಅಜನಾಭವೆಂಬ ತನ್ನ ರಾಜ್ಯದಲ್ಲಿ ಸ್ವಶಕ್ತಿಯಿಂದಲೇ ಬೇಕಾದಷ್ಟು ಸುವೃಷ್ಟಿಯನ್ನು ಕರೆದನು ಇತ್ತಲಾಗಿ ನಾಭಿರಾಜನು, ತನ್ನ ಆಸೆಗೆ ತಕ್ಕಂತೆ ಈ ಸುಪುತ್ರನ ನ್ನು ಪಡೆದಮೇಲೆ, ಸಾಕ್ಷಾದ್ಭಗವಂತನೇ ತನ್ನಲ್ಲಿ ಅವತರಿಸಿರುವುದನ್ನು ಕಾ ಣದೆ,ಅವನನ್ನು ತನ್ನ ಮಗನೆಂದೇ ಭಾವಿಸಿ, ಮಹಾನಂದದಲ್ಲಿ ಮುಳುಗಿದ್ದ ನ. ಹೀಗೆ ಭಗವನ್ಮಾಯೆಯಿಂದ ಮೋಹಿತವಾದ ಮನಸ್ಸುಳ್ಳ ನಾಭಿರಾಜ ನು, ಮನುಷ್ಯರೂಪದಿಂದ ತನ್ನಲ್ಲಿ ಪುತ್ರನಾಗಿ ಹುಟ್ಟಿದ ಆ ಪರಮಪುರುಷ ನನ್ನು ಪುತ್ರಭಾವದಿಂದ ನೋಡಿನೋಡಿ ಹಿಗ್ಗುತ್ತ, ಸಂತೋಷದಿಂದ ಕುಗ್ಗಿ ದ ಕಂಠವುಳ್ಳವನಾಗಿ “ಅಪ್ಪ,ಮಗು!” ಎಂದು ಆಗಾಗ ಕೂಗಿ ಕರೆಯು ತಿದ್ದನು. ಪಟ್ಟಣದ ಜನಗಳೂ, ಪ್ರಜೆಗಳೂ, ದೇಶವಾಸಿಗಳೂ ತನ್ನ ಮಗ ನಲ್ಲಿ ಬಹಳ ಅನುರಕ್ತರಾಗಿರುವುದನ್ನು ತಿಳಿದು, ನಾಭಿರಾಜನು ತನ್ನ ರಾ ಜ್ಯವನ್ನು ಪುತ್ರನಿಗೊಪ್ಪಿಸಿ, ಲೋಕದಲ್ಲಿ ವರ್ಣಾಶ್ರಮಧರ್ಮಗಳನ್ನು ಚೆನ್ನಾಗಿ ಕಾಪಾಡುತ್ತ ಬರುವಂತೆ ನಿಯಮಿಸಿ, ಅವನಿಗೆ ಪಟ್ಟಾಭಿಷೇಕ

ವನ್ನೂ ನಡೆಸಿದನು. ಆಮೇಲೆ ತನ್ನ ದೇಶದಲ್ಲಿರುವ ಬ್ರಾಹ್ಮಣರ ವಶಕ್ಕೆ ಆ ಪುತ್ರನನ್ನೊಪ್ಪಿಸಿ, ತನ್ನ ಪತ್ನಿಯಾದ ಮೇರುದೇವಿಯೊಡನೆ ಬದರಿಕಾಶ್ರಮಕ್ಕೆ ಹೊರಟನು. ವಿಶಾಲವಾದ ಆ ಆಶ್ರಮಪ್ರದೇಶದಲ್ಲಿ ನರನಾರಾಯಣ ರೂಪದಿಂದಿರುವ ಷಡ್ಗುಣಪರಿಪೂರ್ಣನಾದ ವಾಸುದೇವನನ್ನು ತಪಸ್ಸಿನಿಂದಲೂ, ಸಾಂಗವಾದ ಭಕ್ತಿಯೋಗದಿಂದಲೂ ಆರಾಧಿಸಿ, ತನ್ನ ಪ್ರಾರಬ್ಧಕರ್ಮವು ತೀರಿದಮೇಲೆ ಮುಕ್ತಿಯನ್ನೂ ಹೊಂದಿದನು. ಎಲೈ ಪರೀಕ್ಷಿದ್ರಾಜನೆ! ಈಕೆಳಗಿನ ಗಾಥೆಗಳಿಂದ ನಾಭಿರಾಜನ ಚರಿತ್ರವು ಎಲ್ಲೆಲ್ಲಿಯೂ ಕೊಂಡಾಡಲ್ಪಡುತ್ತಿರುವುದು. "ರಾಜರ್ಷಿಯಾದ ನಾಭಿಯಚರಿತ್ರವು ಎಣೆಯಿಲ್ಲದುದು! ಅವನಂತೆ ಲೋಕಪ್ರಸಿದ್ಧವಾದ ಕಾರ್ಯವನ್ನು ಯಾವನೂ ನಡೆಸಲಾರನು! ಈತನ ಪರಿಶುದ್ಧವಾದ ಕರ್ಮಗಳಿಂದ ಸಂತುಷ್ಟನಾದ ಭಗವಂತನು, ಅವನಲ್ಲಿ ತಾನೇ ಪುತ್ರರೂಪದಿಂದವತರಿಸಿದನು! ಈ ನಾಭಿಯಂತೆ ಬ್ರಾಹ್ಮಣಪ್ರಿಯನಾಗಿ, ಅವರನ್ನು ವಿಶ್ವಾಸದಿಂದ ಕಾಪಾಡತಕ್ಕವನು ಬೇರೆ ಯಾವನೂ ಇರಲಾರನು. ಈತನ ಯಾಗದಲ್ಲಿ ಬ್ರಾಹ್ಮಣರೆಲ್ಲರೂ ಅನೇಕಮಂಗಳವಸ್ತುಗಳಿಂದ ಪೂಜಿತರಾಗಿ, ತಮ್ಮ ಮಂತ್ರಬಲದಿಂದ ಯಜ್ಞಪತಿಯಾದಪರಮಪುರುಷನನ್ನು ಸಾಕ್ಷಾತ್ತಾಗಿ ಯಜ್ಞಶಾಲೆಗೆ ಕರೆತರಿಸಿ ಆತನ ಕಣ್ಣಿಗೆ ಕಾಣಿಸಿದರು." ರಾಜೇಂದ್ರಾ ! ಇದೇ ಆಶ್ಲೋಕಾರ್ಥವು. ಇನ್ನು ಆ ಋಷಭದೇವನ ಚರಿತ್ರವನ್ನು ವಿವರಿಸುವೆನು ಕೇಳು! ನಾಭಿರಾಜನು ಮುಕ್ತಿಯನ್ನು ಹೊಂದಿದಮೇಲೆ, ಋಷಭನು ತನ್ನ ಆಳ್ವಿಕೆಗೊಳಪಟ್ಟ ಭೂಭಾಗವೇ ಸ್ವರ್ಗಮೋಕ್ಷಗಳನ್ನು ಸಾಧಿಸತಕ್ಕ ಸತ್ಕರ್ಮಗಳಿಗೆಲ್ಲಾ ಉತ್ತಮಸ್ಥಾನವೆಂಬುದನ್ನು ತಿಳಿದು, ತನ್ನ ಪ್ರಜೆಗಳೂ ಹಾಗೆಯೇ ನಡೆಯಬೇಕೆಂಬುದಕ್ಕಾಗಿ, ತಾನು ಸರ್ವಜ್ಞನಾಗಿದ್ದರೂ ಕೆಲವು ಕಾಲದವರೆಗೆ ಗುರುಕುಲವಾಸವನ್ನು ಮಾಡುತಿದ್ದನು. ಆಮೇಲೆ ಆ ಆಚಾರ್ಯರ ಅನುಮತಿಯಿಂದ ಗೃಹಸ್ಥಾಶ್ರಮಧರ್ಮಗಳನ್ನೂ ನಡೆಸುತ್ತ ಬಂದನು. ಶಾಸ್ತ್ರಗಳಲ್ಲಿ ವಿಧಿಸಲ್ಪಟ್ಟ ಶ್ರೌತಸ್ಮಾರ್ತರೂಪಗಳಾದ ಪ್ರವೃತ್ತಿನಿವೃತ್ತಿ ಕರ್ಮಗಳೆರಡನ್ನೂ ಕ್ರಮವಾಗಿ ನಡೆಸುತಿದ್ದನು. ಹೀಗೆ ಋಷಭರೂಪದಿಂದವತರಿಸಿದ ಆ ಭಗವಂತನು, ತಾನು ಸರ್ವಜ್ಞನಾಗಿ

ದ್ದರೂ, ಗುರುಕುಲವಾಸವನ್ನು ಮಾಡಿ, ಪೂರ್ಣಕಾಮನಾಗಿದ್ದರೂ ಶ್ರದ್ಧೆಯಿಂದ ಕರ್ಮಗಳನ್ನು ನಡೆಸುತ್ತ, ಆ ನಿವದಿಂದ ತನ್ನ ದೇಶದ ಪ್ರಜೆಗಳೆಲ್ಲರಿಗೂ ಸನ್ಮಾರ್ಗವನ್ನು ತೋರಿಸುತಿದ್ದನು. ಆಮೇಲೆ ದೇವೇಂದ್ರನು ತನಗೆ ಪ್ರೀತಿಯಿಂದ ಕೊಟ್ಟ ಜಯಂತಿಯೆಂಬ ಕನ್ಯೆಯನ್ನು ವಿವಾಹ ಮಾಡಿಕೊಂಡು, ಅವಳಲ್ಲಿ ನೂರುಮಂದಿ ಪುತ್ರರನ್ನು ಪಡೆದನು. ಆ ಮಕ್ಕಳಲ್ಲಿ ಹಿರಿಯನಾದ ಭರತನೆಂಬವನು, ಎಣೆಯಿಲ್ಲದ ಗುಣಗಳಿಂದ ಲೋಕ ಪ್ರಸಿದ್ಧನಾದನು ಓ ಪರೀಕ್ಷಿದ್ರಾಜಾ! ಈ ಭರತನ ಆಳ್ವಿಕೆಯಿಂದಲೇ ಅಜನಾಭವೆಂಬ ಈ ಭೂಖಂಡಕ್ಕೆ, ಅದುಮೊದಲುಗೊಂಡು ಭರತವರ್ಷವೆಂಬ ಹೆಸರುಂಟಾಯಿತು. ಮತ್ತು ಆ ನೂರು ಮಕ್ಕಳಲ್ಲಿ ಹತ್ತುಮಂದಿಗೊಬ್ಬನಂತೆ, ಗುಣಗಳಿಂದ ಪ್ರಸಿದ್ಧನಾಗಿ ಪ್ರಧಾನನೆನಿಸಿಕೊಂಡನು. ಮೊದಲನೆಯ ಹತ್ತುಮಂದಿ ಕುಮಾರರಲ್ಲಿ ಭರತನೇ ಪ್ರಧಾನನು. ಅದರಿಂದಾಚೆಗೆ ಹನ್ನೊಂದನೆಯವನು ಕುಶಾವರ್ತನು. ಹೀಗೆಯೇ ಕ್ರಮವಾಗಿ, ಇಲಾವರ್ತ, ಬ್ರಹ್ಮಾವರ್ತ, ಆರ್ಯಾವರ್ತ, ಮಲಯಕೇತು, ಭದ್ರಸೇನ, ಇಂದ್ರಸ್ಪೃಕ್ಕು, ವಿದರ್ಭ, ಕೀಟಕರೆಂಬ ಕುಮಾರರು, ತಮ್ಮ ತಮ್ಮಂದಿರಾದ ಒಂಭತ್ತುಮಂದಿ ಕುಮಾರರಲ್ಲಿ ಪ್ರಮುಖರೆನಿಸಿಕೊಂಡು, ವಿಶೇಷಪ್ರಸಿದ್ಧಿಯನ್ನೂ ಹೊಂದಿದರು. ಬೇರೆ ತೊಂಭತ್ತುಮಂದಿಮಕ್ಕಳಲ್ಲಿ, ಕವಿ, ಹರಿ, ಅಂತರಿಕ್ಷ, ಪ್ರಬುದ್ಧ, ಪಿಪ್ಪಲಾಯನ, ಆವಿರ್ಹೋತ್ರ, ದ್ರುಮಿಡ, ಚಮಸ, ಕರಭಾಜನರೆಂಬ ಒಂಭತ್ತುಮಂದಿ ಮಕ್ಕಳು, ಲೋಕದಲ್ಲಿ ಭಗವದ್ಧರ್ಮಗಳನ್ನೇ ಪ್ರಕಾಶಗೊಳಿಸುತ್ತ, ತಾವೂ ಅದರಲ್ಲಿ ಅಕ್ಕರೆಯುಳ್ಳವರಾಗಿ,ಮಹಾಭಾಗವತರೆಂದು ಪ್ರಸಿದ್ಧಿಯನ್ನು ಹೊಂದಿದರು. ರಾಜಾ! ಭಗವನ್ಮಹಿಮೆಯನ್ನು ಪ್ರಕಟಿಸತಕ್ಕವಾಗಿಯೂ, ಮನಶ್ಶಾಂತಿಗೆ ಹೇತುವಾಗಿಯೂ ಇರುವ ಅವರ ಚರಿತ್ರವು ಮುಂದೆ ಹನ್ನೊಂದನೆಯ ಸ್ಕಂಧದಲ್ಲಿ, ವಸುದೇವನಾರದಸಂವಾದದಲ್ಲಿ ವಿವರಿಸಲ್ಪಡುವುದು. ಇವರು ಹೊರತು ಉಳಿದ ಎಂಬತ್ತೊಂದುಮಂದಿ ಮಕ್ಕಳೂ ತಂದೆಯಾಜ್ಞೆಯನ್ನು ಮನ್ನಿಸಿ, ಗೃಹಸ್ಥಾಶ್ರಮವನ್ನು ಹಿಡಿದು, ಆ ಆಶ್ರಮಕ್ಕೆ ಬೇಕಾದ ಸಕಲ ಸಂಪತ್ತುಗಳಿಂದಲೂ ಕೂಡಿದವರಾಗಿ,ಸಾಂಗವಾದ ವೇದಾಧ್ಯಾಯನವನ್ನು

ಮಾಡಿ, ಅನೇಕಯಾಗಗಳನ್ನು ನಡೆಸುತ್ತ, ತಮ್ಮ ಸದಾಚಾರದಿಂದ ಬ್ರಾ ಹ್ಮಣರೆನಿಸಿಕೊಂಡರು. ಅತ್ತಲಾಗಿ ಋಷಭರೂಪದಿಂದವತರಿಸಿದ ಭಗವಂ ತನು,ಕರ್ಮಗಳಿಗೆ ವಶನಾಗದೆ,ಆ ಕರ್ಮಗಳಿಂದ ಸಂಭವಿಸತಕ್ಕ ಸುಖದುಃ ಖಗಳಿಗೂ ಈಡಾಗದೆ,ಸರ್ವಸ್ವತಂತ್ರನಾಗಿ, ಕೇವಲಾನಂದಮಯವಾದ ತ ನ್ನ ಸ್ವರೂಪವನ್ನೇ ಅನುಭವಿಸತಕ್ಕ ಸರ್ವೇಶ್ವರನಾಗಿದ್ದರೂ, ಲೋಕದಲ್ಲಿ ಕಾಲವಶದಿಂದ ಕೆಟ್ಟು ಹೋಗಿರುವ ಧರ್ಮಗಳನ್ನು ತನ್ನ ಆಚರಣೆಯಿಂದ ತಿರುಗಿ ಸ್ಥಾಪಿಸಬೇಕೆಂದೆಣಿಸಿ, ಪ್ರಾಕೃತಮನುಷ್ಯನಂತೆ ಕರ್ಮಗಳನ್ನು ನ ಡೆಸುತ್ತಬಂದನು ಸಮಸ್ತಭೂತಗಳಲ್ಲಿಯೂ ಸಮಬುದ್ಧಿಯುಳ್ಳವನಾಗಿ, ರಾಗದ್ವೇಷಾದಿಗಳಿಂದ ಮನಸ್ಸು ಕದಲದೆ, ಸಮಸ್ತ ಪ್ರಾಣಿಗಳಲ್ಲಿ ಯೂ ಮೈತ್ರಿಯನ್ನೇ ತೋರಿಸುತಿದ್ದನು. ಎಲ್ಲರಲ್ಲಿಯೂ ಕರುಣೆಯುಳ್ಳವ ನಾಗಿದ್ದನು. ಜನಗಳನ್ನು ಗೃಹಸ್ಥಾಶ್ರಮದಲ್ಲಿ ನಿಯಮಿಸುತ್ತ, ಧರ್ಮಾ ರ್ಥಕಾಮಮೋಕ್ಷಗಳೆಂಬ ನಾಲ್ಕು ಪುರುಷಾರ್ಥಗಳನ್ನು ಸಾಧಿಸುವುದಕ್ಕೆ ಬೇಕಾದ ದಾರಿಗಳೆಲ್ಲವನ್ನೂ ತೋರಿಸಿಕೊಡುತಿದ್ದನು. ರಾಜೇಂದ್ರಾ! ಲೋಕದಲ್ಲಿ ಹಿರಿಯರ ನಡತೆಯನ್ನನುಸರಿಸಿ ಹೋಗುವುದೇ ಜನಗಳ ಸ್ವ ಭಾವವು.ಆದುದರಿಂದ ಪುರುಷಶ್ರೇಷ್ಠನಾದ ಆ ಮಹಾತ್ಮನು,ಯಾವ ಅನು ಷ್ಠಾನಗಳನ್ನು ನಡೆಸುತಿದ್ದನೋ, ಸಮಸ್ತಲೋಕವೂ ಆ ಮಾರ್ಗವನ್ನೇ ಅನುಸರಿಸುತಿದ್ದುವು ಮತ್ತು ಅವನು ಸಮಸ್ತಧರ್ಮಗಳನ್ನೂ ಒಳಕೊಂ ಡಿರುವ ವೇದರಹಸ್ಯಗಳೆಲ್ಲವನ್ನೂ ತಾನು ಬಲ್ಲವನಾಗಿದ್ದರೂ. ಅದನ್ನು ಆ ಗಾಗ ಬ್ರಾಹ್ಮಣೋತ್ತಮರಿಂದ ಕೇಳಿ ತಿಳಿಯುವಂತೆ ನಟಿಸುತಿದ್ದನು. ಅವ ರು ತೋರಿಸಿಕೊಟ್ಟ ದಾರಿಯಲ್ಲಿಯೇ ಹೋಗುತ್ತ,ಸಾಮಾದ್ಯುಪಾಯಗಳಿಂ ದ ಪ್ರಜೆಗಳನ್ನು ರಕ್ಷಿಸುತಿದ್ದನು. ಕಾಲ, ದೇಶ, ದ್ರವ್ಯ, ವಯಸ್ಸು, ಶ್ರದ್ಧೆ ಋತ್ವಿಕ್ಕುಗಳು, ಇನ್ನೂ ಯಾಗಕ್ಕೆ ಬೇಕಾದ ಹಲವು ಬಗೆಯ ಅಂಗಗ ಳೆಲ್ಲವನ್ನೂ ಅನುಸರಿಸಿ, ವಿಧ್ಯುಕ್ತವಾದ ಒಂದೊಂದು ಯಾಗವನ್ನೂ ನೂರಾವರ್ತಿ ನಡೆಸಿಮುಗಿಸಿದನು. ಈ ಋಷಭದೇವನು ಭಾರತವರ್ಷವನ್ನಾ ಳುತ್ತಿರುವಾಗ, ಅಲ್ಲಿನ ಪ್ರಜೆಗಳಲ್ಲಿ ಪ್ರತಿಯೊಬ್ಬ ಮನುಷ್ಯನೂ, ಯಾ ವಾಗಲೂ, ತನಗೆ ಪ್ರಭುವಾದ ಆತನಲ್ಲಿ ಪೂರ್ಣಭಕ್ತಿಯೊಂದನ್ನು ಹೊರ

ತು, ಬೇರೆ ಯಾವ ಪುರುಷಾರ್ಥವನ್ನೂ ಬಯಸುತ್ತಿರಲಿಲ್ಲ. ಆ ಋಷಭನು ಒಮ್ಮೆ ಭೂಸಂಚಾರವನ್ನು ಮಾಡುತ್ತ, ಬ್ರಹ್ಮಾವರ್ತವೆಂಬ ದೇಶಕ್ಕೆ ಹೋದನು. ಅಲ್ಲಿ ಅನೇಕಬ್ರಹ್ಮರ್ಷಿಗಳು ಸಭೆಸೇರಿದ್ದಾಗ, ಈತನೂ ಆ ಸಭೆಯಲ್ಲಿ ಪ್ರವೇಶಿಸಿ, ಅಲ್ಲಿ ನೆರೆದಿದ್ದವರೆಲ್ಲರೂ ಕೇಳುತ್ತಿರುವಹಾಗೆಯೇ, ತನ್ನಲ್ಲಿ ಭಕ್ತಿಯುಕ್ತರಾಗಿಯೂ, ವಿನೀತರಾಗಿಯೂ ಇರುವ ತನ್ನ ಮಕ್ಕಳನ್ನು ನೋಡಿ, ಅವರಿಗೆ ಹೀಗೆಂದು ಬೋಧಿಸುವನು ಇಲ್ಲಿಗೆ ನಾಲ್ಕನೆಯ ಅಧ್ಯಾಯವು.

---

**{ ಋಷಭನುತನ್ನಮಕ್ಕಳಿಗೆ ಮೋಕ್ಷಧರ್ಮವನ್ನುಪದೇಶಿಸಿ, ತಾನು ಪರಮಹಂಸರ ಮಾರ್ಗವನ್ನನುಷ್ಠಿಸಿದುದು. }**

ಎಲೈ ಪರೀಕ್ಷಿದ್ರಾಜನೇ ಕೇಳು! ಆ ಋಷಭನು ಬ್ರಹ್ಮಸಭೆಯಲ್ಲಿದ್ದು ತನ್ನ ಮಕ್ಕಳನ್ನು ಕುರಿತು, "ಎಲೈ ಕುಮಾರರೇ! ಈ ಲೋಕದಲ್ಲಿ ಪ್ರಾಣಿಗಳಿಗೆ ಮನುಷ್ಯದೇಹವೆಂಬುದು ದುರ್ಲಭವು. ಇದು ಬಹಳ ಕಷ್ಟದಿಂದ ಸಂಪಾದಿಸಿದ ಜನ್ಮವು. ಶಬ್ದಾದಿಭೋಗಗಳನ್ನನುಭವಿಸುವುದಕ್ಕಾಗಿ ಈ ಶರೀರವನ್ನುಪಯೋಗಿಸಬಾರದು. ವಿಷಯಾನುಭವವೆಂಬುದು ತತ್ಕಾಲಕ್ಕೆ ಸುಖದಂತೆ ತೋರಿದರೂ, ಮೊದಲು ಅವುಗಳನ್ನು ಸಂಪಾದಿಸುವುದಕ್ಕಾಗಿ ಎಷ್ಟೋ ಕಷ್ಟಪಡಬೇಕು. ಕೊನೆಗಾಲಕ್ಕೂ ಅದು ದುಃಖರೂಪವಾಗಿಯೇ ಪರಿಣಮಿಸುವುದು ಆದುದರಿಂದ ಈ ದೇಹವು ಶ್ರಮಸಾಧ್ಯಗಳಾದ ಶಬ್ದಾದಿವಿಷಯಗಳನ್ನನುಭವಿಸುವುದಕ್ಕಾಗಿ ಏರ್ಪಟ್ಟುದಲ್ಲ. ಈ ಕಾಮೋಪಭೋಗಗಳು ಅಮೇಧ್ಯವನ್ನು ತಿನ್ನತಕ್ಕ ಹಂದಿ ನಾಯಿ ಮೊದಲಾದುವುಗಳಿಗೂ ಅನುಭವಯೋಗ್ಯವಾಗಿರುವುವು. ಈ ಮನುಷ್ಯದೇಹವನ್ನೂ ಆ ಕಾರ್ಯಕ್ಕಾಗಿಯೇ ಉಪಯೋಗಿಸುವಪಕ್ಷದಲ್ಲಿ, ಆ ಹಂದಿ, ನಾಯಿ, ಮೊದಲಾದ ಜನ್ಮಕ್ಕೂ ಇದಕ್ಕೂ ಏನು ತಾರತಮ್ಯವಿರುವುದು? ಆದುದರಿಂದ, ಮಹರ್ಷಿಗಳೂ ಯಾವುದರಿಂದ ಸಂಸಾರವನ್ನು ದಾಟುವರೋ, ಯಾವುದರಿಂದ ಅನಂತವಾದ ಬ್ರಹ್ಮಾನಂದವುಂಟಾಗುವುದೋ, ಭಗವದಾರಾಧನರೂಪವಾದ ಆತಪಸ್ಸನ್ನು ಮಾಡುವುದೇ ಮನುಷ್ಯಜನ್ಮವ

ನ್ನೈತ್ತಿದುದಕ್ಕೆ ಸಾರ್ಥಕವಾದ ಕಾರ್ಯವು. ಸಂಸಾರಬಂಧಕ್ಕೆ ಭೋಗಾ ಪೇಕ್ಷೆಯೂ, ಆ ಭೋಗಕ್ಕೆ ಸ್ತ್ರೀಯರೂ ಹೇಗೆ ಮೂಲವೋ, ಅದರಂತೆ ಮೋಕ್ಷಕ್ಕೆ ಭಗವದುಪಾಸವೂ, ಆ ಭಗವದುಪಾಸನಕ್ಕೆ ಮಹಾತ್ಮರ ಸೇವೆ ಯೂ ಮುಖ್ಯೋಪಾಯವಾಗಿರುವುದು. ಸುಖದುಃಖಾದಿಗಳಲ್ಲಿಯೂ ಮ ನಸ್ಸು ಕಲಗದೆ, ಇಂದ್ರಿಯಗಳೆಲ್ಲವನ್ನೂ ಜಯಿಸಿ,ತಾಳ್ಮೆಯಿಂದಲೂ, ಭೂ ತದಯೆಯಿಂದಲೂ, ಪರೋಪಕಾರಬುದ್ಧಿಯಿಂದಲೂ ಕೂಡಿದ ಮಹಾ ತ್ಮರ ಸೇವೆಯನ್ನೇ ಪ್ರಧಾನವಾಗಿಟ್ಟುಕೊಳ್ಳಬೇಕು. ಯಾರು ಸರ್ವೇ ಶ್ವರನಾದ ನನ್ನನ್ನೇ ಪುರುಷಾರ್ಥವೆಂದು ನಂಬಿರುವರೋ, ಹೆಂಡಿರು, ಮಕ್ಕಳು,ನಂಟರಿಷ್ಟರು,ಮುಂತಾದ ಪರಿವಾರಗಳಿಂದಲೂ, ಧನದಿಂದಲೂ, ತುಂಬಿದ ದುಃಖಪ್ರಚುರವಾದ ಗೃಹಾದಿಗಳಲ್ಲಿಯೂ, ತಮ್ಮ ದೇಹಧಾರ ಣವನ್ನೇ ಮುಖ್ಯವಾಗಿ ನೋಡುತ್ತಿರುವಸ್ವಜನರಲ್ಲಿಯೂ, ಸ್ವಲ್ಪಮಾತ್ರವೂ ಪ್ರೀತಿಯನ್ನು ತೋರಿಸಲಾರರೋ. ಅಂತಹ ಮಹಾತ್ಮರ ಸಹವಾಸದಲ್ಲಿದ್ದ ರೆ, ಅದರಿಂದ ಭಗವದುಪಾಸನೆಯಲ್ಲಿ ಆಸಕ್ತಿಯೂ, ಅದರಿಂದ ಮುಕ್ತಿ ಯೂ ಉಂಟಾಗುವುದು. ಲೋಕದಲ್ಲಿ ಜೀವನು, ದೇಹವನ್ನೇ ಆತ್ಮವೆಂದು ಭ್ರಮಿಸಿ, ಇಂದ್ರಿಯತೃಪ್ತಿಗಾಗಿ ಮಾಡಬಾರದ ಕಾರ್ಯಗಳೆಲ್ಲವನ್ನೂ ಮಾ ಡುವನು ಪೂರ್ವಜನ್ಮದಲ್ಲಿ ತಾನು ಇಂದ್ರಿಯತೃಪ್ತಿಗಾಗಿ ಮಾಡಿದ ಆ ಕರ್ಮಫಲದಿಂದಲೇ ಈಗ ದುಃಖಪ್ರಚುರವಾಗಿಯೂ,ಅಶಾಶ್ವತವಾಗಿಯೂ ಇರುವ ಈ ದೇಹವನ್ನು ಹೊಂದಿರುವನು. ಈ ದೇಹದಲ್ಲಿಯೂ ಅದೇಮಾ ರ್ಗದಿಂದ ನಡೆಯುತಿದ್ದರೆ,ಇದರಂತೆಯೇ ಮುಂದೆ ದುಃಖಪ್ರಚುರವಾದ ಮ ತ್ತೊಂದು ದೇಹವನ್ನು ಹೊಂದಬೇಕಾಗುವುದಲ್ಲವೆ? ಆದುದರಿಂದ ನನಗೆ ಇಂದ್ರಿಯತೃಪ್ತಿಗಾಗಿ ನಡೆಸತಕ್ಕ ಕಾರ್ಯಗಳೊಂದೂ ಯುಕ್ತವಾಗಿ ತೋ ರಲಿಲ್ಲ. ಮನುಷ್ಯನಿಗೆ ಆತ್ಮಸ್ವರೂಪವನ್ನು ತಿಳಿಯಬೇಕೆಂಬ ಶ್ರದ್ಧೆಯು ಹುಟ್ಟದಿರುವವರೆಗೂ, ಅಜ್ಞಾನವೆಂಬುದು ಅದನ್ನು ಮರೆಸಿಕೊಂಡಿರುವು ದು. ಅದುವರೆಗೆ ದೇಹವೇ ಆತ್ಮವೆಂಬ ಭ್ರಾಂತಿಯೂ ಅನುಸರಿಸಿ ಬ ರುವುದು. ಈ ಭ್ರಾಂತಿಯಿರುವವರೆಗೂ ಇಂದ್ರಿಯಗಳನ್ನು ತೃಪ್ತಿಗೊ ಳಿಸುವುದಕ್ಕೆ ಬೇಕಾದ ಕಾರ್ಯಗಳಲ್ಲಿಯೇ ಬುದ್ಧಿಯು ಪ್ರವರ್ತಿಸುತ್ತಿರು

ವುದು ! ಹೀಗೆ ಕರ್ಮಗಳಲ್ಲಿ ಬುದ್ಧಿಯು ಪ್ರವರ್ತಿಸುವುದರಿಂದಲೇ ಜೀವನಿಗೆ ತಿರುಗಿ ಶರೀರಸಂಬಂಧವೂ ಉಂಟಾಗುವುದು. ಹೀಗೆ ಜೀವನಿಗೆ ಅವಿದ್ಯಾಸಂಬಂಧದಿಂದ ಕರ್ಮಗಳಲ್ಲಿ ಪ್ರವರ್ತನವೂ, ಅದರಿಂದ ಮೇಲೆ ಮೇಲೆ ಶರೀರಸಂಬಂಧವೂ ಉಂಟಾಗುತ್ತಲೇ ಬರುವುದು. ಆದುದರಿಂದ ಸರ್ವಾಂತರಾತ್ಮನಾದನನ್ನಲ್ಲಿ ಭಕ್ತಿಯುಂಟಾಗುವವರೆಗೆ, ಜೀವನಿಗೆ ಶರೀರಸಂಬಂಧವು ತಪ್ಪಿದುದಲ್ಲ. ಆತ್ಮಪರಮಾತ್ಮತತ್ವವನ್ನು ಅನುಸಂಧಿಸುವುದರಲ್ಲಿ ಬಹಳ ಆದರದಿಂದಿದ್ದು, "ಇಂದ್ರಿಯಗಳಿಗೆ ಶಬ್ದಾದಿವಿಷಯಗಳಲ್ಲಿ ಹುಟ್ಟುವ ಆತುರವು, ದೇಹಸಂಬಂಧದಿಂದುಂಟಾಗುವುದೇಹೊರತು ಆತ್ಮನಿಗೆ ಸಹಜವಾದುದಲ್ಲ"ವೆಂದು ತಿಳಿದುಕೊಳ್ಳಬೇಕಾದುದೇ ವಿವೇಕಬುದ್ಧಿಯುಳ್ಳವನ ಕರ್ತವ್ಯವು. ಈ ವಿವೇಕಜ್ಞಾನವು ಹುಟ್ಟುವವರೆಗೆ ಪುರುಷನು, ಆತ್ಮತತ್ವವನ್ನು ತಿಳಿಯದೆ, ಜ್ಞಾನಹೀನನಾಗಿ, ಮೈಥುನಸುಖವೇ ಮುಖ್ಯವಾಗಿ ಉಳ್ಳ ಗೃಹಸ್ಥಾಶ್ರಮದಲ್ಲಿ ಸೇರಿ ಅದರಲ್ಲಿ ಅನೇಕಸಂಕಟಗಳನ್ನನುಭವಿಸುವನು. ಎಲೈ ಕುಮಾರರೆ ! ಅನಾದಿಯಾದ ಕರ್ಮವಾಸನೆಯಿಂದ ಜೀವನಿಗೆ ಅಹಂಕಾರ ಮಮಕಾರರೂಪವಾದ ಅವಿದ್ಯೆಯುಂಟಾಗುವುದು ಅದರಿಂದ ದೇಹಸಂಬಂಧವೂ ಆ ದೇಹಸಂಬಂಧದಿಂದ ತಿರುಗಿ ಕರ್ಮವಾಸನೆಯೂ, ಅದರಿಂದ ಆಧ್ಯಾತ್ಮಿಕಾದಿತಾಪಗಳೂ ಅಂಟಿಬರುವುವು ಈ ಸುಖದುಃಖಾನುಭವಗಳಿಂದ ಕರ್ಮಗಳು ಕಳಿದು ಹೋಗುತ್ತಿದ್ದರೂ, ಆ ಕರ್ಮಗಳ ವಾಸನೆಯುಮಾತ್ರ ನಿಶ್ಶೇಷವಾಗಿ ನಿವೃತ್ತವಾಗದೆ, ಅಂಟಿಬರುವುದರಿಂದ, ತಿರುಗಿ ಅವಿದ್ಯೆಯೂ ಅದರಿಂದ ದೇಹಸಂಬಂಧವೂ, ಅದರಿಂದ ತಾಪಗಳೂ, ಹೀಗೆ ಅನರ್ಥಪರಂಪರೆಯು ಚಕ್ರದಂತೆ ಸುತ್ತಿಸುತ್ತಿ ಬರುತ್ತಿರುವುದು. ಎಲೈ ಪುತ್ರರೆ ! ಅವಿದ್ಯಾದಿಗಳಿಗೆ ಕಾರಣವಾದ ಈ ಕರ್ಮವಾಸನೆಯು ಹೇಗೆ ಸಂಭವಿಸುವುದೆಂಬುದನ್ನೂ ಹೇಳುವೆನು ಕೇಳಿರಿ. ಸ್ತ್ರೀಪುರುಷರಲ್ಲಿ ಒಬ್ಬರಿಗೊಬ್ಬರ ಪ್ರೇಮವೇ ಅವರಿಬ್ಬರನ್ನೂ ಬೇರೆಬೇರೆ ದೃಢವಾಗಿ ಬಿಗಿಯತಕ್ಕ ಹೃದಯಗ್ರಂಥಿಯೆಂದು ಹೇಳುವರು ಬಿಚ್ಚುವುದಕ್ಕೆ ಸಾಧ್ಯವಲ್ಲದ ಈಮನಸ್ಸಿನ ಗಂಟೇ ಕರ್ಮವಾಸನೆಗೆ ಸ್ಥಾನವಾಗಿರುವುದು. ಈ ಹೃದಯಗ್ರಂಥಿಯಿಂದಲೇ "ತಾನು, ತನ್ನ

ಹೆಂಡತಿ, ತನ್ನ ಮಕ್ಕಳು, ತನ್ನ ಮಿತ್ರರು, ತನ್ನ ಬೊಕ್ಕಸ"ವೆಂಬ ಅಹಂಕಾರ ಮಮಕಾರಗಳು ಹುಟ್ಟಿ, ಅವಿದ್ಯಾರೂಪವಾದ ಮಹಾಮೋಹಕ್ಕೆ ಆವ ಕಾಶವಾಗುವುದು ಕರ್ಮವಾಸನೆಗೆ ಮುಖ್ಯಾಶ್ರಯವಾಗಿರುವ ಈ ಮನ ಸ್ಸಿನ!ಗಂಟು ಯಾವಾಗ ಸಡಿಲುವುದೋ, ಆಗ !ಮನುಷ್ಯನು ಸಂಸಾರ ದಿಂದ ಮುಕ್ತನಾಗಿ, ಕರ್ಮಕ್ಷಯವನ್ನು ಹೊಂದಿ ಪರಮಪುರುಷನನ್ನು ಸೇರುವನು. ಈ ಗಂಟನ್ನು ಸಡಿಲಿಸುವುದಕ್ಕೆ ಉಪಾಯಗಳಾವುವೆಂಬು ದನ್ನು ತಿಳಿಸುವೆನು ಕೇಳಿರಿ ! ಶುದ್ಧಾತ್ಮನೂ, ಲೋಕಗುರುವೂ ಆದ ನ ನ್ನಲ್ಲಿ ಭಕ್ತಿಯನ್ನಿಡುವುದು ! ನನ್ನನ್ನೇ ಅನುವರ್ತಿಸುವುದು ! ಶಬ್ದಾದಿವಿಷ ಯಗಳಲ್ಲಿ ವಿರಕ್ತಿ ! ಶೀತೋಷ್ಣಾದಿದ್ವಂದ್ವಗಳನ್ನು ಸಹಿಸಿಕೊಳ್ಳುವುದು! ಇಹಲೋಕದಲ್ಲಿಯೂ, ಸ್ವರ್ಗವೇ ಮೊದಲಾದ ಪರಲೋಕಗಳಲ್ಲಿಯೂ ಪ್ರಾಣಿಗಳಿಗೆ ವ್ಯಸನವೇ ಸಂಭವಿಸುವುದೆಂಬ ನಿಶ್ಚಯಬುದ್ಧಿ ! ಹೇಯೋ ಪಾದೇಯಗಳನ್ನು ತಿಳಿಯಬೇಕೆಂಬ ಆಸೆ ! ಉಪವಾಸವೇ ಮೊದಲಾದ ತಪಸ್ಸು ! ವ್ಯರ್ಥವಿಷಯಗಳಲ್ಲಿ ಅಭಿಲಾಷೆಯಿಲ್ಲದಿರುವುದು ! ತಮ್ಮ ತ ಮ್ಮ ವರ್ಣಾಶ್ರಮಧರ್ಮಗಳನ್ನು ನನ್ನ ಆರಾಧನರೂಪವಾಗಿಯೇ ನಡೆಸು ವುದು!ಯಾವಾಗಲೂ ನನ್ನ ಕಥೆಗಳನ್ನೇ ಕೇಳುತ್ತಿರುವುದು! ಯಾವಾಗಲೂ ನನ್ನ ಭಕ್ತರ ಸಹವಾಸವನ್ನು ಮಾಡುವುದು!ಯಾವಾಗಲೂ ನನ್ನ ಗುಣಗಳ ನ್ನು ಕೀರ್ತಿಸುವುದು! ಬೇರೆ ಯಾವಪ್ರಾಣಿಗಳಲ್ಲಿಯೂ ವೈರಬುದ್ಧಿಯಿಲ್ಲ ದಿರುವುದು ! ಸಮಸ್ತಭೂತಗಳನ್ನೂ ಸಮಬುದ್ಧಿಯಿಂದ ನೋಡುವುದು ! ಇಂದ್ರಿಯಗಳನ್ನು ಜಯಿಸುವುದು ! ತನ್ನ ದೇಹದಲ್ಲಿ ತಾನೆಂಬ ಬುದ್ಧಿಯ ನ್ನೂ, ಹೆಂಡಿರು ಮಕ್ಕಳು, ಮನೆ ಮಠ,ಮುಂತಾದುವುಗಳಲ್ಲಿ ತನ್ನದೆಂಬ ಬು ದ್ಧಿಯನ್ನೂ ಬಿಟ್ಟುಬಿಡುವುದು, ಎಂದರೆ ಅಹಂಕಾರಮಮಕಾರಗಳನ್ನು ತ್ಯಜಿ ಸುವುದು, ಪ್ರಕೃತಿಗಿಂತಲೂ ಬೇರೆಯಾದ ಆತ್ಮಸ್ವರೂಪವನ್ನು ತಿಳಿಯುವು ದು,.ಶುದ್ಧಾಹಾರಗಳನ್ನೇ ಸೇವಿಸುವುದು,ಪ್ರಾಣವನ್ನೂ,ಇಂದ್ರಿಯಗಳನ್ನೂ ಮನಸ್ಸನ್ನೂ ಸಂಪೂರ್ಣವಾಗಿ ಗೆಲ್ಲುವುದು. ಸದ್ವಿಷಯಗಳಲ್ಲಿ ಶ್ರದ್ಧೆ! ಬ್ರ ಹ್ಮಚರ್ಯದ ನಿಯಮಗಳನ್ನನುಸರಿಸುವುದು, ತಾನು ನಡೆಸಬೇಕಾದ ಕಾರ್ಯಗ ಳನ್ನು ಅಕ್ಕರೆಯಿಂದ ನಡೆಸುವುದು! ಮಿತವಾಗಿ ಮಾತನಾಡುವುದು ! ಎಲ್ಲ

ವೂ ಪರಬ್ರಹ್ಮಸ್ವರೂಪವೆಂಬ ಭಾವದಿಂದ ನೋಡುವುದು! ಶಾಸ್ತ್ರಜ್ಞಾನ ಬಲದಿಂದ ಪರಮಾತ್ಮಧ್ಯಾನರೂಪವಾದ ಜ್ಞಾನವನ್ನು ಸಂಪಾದಿಸುವುದು. ಈ ಕಾರ್ಯಗಳೆಲ್ಲವನ್ನೂ ಧೈರ್ಯದಿಂದಲೂ,ಪ್ರಯತ್ನದಿಂದಲೂ,ನಿಶ್ಚಯಬುದ್ಧಿ ಯಿಂದಲೂ ನಡೆಸುತ್ತ ಬಂದರೆ, ಹೃದಯಗ್ರಂಥಿಯೆಂಬ ಕರ್ಮವಾಸನೆಯು ಕಳೆದು,ದೇಹಾಭಿಮಾನವು ಬಿಟ್ಟುಹೋಗುವುದು ಪುರಾತನಮಹರ್ಷಿಗಳು ಉ ಪದೇಶಿಸಿದಂತೆ, ಈ ಜ್ಞಾನಯೋಗವನ್ನನುಷ್ಠಿಸುವವನು,ಕರ್ಮಗಳಿಗೆ ಮೂ ಲವಾದ ಅವಿದ್ಯೆಯಿಂದೇರ್ಪಟ್ಟಿರುವ ಜನ್ಮಾಂತರವಾಸನೆಯೆಂಬ ಹೃದಯ ಗ್ರಂಥಿಯನ್ನು ಭೇದಿಸಿದಮೇಲೆಯೇ ಆ ಯೋಗವನ್ನು ನಿಲ್ಲಿಸಬೇಕೇಹೊರತು ನಡುವೆ ಯಾವವಿಧವಾದ ವಿಘ್ನಗಳುಂಟಾದರೂ ಇದನ್ನು ಕೈಬಿಡಬಾರದು. ಎಲೈ ಮಕ್ಕಳಿರಾ! ನನ್ನ ಅನುಗ್ರಹವನ್ನು ಪಡೆಯಬೇಕೆಂದಪೇಕ್ಷಿಸು ವವನು, ಈ ವಿಷಯವನ್ನು ತಾನು ಚೆನ್ನಾಗಿ ತಿಳಿದು, ಅಜ್ಞರಾದ ಬೇರೆ ಯವರಿಗೂ ಅದನ್ನು ತಿಳಿಸುತ್ತಿರಬೇಕು. ತಂದೆಯು ಇದನ್ನರಿಯದ ತನ್ನ ಮಕ್ಕಳಿಗೂ, ಆಚಾರ್ಯನು ತನ್ನ ಶಿಷ್ಯರಿಗೂ. ರಾಜನು ತನ್ನ ಪ್ರಜೆಗಳಿಗೂ ಅವಶ್ಯವಾಗಿ ಈ ವಿಷಯವನ್ನು ತಿಳಿಸುತ್ತಿರಬೇಕು ಕರ್ಮಗಳಲ್ಲಿಯೇ ಬುದ್ಧಿಮೋಹಗೊಂಡು ಕಷ್ಟಪಡುತ್ತಿರುವವರನ್ನು, ಸಾಧ್ಯವಾದ ಮಟ್ಟಿಗೆ ಅವುಗಳಿಂದ ಹಿಂತಿರುಗಿಸಬೇಕು. ಈ ಯೋಗವನ್ನು ತಿಳಿಸಿದಮೇಲೆಯೂ ಅವರು ಒಂದುವೇಳೆ ಕರ್ಮವಾಸನೆಯಿಂದ ಇದನ್ನು ಅಂಗೀಕರಿಸದಿದ್ದ ಪಕ್ಷದಲ್ಲಿ, ಅವರಮೇಲೆ ಕೋಪಗೊಳ್ಳದೆ, ಅನುವರ್ತನದಿಂದಲೇ ಅವರನ್ನು ತಿದ್ದಿ, ಅವರಿಗೆ ಕರ್ಮಾಭಿಲಾಷೆಯನ್ನು ತಪ್ಪಿಸಿ, ಈ ಯೋಗದಲ್ಲಿ ರುಚಿ ಯನ್ನು ಹುಟ್ಟಿಸಬೇಕು ಪ್ರಾಯಕವಾಗಿ ಲೋಕದಲ್ಲಿ ಅನೇಕರು ತಮ್ಮ ಶ್ರೇಯಸ್ಸಿಗೆ ದಾರಿಯನ್ನು ಕಾಣದೆ ಮೂಢರಾಗಿರುವರು. ಅಂತವರು ವಿಷ ಯಸುಖಗಳನ್ನಪೇಕ್ಷಿಸುವುದಕ್ಕಾಗಿಯೇ ಅತ್ಯಾತುರದಿಂದ ಕಷ್ಟಪಟ್ಟು ಕ ರ್ಮಗಳನ್ನು ನಡೆಸುತ್ತಿರುವರು. ಈ ಸ್ವಲ್ಪಸುಖಗಳಿಗಾಗಿ ಮತ್ತೊಬ್ಬರ ಮೇಲೆ ದ್ವೇಷಾದಿಗಳನ್ನೂ ಹೆಚ್ಚಿಸಿಕೊಳ್ಳುವರು. ಮುಂದೆ ತಮಗುಂಟಾ ಗುವ ಅನರ್ಥಗಳಲ್ಲಿ ಸ್ವಲ್ಪವೂ ದೃಷ್ಟಿಯಿಡರು! ಹಿತಾಹಿತಗಳನ್ನು ತಿಳಿ ದು, ದಯಾರ್ದ್ರಹೃದಯವುಳ್ಳ ಯಾವ ವಿವೇಕಿಯುತಾನೇ, ಹೀಗೆ ಅಜ್ಞಾ

ನಸಾಗರದಲ್ಲಿ ಮುಳುಗಿ ಹೋಗುತ್ತಿರುವ ಜಂತುಗಳನ್ನು ಕಣ್ಣಾರೆ ಕಂಡೂ ಕೈಬಿಡುವನು? ಅಂತವರಿಗೆ ಆ ಕರ್ಮಮಾರ್ಗದಲ್ಲಿ ಪ್ರೋತ್ಸಾಹವನ್ನು ಕೊಡುವವನು ಕೇವಲದಯಾಶೂನ್ಯನೆಂದೇ ಹೇಳಬೇಕಲ್ಲವೆ? ದಾರಿತಪ್ಪಿ ಹಳ್ಳದಲ್ಲಿ ಬೀಳುತ್ತಿರುವ ಕುರುಡನನ್ನು ಕಂಡಾಗಲೂ, ಅವನನ್ನು ಅದೇದಾರಿಯಲ್ಲಿ ಹೋಗುವಂತೆ ಪ್ರೇರಿಸತಕ್ಕವರನ್ನು ಎಷ್ಟು ನಿರ್ಘೃಣರೆಂದು ಹೇಳಬಹುದು! ಇನ್ನು ಹೆಚ್ಚು ಮಾತಿನಿಂದೇನು? ವಿವೇಕಿಯಾದವನು ಸಂಸಾರ ಸಮುದ್ರದಲ್ಲಿ ಬಿದ್ದುತೊಳಲುತ್ತಿರುವ ಪ್ರಾಣಿಗೆ ಈ ಯೋಗವನ್ನುಪದೇಶಿಸಿ, ಅವನನ್ನು ಆ ಅಪಾಯದಿಂದ ತಪ್ಪಿಸುವುದಕ್ಕೆ ಎಂದಿಗೂ ಹಿಂತೆಗೆಯಲಾರನು. ಈ ಕಾರ್ಯಕ್ಕೆ ಯತ್ನಿಸಿದ ಗುರುವು ಗುರುವೆನಿಸಲಾರನು. ಅಂತಹ ಬಂಧುವು ಬಂಧುವಲ್ಲ. ಅಂತಹ ತಂದೆತಾಯಿಗಳೂ ತಂದೆತಾಯಿಗಳಲ್ಲ! ಅಂತಹ ದೈವವೂ ದೈವವಲ್ಲ! ಸ್ತ್ರೀಯರಿಗೆ ಅಂತಹ ಪತಿಯೂ ಪತಿಯಲ್ಲ. ಎಲೈ ಕುಮಾರರೇ! ಈ ನನ್ನ ಶರೀರವು, ಇತರ ಮನುಷ್ಯರ ಶರೀರಗಳೊಡನೆ ಹೋಲಿಸಿ ನಿರೂಪಿಸತಕ್ಕುದ್ದಲ್ಲ. ನನ್ನ ಹೃದಯವು ಕೇವಲ ಸತ್ವಗುಣದಿಂದ ತುಂಬಿರುವುದು. ಆ ಸತ್ವಗುಣವು ಧರ್ಮವನ್ನು ಮುಂದಿಟ್ಟುಕೊಂಡು ಅಧರ್ಮವನ್ನು ಹಿಂದೆ ತಳ್ಳಿರುವುದು. ಹೀಗೆ ನನ್ನ ಶರೀರವು ಸತ್ವಗುಣಪ್ರಚುರವಾದುದರಿಂದಲೇ ಹಿರಿಯರು ನನ್ನ ಮೇಲ್ಮೆಯನ್ನು ನೋಡಿ ನನ್ನನ್ನು ಋಷಭನೆಂದು ಕರೆಯುತ್ತಿರುವರು. ಸತ್ವಮೂರ್ತಿಯಾದ ನನ್ನ ಶರೀರಸಂಬಂಧದಿಂದ ಹುಟ್ಟಿದ ನೀವೂ ಸತ್ವಗುಣಪ್ರಧಾನರಾಗಿಯೇ ಇರುವಿರಿ! ಆದುದರಿಂದ ನೀವೆಲ್ಲರೂ ನಿಮಗೆ ಸಹೋದರನಾಗಿಯೂ, ಪೂಜ್ಯನಾಗಿಯೂ ಇರುವ ಈ ಭರತನಲ್ಲಿ, ನಿಷ್ಕಪಟವಾದ ಭಕ್ತಿಯಿಂದ ನಡೆಯುತ್ತ ಬನ್ನಿರಿ! ಇದರಿಂದಲೇ ನೀವು ನನಗೆ ಮಾಡಬೇಕಾದ ಪಿತೃಶುಶ್ರೂಷೆಯನ್ನೂ, ನಿಮಗೆ ಕುಲಧರ್ಮವಾದ ಪ್ರಜಾರಕ್ಷಣವನ್ನೂ ಚೆನ್ನಾಗಿ ನಡೆಸಿದಂತಾಗುವುದು. ಪ್ರಪಂಚದಲ್ಲಿರುವ ಭೂತವರ್ಗಗಳಲ್ಲಿ ಸ್ಥಾವರಗಳಿಗಿಂತಲೂ ಜಂಗಮಗಳು ಮೇಲೆನಿಸುವುವು. ಅವುಗಳಲ್ಲಿಯೂ ಕ್ರಿಮಿಕೀಟಗಳು ಉತ್ತಮವೆನಿಸುವುವು. ಹಾಗೆಯೇ ಆ ಕ್ರಿಮಿಕೀಟಗಳಿಗಿಂತಲೂ ಪಶು ಪಕ್ಷಿ ಮೊದಲಾದುವುಗಳೂ, ಅವಕ್ಕಿಂತಲೂ ಮನು

ಷ್ಯರೂ, ಆ ಮನುಷ್ಯರಿಗಿಂತಲೂ ಪ್ರಮಥಗಣಗಳೂ, ಅವಕ್ಕಿಂತಲೂ ಗಂಧರ್ವರೂ, ಅವರಿಗಿಂತಲೂ ಸಿದ್ಧರೂ, ಸಿದ್ಧರಿಗಿಂತಲೂ ಕಿನ್ನರರೂ ಮೇಲೆನಿಸುವರು. ಕಿನ್ನರರಿಗಿಂತಲೂ ಅಸುರರೂ, ಅವರಿಗಿಂತಲೂ ಇಂದ್ರಾದಿದೇವತೆಗಳೂ, ಆ ದೇವತೆಗಳಿಗಿಂತಲೂ, ದಕ್ಷನೇ ಮೊದಲಾದ ಪ್ರಜಾಧಿಪತಿಗಳೂ ಉತ್ತಮರೆನಿಸುವರು. ಆಪ್ರಜಾಧಿಪತಿಗಳಲ್ಲಿ ರುದ್ರನೂ, ಆ ರುದ್ರನಿಗಿಂತಲೂ ಬ್ರಹ್ಮದೇವನೂ ಮೇಲೆನಿಸಿರುವನು. ಆ ಬ್ರಹ್ಮನಿಗಿಂತಲೂ ನಾನು ಮೇಲೆನಿಸಿರುವೆನು. ಹೀಗೆ ಸರ್ವದೇವೋತ್ತಮನೆನಿಸಿದ ನಾನೂಕೂಡ ಬ್ರಾಹ್ಮಣರನ್ನೇ ದೈವವೆಂದುತಿಳಿದು ಪೂಜಿಸುತ್ತಿರುವೆನು ಆದುದರಿಂದ ಲೋಕದಲ್ಲಿ ಎಲ್ಲಕ್ಕಿಂತಲೂ ಬ್ರಹ್ಮಕುಲವೇ ಮೇಲೆನಿಸಿರುವುದು. ಎಲೈ ಸಭಾಸದರೆ! ಬೇರೆ ಯಾವ ಪ್ರಾಣಿಯನ್ನೂ ನಾನು ಬ್ರಾಹ್ಮಣರಿಗೆ ಸಮಾನವಾಗಿ ಎಣಿಸತಕ್ಕವನಲ್ಲ. ಈ ಬ್ರಾಹ್ಮಣಮುಖದಿಂದ ಕೊಟ್ಟ ಹವಿಸ್ಸನ್ನು ನಾನು ಪ್ರೀತಿಯಿಂದ ಸ್ವೀಕರಿಸುವಂತೆ,ಅಗ್ನಿಮುಖವಾಗಿ ಕೊಟ್ಟ ಹವಿಸ್ಸನ್ನೂ ಭುಜಿಸತಕ್ಕವನಲ್ಲ! ಬ್ರಾಹ್ಮಣರೇ ಈ ಲೋಕದಲ್ಲಿ ವೇದವೆಂಬ ಅನಾದಿಯಾದ ನನ್ನ ಶರೀರವನ್ನು ಧರಿಸಿರುವರು ! ಅತ್ಯಂತ ಪರಿಶುದ್ಧವಾದ ಸತ್ವಗುಣವೂ ಈ ಬ್ರಾಹ್ಮಣರಲ್ಲಿಯೇ ನೆಲೆಗೊಂಡಿರುವುದು ! ಶಮ, ದಮ, ಸತ್ಯ, ಅನುಗ್ರಹ, ತಪಸ್ಸು, ತಾಳ್ಮೆ, ಆತ್ಮಾನುಭವ ಮುಂತಾದ ಸದ್ಗುಣಗಳೆಲ್ಲವೂ ಇವರಲ್ಲಿಯೇ ನೆಲೆಗೊಂಡಿರುವುವು. ಲೋಕದಲ್ಲಿ ಮಹಾತ್ಮರೆನಿಸಿದ ಬ್ರಹ್ಮಾದಿದೇವತೆಗಳಿಗೂ ನಿಯಾಮಕನಾಗಿ, ಸ್ವರ್ಗಮೋಕ್ಷಗಳನ್ನು ಕೊಡತಕ್ಕ ಪ್ರಭುವಾಗಿಯೂ ಇರುವ ನನ್ನಲ್ಲಿಯೂ ಆ ಬ್ರಾಹ್ಮಣರಿಗೆ ಪ್ರಾರ್ಥಿಸಿ ಪಡೆಯಬೇಕಾದುದೊಂದೂ ಇರುವುದಿಲ್ಲ. ಅವರಿಗೆ ನನ್ನಲ್ಲಿ ಭಕ್ತಿಯೊಂದು ಹೊರತು ಬೇರೊಂದರಲ್ಲಿಯೂ ಅಪೇಕ್ಷೆಯಿಲ್ಲ. ಆದುದರಿಂದ, ಈ ಭಗವದ್ಭಕ್ತಿಯಿಂದಲೇ ತಮ್ಮನ್ನು ಕೃತಕೃತ್ಯರನ್ನಾಗಿ ತಿಳಿದಿರುವ ಬ್ರಾಹ್ಮಣರನ್ನು ನೀವು ಶ್ರದ್ಧೆಯಿಂದ ಸೇವಿಸುತ್ತಿರಬೇಕು. ಮತ್ತು ಎಲೈ ಮಕ್ಕಳಿರಾ ! ಪ್ರಕೃತಿ ಪುರುಷೇಶ್ವರರೆಂಬ ಮೂರುತತ್ವಗಳೂ ಪರಸ್ಪರವಿಲಕ್ಷಣಗಳೆಂಬ ನಿಶ್ಚಯಬುದ್ಧಿಯುಳ್ಳ ನೀವು, ಚರಾಚರಾತ್ಮಕವಾದ ಈ ಸಮಸ್ತ ಪ್ರಪಂಚವೂ ನನ್ನ ಶರೀರವೆಂದು ತಿಳಿದು, ಆಗಾಗ

ಗೌರವದಿಂದಲೇ ಅವುಗಳನ್ನು ಭಾವಿಸುತ್ತಿರಬೇಕು. ಇದೇ ನೀವು ನನಗೆ ನಡೆಸತಕ್ಕ ಆರಾಧನವು. ಮನೋವಾಕ್ಕಾಯಗಳೆಂಬ ತ್ರಿಕರಣಗಳಿಂದಲೂ, ಕಣ್ಣು ಮೊದಲಾದ ಇಂದ್ರಿಯಗಳಿಂದಲೂ ನಡೆಸತಕ್ಕ ಎಲ್ಲಾ ಕಾರ್ಯಗಳಿಗೂ ನನ್ನ ಆರಾಧನವೇ ಮುಖ್ಯಫಲವು ಎಷ್ಟೇಶಕ್ತನಾಗಿದ್ದರೂ ನನ್ನನ್ನು ಆರಾಧಿಸದಿದ್ದವನು, ಕಾಲಪಾಶದಲ್ಲಿ ಕಟ್ಟಿಡತಕ್ಕ ಮಹಾಮೋಹದಿಂದ ತಪ್ಪಿಸಿಕೊಳ್ಳಲಾರನು" ಎಂದನು. ಎಲೈ ಪರೀಕ್ಷಿದ್ರಾಜನೆ! ಋಷಭದೇವನು, ತನ್ನ ಮಕ್ಕಳು ಈ ಧರ್ಮಮಾರ್ಗವನ್ನು ಚೆನ್ನಾಗಿ ಬಲ್ಲವರಾಗಿದ್ದರೂ ಈ ಲೋಕದಲ್ಲಿ ಮೂಢರಾದ ಇತರಜನಗಳಿಗೆ ಹಿತಾಹಿತಗಳನ್ನು ತಿಳಿಸಬೇಕೆಂಬುದಕ್ಕಾಗಿ ತನ್ನ ಮಕ್ಕಳನ್ನೇ ಮುಂದಿಟ್ಟುಕೊಂಡು ಇದನ್ನು ವಿವರಿಸಿ ಹೇಳಿದನು. ಇಷ್ಟೇ ಅಲ್ಲದೆ, ಮಹಾತ್ಮನಾಗಿಯೂ, ಸರ್ವಸುಹೃತ್ತಾಗಿಯೂ ಇರುವ ಆ ಭಗವಂತನು, ಪ್ರವೃತ್ತಿಮಾರ್ಗವನ್ನು ಬಿಟ್ಟವರಾಗಿಯೂ, ಜಿತೇಂದ್ರಿಯರಾಗಿಯೂ, ಭಗವದ್ಧ್ಯಾನಪರರಾಗಿಯೂ, ಇರುವ ಮಹರ್ಷಿಗಳಿಗೂ, ಭಕ್ತಿಜ್ಞಾನ ವೈರಾಗ್ಯಗಳೆಂಬ ಪರಮಹಂಸರ ಧರ್ಮವನ್ನುಪದೇಶಿಸಬೇಕೆಂಬ ಉದ್ದೇಶದಿಂದ, ಭರತನೆಂಬ ತನ್ನ ಹಿರಿಯಮಗನನ್ನು ರಾಜ್ಯಪರಿಪಾಲನಕ್ಕಾಗಿ ನಿಯಮಿಸಿ, ಪಟ್ಟಾಭಿಷೇಕವನ್ನು ಮಾಡಿ, ತಾನು, ಉಡಿಗೆ ತೊಡಿಗೆ ಮೊದಲಾದ ಶರೀರಪರಿಕರಗಳೆಲ್ಲವನ್ನೂ ಆ ಅರಮನೆಯಲ್ಲಿಯೇ ತೆಗೆದುಹಾಕಿ, ದಿಗಂಬರನಾಗಿ, ಹುಚ್ಚನಂತೆ ತಲೆಯನ್ನು ಕೆದರಿಕೊಂಡು, ವೈದಿಕಾಗ್ನಿಗಳನ್ನು ಆತ್ಮಸಮಾರೋಪಣಮಾಡಿಕೊಂಡು, ಸನ್ಯಾಸಿಯಾಗಿ ಬ್ರಹ್ಮಾವರ್ತದೇಶವನ್ನು ಬಿಟ್ಟು ಹೊರಟುಬಿಟ್ಟನು ದಾರಿಯಲ್ಲಿ ಜನರು ತನ್ನನ್ನು ಮಾತಾಡಿಸಿದರೂ ಉತ್ತರವನ್ನು ಕೊಡದೆ ಮಂಕನಂತೆಯೂ, ಕಿವುಡನಂತೆಯೂ, ಕುರುಡನಂತೆಯೂ, ಮೂಗನಂತೆಯೂ, ಪಿಶಾಚಹಿಡಿದವನಂತೆಯೂ, ಹುಚ್ಚನಂತೆಯೂ ಹೋಗುತ್ತಿದ್ದನು. ಹೀಗೆ ಆ ಋಷಭನು, ಎಲ್ಲರಿಗೂ ಹಾಸ್ಯಾಸ್ಪದವಾದ ವೇಷದಿಂದ, ಮೌನವ್ರತವನ್ನು ಹಿಡಿದು, ಬಾಯೆತ್ತದೆ ದಾರಿಯಲ್ಲಿ ಹೋಗುತಿದ್ದಾಗ ಅಲ್ಲಲ್ಲಿ ಪಟ್ಟಣಗಳಲ್ಲಿಯೂ, ಗ್ರಾಮಗಳಲ್ಲಿಯೂ, ಗಣಿಗಳಲ್ಲಿಯೂ, ಹೂತೋಟ ಮುಂತಾದ ಸ್ಥಳಗಳಲ್ಲಿಯೂ, ಸೇನಾನಿವಾಸಸ್ಥಾನಗಳಲ್ಲಿಯೂ,

ಮುಂದೆಗಳಲ್ಲಿಯೂ, ಗೊಲ್ಲರ ಹಳ್ಳಿಗಳಲ್ಲಿಯೂ, ಸಂತೆಗಳಲ್ಲಿಯೂ, ನಡುನ ಡುವೆ ಬೆಟ್ಟ, ಕಾಡು, ಋಷ್ಯಾಶ್ರಮ, ಮುಂತಾದ ಸ್ಥಳಗಳಲ್ಲಿಯೂ ಮೂಢಜನರು ಅವನ ಮಹಿಮೆಯನ್ನು ತಿಳಿಯದೆ, ಮೇಲಿನ ವೇಷವನ್ನುಮಾತ್ರ ನೋಡಿ ಮೂದಲಿಸಿ ಹಾಸ್ಯಮಾಡುತಿದ್ದರು. ಕೆಲವರು ಕೈಲಾಗದವನೆಂದು ತಿಳಿದು ಹೆದರಿಸುವರು! ಕೆಲವರು ಮೇಲೆಬಿದ್ದು ಮೂತ್ರಸ್ರಾವವನ್ನು ಮಾಡುವರು.ಕೆಲವರು ಕೇಕರಿಸಿ ಉಗಿಯುವರು!ಕೆಲವರು ಮೈಮೇಲೆ ಕಲ್ಲೆಸೆಯುವರು. ಕೆಲವರು ಮಲವನ್ನು ಬಿಸುಡುವರು. ಕೇವರುಮಣ್ಣೆರಚುವರು!ಕೆಲವರು ಅಪಾನವಾಯುವನ್ನು ಬಿಡುವರು! ಬಾಯಿಗೆ ಬಂದಹಾಗೆ ಬೈಯುವರು. ಹೀಗೆ ಸಿಕ್ಕಿದವರು ಸಿಕ್ಕಿದಹಾಗೆ ತನ್ನನ್ನು ತಿರಸ್ಕರಿಸುತಿದ್ದರೂ, ನೊಣಗಳ ಬಾಧೆಗೆ ಲಕ್ಷ್ಯಕೊಡದ ಮದದಾನೆಯಂತೆ, ಅವೊಂದನ್ನೂ ಗಮನಿಸದೆ, ಆತ್ಮಪರಮಾತ್ಮಸ್ವರೂಪವನ್ನನುಭವಿಸತಕ್ಕ ತನ್ನಮಹಿಮೆಯಲ್ಲಿಯೇ ತಾನು ನೆಲೆಗೊಂಡವನಾಗಿದ್ದನು. ಮತ್ತು ಅವನು ದೇಹವೆಂಬುದು ತನಗೆ ಪ್ರಕೃತಿಸಂಬಂಧದಿಂದುಂಟಾದ ಆಕಾರವೆಂದೂ, ದೇಹಾತ್ಮಭ್ರಾಂತಿಯುಳ್ಳವರಿಗೆ ಆ ದೇಹವೇ ಆತ್ಮವೆಂಬ ವ್ಯವಹಾರಕ್ಕೆ ವಿಷಯವಾಗುವುದೆಂದೂ ತಿಳಿದವನಾದುದರಿಂದ, ಆ ದೇಹದಲ್ಲಿಯಾಗಲಿ, ಪರಿವಾರದಲ್ಲಿಯಾಗಲಿ "ತಾನು, ತನ್ನದು" ಎಂಬ ಅಹಂಕಾರಮಮಕಾರಗಳಿಲ್ಲದೆ, ಯಾವ ವಿಚಾರಕ್ಕೂ ಮನಸ್ಸು ಕಲಗದೆ, ಏಕಾಕಿಯಾಗಿ ಭೂಭಾಗವೆಲ್ಲವನ್ನೂ ಸುತ್ತುತ್ತಬಂದನು. ಈತನ ಕೈ, ಕಾಲು, ಎದೆ, ತೋಳು, ಹೆಗಲು, ಕೊರಲು, ಮುಖ ಮುಂತಾದ ಒಂದೊಂದವಯವವೂ ಅತ್ಯಂತಕೋಮಲವಾಗಿ ಸ್ವಾಭಾವಿಕಸೌಂದರ್ಯದಿಂದ ಶೋಭಿಸುತಿದ್ದುವು ಸಹಜವಾದ ಮುಗುಳ್ನಗೆಯಿಂದ ಅವನ ಮುಖವು ಮತ್ತಷ್ಟು ಸೊಬಗನ್ನು ಬೀರುತಿತ್ತು. ಆಗಲೇ ಅರಳಿದ ತಾವರೆಹೂವಿನಂತೆ ಶೀತಲವಾದ ಪ್ರಸನ್ನದೃಷ್ಟಿಯಿಂದ ಶೋಭಿತವಾದ ಆತನ ರಕ್ತವಿಶಾಲಲೋಚನಗಳು, ಅವನ ಮಹಾಪುರುಷಲಕ್ಷಣವನ್ನು ತೋರಿಸುತಿದ್ದುವು. ಒಂದಕ್ಕೊಂದು ಸಮವಾದ ಕೆನ್ನೆಗಳಿಂದಲೂ, ಕಿವಿಗಳಿಂದಲೂ, ಮತ್ತು ಅಂದವಾದ ಕಂಠದಿಂದಲೂ, ಎಸಳಾದ ಮೂಗಿನಿಂದಲೂ ಅವನ ಮುಖವು ನೋಡುವವರಿಗೆ ಮೋಹವನ್ನುಂಟು

ಮಾಡುತಿತ್ತು. ಅಸ್ಪಷ್ಟವಾದ ಮಂದಹಾಸವನ್ನೊಳಕೊಂಡ ತನ್ನ ಮುಖವಿಕಾಸವೆಂಬ ಮಹೋತ್ಸವದಿಂದ, ಅಲ್ಲಲ್ಲಿ ಪುರಸ್ತ್ರೀಯರ ಮನಸ್ಸನ್ನು ಮನ್ಮಥನ ಬಾಣಕ್ಕೆ ಗುರಿಮಾಡುತಿದ್ದನು. ಅಂದವಾಗಿ ಸುರುಳಿಗಟ್ಟಿದ ಆತನ ತಲೆಕೂದಲು, ಜಡೆಗಟ್ಟಿ ಪಿಂಗಳವರ್ಣವಾಗಿ, ಹಿಮ್ಮಡಿಯವರೆಗೆ ಜೋಲಾಡುತಿತ್ತು. ಇಂತಹ ದಿವ್ಯಸೌಂದರ್ಯವಿಶಿಷ್ಟನಾಗಿದ್ದರೂ ಆತನು, ಅವಧೂತವೇಷದಿಂದ ಕೊಳೆಮುಚ್ಚಿದ ಮೆಯ್ಯುಳ್ಳವನಾಗಿ, ಪಿಶಾಚಗ್ರಸ್ತನಂತೆ ಕಾಣುತಿದ್ದನು. ಈ ಮಹಾತ್ಮನು, ಯೋಗಮಾರ್ಗಕ್ಕೆ ವಿರುದ್ಧವಾಗಿ ನಡೆಯುತ್ತಿರುವವರನ್ನು ಕಂಡರೂ, ಅದಕ್ಕೆ ಪ್ರತೀಕಾರವನ್ನು ಮಾಡುವುದು ನಿಂದ್ಯಕಾರ್ಯವೆಂದು ತಿಳಿದು, (ಬೆಟ್ಟದ ಹಾವಿನಂತೆ ಕದಲದೆ ಒಂದೇ ಸ್ಥಳದಲ್ಲಿದ್ದು, ಪ್ರಾರಬ್ಧಕರ್ಮವನ್ನು ಕಳೆಯತಕ್ಕ) ಅಜಗರವ್ರತವನ್ನು ನಡೆಸುವುದಕ್ಕೆ ಸಂಕಲ್ಪಿಸಿಕೊಂಡು, ಒಂದಾನೊಂದು ಸ್ಥಳದಲ್ಲಿ ಮಲಗಿಬಿಟ್ಟನು ಮಲಗಿದ್ದಂತೆಯೇ ಅನ್ನಾದಿಗಳನ್ನು ಭುಜಿಸುವನು! ಹಾಗೆಯೇ ಜಲಪಾನವನ್ನು ಮಾಡುವನು! ಹಾಗೆಯೇ ಮಲಮೂತ್ರಗಳನ್ನೂ ಬಿಡುವನು! ಆ ಮಲಮೂತ್ರಗಳಲ್ಲಿಯೇ ಬಿದ್ದು ಹೊರಳುತ್ತಿರುವನು! ಅವನ ಮೈಯೆಲ್ಲವೂ ಮಲಮೂತ್ರಗಳಿಂದ ಲೇಪಿತವಾಗಿದ್ದರೂ, ಅವನು ದೇಹಧರ್ಮವನ್ನು ಜಯಿಸಿದವನಾದುದರಿಂದಲೂ, ಮಹಾಮಹಿಮೆಯುಳ್ಳವನಾದುದರಿಂದಲೂ, ಅವನ ಮಲವೂಕೂಡ ಸುಗಂಧದಿಂದಲೇ ಕೂಡಿದ್ದಿತು! ಅದರಮೇಲೆ ಬೀಸಿ ಬಂದ ಗಾಳಿಯು ನಾಲ್ಕು ಕಡೆಗಳನ್ನೂ ಹತ್ತುಯೋಜನದೂರದವರೆಗೆ ಸುಗಂಧವಿಶಿಷ್ಟವಾಗಿ ಮಾಡುತಿತ್ತು. ಹೀಗೆ ಆ ಋಷಭನು, ಪಶುವಿನಂತೆಯೂ, ಮೃಗದಂತೆಯೂ, ಕಾಗೆಯಂತೆಯೂ, ಅಲ್ಲಲ್ಲಿ ನಡೆಯುತ್ತ, ನಿಲ್ಲುತ್ತ, ಕುಳ್ಳಿರುತ್ತ, ಮಲಗುತ್ತ ಕಾಲವನ್ನು ಕಳೆಯುತಿದ್ದನು ಮತ್ತು ಕಾಗೆ, ಮೃಗ, ಪಶು ಇವುಗಳಂತೆಯೇ ತಿನ್ನುತ್ತಲೂ, ಕುಡಿಯುತ್ತಲೂ, ಮಲಮೂತ್ರಗಳನ್ನು ಬಿಡುತ್ತಲೂ ಇದ್ದನು. ಎಲೈ ಪರೀಕ್ಷಿದ್ರಾಜನೆ! ಪೂರ್ಣಕಾಮನಾಗಿ ಕೇವಲಾನಂದಮೂರ್ತಿಯಾಗಿದ್ದರೂ, ಋಷಭರೂಪಿಯಾದ ಆ ಭಗವಂತನು, ಯೋಗೀಶ್ವರರಿಗೆ ಹೀಗೆಯೇ ನಡೆಯಬೇಕೆಂಬ ಮಾರ್ಗವನ್ನು ತೋರಿಸುವುದಕ್ಕಾಗಿಯೇ, ಹೀಗೆ ಹಲವು ಬಗೆಯ ಯೋಗ

ವ್ರತಗಳನ್ನು ನಡೆಸುತ್ತಬಂದನು ಮತ್ತು ಆತನು ಎಡೆಬಿಡದೆ ಆತ್ಮಾನಂದ ವನ್ನನುಭವಿಸುತ್ತ, ಸಮಸ್ತಭೂತಗಳಲ್ಲಿಯೂ ಅಂತರ್ಯಾಮಿಯಾದ ವಾಸು ದೇವನೇ ತಾನೆಂದು ತಿಳಿದಿದ್ದನು. ಆತ್ಮಸ್ವರೂಪವನ್ನು ಮರೆಸತಕ್ಕ ಕರ್ಮ ಸಂಬಂಧವನ್ನು ನಿಶ್ಶೇಷವಾಗಿ ನೀಗಿದವನಾದುದರಿಂದ, ಪ್ರಪಂಚದಲ್ಲಿ ಬ್ರ ಹ್ಮಾತ್ಮಕವಲ್ಲದ ಬೇರೆ ಸ್ವತಂತ್ರವಸ್ತುವುಂಟೆಂಬ ಭೇದಬುದ್ಧಿಯನ್ನು ಸ್ವಲ್ಪ ಮಾತ್ರವೂ ಮನಸ್ಸಿನಲ್ಲಿಡದೆ,ಸರ್ವಾರ್ಥಸಿದ್ಧಿಯನ್ನು ಹೊಂದಿ ಪೂರ್ಣಕಾಮ ನಾಗಿದ್ದನು.ಈ ಯೋಗಸಿದ್ಧಿಯಿಂದ ಅವನಿಗೆ ಆಕಾಶಗಮನ, ಮನೋವೇಗ, ಅಂತರ್ಧಾನ, ಪರಕಾಯಪ್ರವೇಶ, ಪರೋಕ್ಷದರ್ಶನ, ದೂರಶ್ರವಣ, ಮುಂ ತಾದ ಯೋಗೈಶ್ವರ್ಯಗಳೆಲ್ಲವೂ ಕೈಗೂಡಿಬಂದಿದ್ದರೂ, ಇವೆಲ್ಲವೂ ಮೋಕ್ಷ ವಿರೋಧಿಗಳೆಂದೂ, ಸಂಸಾರವರ್ಧಕಗಳೆಂದೂ ತಿಳಿದು, ಅವುಗಳನ್ನು ಮನ ಸ್ಸಿನಿಂದಲಾದರೂ ಆದರಿಸದಿದ್ದನು. ಇಲ್ಲಿಗೆ ಐದನೆಯ ಅಧ್ಯಾಯವು.

---

## ಋಷಭದೇವನು ಶರೀರತ್ಯಾಗಮಾಡಿದುದು.

ಈ ನಡುವೆ ಪರೀಕ್ಷಿದ್ರಾಜನು ಶುಕಮುನಿಯನ್ನು ಕುರಿತು. “ಎಲೈ ಮಹಾತ್ಮನೆ! ಆತ್ಮೋಪಾಸನದಲ್ಲಿಯೇ ನಿರತರಾಗಿ, ಜ್ಞಾನಯೋಗವೆಂ ಬ ಬೆಂಕಿಯಿಂದ ತಮ್ಮ ಕರ್ಮಬೀಜವನ್ನು ಭಸ್ಮಮಾಡಿಕೊಂಡವರಿಗೆ, ಈ ವಿಧವಾದ ಐಶ್ವರ್ಯಗಳು ಸಿದ್ಧಿಸಿದರೂ ಅವು ಅವರ ಮನಸ್ಸನ್ನು ಕೆಡಿಸಲಾರ ವಷ್ಟೆ? ಕರ್ಮಬೀಜವನ್ನು ಪೂರ್ತಿಯಾಗಿ ನಾಶಹೊಂದಿಸಿದಮೇಲೆ ತಿರು ಗಿ ಸಂಸಾರವು ತಗುಲುಕಟ್ಟಲಾರದಲ್ಲವೆ?ಕರ್ಮವಾಸನೆಯನ್ನು ನಿಶ್ಶೇಷವಾ ಗಿ ತೊಲಗಿಸಿಕೊಂಡವರು,ತಮಗೆ ಐಶ್ವರ್ಯವುಬಂದಾಗ ಅದಕ್ಕಾಗಿ ಅತೃಪ್ತಿಪ ಡುವುದೇಕೆ? ಆತ್ಮಜ್ಞಾನವನ್ನು ಪಡೆದು ಜಿತೇಂದ್ರಿಯನಾಗಿದ್ದ ಋಷಭನು, ತನಗೆ ಯೋಗಸಿದ್ಧಿಯು ಕೈಗೂಡಿದಾಗ ಅಸಂತುಷ್ಟಿಯನ್ನು ಹೊಂದಿದು ದಕ್ಕೆ ಕಾರಣವನ್ನು ತಿಳಿಸಬೇಕು” ಎಂದನು. ಅದಕ್ಕಾ ಶುಕನು “ರಾಜೇಂ ದ್ರಾ! ನೀನು ಹೇಳಿದುದು ವಾಸ್ತವವು! ಆದರೆ ಮನಸ್ಸೆಂಬುದು ಬಹಳ ಚಂಚಲವು! ಕೆಲವರು ಮನಸ್ಸನ್ನು ಜಯಿಸಿದವರಾಗಿದ್ದರೂ, ಬಹಳ ಚಂಚಲಸ್ವಭಾವವುಳ್ಳ ಆ ಮನಸ್ಸನ್ನು ನಂಬಲಾರರು. ಬೇಡನು, ಕಾಡಿನಲ್ಲಿ

ಮೃಗವು ತನ್ನಕೈಗೆ ಸಿಕ್ಕಿ ಬೀಳುವವರೆಗೂ, ತಾನೇ ಅದಕ್ಕೆ ಅಧೀನನಂತೆ ನಟಿಸಿ, ಅದನ್ನು ವಂಚಿಸಿ ಕೊಲ್ಲುವನಲ್ಲವೆ ! ಹಾಗೆಯೇ ಮನಸ್ಸೆಂಬು ದು ಮೊದಲು ತನಗೆ ವಶವಾದಂತೆ ಕಂಡುಬಂದರೂ, ಆ ಮನಸ್ಸಿಗೆ ಸ್ವಲ್ಪದಾರಿಯನ್ನು ಕೊಟ್ಟರೆ, ಅದು ಅವರನ್ನು ಸ್ವಾಧೀನಪಡಿಸಿಕೊಂಡು ಸಂಸಾರವನ್ನು ತಗುಲುಕಟ್ಟದೆ ಬಿಡದು. ಆದುದರಿಂದಲೇ ಮೋಕ್ಷಾರ್ಥಿಗ ಳು ಎಷ್ಟುಮಾತ್ರವೂ ಮನಸ್ಸನ್ನು ನಂಬಲಾರರು. ಈ ವಿಷಯದಲ್ಲಿ ಹಿರಿ ಯರು ಹೀಗೆಂದು ಹೇಳುವರು. "ಮನಸ್ಸೆಂಬುದು ಒಂದು ನೆಲೆಯಲ್ಲಿ ನಿಲ್ಲದೆ, ಬಹಳ ಚಂಚಲವಾಗಿರುವುದರಿಂದ, ಯಾವ ಸಂದರ್ಭದಲ್ಲಿಯೂ ಆ ಮನಸ್ಸ ನ್ನು ನಂಬಿ ನಡೆಯಬಾರದು ! ಮನಸ್ಸನ್ನು ಜಯಿಸಿಬಿಟ್ಟೆವೆಂಬ ಧೈರ್ಯದಿಂದ ಅದನ್ನು ಹೋದದಾರಿಗೆ ಬಿಟ್ಟಪಕ್ಷದಲ್ಲಿ, ಬಹುಕಾಲದಿಂದ ಸಂಪಾದಿಸಿದ ಜ್ಞಾನರೂಪವಾದ ತಪಸ್ಸೆಲ್ಲವೂ ನಷ್ಟವಾಗುವುದು ಆದುದರಿಂದ ತಾನು ಎಷ್ಟೇ ಜಿತೇಂದ್ರಿಯನಾಗಿದ್ದರೂ ಮನಸ್ಸು ತನಗೆ ವಶವಾಯಿತೆಂಬ ನಂ ಬಿಕೆಯಿಂದಿರಬಾರದು" ಎಂದು ಹೇಳಿರುವರು ಆದುದರಿಂದ ಯೋಗಸಿದ್ಧಿ ಯಿಂದ ಬಂದ ಐಶ್ವರ್ಯವಾದರೂ ಕಾಮಕ್ಕೆ ದಾರಿಯನ್ನು ಕೊಡದಿರದು.ಮ ನಸ್ಸು ತನಗೆ ಸ್ವಾಧೀನವಾಗಿರುವುದೆಂಬ ಧೈರ್ಯದಿಂದ ಯೋಗೈಶ್ವರ್ಯಗಳ ನ್ನು ಕೈಕೊಂಡಪಕ್ಷದಲ್ಲಿ, ಕಾಮಕ್ಕೇ ಅವಕಾಶವನ್ನು ಕೊಟ್ಟಂತಾಗುವುದು. ಈಕಾಮವು ತಲೆಯಿಕ್ಕಿದೊಡನೆಯೇಕ್ರೋಧ,ಲೋಭ,ಮುಂತಾದ ಅರಿಷಡ್ವ ರ್ಗಗಳೆಲ್ಲವೂ ತಲೆಯಿಕ್ಕುವುವು ವ್ಯಭಿಚಾರಿಣಿಯಾದ ಹೆಂಗಸು, ತನ್ನ ಕೈಹಿ ಡಿದ ಗಂಡನನ್ನು ವಂಚಿಸಿ,ವಿಟನನ್ನು ನಂಬಿ, ಅವನಮೂಲಕವಾಗಿ ತನ್ನ ಪತಿ ಯನ್ನೇ ಕೊಲ್ಲಿಸುವಂತೆ, ಯೋಗಿಯು ಮನಸ್ಸನ್ನು ನಂಬಿದಪಕ್ಷದಲ್ಲಿ, ಅದು ಅವನನ್ನು ವಂಚಿಸಿ, ಕಾಮಾದಿಗಳಿಗೆ ಅವಕಾಶವನ್ನು ಕೊಟ್ಟು, ಆ ಮೂಲ ಕವಾಗಿ ಯೋಗಿಯನ್ನು ಸಂಸಾರದಲ್ಲಿ ಮುಳುಗಿಸಿ, ಮೃತಪ್ರಾಯನನ್ನಾಗಿ ಮಾಡುವುದು. ಕಾಮ, ಕ್ರೋಧ, ಲೋಭ, ಮೋಹ, ಮದ, ಶೋಕ, ಭಯ, ಮುಂತಾದುವೆಲ್ಲವೂ ಮನುಷ್ಯನಿಗೆ ಅಂತಶ್ಶತ್ರುಗಳಾದುದರಿಂದ ಅ ವುಗಳಿಗೆ ಅವಕಾಶಕೊಡಬಾರದು.ಐಶ್ವರ್ಯವೆಂಬುದು ಯೋಗಸಿದ್ಧಿಯ ಮೂಲ ಕವಾಗಿಬಂದರೂ, ಬೇರೆ ಯಾವರೀತಿಯಿಂದ ಬಂದರೂ,ಅದನ್ನು ಅನುಭವಿಸ

ಬೇಕೆಂಬ ಆಸೆಯಿಟ್ಟರೆ,ಅದು ಕರ್ಮಬಂಧವನ್ನುಂಟುಮಾಡುವುದು. ಆದುದ
ರಿಂದ ಈ ಐಶ್ವರ್ಯವು, ಅಜ್ಞರಿಗೆ ಆಸೆಹುಟ್ಟಿಸಬಹುದೇಹೊರತು, ಪಂಡಿತನು
ಅದನ್ನಂಗೀಕರಿಸಲಾರನು. ಇದಕ್ಕಾಗಿಯೇ ಋಷಭನು ಆ ಯೋಗಸಿದ್ಧಿಯ
ನ್ನನುಭವಿಸುವುದಕ್ಕೂ ಇಷ್ಟಪಡದೆ ಹೋದನು ಅವನು, ತಾನೇ ಸಮಸ್ತ
ಲೋಕಕ್ಕೂ ಅಲಂಕಾರಭೂತನಾಗಿದ್ದಾಗಲೂ, ಹಾಸ್ಯಾಸ್ಪದವಾದ ವೇಷ
ದಿಂದ ಹುಚ್ಚನಂತೆಯೂ,ಜಡನಂತೆಯೂ ಕಾಣಿಸಿಕೊಳ್ಳುತ್ತ, ತನ್ನಲ್ಲಿದ್ದಭಗ
ವದಂಶವನ್ನು ಮರೆಸಿಟ್ಟುಕೊಂಡಿದ್ದನು ಕೊನೆಗೆ ಯೋಗೀಶ್ವರರಿಗೆ ದೇಹತ್ಯಾ
ಗದ ರೀತಿಯನ್ನೂ ತಿಳಿಸಬೇಕೆಂದುದ್ದೇಶಿಸಿ,ಜೀವಾತ್ಮನು ಪ್ರಕೃತಿಸಂಬಂಧ
ವಾದ ಅಜ್ಞಾನದಿಂದ ತನ್ನ ಸ್ಥಿತಿಯನ್ನೇ ತಾನು ಕಾಣದಿರುವಾಗಲೂ ಪ
ರಮಾತ್ಮನಿಗೆ ಶರೀರವೆಂಬುದನ್ನು ಸಾಕ್ಷಾತ್ಕರಿಸಿಕೊಂಡು,ತನ್ನ ಪ್ರಾರಬ್ಧವು
ತೀರುವಕಾಲಕ್ಕೆ ದೇಹವನ್ನು ಬಿಟ್ಟುಬಿಟ್ಟನು. ಆತನು ದೇಹತ್ಯಾಗಮಾಡಿದ
ರೀತಿಯನ್ನು ತಿಳಿಸುವೆನು ಕೇಳು. ಆತನು ಸಹಜವಾಗಿ ಶರೀರಾಭಿಮಾನವ
ನ್ನು ಬಿಟ್ಟಿದ್ದರೂ, ತನಗೆ ಕರ್ಮವಾಸನೆಯಿಂದ ದೇಹಾಭಿಮಾನವಿರುವಂತೆ
ತೋರಿಸಿಕೊಳ್ಳುತ್ತ ಭೂಮಂಡಲವನ್ನು ಸುತ್ತುತ್ತಿದ್ದನಷ್ಟೆ ? ಹೀಗೆ ಸಂ
ಚಾರವಶದಿಂದ ಕೊಂಕಣವೆಂದೂ, ವೆಂಕಟಪಟವೆಂದೂ, ಕುಟಕವೆಂದೂ
ಕರೆಯಲ್ಪಡುವ ದಕ್ಷಿಣಕರ್ಣಾಟದೇಶಕ್ಕೆ ಹೋದನು. ಅಲ್ಲಿ ಕುಟಕಾಚಲ
ವೆಂಬ ಬೆಟ್ಟಕ್ಕೆ ಸಮೀಪದಲ್ಲಿರುವ ಒಂದಾನೊಂದು ಕಾಡಿನಲ್ಲಿ ಸೇರಿ, ಬಾ
ಯೊಳಗೆ ಒಂದು ಕಲ್ಲನ್ನಿಟ್ಟುಕೊಂಡು, ತಲೆಯನ್ನು ಕೆದರಿ, ದಿಗಂಬರನಾಗಿ
ಸುತ್ತುತಿದ್ದನು. ಈ ಕಾಲಕ್ಕೆ ಸರಿಯಾಗಿ ಗಾಳಿಯಿಂದಾಡುತಿದ್ದ ಒಂದಾ
ನೊಂದು ಬಿದಿರುಮೆಳೆಯಿಂದ ಕಾಡುಗಿಚ್ಚು ಹುಟ್ಟಿ, ಆ ಕಾಡೆಲ್ಲವನ್ನೂ
ಸುಡುತ್ತಬರುವಾಗ, ಆ ಋಷಭನ ದೇಹವೂ ಇದರಲ್ಲಿ ದಗ್ಧವಾಯಿತು
ರಾಜೇಂದ್ರಾ! ಮುಂದೆ ಆ ಕೊಂಕಣ ಮುಂತಾದ ದೇಶಗಳಿಗೆ ಅಧಿಪತಿಯಾ
ಗುವ ಅರ್ಹತನೆಂಬ ರಾಜನು, ಬ್ರಹ್ಮಚರ್ಯಾದಿ ಚತುರಾಶ್ರಮಧರ್ಮಗಳಿ
ಗಿಂತಲೂ ವಿಲಕ್ಷಣವಾದ ಈ ಋಷಭನ ಚರಿತ್ರವನ್ನು ಕೇಳಿ, ಈವ್ರತಗಳೇ
ಶಾಸ್ತ್ರವಿಹಿತಗಳೆಂದು ಭ್ರಮಿಸುವನು. ಈ ನೆವದಿಂದ ವೈದಿಕಕರ್ಮ
ಗಳೆಲ್ಲವನ್ನೂ ಬಿಟ್ಟುಬಿಡಬಹುದೆಂದೂ ನಿಶ್ಚಯಿಸಿಕೊಳ್ಳುವನು ಸರ್ವವಿಧ

ದಲ್ಲಿಯೂ ನಿರ್ಭಯವಾದ ಸ್ವಧರ್ಮವನ್ನು ಬಿಟ್ಟು, ತಾನೂ ಆ ಋಷಭನಂತೆಯೇ ನಡೆಯುತ್ತ, ತನ್ನ ಪ್ರಜೆಗಳಿಗೂ ಅದನ್ನೇ ಉಪದೇಶಿಸುವನು. ಕಲಿಯುಗದಲ್ಲಿ ಅಧರ್ಮವೇ ಹೆಚ್ಚುತ್ತಿರುವುದರಿಂದ, ಅನೇಕಜನರು ತಮಗೆ ಪ್ರಾರಬ್ಧಕರ್ಮದಿಂದುಂಟಾದ ಅಜ್ಞಾನಕ್ಕೆ ವಶರಾಗಿ, ವೇದನಿಷಿದ್ಧಗಳಾದ ಪಾಷಂಡವ್ರತಗಳನ್ನೇ ಹಿಡಿಯುವರು. ಮೊದಲೇ ದೈವಮಾಯೆಯಿಂದ ಮೋಹಿತರಾದ ಆ ಜನರೆಲ್ಲರೂ,ಆರ್ಹತನ ಬೋಧೆಯಿಂದ ಮತ್ತಷ್ಟು ಮೋಹಿತರಾಗಿ, ತಮ್ಮ ವರ್ಣಾಶ್ರಮಧರ್ಮಗಳನ್ನೂ,ಶ್ರುತ್ಯುಕ್ತವಾದ ಶೌಚ, ಸಂಧ್ಯಾವಂದನೆ ಮೊದಲಾದುವುಗಳನ್ನೂ ಬಿಟ್ಟುಬಿಡುವರು. ದೇವತೆಗಳಿಗೆ ಅವಮಾನಕಾರಣಗಳಾದ ಕುತ್ಸಿತವ್ರತಗಳನ್ನೇ ಹಿಡಿಯುವರು. ಕಲಿದೋಷದಿಂದ ವಿವೇಕಹೀನರಾಗಿ, ಸ್ನಾನ,ಆಚಮನ,ಸದಾಚಾರಗಳೊಂದೂ ಇಲ್ಲದೆ, ತಲೆಕೂದಲನ್ನು ಕತ್ತರಿಸಿಕೊಳ್ಳುತ್ತ, ವೇದವನ್ನೂ, ಪರಮಪುರುಷನನ್ನೂ, ಭಗವದ್ಭಕ್ತರನ್ನೂ ಬಹಳವಾಗಿ ನಿಂದಿಸುತ್ತಬರುವರು. ವೇದಪ್ರಾಮಾಣ್ಯವಿಲ್ಲದೆ ನಿರಾಧಾರವಾದ ಈ ಆರ್ಹತಸ್ಮೃತಿಯಲ್ಲಿ ನಂಬಿಕೆಯಿಟ್ಟವರೆಲ್ಲರೂ, ಅಂಧತಮಸ್ಸೆಂಬ ನರಕದಲ್ಲಿ ಬೀಳುವುದರಲ್ಲಿ ಸಂದೇಹವಿಲ್ಲ! ಆದರೆ, "ಭಗವದಂಶದಿಂದ ಹುಟ್ಟಿದ ಋಷಭನು, ತನ್ನ ನಡತೆಯಿಂದ ಹೀಗೆ ಲೋಕವನ್ನು ವಂಚಿಸಬಹುದೆ? ಅವನು ಈ ಮಾರ್ಗವನ್ನು ಹಿಡಿಯಬೇಕಾದ ಆವಶ್ಯವೇನು" ಎಂದು ಕೇಳುವೆಯಾ? ರಜೋಗುಣದಿಂದ ಬುದ್ಧಿಗೆಟ್ಟವರಿಗೆ ಯೋಗಚರ್ಯೆಯೆಂಬ ಇದೊಂದು ವಿಧವಾಗಿ ಮೋಕ್ಷೋಪಾಯವನ್ನು ತಿಳಿಸುವುದಕ್ಕಾಗಿಯೇ ಭಗವಂತನು ಋಷಭಾವತಾರವನ್ನೆತ್ತಿ, ಹೀಗೆ ನಡೆಸಿರುವನು. ರಾಜಾ! ಲೋಕದಲ್ಲಿ ಆ ಋಷಭದೇವನ ಕೀರ್ತಿಯನ್ನು ಕೆಲವು ಶ್ಲೋಕಾರ್ಥಗಳಿಂದ ಹೀಗೆಂದು ಕೊಂಡಾಡುವರು. "ಈ ಭೂಮಿಯಲ್ಲಿರುವ ಏಳು ದ್ವೀಪಗಳಲ್ಲಿ ಜಂಬೂದ್ವೀಪವು ಸರ್ವೋತ್ತಮವೆನಿಸಿರುವುದು. ಅದರಲ್ಲಿಯೂ ಒಂಭತ್ತು ಖಂಡಗಳಲ್ಲಿ ಭಾರತವರ್ಷವೆಂಬ ಖಂಡವು ಮೇಲೆನಿಸಿರುವುದು. ಅದರೊಳಗಿನ ಜನರೆಲ್ಲರೂ ಋಷಭರೂಪದಿಂದವತರಿಸಿದ ಆ ಭಗವಂತನ ಮಂಗಳಚರಿತ್ರಗಳನ್ನು ಯಾವಾಗಲೂ ಹೀಗೆ ಕೊಂಡಾಡುತ್ತಿರುವರು? "ಅಹಾ! ಪ್ರಿಯವ್ರತನ ವಂಶವು ಎಷ್ಟು

ಪರಿಶುದ್ಧವಾದ ಕೀರ್ತಿಯಿಂದ ಬೆಳಗುತ್ತಿರುವುದು! ಸಾಕ್ಷಾತ್ಪರಮಪುರುಷನೇ ಇದರಲ್ಲಿ ಋಷಭರೂಪದಿಂದವತರಿಸಿ, ಮೋಕ್ಷಕಾರಣವಾದ ಧರ್ಮವನ್ನು ತಾನಾಗಿಯೇ ನಡೆಸಿ ತೋರಿಸಿದಾಗ, ಆ ವಂಶದ ಕೀರ್ತಿಯನ್ನು ಹೇಳಬೇಕಾದುದೇನು? ಯಾವನು, ಮನೋವೇಗ ಮುಂತಾದ ಯೋಗಶಕ್ತಿಗಳು ತಾವಾಗಿ ಮೇಲೆ ಬಿದ್ದುಬಂದರೂ ಅವೆಲ್ಲವನ್ನೂ ತ್ಯಜಿಸಿಬಿಟ್ಟನೋ, ಯಾವನು ತನಗೆ ಬೇಡವೆಂದು ತ್ಯಜಿಸಿಬಿಟ್ಟುದನ್ನು ಪಡೆಯುವುದಕ್ಕಾಗಿ ಮಹಾಯೋಗಿಗಳೆಲ್ಲರೂ ಪ್ರಯತ್ನಿಸುತ್ತಿರುವರೋ, ಅಂತಹ ಋಷಭದೇವನ ನಿಷ್ಠೆಯನ್ನು ಬೇರೆ ಯಾವ ಯೋಗಿಯುತಾನೇ ಮನಸ್ಸಿನಿಂದಲಾದರೂ ಅನುಸರಿಸಬಲ್ಲನು ?" ಎಂಬುದೇ ಆ ಶ್ಲೋಕಾರ್ಥವು ಸಮಸ್ತಲೋಕಗಳಿಗೂ, ಸಕಲವೇದಗಳಿಗೂ, ಎಲ್ಲಾ ದೇವತೆಗಳಿಗೂ, ಗೋಬ್ರಾಹ್ಮಣರಿಗೂ ಗುರುವಾದ ಆ ಋಷಭದೇವನ ಚರಿತ್ರವು ಈಪಿಧವಾದುದು. ಇದನ್ನು ಪಠಿಸಿದಮಾತ್ರಕ್ಕೆ ಸಮಸ್ತಪಾಪಗಳೂ ನೀಗುವುವು. ಇದು ಸಮಸ್ತ ಮಂಗಳಗಳಿಗೂ ನೆಲೆಯಾದುದು. ಈ ಚರಿತ್ರವನ್ನು ಪ್ರತಿದಿನವೂ ಶ್ರದ್ಧೆಯಿಂದ ಯಾವನು ಕೇಳುವನೋ, ಯಾವನು ಬೇರೊಬ್ಬರಿಗೆ ಹೇಳುವನೋ, ಅವನಿಗೆ ಭಗವಂತನಲ್ಲಿ ನಿಶ್ಚಲವಾದ ಭಕ್ತಿಯೋಗವುಂಟಾಗುವುದು. ಅನೇಕಪಾಪಗಳಿಗೆ ನೆಲೆಯಾದ ಸಂಸಾರದುಃಖಗಳಿಂದ ಪರಿತಪಿಸುತ್ತಿರುವ ಆತ್ಮವನ್ನು, ಈ ಭಗವದ್ಭಕ್ತಿಯೆಂಬ ಅಮೃತಸಾಗರದಲ್ಲಿ ಸ್ನಾನಮಾಡಿಸಿ, ಭಗವದ್ಗುಣಾನುಭವವೆಂಬ ಮಹಾನಂದವನ್ನನುಭವಿಸುತ್ತಿರುವ ವಿವೇಕಿಗಳು, ಅನಾಯಾಸವಾಗಿ ಲಭಿಸುವ ಮೋಕ್ಷವನ್ನೂ ಕೂಡ ಆದರಿಸಲಾರರು. ಅವರು ಯಾವವಿಷಯದಲ್ಲಿಯೂ ತನ್ನದೆಂಬ ಅಭಿಮಾನವಿಲ್ಲದೆ, ಎಲ್ಲವನ್ನೂ ಭಗವದಧೀನವೆಂದೇ ನೆನೆಸತಕ್ಕವರಾದುದರಿಂದ, ಸಮಸ್ತಪುರುಷಾರ್ಥಗಳನ್ನೂ ಹೊಂದಿದಂತೆಯೇ ತೃಪ್ತರಾರುವರು. ಓ ರಾಜಾ ! ಪಾಂಡವರಾದ ನಿಮಗೂ, ಮತ್ತು ಯಾದವರಿಗೂ ಭಗವಂತನು ಸಾಕ್ಷಾತ್ತಾಗಿ ತಾನೇ ರಕ್ಷಕನಾಗಿಯೂ, ಗುರುವಾಗಿಯೂ, ದೈವವಾಗಿಯೂ, ಮಿತ್ರನಾಗಿಯೂ, ಕುಲಪತಿಯಾಗಿಯೂ ಇರುವನು. ಹೆಚ್ಚೇಕೆ? ಸಮಯಬಂದಾಗ ಕಿಂಕರನಾಗಿಯೂ ಕೆಲಸಮಾಡಿರುವನು. ಹೀಗಿದ್ದರೂ ನಿಮ್ಮ ಹಿರಿಯ

ರಾದ ಪಾಂಡವರಿಗಾಗಲಿ, ಮತ್ತು ತನ್ನನ್ನು ಎಡೆಬಿಡದೆ ಧ್ಯಾನಿಸಿದ ಇತ
ರರಿಗಾಗಲಿ, ಅವನು ಮೋಕ್ಷವನ್ನು ಕೊಟ್ಟನೇಹೊರತು ಭಕ್ತಿಯೋಗವನ್ನು
ಕೊಡಲಿಲ್ಲವಷ್ಟೆ? ಆದುದರಿಂದ ಮೋಕ್ಷಕ್ಕಿಂತಲೂ ಭಕ್ತಿಯೋಗವು ದು
ರ್ಲಭವು ರಾಜಾ! ಯಾವನು ಪರಬ್ರಹ್ಮರೂಪವಾದ ಆತ್ಮಸ್ವರೂಪವನ್ನು
ಎಡೆಬಿಡದೆ ಅನುಭವಿಸತಕ್ಕ ಮಹಾಲಾಭದಿಂದ, ಬೇರೆ ಪುರುಷಾರ್ಥಗಳಲ್ಲಿ
ದೃಷ್ಟಿಯಿಡದಿದ್ದನೋ, ಮತ್ತು ಯಾವನು, ಪಾಪಪ್ರವರ್ತನದಿಂದ ತಮ್ಮ
ಶ್ರೇಯಸ್ಸನ್ನೇ ತಾವು ಕಾಣದಿರುವ ಚೇತನರಲ್ಲಿ ಕನಿಕರಗೊಂಡು, ಅವರಿಗೆ
ನಿರ್ಭಯವಾದ ಆತ್ಮಾನುಭವವೆಂಬ ಮೋಕ್ಷೋಪಾಯವನ್ನು ತೋರಿಸಿ
ಕೊಟ್ಟನೋ, ಋಷಭರೂಪಿಯಾದ ಆ ಪರಮಪುರುಷನಿಗೆ ನಮಸ್ಕಾರವು.
ಇದು ಆರನೆಯ ಅಧ್ಯಾಯವು

---

## ಭರತನ ಚರಿತ್ರವು.

ಎಲೈ ಪರೀಕ್ಷಿದ್ರಾಜನೆ? ಪರಮಪಾವನವಾದ ಋಷಭನ ಚರಿತ್ರವ
ನ್ನು ನಿನಗೆ ಸಾಂಗವಾಗಿ ವಿವರಿಸಿದೆನಷ್ಟೆ! ಇನ್ನು ಆತನ ಜ್ಯೇಷ್ಠಪುತ್ರ
ನಾದ ಭರತನ ಚರಿತ್ರವನ್ನು ವಿವರಿಸುವೆನು ಕೇಳು. ಆ ಭರತನು ಪರಮ
ಭಾಗವತೋತ್ತಮನು! ಈತನು ತಂದೆಯಾಜ್ಞೆಯಿಂದ ರಾಜ್ಯವನ್ನು ನಡೆ
ಸುತಿದ್ದಾಗ, ವಿಶ್ವರೂಪನ ಮಗಳಾದ ಪಂಚಜನಿಯೆಂಬವಳನ್ನು ವಿವಾಹ
ಮಾಡಿಕೊಂಡನು. ಭೂತಾದಿಯೆಂಬ ತಾಮಸಾಹಂಕಾರದಿಂದ ಐದು ಭೂ
ತಸೂಕ್ಷ್ಮಗಳು ಹುಟ್ಟಿದಂತೆ ಆ ಭರತನಿಗೆ ಪಂಚಜನಿಯಲ್ಲಿ ಸರ್ವವಿಧದ
ಲ್ಲಿಯೂ ತನಗೆ ಸಮಾನಗುಣವುಳ್ಳ ಐದುಮಂದಿಮಕ್ಕಳು ಹುಟ್ಟಿದರು.
ಇವರಿಗೆ ಕ್ರಮವಾಗಿ ಸುಮತಿ, ರಾಷ್ಟ್ರಭೃತ್ತು, ಸುದರ್ಶನ, ಆವರಣ,
ಧೂಮ್ರಕೇತುವೆಂದು ಹೆಸರು.ಭರತನು ಯಾವ ಭೂಭಾಗವನ್ನು ಪಾಲಿಸುತಿ
ದ್ದನೋ,ಆ ಭಾಗವು ಭಾರತವರ್ಷವೆಂಬ ಅವನ ಹೆಸರಿನಿಂದಲೇ ಪ್ರಸಿದ್ಧವಾ
ಯಿತು! ಅನೇಕವಿಷಯಗಳನ್ನು ಬಲ್ಲವನಾಗಿದ್ದ ಆ ಭರತನು, ತನ್ನ ಕುಲಧ
ರ್ಮವನ್ನು ತಾನು ಚೆನ್ನಾಗಿ ಅನುವರ್ತಿಸುತ್ತಿದ್ದುದಲ್ಲದೆ, ತನ್ನ ದೇಶದ ಪ್ರ
ಜೆಗಳನ್ನೂ ಅವರವರ ವರ್ಣಾಶ್ರಮಧರ್ಮಗಳಲ್ಲಿ ನಿಯೋಗಿಸಿ, ತನ್ನ

ಪಿತೃಪಿತಾಮಹರಂತೆಯೇ ಪ್ರಜಾರಂಜಕನಾಗಿ ರಾಜ್ಯವನ್ನು ಪಾಲಿಸುತ್ತಿದ್ದನು ಮತ್ತು ಈತನು ಅಗ್ನಿಹೋತ್ರ, ದರ್ಶಪೂರ್ಣಮಾಸ, ಚಾತುರ್ಮಾಸ್ಯ, ಪಶು, ಸೋಮವೆಂಬ ನಾನಾಬಗೆಯ ಯಾಗಗಳಲ್ಲಿ, ಪ್ರಕೃತಿವಿಕೃತಿಗಳೆಂಬ ಎರಡುಮಾರ್ಗಗಳಿಂದಲೂ ಭಗವಂತನನ್ನು ಶ್ರದ್ಧೆಯಿಂದ ಆರಾಧಿಸುತ್ತ ಬಂದನು ತ್ರಿಸಂಧ್ಯಾಕಾಲಗಳಲ್ಲಿಯೂ ಚಾತುರ್ಹೋತ್ರವೆಂಬ ವಿಧಿಯನ್ನನುಸರಿಸಿ, ಸಾಮಗ್ರಿಗಳಲ್ಲಿಯಾಗಲಿ, ಕರ್ಮಗಳಲ್ಲಿಯಾಗಲಿ ಲೋಪವಿಲ್ಲದಂತೆ, ಅನೇಕಯಾಗಗಳನ್ನು ನಡೆಸುತ್ತಬಂದರೂ, ಧರ್ಮವೆಂದೂ, ಅಪೂರ್ವವೆಂದೂ ಕರೆಯಲ್ಪಡುವ ಆ ಯಾಗಫಲವನ್ನೂ ಭಗವದನುಗ್ರಹವೆಂದೇ ತಿಳಿದು, ಅದನ್ನು ಆ ಭಗವದರ್ಪಣರೂಪವಾಗಿಯೇ ಭಾವಿಸುತಿದ್ದನು ಬೇರೆಬೇರೆ ದೇವತೆಗಳನ್ನುದ್ದೇಶಿಸಿ ಹೇಳತಕ್ಕ ಮಂತ್ರಗಳೂ ಕೂಡ, ಆ ದೇವತೆಗಳಿಗೆ ಅಂತರಾತ್ಮನಾಗಿ ಯಜ್ಞಪುರುಷನೆನಿಸಿದ ಪರಮಾತ್ಮನಲ್ಲಿಯೇ ಪರ್ಯವಸನ್ನವಾಗುವುದರಿಂದ, ತಾನು ಹೇಳತಕ್ಕ ಯಜ್ಞಮಂತ್ರಗಳೆಲ್ಲವನ್ನೂ ವಾಸುದೇವಮಂತ್ರವೆಂದೇ ಭಾವಿಸುತಿದ್ದನು. ತನ್ನ ಚಾತುರ್ಯದಿಂದಲೇ ತನ್ನ ಕರ್ಮವಾಸನೆಯೆಲ್ಲವನ್ನೂ ನೀಗಿ, ಶುದ್ಧಹೃದಯನಾಗಿದ್ದ ಆ ಭರತನು, ಆ ಯಜ್ಞಕಾಲದಲ್ಲಿ, ಅಧ್ವರ್ಯುಗಳು ಹೋಮದ್ರವ್ಯವನ್ನು ತೆಗೆದು, ಇಂದ್ರಾದಿದೇವತೆಗಳನ್ನುದ್ದೇಶಿಸಿ ಹೋಮಮಾಡುತ್ತಿರುವಾಗ, ಆಯಾ ದೇವತೆಗಳನ್ನೂ ಪರಮಪುರುಷನಿಗೆ ಅವಯವವೆಂದೇ ಧ್ಯಾನಿಸುತಿದ್ದನು. ಹೀಗೆ ಭರತನು ತಾನು ನಡೆಸತಕ್ಕ ಕರ್ಮಗಳೆಲ್ಲವನ್ನೂ ಭಗವದಾರಾಧನರೂಪವಾಗಿಯೇ ನಡೆಸುತ್ತ, ಅದರಿಂದ ಶುದ್ಧಮನಸ್ಕನಾದನು. ಇದರಿಂದ ಆತನು ಕ್ರಮಕ್ರಮವಾಗಿ ತನ್ನ ಹೃದಯಕಮಲಮಧ್ಯರಂಧ್ರದಲ್ಲಿ ಜೀವಶರೀರಕನಾಗಿ ನೆಲೆಗೊಂಡವನಾಗಿಯೂ,ಶ್ರೀವತ್ಸ, ಕೌಸ್ತುಭ, ವನಮಾಲಿಕೆ, ಶಂಖ, ಚಕ್ರ, ಮೊದಲಾದುವುಗಳಿಂದ ಶೋಭಿತನಾಗಿಯೂ, ಮಹಾಪುರುಷಲಕ್ಷಣಗಳಿಂದ ಕೂಡಿದವನಾಗಿಯೂ, ಇರುವ ವಾಸುದೇವಾತ್ಮಕನಾದ ಪರಬ್ರಹ್ಮನನ್ನು ಸಾಕ್ಷಾತ್ಕರಿಸಿಕೊಂಡನು. ಭರತನಿಗೆ ಆ ಭಗವಂತನಲ್ಲಿ ದಿನದಿನಕ್ಕೆ ಭಕ್ತಿಯು ಹೆಚ್ಚಿತು. ಅವನ ಭಕ್ತಿಯೋಗವು ಪರಿಪಕ್ವವಾಯಿತು. ಹೀಗೆ ಹತ್ತು ಸಾವಿರವರ್ಷಗಳವರೆ

ಗೆ ಸತ್ಕರ್ಮಗಳನ್ನಾಚರಿಸುತಿದ್ದು, ತನಗೆ ಭೋಗಾನುಭವದ ಕಾಲವು ಅತಿಕ್ರಮಿಸುತ್ತ ಬಂದುದನ್ನು ತಿಳಿದು, ಕುಲಕ್ರಮಾಗತವಾಗಿ ಬಂದ ರಾಜ್ಯಕೋಶಾದಿಗಳೆಲ್ಲವನ್ನೂ ತನ್ನ ಮಕ್ಕಳಿಗೆ ಹಂಚಿಕೊಟ್ಟನು. ಸಕಲೈಶ್ವರ್ಯಸಮೃದ್ಧವಾದ ತನ್ನ ಅರಮನೆಯನ್ನು ಬಿಟ್ಟು ಹೊರಟು, ಪುಲಹಾಶ್ರಮವೆಂಬ ಸಾಲಗ್ರಾಮಕ್ಷೇತ್ರಕ್ಕೆ ಬಂದು ಸೇರಿದನು. ರಾಜೇಂದ್ರಾ ! ಆ ಕ್ಷೇತ್ರವು ಬಹಳಪವಿತ್ರವಾದುದು! ಭಗವಂತನು ಈಗಲೂ ಅಲ್ಲಿ ತನ್ನನ್ನಾರಾಧಿಸತಕ್ಕ ಭಕ್ತರಿಗೆ, ಅವರವರ ಇಚ್ಛಾನುಸಾರವಾದ ರೂಪದಿಂದ ಪ್ರತ್ಯಕ್ಷನಾಗುವನು ಅಲ್ಲಿ ಚಕ್ರನದಿಯೆಂಬ ಒಂದಾನೊಂದು ನದಿಯು ಪ್ರವಹಿಸುತ್ತ, ಆ ಕ್ಷೇತ್ರವೆಲ್ಲವನ್ನೂ ಪವಿತ್ರವಾಗಿ ಮಾಡುತ್ತಿರುವುದು ಮೇಲೆ ಕೆಳಗೆಲ್ಲಾ ಚಕ್ರರೇಖೆಗಳುಳ್ಳ ಶಿಲೆಗಳಿಂದ ತುಂಬಿರುವುದರಿಂದ ಆ ನದಿಗೆ ಚಕ್ರನದಿಯೆಂದು ಹೆಸರು. ಆ ನದೀತೀರದಲ್ಲಿ ಭರತನು ಏಕಾಕಿಯಾಗಿದ್ದು, ಬಗೆಬಗೆಯ ಹೂಗಳಿಂದಲೂ, ಚಿಗುರುಗಳಿಂದಲೂ, ತುಳಸೀದಳಗಳಿಂದಲೂ, ಜಲದಿಂದಲೂ, ಗಡ್ಡೆಗೆಣಸು ಮೊದಲಾದ ನೈವೇದ್ಯಗಳಿಂದಲೂ, ಭಗವಂತನನ್ನಾರಾಧಿಸುತಿದ್ದನು. ಮತ್ತು ತಾನು ಶುದ್ಧವಾದ ಆಹಾರದಿಂದ ದೇಹಧಾರಣವನ್ನು ಮಾಡುತ್ತ, ವಿಷಯಾಭಿಲಾಷೆಯನ್ನು ಬಿಟ್ಟು, ಜಿತೇಂದ್ರಿಯನಾಗಿ, ಭಗವಂತನಲ್ಲಿ ಪ್ರೀತಿರೂಪವಾದ ಪರಮಭಕ್ತಿಯನ್ನು ಸಾಧಿಸುತಿದ್ದನು. ಈ ಕಾರ್ಯಗಳಿಂದ ಆ ಭರತನಿಗೆ ಪುಣ್ಯಕೀರ್ತಿಯಾದ ಭಗವಂತನಲ್ಲಿ ಎಣೆಯಿಲ್ಲದ ಅನುರಾಗವು ಹುಟ್ಟಿತು. ಈ ಅನುರಾಗಾತಿಶಯದಿಂದ ಆತನ ಹೃದಯವು ಕರಗಿತು ಅವನ ದೇಹವು ಪುಳಕಿತವಾಯಿತು. ಅವನ ಕಣ್ಣುಗಳಲ್ಲಿ ಆನಂದಬಾಷ್ಪವು ತುಂಬಿಕೊಂಡಿತು. ಹೀಗೆ ಆ ಭರತನಿಗೆ, ಭಗವಂತನ ಪಾದಾರವಿಂದಗಳನ್ನು ಎಡೆಬಿಡದೆ ಧ್ಯಾನಿಸುವುದರಿಂದ,ಭಕ್ತಿಯೋಗವು ಕ್ರಮಕ್ರಮವಾಗಿ ಹೆಚ್ಚಿ ಬಂದು, ಅದರಿಂದುಂಟಾದ ಆನಂದರಸಪ್ರವಾಹದಲ್ಲಿ ಅವನ ಬುದ್ಧಿಯು ಮುಳುಗಿಹೋದುದರಿಂದ, ಆಗ ಅವನಿಗೆ ತಾನು ನಡೆಸುತ್ತಿರುವ ಭಗವತ್ಪೂಜೆಯೂ ಮರೆತು ಹೋಗುವಂತಾಯಿತು ಈ ವಿಧವಾಗಿ ಭರತನು ಕೃಷ್ಣಾಜಿನವನ್ನುಟ್ಟು, ಚಕ್ರನದಿಯಲ್ಲಿ ತ್ರಿಕಾಲಸ್ನಾನಮಾಡುದರಿಂದ ಯಾವಾಗಲೂ ಒದ್ದೆಯಾಗಿಯೂ, ಗೋರೋಚನದ ಬಣ್ಣವು

ಳ್ಳುದಾಗಿಯೂ, ಸುರುಳಿಗಟ್ಟಿದುದಾಗಿಯೂ ಇರುವ ಜಟಾಭಾರದಿಂದ ಶೋಭಿಸುತ್ತ, ಭಗವದಾರಾಧನವೆಂಬ ದೃಢವ್ರತವನ್ನು ನಡೆಸುತ್ತಿದ್ದನು. ಸೂರ್ಯೋದಯವಾದೊಡನೆ ಇದಿರೆದ್ದು ನಿಂತು,ಸೂರ್ಯಮಂಡಲ ಮಧ್ಯ ವರ್ತಿಯಾಗಿ ಸುವರ್ಣಛಾಯೆಯುಳ್ಳ ಭಗವಂತನ ಸ್ವರೂಪವನ್ನು ನಿರೂ ಪಿಸತಕ್ಕ ಋಕ್ಕಿನಿಂದ ಹೀಗೆಂದು ಸ್ತೋತ್ರಮಾಡುವನು. “ಯಾವನು ತನ್ನ ಸಂಕಲ್ಪದಿಂದಲೇ ಸಮಸ್ತ ಜಗತ್ತನ್ನೂ ಸೃಷ್ಟಿಸಿ, ತಾನೂ ಜೀವ ನ ಮೂಲಕವಾಗಿ ಅದರಲ್ಲಿ ಪ್ರವೇಶಿಸಿ,ಅದನ್ನು ಆಯಾ ಕಾರ್ಯಗಳಲ್ಲಿ ಪ್ರೇ ರಿಸುವನೋ ಅಂತಹ ಶ್ರೀಮನ್ನಾರಾಯಣನ ತೇಜೋಮಯವಾದ ಈ ಸ್ವ ರೂಪವನ್ನು ಶರಣುಹೊಂದುವೆವು. ಮತ್ತು ಜೀವನು ದುರ್ವಿಷಯಗಳಲ್ಲಿ ಪ್ರೇರಿಸತಕ್ಕ ಬುದ್ಧಿಗೆ ವಶನಾಗಿ, ಕರ್ಮಗಳನ್ನು ನಡೆಸಿ, ಅದಕ್ಕೆ ತಕ್ಕ ಫಲವನ್ನನುಭವಿಸುವಾಗ,ಯಾವನು ಆ ಜೀವನಲ್ಲಿ ತಾನೂ ಅಂತರಾತ್ಮನಾಗಿ ದ್ದು, ಅವನ ವ್ಯಾಪಾರಗಳನ್ನು ನೋಡುತ್ತಿರುವನೋ, ಯಾವನು ಜಗತ್ಕಾ ರಣಭೂತನೋ, ಪ್ರಕೃತಿಮಂಡಲಕ್ಕಿಂತಲೂ ಹೊರಗೆ ಪ್ರಕಾಶಿಸುತ್ತಿರುವ ಆ ಪರಮಪುರುಷನ ತೇಜೋಮಯವಾದ ಶರೀರವನ್ನು ಶರಣುಹೊಂದುವೆವು. ಕೇವಲಜ್ಞಾನಮಯವಾಗಿ ಲೋಕವಿಲಕ್ಷಣವಾದ ಆ ರೂಪವನ್ನು ಮರೆಹು ಗುವೆನು” ಎಂದು ಹೇಳಿ ಸೂರ್ಯಮಂತ್ರದಿಂದ ಉಪಸ್ಥಾನಮಾಡುತಿದ್ದ ನು ಇಲ್ಲಿಗೆ ಏಳನೆಯ ಅಧ್ಯಾಯವು.

---

ಭರತನು ನದೀತೀರದಲ್ಲಿರುವಾಗ,ಅಪಾಯಕ್ಕೆ ಸಿಕ್ಕಿ ಬಿದ್ದ ಒಂದು ಹುಲ್ಲೆಯನ್ನು ತಂದು ಪೋಷಿಸಿ, ಕೊನೆಗೆ ತಾನೂ ಹುಲ್ಲೆಯ ಜನ್ಮ ವನ್ನು ಹೊಂದಿದುದು

ರಾಜೇಂದ್ರಾ ಕೇಳು ! ಆ ಭರತನು ಒಮ್ಮೆ ಚಕ್ರನದಿಯಲ್ಲಿ ಸ್ನಾನ ಮಾಡಿ, ನಡೆಸಬೇಕಾದ ನಿತ್ಯಕರ್ಮಗಳನ್ನು ಮುಗಿಸಿಕೊಂಡು, ಪ್ರಣವ ಮಂತ್ರವನ್ನು ಜಪಿಸುತ್ತ ನದೀತೀರದಲ್ಲಿ ಕುಳಿತಿದ್ದನು.ಮೂರು ಮುಹೂರ್ತ ಕಾಲದವರೆಗೆ ಈ ಮಂತ್ರಜಪವನ್ನು ಮಾಡುವಷ್ಟರಲ್ಲಿ ಒಂದಾನೊಂದು ಹೆಣ್ಣುಜಿಂಕೆಯು, ಬಾಯಾರಿಕೆಯಿಂದ ನೀರು ಕುಡಿಯುವುದಕ್ಕಾಗಿ ತನ್ನ



973. ನದಿಯಲ್ಲಿ ನೀರು ಕುಡಿಯುತಿದ್ದ ಒಂದಾನೊಂದು ಹೆಣ್ಣು ಜಿಂಕೆಗೆ, ಸಿಂಹಗರ್ಜನದಿಂದ ಗರ್ಭಸ್ರಾವವಾಗಲು, ಭರತನು ಆ ಮರಿಯನ್ನು ಕರೆತಂದುದು.

ಮಂದೆಯನ್ನು ಬಿಟ್ಟು ಒಂಟಿಯಾಗಿ ಬಂದು ಆ ನದಿಯಲ್ಲಿಳಿಯಿತು. ಅದು ನೀರನ್ನು ಕುಡಿಯುತ್ತಿರುವಾಗಲೇ, ಸಮೀಪದಲ್ಲಿ ಲೋಕಭಯಂಕರವಾದ ಒಂದು ಸಿಂಹಗರ್ಜನವು ಅದರ ಕಿವಿಗೆ ಬಿದ್ದಿತು. ಸಹಜವಾಗಿಯೇ ಭೀರುಸ್ವಭಾವವುಳ್ಳ ಆ ಹೆಣ್ಣು ಜಿಂಕೆಗೆ, ಈ ಸಿಂಹಗರ್ಜನವು ಕಿವಿಗೆ ಬಿದ್ದೊಡನೆ ಎದೆಯೊಡೆಯುವಂತೆ ಭಯವುಂಟಾಯಿತು.ಭಯದಿಂದ ಚಂಚಲದೃಷ್ಟಿಯುಳ್ಳ ಆ ಜಿಂಕೆಯು, ಸಿಂಹಗರ್ಜನವನ್ನು ಕೇಳಿ ನಡುಗುತ್ತ, ನೀರುಕುಡಿಯುವುದನ್ನೂ ಬಿಟ್ಟು ಆತ್ಮಾತುರದಿಂದ ಛಟ್ಟನೆ ತಾನು ನಿಂತಿದ್ದ ಸ್ಥಳದಿಂದ ಹಾರಿ, ಆ ನದಿಯನ್ನು ದಾಟಿ ಹೋಗುವುದಕ್ಕೆ ಪ್ರಯತ್ನಿಸಿತು ಆ ಕಾಲದಲ್ಲಿ ಅದು ಪೂರ್ಣಗರ್ಭಿಣಿಯಾಗಿದ್ದುದರಿಂದ, ಅದಕ್ಕೆ ಗರ್ಭಸ್ರಾವವುಂಟಾಗಿ, ಆ ಮರಿಯು ನೀರಿನಲ್ಲಿ ಬಿದ್ದಿತು. ಹೀಗೆ ಆ ಜಿಂಕೆಗೆ ಭಯಾತುರದಿಂದಲೂ, ನದಿಯನ್ನು ದಾಟಿ ಹೋಗುವ ಆಯಾಸದಿಂದಲೂ, ಗರ್ಭವು ಜಾರಿ ಬೀಳಲು, ಭಯದಿಂದಲೂ, ನೋವಿನಿಂದಲೂ ಪೀಡಿತವಾದ ಆ ಜಿಂಕೆಯು, ಒಂದೇ ಓಟದಿಂದ ಮುಂದೆ ಹೋಗಿ, ಒಂದು ಪರ್ವತಗುಹೆಯನ್ನು ಹೊಕ್ಕಿತು ಆತ್ಯಾಯಾಸದಿಂದ ಕೆಳಗೆ ಬಿದ್ದು ಕೊನೆಗೆ ಮರಣವನ್ನೂ ಹೊಂದಿತು. ಇತ್ತಲಾಗಿ ಭರತನು ನದೀಪ್ರವಾಹದಲ್ಲಿ ತೇಲಿ ಹೋಗುತ್ತಿರುವ ಆ ಜಿಂಕೆಯ ಮರಿಯನ್ನು ನೋಡಿದನು. ಬಂಧುಗಳನ್ನಗಲಿ ತಾಯಿಯೂ ಸತ್ತುದರಿಂದ ದಿಕ್ಕಿಲ್ಲದೆ ಪ್ರಾಣಾಪಾಯಕ್ಕೆ ಸಿಕ್ಕಿಬಿದ್ದ ಆ ಮರಿಯಲ್ಲಿ ಕನಿಕರಗೊಂಡು, ಅದನ್ನು ಆ ಪ್ರವಾಹದಿಂದೆತ್ತಿ ತಂದು, ತನ್ನ ಆಶ್ರಮದಲ್ಲಿರಿಸಿ ಕಾಪಾಡುತಿದ್ದನು. ಆ ಭರತನಿಗೆ ಕ್ರಮಕ್ರಮವಾಗಿ, ಆ ಜಿಂಕೆಯ ಮರಿಯಲ್ಲಿ ತನ್ನದೆಂಬ ಅಭಿಮಾನವು ಹುಟ್ಟಿತು. ಪ್ರತಿದಿನವೂ ಅದಕ್ಕೆ ಕಾಲಕಾಲಕ್ಕೆ ಆಹಾರವನ್ನು ಕೊಡುತ್ತಿದ್ದನು. ಆಗಾಗ ಅದರ ಮೈಯನ್ನು ತೊಳೆದು ಶುದ್ಧಮಾಡುತಿದ್ದನು. ಹೊಟ್ಟೆಯಲ್ಲಿ ಹುಟ್ಟಿದ ಮಗುವಿನಂತೆ ಬಾರಿಬಾರಿಗೂ ಅದನ್ನು ಮುದ್ದಾಡಿ ಲಾಲಿಸುತಿದ್ದನು. ಹುಲಿ ಮೊದಲಾದ ಕಾಡುಮೃಗಗಳ ಕೈಗೆ ಸಿಕ್ಕದಂತೆ ಎಚ್ಚರದಿಂದ ಕಾಪಾಡುತ್ತ ಬಂದನು. ಹೀಗೆ ಆ ಭರತನು ಯಾವಾಗಲೂ ಆ ಜಿಂಕೆಯ ಮರಿಯನ್ನು ಬೆಳೆಸುವುದರಲ್ಲಿಯೇ ಆಸಕ್ತನಾಗಿದ್ದುದರಿಂದಲೂ, ಯಾವಾಗ

ಲೂ ಅದರ ಚಿಂತೆಯಲ್ಲಿಯೇ ಇದ್ದುದರಿಂದಲೂ, ಕ್ರಮಕ್ರಮವಾಗಿ ಆತನಿಗೆ ಭಗವದಾರಾಧನಾದಿಗಳಲ್ಲಿಯೂ, ಕರ್ಮಾನುಷ್ಠಾನದಲ್ಲಿಯೂ, ಶೌಚಾಚಾರಗಳಲ್ಲಿಯೂ, ದಿನದಿನಕ್ಕೆ ಅಕ್ಕರೆಯು ತಪ್ಪುತ್ತಬಂದಿತು ಅವನು ನಡೆಸುತಿದ್ದ ಧರ್ಮಗಳೆಲ್ಲವೂ ದಿನದಿನಕ್ಕೆ ತಗ್ಗುತ್ತಬಂದು, ಕೆಲವು ದಿನಗಳೊಳಗಾಗಿ ಸಮಸ್ತಧರ್ಮಗಳೂ ನಿಶ್ಶೇಷವಾಗಿ ನಷ್ಟವಾದುವು ಭರತನು ಆ ಜಿಂಕೆಯ ಮರಿಯನ್ನು ನೋಡಿದಾಗಲೆಲ್ಲಾ ತನ್ನ ಮನಸ್ಸಿನಲ್ಲಿ "ಅಯ್ಯೋ ಪಾಪಕ್ಕೆ! ಕಾಲವಶದಿಂದ ತಂದೆ ತಾಯಿ ಮೊದಲಾದ ತನ್ನ ಬಂಧುವರ್ಗವೆಲ್ಲವನ್ನೂ ಅಗಲಿ ಬಂದ ಈ ಜಿಂಕೆಯ ಮರಿಯು ಪ್ರವಾಹದಲ್ಲಿ ಬಿದ್ದು ಸಾಯುತ್ತಿತ್ತಲ್ಲಾ! ಇಂತಹ ದುರವಸ್ಥೆಗೆ ಸಿಕ್ಕಿಬಿದ್ದ ಈ ಪ್ರಾಣಿಯು ದೈವವಶದಿಂದ ನನ್ನ ಕೈಗೆ ಸಿಕ್ಕಿತು! ಈಗ ಈ ಮರಿಯು ನನ್ನನ್ನೇ ತಂದೆಯನ್ನಾಗಿಯೂ, ತಾಯನ್ನಾಗಿಯೂ ನಂಬಿರುವುದು ನನ್ನನ್ನು ಬಿಟ್ಟು ಬೇರೊಬ್ಬ ರಕ್ಷಕನನ್ನು ಕಾಣದು! ಇದು ಸರ್ವವಿಧದಲ್ಲಿಯೂ ನನ್ನನ್ನೇ ನಂಬಿರುವುದರಿಂದ, ಇದನ್ನು ಚೆನ್ನಾಗಿ ಪೋಷಿಸಿ ವೃದ್ಧಿಗೆ ತರಬೇಕಾದುದೇ ನನ್ನ ಅವಶ್ಯಕರ್ತವ್ಯವು. ಇದನ್ನು ಲಾಲಿಸಿ ಸಂತೋಷಪಡಿಸಬೇಕಾದುದೇ ನನಗೆ ಮುಖ್ಯಕಾರ್ಯವು ! ಇದರಿಂದ ನನ್ನ ಕಾರ್ಯಗಳೆಲ್ಲವೂ ಕೆಟ್ಟರೂ ಚಿಂತೆಯಿಲ್ಲ ! ಅದಕ್ಕಾಗಿ ಕೋಪಿಸದೆ, ಇದನ್ನು ನಾನು ಪೋಷಿಸುತ್ತಿರಬೇಕಾದುದೇ ಯುಕ್ತವು ವಿವೇಕಿಗಳಾದವರು ಮರೆಹೊಕ್ಕವರನ್ನು ಕಾಪಾಡದಿದ್ದರೆ ಬಹಳ ದೋಷಕ್ಕೆ ಗುರಿಯಾಗುವರು. ಪರೋಪಕಾರಿಗಳಾಗಿಯೂ, ಶಾಂತರಾಗಿಯೂ ಇರುವ ಪಂಡಿತರು, ಇಂತಹ ದೀನರಲ್ಲಿ ದಯೆಯನ್ನು ತೋರಿಸದೆ ಬಿಡರು! ಸಜ್ಜನರು, ಮರೆಹೊಕ್ಕವರನ್ನು ರಕ್ಷಿಸುವ ವಿಷಯದಲ್ಲಿ ಸ್ವಪ್ರಯೋಜನ ಹಾನಿಯನ್ನೂ ಸ್ವಲ್ಪಮಾತ್ರವೂ ಲಕ್ಷಿಸಲಾರರು." ಎಂದು ತನ್ನಲ್ಲಿ ತಾನೇ ಚಿಂತಿಸುತ್ತ, ಆ ಮರಿಯಲ್ಲಿ ಮೇಲೆಮೇಲೆ ಹೆಚ್ಚಾಗಿ ಪ್ರೀತಿಯನ್ನು ತೋರಿಸುತಿದ್ದನು. ಆದುಮೊದಲು ಆತನು ಪ್ರತಿದಿನವೂ ಆ ಜಿಂಕೆಯ ಮರಿಯೊಡನೆಯೇ ಕುಳಿತಿರುವನು ! ಯಾವಾಗಲೂ ಅದರೊಡನೆಯೇ ಆಡುತ್ತಿರುವನು! ಅದರೊಡನೆಯೇ ತಾನೂ ಗಡ್ಡೆಗೆಣಸುಗಳನ್ನು ತಿನ್ನುವನು! ಹೀಗೆ ಭರತನಿಗೆ ಆ ಜಿಂಕೆಯ ಮರಿಯಲ್ಲಿ ಮಿತಿಮೀರಿದ

ಸ್ನೇಹವುಂಟಾಯಿತು! ಒಮ್ಮೊಮ್ಮೆ ದರ್ಭೆಗಳನ್ನಾಗಲಿ,ಪುಷ್ಪಗಳನ್ನಾಗಲಿ, ನೀರನ್ನಾಗಲಿ ತರುವುದಕ್ಕಾಗಿ ತಾನು ಹೊರಗೆ ಹೋಗಬೇಕಾಗಿ ಬಂದಾಗ ಲೂ, ಹುಲಿ ತೋಳ, ಮುಂತಾದ ಕಾಡುಮೃಗಗಳಿಂದ ಆಜಿಂಕೆಗೆ ಏನಾದ ರೂ ಅಪಾಯವು ಸಂಭವಿಸಬಹುದೆಂಬ ಚಿಂತೆಯಿಂದ, ಅದನ್ನೂ ತನ್ನ ಸಂ ಗಡಲೇ ಕಾಡಿಗೆ ಕರೆದುಕೊಂಡು ಹೋಗುತಿದ್ದನು. ಕಾಡುದಾರಿಯಲ್ಲಿ ನಡೆ ಯುವಾಗ ಆ ಮೃಗವು ಅಶಕ್ತಿಯಿಂದಲೋ, ಅಜ್ಞಾನದಿಂದಲೋ, ತನ್ನೊಡನೆ ಬಾರದೆ, ಅಲ್ಲಲ್ಲಿ ಹಿಂದೆ ನಿಂತಾಗ, ತಾನೂ ಅದರೊಡನೆ ನಿಂತು ಬಿಡುತಿದ್ದನು! ಎಷ್ಟಾದರೂ ಅದು ಮುಂದೆ ನಡೆಯದಿದ್ದಸಂದ ರ್ಭದಲ್ಲಿ, ಅದನ್ನು ತಾನೇ ಹೆಗಲಮೇಲೆ ಹೊತ್ತುಕೊಂಡು ಮುಂದೆ ಸಾ ಗುತಿದ್ದನು. ಮತ್ತು ತಾನು ಕುಳಿತಾಗ ಅದನ್ನೂ ತನ್ನ ತೊಡೆಯಮೇಲೆ ಕುಳ್ಳಿರಿಸಿಕೊಳ್ಳುವನು! ತಾನು ಮಲಗುವಾಗ ಅದನ್ನು ತನ್ನ ಎದೆಯಮೇ ಲೆ ಮಲಗಿಸಿಕೊಳ್ಳುವನು. ಹೀಗೆ ಭರತನು ಮಿತಿಮೀರಿದ ಪ್ರೇಮದಿಂದ ಆ ಜಿಂಕೆಯನ್ನು ಬಾರಿಬಾರಿಗೂ ಮುದ್ದಿಸಿಲಾಲಿಸುತ್ತ, ಅದರಿಂದ ಬಹಳ ವಾಗಿ ಸಂತೋಷಿಸುತಿದ್ದನು. ಮತ್ತು ತನ್ನ ನಿತ್ಯನೈಮಿತ್ತಿಕಾದಿ ಕರ್ಮ ಗಳನ್ನು ನಡೆಸುತ್ತಿರುವಾಗಲೂ ನಡುನಡುವೆ ಆ ಜಿಂಕೆಯನ್ನು ನೆನೆಸಿ ಕೊಂಡು ಅದರಕಡೆಗೆ ತಿರುಗುವನು! ಅದು ಕಣ್ಣಿಗೆ ಬೀಳದಿದ್ದಾಗ,ಎದ್ದೆ ದ್ದು ನೋಡುವನು! ಅದನ್ನು ಕಂಡಮೇಲೆ ನೆಮ್ಮದಿಯಿಂದ ಕುಳ್ಳಿರುವ ನು! ಅದು ಕಣ್ಣಿಗೆ ಬಿದ್ದಾಗಲೆಲ್ಲಾ ಸಂತೋಷದಿಂದುಕ್ಕುತ್ತ, "ಓ ನನ್ನ ಮುದ್ದುಮರಿಯೆ? ನಿನಗೆ ಸರ್ವದೇಶ ಸರ್ವಕಾಲ ಸರ್ವಾವಸ್ಥೆಗ ಳಲ್ಲಿಯೂ ಕ್ಷೇಮವುಂಟಾಗುತ್ತಿರಲಿ!" ಎಂದು ಆಶೀರ್ವದಿಸುವನು. ಹೀಗಿರುವಾಗ ಒಮ್ಮೆ ಅಕಸ್ಮಾತ್ತಾಗಿ ಆ ಜಿಂಕೆಯು ಅವನ ಕಣ್ಣಿಗೆ ಕಾ ಣಿಸದೆಹೋಗಲು, ತನ್ನ ಆಸ್ತಿಯೆಲ್ಲವನ್ನೂ ಕಳೆದುಕೊಂಡವನಂತೆ, ಭಯ ದಿಂದ ತತ್ತಳಿಸುತ್ತ, ಅದನ್ನು ಕ್ಷಣಮಾತ್ರವೂ ಅಗಲಿರಲಾರದೆ,ಮೋಹಪರ ವಶನಾಗಿ ದುಃಖದಿಂದ ರೋದನಮಾಡತೊಡಗಿದನು. "ಅಯ್ಯೋ!ತಾಯ್ತಂ ದೆಗಳಿಲ್ಲದೆ ತಬ್ಬಲಿಯಾಗಿ ನನ್ನಲ್ಲಿ ಬಂದು ಸೇರಿದ ಆ ನನ್ನ ಮುದ್ದು ಮರಿಯು ಎಲ್ಲಿಯೋ ಕಾಣೆನಲ್ಲಾ! ಇನ್ನೇನುಗತಿ! ಅಯ್ಯೋ! ನಾನೆಂತಹ ದುಷ್ಟನು,

ಎಷ್ಟು ಕ್ರೂರಹೃದಯನು ನಾನೆಷ್ಟು ದುರ್ಭಾಗ್ಯನು! ಕಿರಾತನಂತೆ ನಿರ್ದ ಯನಾದ ನನ್ನನ್ನು ನಂಬಿ ಬಂದುದರಿಂದಲ್ಲವೇ ಆ ಮುದ್ದುಮೃಗಕ್ಕೆ ಈ ಅವ ಸ್ಥೆಯುಂಟಾಯಿತು! ಅಯ್ಯೋ! ನಾನು ಇಷ್ಟು ಎಚ್ಚರತಪ್ಪಿದವನೆಂಬುದ ನ್ನು ಕಾಣದೆ, ನನ್ನನ್ನು ಸಾಧುವೆಂದು ತಿಳಿದು ನನ್ನಲ್ಲಿ ಸೇರಿ ಮೋಸಹೋ ಯಿತು! ಹೇಗಾದರೂ ಆಗಲಿ! ದೈವಕೃಪೆಯಿಂದ ಅದು ಸಾಯದೆ ಬದುಕಿ ದ್ದು, ಈ ಆಶ್ರಮದಲ್ಲಿಯೇ ಎಲ್ಲಿಯಾದರೂ ಹುಲ್ಲುಮೇಯುತ್ತಿರುವುದನ್ನು ನಾನು ತಿರುಗಿ ಕಣ್ಣಾರೆ ಕಾಣುವೆನೆ! ಕಾಡಿನಲ್ಲಿ ಗುಂಪಾಗಿ ಸಂಚರಿಸತಕ್ಕ ತೋಳ ನಾಯಿ ಮುಂತಾದುವಾಗಲಿ, ಒಂಟಿಯಾಗಿ ಹೊಂಚುಹಾಕತಕ್ಕ ಹುಲಿ ಮುಂತಾದುವಾಗಲಿ ಅದನ್ನು ಭಕ್ಷಿಸದೆ ಬಿಡುವುದೆ? ಲೋಕಕ್ಷೇ ಮಕ್ಕಾಗಿ ಉದಿಸಿ ಸಂಚಾರಮಾಡುತ್ತಿದ್ದ ಸೂರ್ಯನೂ ಅಸ್ತಮಿಸುತ್ತಿರುವ ನಲ್ಲಾ! ಅಯ್ಯೋ! ಇನ್ನೂ ಆ ನನ್ನ ಮುದ್ದುಮೃಗವು ನನ್ನ ಬಳಿಗೆ ಬಂದು ಸೇರಲಿಲ್ಲವಲ್ಲಾ! ಆ ನನ್ನ ಜಿಂಕೆಯ ಮರಿಯೆಂಬ ರಾಜಕುಮಾರನು ತನ್ನ ಜಾತಿಗೆ ಸಹಜವಾದ ಮತ್ತು ಮನೋಹರವಾದ ತನ್ನ ಆಟಗಳಿಂದ ದುರ್ಭಾಗ್ಯನಾದ ನನ್ನ ಮನಸ್ಸನ್ನು ತಿರುಗಿ ಯಾವಾಗ ಆನಂದಪಡಿಸುವ ನೋ ಕಾಣೆನು! ಆಗಾಗ ನನ್ನೊಡನೆ ಸೇರಿ ಆಟವಾಡುತ್ತಿರುವಾಗ. ನಾನು ಸುಳ್ಳುಸುಳ್ಳಾಗಿ ತಪಸ್ಸುಮಾಡುವಂತೆ ಕಣ್ಣುಮುಚ್ಚಿ ಕುಳಿತರೆ, ಆ ನನ್ನ ಮುದ್ದುಮೃಗವು ನನ್ನಲ್ಲಿ ಪ್ರಣಯಕೋಪವನ್ನು ತೋರಿಸುತ್ತ ಬಂದು, ಜಲಧಾರೆಯಂತೆ ಮೃದುವಾದ ತನ್ನ ಕೊಂಬಿನ ತುದಿಯಿಂದ ಬಾರಿಬಾರಿಗೂ ಭಯಪಟ್ಟು ನನ್ನನ್ನು ಸವರುತಿದ್ದಿತಲ್ಲಾ! ಅಂತಹ ನನ್ನ ಮು ದ್ದುಮರಿಯನ್ನು ನಾನು ತಿರುಗಿ ಕಾಣುವೆನೆ? ಒಮ್ಮೊಮ್ಮೆ ಆ ಮೃಗವು ಕು ಚೇಷ್ಟೆಗಾಗಿ ನಾನು ದರ್ಭೆಗಳಲ್ಲಿ ಮುಚ್ಚಿಟ್ಟ ಹವಿಸ್ಸುಗಳನ್ನು ಬಾಯಿಂದ ಕಡಿದು,ಅಶುದ್ಧವಾಗಿ ಮಾಡುವುದುಂಟು! ಅದಕ್ಕಾಗಿ ನಾನು ಕೋಪದಿಂದ ಗರ್ಜಿಸಿ ಹೆದರಿಸಿದಾಗ, ಆಕ್ಷಣವೇ ತನ್ನ ಆಟಗಳೆಲ್ಲವನ್ನೂ ಬಿಟ್ಟು ಜಿತೇಂ ದ್ರಿಯನಾದ ಋಷಿಕುಮಾರನಂತೆ ಸದ್ದಿಲ್ಲದೆ ನನ್ನ ಮುಂದೆ ಕುಳಿತಿರುವುದ ಲ್ಲಾ! ಅಂತಹ ನನ್ನ ಮುದ್ದುಮೃಗವು ಇನ್ನೂ ಏಕೆ ಬರಲಿಲ್ಲವೋ ಕಾಣೆನು" ಎಂದು ಆ ಮೃಗದ ಚಿಂತೆಯಿಂದ ವಿಲಪಿಸುತ್ತ, ಪರ್ಣಶಾಲೆಯನ್ನು ಬಿಟ್ಟು,

ಹೊರಗೆ ಬಂದನು. ಆಶ್ರಮದ ಹೊರಗೆ ಆ ಮೃಗದ ಹೆಜ್ಜೆಯ ಗುರುತುಗ
ಳಿಂದ ಕೂಡಿದ ಭೂಪ್ರದೇಶವನ್ನು ನೋಡಿ ಮತ್ತಷ್ಟು ದುಃಖದಿಂದ
ವಿಲಪಿಸುವನು ''ಆಹಾ! ಈ ಭೂದೇವಿಯು ಎಂತಹ ಭಾಗ್ಯಶಾಲಿನಿಯೋ!
ಆ ನನ್ನ ಮುದ್ದುಮೃಗದ ಅಂದವಾದ ಹೆಜ್ಜೆಯಗುರುತುಗಳನ್ನು ತನ್ನ ಮೈ
ಗೆ ಭೂಷಣವಾಗಿ ಧರಿಸಿರುವ ಈ ಭೂದೇವಿಯು ಪೂರ್ವಜನ್ಮದಲ್ಲಿ ಎಷ್ಟುಪು
ಣ್ಯವನ್ನು ಮಾಡಿದ್ದಳೋ! ಆಹಾ! ಈ ಪಾದರೇಖೆಗಳು ಎಷ್ಟು ಮಂಗಳಕರ
ಗಳಾಗಿರುವುವು! ಎಷ್ಟು ದಟ್ಟವಾಗಿರುವುವು! ಅದರ ಪಾದರೇಖೆಗಳನ್ನು
ಹೊತ್ತಿರುವ ಈ ಭೂಮಿಯಾದರೂ, ನನಗೆ ಸರ್ವಸ್ವದಂತಿದ್ದ ಆ ಜಿಂಕೆಯ
ಮರಿಯು ಹೋದದಾರಿಯನ್ನು ತೋರಿಸಿಕೊಡಬಾರದೆ! * ಈ ಭೂಭಾ
ಗವು ಆ ಕೃಷ್ಣಸಾರಮೃಗದ ಹೆಜ್ಜೆಯ ಗುರುತುಗಳಿಂದಲಂಕೃತವಾಗಿ
ಯಜ್ಞಾದಿಕಾರ್ಯಗಳಿಂದ ಇಷ್ಟಸಿದ್ಧಿಯನ್ನು ಪಡೆಯುವುದಕ್ಕೆ ತಾನು ತಕ್ಕ
ಸ್ಥಾನವೆಂದು ಚೆನ್ನಾಗಿ ತೋರಿಸುತ್ತಿರುವುದು, ಓಹೋ! ಬಂದುವೇಳೆ ಇಂತ
ಹ ಬಡಪ್ರಾಣಿಗಳಲ್ಲಿ ದಯಾಳುವಾದ ಚಂದ್ರನು, ತಾಯಿಲ್ಲದೆ ತಬ್ಬಲಿಯಾದ
ಆ ಮೃಗಶಿಶುವನ್ನು ನೋಡಿ ಕನಿಕರಗೊಂಡು, ಹುಲಿ ಮೊದಲಾದ ಕ್ರೂರಜಂ
ತುಗಳ ಬಾಯಿಗೆ ಬೀಳದಂತೆ ರಕ್ಷಿಸುವುದಕ್ಕಾಗಿ ತನ್ನಲ್ಲಿ ಕರೆದಿಟ್ಟುಕೊಂಡು
ರಕ್ಷಿಸುತ್ತಿರಬಹುದೆ?! ಆಹಾ! ನನ್ನ ಮೈಮೇಲೆ ಬೀಳತಕ್ಕ ಈ ಬೆಳದಿಂಗಳು
ಎಷ್ಟು ಸುಖಕರವಾಗಿರುವುದು! ಆ ಜಿಂಕೆಯನ್ನು ಕಾಣದ ದುಃಖವೆಂಬ
ದಾವಾಗ್ನಿಯಿಂದ ನನ್ನ ಹೃದಯವು ದಗ್ಧವಾಗುತ್ತಿದ್ದರೂ, ಆ ಸಂಕಟವ
ನ್ನೂ ಲಕ್ಷ್ಯಮಾಡದೆ, ನಾನು ಆ ಜಿಂಕೆಯನ್ನು ಹುಡುಕುವುದಕ್ಕಾಗಿ ಅಲೆ
ಯುತ್ತಿರುವುದನ್ನು ನೋಡಿ, ದಯಾಳುವಾದ ಈ ಚಂದ್ರನು ನನ್ನಲ್ಲಿ ಕನಿ
ಕರಗೊಂಡು, ಪ್ರೀತಿಸೂಚಕವಾದ ಆನಂದ ಬಾಷ್ಪದಂತೆ ತಂಪಾಗಿಯೂ,
ಅನುರಾಗವರ್ಧಕವಾಗಿಯೂ ಇರುವ ಅಮೃತಮಯವಾದ ಕಿರಣಗ
ಳಿಂದ ನನ್ನ ತಾಪವನ್ನು ನೀಗಿಸುತ್ತಿರುವನು. ಹೀಗೆಂದು ಭರತನು

* ''ಯಸ್ಮಿನ್ ದೇಶೇ ಕೃಷ್ಣಮೃಗಸ್ತಸ್ಮಿನ್ ಧರ್ಮಾನ್ ನಿಬೋಧತ" ಎಂಬ ಪ್ರಮಾಣದಿಂದ ಕೃಷ್ಣಮೃಗವಿದ್ದ ಸ್ಥಾನವು ಪವಿತ್ರವೆಂದೂ ಕರ್ಮಯೋಗ್ಯವೆಂದೂ ಗ್ರಾಹ್ಯವು.

ಹಲವು ಬಗೆಯ ಮನೋರಥಗಳಿಂದ ಕಳವಳಿಸಿ ರೋದಿಸುತಿದ್ದನು. ಆ ಜಿಂಕೆಯ ಮರಿಯೆಂಬ ಪ್ರಾರಬ್ಧಕರ್ಮವು ಆತನ ಯೋಗಮಾರ್ಗಕ್ಕೆ ವಿಘ್ನವನ್ನುಂಟುಮಾಡಿದುದರಿಂದ, ಅವನು ನಡೆಸುತಿದ್ದ ಕರ್ಮಜ್ಞಾನ ಭಕ್ತಿಯೋಗಗಳೆಲ್ಲವೂ ಬಿಟ್ಟುಹೋದುವು. ಎಲೈ ಪರೀಕ್ಷಿದ್ರಾಜನೆ! ಪ್ರಾರಬ್ಧಕರ್ಮವೆಂಬುದು ಯೋಗನಿಷ್ಠನಾದ ಭರತನಿಗೂ ಯಾವ ಸ್ಥಿತಿಯನ್ನು ತಂದಿಟ್ಟಿತು ನೋಡಿದೆಯಾ? ಆ ಭರತನಿಗೆ ಈವಿಧವಾದ ಅವಸ್ಥೆಗಳೆಲ್ಲವೂ ಬಂದು ಸೇರುವುದಕ್ಕೆ ಅವನ ಪ್ರಾರಬ್ಧವೇ ಕಾರಣವು! ಇಲ್ಲದಿದ್ದರೆ ಮನುಷ್ಯಜಾತಿಯಲ್ಲಿ ಹುಟ್ಟಿದ ಭರತನಿಗೆ, ವಿಜಾತೀಯವಾದ ಆ ಜಿಂಕೆಯಲ್ಲಿ ಅಷ್ಟೊಂದು ಮೋಹವುಂಟಾಗುತಿತ್ತೆ? ಮೋಕ್ಷವಿರೋಧಿಗಳೆಂಬ ಭಾವದಿಂದ ತನ್ನ ಹೆಂಡಿರುಮಕ್ಕಳನ್ನೇ ಬಿಟ್ಟುಬಂದ ಭರತನು,ಆ ಕಾಡುಜಿಂಕೆಯನ್ನು ಬಿಟ್ಟಿರಲಾರದೆ ಸಂಕಟಪಡಬೇಕಾದರೆ, ಇದು ಅವನ ಪ್ರಾರಬ್ಧವಲ್ಲದೆ ಬೇರೇನು? ಈ ಜಿಂಕೆಯ ಮರಿಯೆಂಬ ವಿಘ್ನದಿಂದ ತನ್ನ ಯೋಗಾಭ್ಯಾಸವೆಲ್ಲವೂ ನಷ್ಟವಾದರೂ, ಅದನ್ನೂ ತಿಳಿಯಲಾರದೆ, ಯಾವಾಗಲೂ ಆ ಮೃಗವನ್ನು ಮುದ್ದಾಡುತ್ತ, ತನ್ನ ದೇಹವನ್ನೇ ತಾನು ಮರೆತಿದ್ದನು ಹೀಗೆ ಎಚ್ಚರತಪ್ಪಿದ್ದ ಆ ಭರತನಿಗೆ, ದುರ್ನಿವಾರವಾದ ಮೃತ್ಯುಕಾಲವು ಸಮೀಪಿಸಿತು, ಸರ್ಪವು ಮಹಾವೇಗದಿಂದ ಇಲಿಯ ಬಿಲವನ್ನು ಪ್ರವೇಶಿಸುವಂತೆ, ಮೃತ್ಯುವು ಅವನ ದೇಹವನ್ನೊಳಹೊಕ್ಕಿತು. ತನ್ನ ಮರಣಕಾಲದಲ್ಲಿಯೂ! ಹೊಟ್ಟೆಯಲ್ಲಿ ಹುಟ್ಟಿದ ಮಗನಂತೆ ಪಕ್ಕದಲ್ಲಿ ಕುಳಿತು ದುಃಖಿಸುತ್ತಿರುವ ಆ ಜಿಂಕೆಯ ಮರಿಯನ್ನು ನೋಡುತ್ತ ಅದರಲ್ಲಿಯೇ ನಟ್ಟಮನಸ್ಸುಳ್ಳವನಾಗಿ, ಆ ಮೃಗದ ಸಂಗಡಲೇ ತನ್ನ ದೇಹವನ್ನೂ ಬಿಟ್ಟನು. ಅವನಿಗೆ ಪೂರ್ವವಾಸನೆಯು ಬಿಟ್ಟು ಹೋಗದುದರಿಂದಲೂ, * ಅಂತ್ಯಕಾಲದಲ್ಲಿಯೂ ಅವನು ಮೃಗವನ್ನೇ ಸ್ಮರಿಸುತ್ತ ದೇಹವನ್ನು ಬಿಟ್ಟುದರಿಂದಲೂ, ತಿರುಗಿ ಜಿಂಕೆಯ ರೂಪದಿಂದ ಹುಟ್ಟಿದನು.

---

* ಇಲ್ಲಿ "ಯಂಯಂ ವಾಪಿ ಸ್ಮರನ್ಭಾವಂ ತ್ಯಜತ್ಯಂತೇ ಕಳೇಬರಮ್ । ತಂತಮೇವೇತಿ ಕೌಂತೇಯ ಸದಾತದ್ಭಾವ ಭಾವಿತಃ" ಎಂಬ ಭಗವದ್ಗೀತಾವಾಕ್ಯವು ಅನುಸಂಧೇಯವು.

ರಾಜೇಂದ್ರಾ ! ಅವನು ಹೀಗೆ ಮೃಗಜನ್ಮದಲ್ಲಿ ಹುಟ್ಟಿದ್ದರೂ, ಪೂರ್ವ ಜನ್ಮದಲ್ಲಿ ಅವನು ನಡೆಸುತಿದ್ದ ಭಗವದಾರಾಧನದ ಪ್ರಭಾವದಿಂದ, ಅವ ನಿಗೆ ತಾನು ಈ ಮೃಗಜನ್ಮವನ್ನು ಹೊಂದುವುದಕ್ಕೆ ಕಾರಣವೇನೆಂಬುದು ತಿಳಿದು ಬಂದಿತು ಹಿಂದೆ ತನಗೆ ಜಿಂಕೆಯ ಮರಿಯಲ್ಲಿದ್ದ ಮೋಹವೇ ತನ್ನ ಮೃಗಜನ್ಮಕ್ಕೆ ಕಾರಣವೆಂಬುದನ್ನು ತಿಳಿದು, ಅದಕ್ಕಾಗಿ ಮನಸ್ಸಿನಲ್ಲಿ ಹೀ ಗೆಂದು ಪರಿತಪಿಸುವನು. “ಅಯ್ಯೋ! ನಾನೆಷ್ಟು ದುರ್ಭಾಗ್ಯನು! ಮೊದಲು ನಾನು ಜ್ಞಾನಿಗಳ ಮಾರ್ಗವನ್ನವಲಂಬಿಸಿದ್ದರೂ, ನಡುವೆ ಬಂದ ವಿಘ್ನ ದಿಂದ ಅದನ್ನು ಬಿಟ್ಟು ತಪ್ಪುದಾರಿಗೆ ಹೋದೆನು. ಆಹಾ! ಎಂತಹ ಕಷ್ಟ ವು ! ನಾನು ಪೂರ್ವದಲ್ಲಿ ಸರ್ವಸಂಗಪರಿತ್ಯಾಗಮಾಡಿ, ಜಿತೇಂದ್ರಿಯ ನಾಗಿ,ನಿರ್ಜನವಾದ ಅರಣ್ಯದಲ್ಲಿದ್ದು, ಭಗವತ್ಕಥೆಗಳನ್ನು ಕೇಳುವುದರಿಂದ ಲೂ,ಆತನ ರೂಪವನ್ನು ಧ್ಯಾನಿಸುವುದರಿಂದಲೂ,ಅವನನ್ನು ಕೀರ್ತಿಸುವುದ ರಿಂದಲೂ,ಆ ಭಗವಂತನಲ್ಲಿಯೇ ಮನಸ್ಸನ್ನು ನೆಲೆಗೊಳಿಸಿದ್ದೆನು ಹೀಗೆ ಇತ ರಚಿಂತೆಯೆಲ್ಲವನ್ನೂ ಬಿಟ್ಟು ಪ್ರಯತ್ನಪೂರ್ವಕವಾಗಿ ಭಗವಂತನಲ್ಲಿ ನಿಲ್ಲಿಸಿ ದ್ದ ಮನಸ್ಸನ್ನು, ನಾನು ಬುದ್ಧಿಗೆಟ್ಟು ಒಂದು ಜಿಂಕೆಯ ಮರಿಯಲ್ಲಿಟ್ಟಿ ನಾದುದರಿಂದ, ಆ ಮನಸ್ಸು ಅದೇ ಮಾರ್ಗವನ್ನು ಹಿಡಿದು, ಯೋಗಮಾ ರ್ಗದಿಂದ ನನ್ನನ್ನು ತಪ್ಪಿಸಿಬಿಟ್ಟಿತು. ಆಹಾ ! ನಾನು ಎಂತಹ ಅವಿವೇಕಿ ಯು!”ಎಂದು ತನ್ನಲ್ಲಿ ತಾನು ಪಶ್ಚಾತ್ತಾಪಗೊಂಡು,ಆಗಲೇ ತನ್ನ ತಾಯಿ ಯನ್ನೂ, ತನ್ನ ಮಂದೆಯನ್ನೂ ಬಿಟ್ಟು, ತಾನಿದ್ದ ಕಾಲಂಜರವೆಂಬ ಪರ್ವ ತಪ್ರಾಂತದಿಂದ ಹೊರಟು,ಪೂರ್ವಜನ್ಮದಲ್ಲಿ ತಾನು ತಪಸ್ಸುಮಾಡುತಿದ್ದ ಸಾಲಗ್ರಾಮವೆಂಬ ಕ್ಷೇತ್ರಕ್ಕೇ ಬಂದು ಸೇರಿತು. ಮಹರ್ಷಿಗಳಿಗೆ ಪ್ರಿಯ ವಾಗಿಯೂ, ಸಿದ್ಧಿಸ್ಥಾನವಾಗಿಯೂ ಇರುವ ಆ ಪುಲಹಾಶ್ರಮದಲ್ಲಿ, ಏಕಾ ಕಿಯಾಗಿದ್ದು, ತನ್ನ ದೇಹಾವಸಾನವನ್ನು ನಿರೀಕ್ಷಿಸುತ್ತ, ತಿರುಗಿ ತನಗೆ ಬೇರೆ ಯಾವ ವಿಷಯಚಿಂತೆಯು ತಗುಲುಕಟ್ಟುವುದೋ ಎಂಬ ಭಯದಿಂದ, ಅ ತ್ತಿತ್ತ ಕದಲದೆ, ಬೇರೆ ಯಾವುದನ್ನೂ ಕಣ್ಣೆತ್ತಿ ನೋಡದೆ, ತರಗೆಲೆಯನ್ನು ತಿಂದು ಕಾಲವನ್ನು ಕಳೆಯುತಿತ್ತು. ತನ್ನ ಪ್ರಾರಬ್ಧಕರ್ಮವು ತೀರುತ್ತ ಬಂದು,ದೇಹಾವಸಾನವುಸಮೀಪಿಸಿದೊಡನೆ,ಅರ್ಧದೇಹವುಮುಳುಗುವಂತೆ

ನದಿಯಲ್ಲಿ ಪ್ರವೇಶಿಸಿ, ಅಲ್ಲಿಯೇ ಆ ದೇಹವನ್ನು ತೊರೆದು ಬಿಟ್ಟಿತು ಇದು ಎಂಟನೆಯ ಅಧ್ಯಾಯವು.

---

{ ಭರತನು ಮೃಗಶರೀರವನ್ನು ತೊರೆದಮೇಲೆ ತಿರುಗಿ ಬ್ರಾಹ್ಮಣಕುಮಾರನಾಗಿ ಹುಟ್ಟಿದುದು. }

ರಾಜೇಂದ್ರಾ ಕೇಳು ! ಇದು ಹೀಗಿರಲು, ಆಂಗಿರಸಗೋತ್ರದಲ್ಲಿ ಹುಟ್ಟಿದ ಬ್ರಾಹ್ಮಣೋತ್ತಮನೊಬ್ಬನಿದ್ದನು ಆತನು ಶಮ, ದಮ, ತಪಸ್ಸು, ವೇದಾಧ್ಯಯನ, ವೇದವನ್ನೋದಿಸುವುದು. ದೈವಾಧೀನವಾಗಿ ತನಗೆ ಸಿಕ್ಕಿದುದರಲ್ಲಿ ತೃಪ್ತಿ, ತಾಳ್ಮೆ, ವಿನಯ, ಔದಾರ್ಯ, ಶಾಸ್ತ್ರಜ್ಞಾನ, ಅಸೂಯೆಯಿಲ್ಲದಿರುವುದು, ಆತ್ಮಜ್ಞಾನದಿಂದ ಬ್ರಹ್ಮಾನಂದವನ್ನನುಭವಿಸತಕ್ಕ ಭಕ್ತಿ, ಮುಂತಾದ ಎಲ್ಲಾ ಸದ್ಗುಣಗಳಿಂದಲೂ ಕೂಡಿದ್ದನು. ಆ ಬ್ರಾಹ್ಮಣೋತ್ತಮನಿಗೆ ಹಿರಿಯಹೆಂಡತಿಯಲ್ಲಿ ಒಂಭತ್ತುಮಂದಿ ಗಂಡುಮಕ್ಕಳು ಹುಟ್ಟಿದರು ಅವರೆಲ್ಲರೂ ಶಾಸ್ತ್ರಶ್ರವಣದಲ್ಲಿಯೂ, ನಡತೆಯಲ್ಲಿಯೂ, ಆಚಾರದಲ್ಲಿಯೂ, ರೂಪೌದಾರ್ಯಾದಿಗುಣಗಳಲ್ಲಿಯೂ ತಮ್ಮ ತಂದೆಯನ್ನೇ ಹೋಲುತಿದ್ದರು ಅದೇ ಬ್ರಾಹ್ಮಣನಿಗೆ ಕಿರಿಯ ಹೆಂಡತಿಯಲ್ಲಿ,ಒಂದು ಹೆಣ್ಣು ಶಿಶುವೂ,ಒಂದು ಗಂಡು ಶಿಶುವೊ ಜನಿಸಿತು ಆ ಎರಡು ಮಕ್ಕಳಲ್ಲಿ ಪುರುಷಶಿಶುವೇ, ಪೂರ್ವದಲ್ಲಿ ಭಾಗವತಶ್ರೇಷ್ಠನಾಗಿಯೂ, ರಾಜರ್ಷಿಗಳಲ್ಲಿ ಪ್ರಮುಖನಾಗಿಯೂ, ಇದ್ದು, ಇದರ ಹಿಂದಿನ ಜನ್ಮದಲ್ಲಿ ಹುಲ್ಲೆಯಾಗಿ ಹುಟ್ಟಿ ಆ ಶರೀರವನ್ನು ನೀಗಿದ ಭರತನೆಂದೂ, ಆ ಶರೀರವನ್ನು ಬಿಟ್ಟಮೇಲೆ, ಅವನು ಮುಕ್ತಿಯನ್ನು ಹೊಂದಿದುದರಿಂದ, ಅವನಿಗೆ ಅದೇ ಕೊನೆಯಶರೀರವೆಂದೂ ಹೇಳುವರು ಈ ಬ್ರಾಹ್ಮಣಜನ್ಮದಲ್ಲಿಯೂ ಅವನು ಭಗವದನುಗ್ರಹದಿಂದ ಪೂರ್ವಜನ್ಮದ ಸ್ಮರಣೆಯುಳ್ಳವನಾಗಿದ್ದನು. ಬಂಧುಗಳ ಸಹವಾಸದಲ್ಲಿದ್ದರೆ ಹಿಂದಿನಂತೆ ತಿರುಗಿ ಜನ್ಮಾಂತರವನ್ನು ಹೊಂದಬೇಕಾಗುವುದೆಂಬ ಭಯದಿಂದ, ಯಾವಾಗಲೂ ತಾನು ಪ್ರತ್ಯೇಕವಾಗಿಯೇ ಇರುತಿದ್ದನು. ಪ್ರಾರಬ್ಧಕರ್ಮಗಳನ್ನು ನೀಗಿಸತಕ್ಕ ಆ ಭಗವಂತನ ಗುಣಗಳನ್ನು ಕೇಳುವುದು, ಆತನನ್ನು ಸ್ಮರಿಸುವು

ದು, ಭಗವದ್ಗುಣಗಳನ್ನು ಕೀರ್ತಿಸುವುದು, ಆತನ ಪಾದಾರವಿಂದಗಳನ್ನು ಧ್ಯಾನಿಸುವುದು, ಇವೇ ಮೊದಲಾದ ಕಾರ್ಯಗಳಿಂದಲೇ ಕಾಲವನ್ನು ಕಳೆಯುತಿದ್ದನು. ಮತ್ತು ಹೇಗಾದರೂ ಜನರ ಸಹವಾಸವನ್ನು ತಪ್ಪಿಸಿಕೊಳ್ಳುವುದಕ್ಕಾಗಿ ಹುಚ್ಚನಂತೆಯೂ, ಕಿವುಡನಂತೆಯೂ, ಕುರುಡನಂತೆಯೂ ನಟಿಸುತಿದ್ದನು. ಇದನ್ನು ನೋಡಿ ಇವನ ತಂದೆಯು ಅವನು ಹುಚ್ಚನಂತೆ ಕಾಣುತಿದ್ದರೂ, ಪುತ್ರಸ್ನೇಹದಿಂದ ಅವನನ್ನು ಬಿಟ್ಟಿರಲಾರದೆ ಮನಸ್ಸಿನಲ್ಲಿ ಕೊರಗುತ್ತಿದ್ದನು ಅವನಿಗೆ ವಿವಾಹಮಾಡುವುದಕ್ಕೆ ಹೆಣ್ಣು ಸಿಕ್ಕದಿದ್ದರೂ, ವ್ರತಸಮಾವರ್ತನದವರೆಗೆ ನಡೆಸತಕ್ಕ ಸಂಸ್ಕಾರಗಳನ್ನಾದರೂ ನಡೆಸಬೇಕೆಂದು ನಿಶ್ಚಯಿಸಿ, ಉಪನಯನವನ್ನು ಮಾಡಿದನು. ಭರತನಾದರೋ ಪೂರ್ವವಾಸನೆಯಿಂದಲೇ ಎಲ್ಲವನ್ನೂ ತಿಳಿದಿದ್ದುದರಿಂದ, ಅವನಿಗೆ ಕಲಿಸಿಕೊಡಬೇಕಾದುದೊಂದೂ ಇರಲಿಲ್ಲ! ತಂದೆಯು ಅದನ್ನು ತಿಳಿಯದೆ,ಮಗನಿಗೆ ವಿದ್ಯಾಭ್ಯಾಸವನ್ನು ಮಾಡಿಸಬೇಕಾದುದವಶ್ಯವೆಂದು ತಿಳಿದು, ಶೌಚಾಚಾರಗಳೇ ಮುಂತಾದ ಕರ್ಮನಿಯಮಗಳೆಲ್ಲವನ್ನೂ ಕಲಿಸುತ್ತಬಂದನು. ಭರತನಾದರೋ, ಹೇಗಾದರೂ ಆ ತಂದೆಯ ನಿರ್ಬಂಧದಿಂದ ತಪ್ಪಿಸಿಕೊಂಡು ಹೋಗುವುದಕ್ಕೆ ಪ್ರಯತ್ನಿಸುತ್ತ, ತಂದೆಯು ಸಮೀಪದಲ್ಲಿರುವಾಗಲೇ ಅವನ ಇಷ್ಟಕ್ಕೆ ವಿರುದ್ಧವಾಗಿ, ಅಸಂಬದ್ಧವಾದ ಕಾರ್ಯಗಳನ್ನು ನಡೆಸುತ್ತ, ಏನೂ ತಿಳಿಯದ ಮೂಢನಂತೆ ಕಾಣಿಸಿಕೊಳ್ಳುತ್ತಿದ್ದನು. ತಂದೆಯೂಕೂಡ ತನ್ನಪ್ರಯತ್ನವನ್ನು ಬಿಡದೆ ಮಗನನ್ನು ಹೇಗಾದರೂ ಶಿಕ್ಷಿಸಿ ಅವನಿಗೆ ವೇದವನ್ನು ಕಲಿಸಬೇಕೆಂಬ ದೃಢಪ್ರಯತ್ನದಿಂದ,ವ್ಯಾಹೃತಿ,ಪ್ರಣವ, ಶಿರಸ್ಸು, ಎಂಬ ಮೂರುಪಾದಗಳಿಂದ ಕೂಡಿದಗಾಯತ್ರಿಯನ್ನು,ವಸಂತ ಗ್ರೀಷ್ಮಋತುಗಳಿಗೆ ಸೇರಿದ ನಾಲ್ಕುತಿಂಗಳಲ್ಲಿ, ಎಡೆಬಿಡದೆ ಸಂತೆಹೇಳುತ್ತಿದ್ದನು ಎಷ್ಟೆಷ್ಟು ಹೇಳಿದರೂ, ಭರತನು ಸ್ವರವರ್ಣಗಳನ್ನು ವಿಪರೀತವಾಗಿಯೇ ಉಚ್ಚರಿಸುತಿದ್ದನೇಹೊರತು, ಒಂದಾವರ್ತಿಯಾದರೂ ಅವನ ಬಾಯಿಂದ ಸರಿಯಾಗಿ ಹೊರಡಲಿಲ್ಲ.ತಂದೆಯು ಎಷ್ಟೆಷ್ಟು ನಿರ್ಬಂಧಿಪಡಿಸಿ ಹೇಳಿಕೊಟ್ಟರೂ, ಅದನ್ನು ತಾನು ಗ್ರಹಿಸಲಾರದವನಂತೆಯೇ ನಟಿಸುತಿದ್ದನು. ಇಷ್ಟಾದರೂ ಆಂಗೀರಸನಿಗೆ ಪುತ್ರವಾತ್ಸಲ್ಯವು ತಪ್ಪಲಿಲ್ಲ. ಹೀಗೆ

ಪುತ್ರವಾತ್ಸಲ್ಯದಿಂದ ಕೊರಗುತಿದ್ದ ಆಂಗಿರಸನು, ತನ್ನ ಮಗನಿಗೆ ಬ್ರಹ್ಮ ಚರ್ಯವ್ರತಕ್ಕೆ ಯೋಗ್ಯವಾದ ಶೌಚ, ಆಚಮನ, ಕಾಂಡವ್ರತ, ಗುರು ಶುಶ್ರೂಷೆ, ಅಗ್ನಿಶುಶ್ರೂಷೆ ಮುಂತಾದ ನಿಯಮಗಳೆಲ್ಲವನ್ನೂ ಬಾರಿಬಾರಿ ಗೂ ಕಲಿಸುತ್ತಲೇ ಇದ್ದನು. ಜನ್ಮಾಂತರಸಂಸ್ಕಾರದಿಂದಲೇ ಭರತನು ಇವೆಲ್ಲವನ್ನೂ ಚೆನ್ನಾಗಿ ಬಲ್ಲವನಾದುದರಿಂದ, ಅವನ ಮನಸ್ಸಿಗೆ ಇದೊಂ ದೂ ರುಚಿಸಲಿಲ್ಲ ತಂದೆಗೆ ಈ ಸೂಕ್ಷ್ಮಾಂಶವು ಸ್ವಲ್ಪವೂ ಗೊತ್ತಿಲ್ಲವಾದು ದರಿಂದ, ಹೇಗಾದರೂ ಮಗನಿಗೆ ಬುದ್ಧಿಯನ್ನು ಕಲಿಸಬೇಕೆಂಬ ಹಟದಿಂದ ಎಷ್ಟೆಷ್ಟೋ ಕಷ್ಟಪಡುತ್ತಿದ್ದನು ಇವನ ಪ್ರಯತ್ನವೆಲ್ಲವೂ ವಿಫಲವಾ ಯಿತು! ಇಷ್ಟರಲ್ಲಿಯೇ ಆ ಬ್ರಾಹ್ಮಣನಿಗೆ ಆಯುಃಕಾಲವು ಮುಗಿಯುತ್ತ ಬಂದಿತು ಹೆಂಡಿರು ಮಕ್ಕಳೆಂಬ ಅಭಿಮಾನದಿಂದ, ಕುಟುಂಬಪೋಷಣೆ ಯಲ್ಲಿ ನಿರತನಾಗಿ, ತಾನು ಸಾಯುವೆನೆಂಬ ಯೋಚನೆಯೇ ಇಲ್ಲದೆ ಮೈಮರೆತಿದ್ದಾಗ, ಇವನನ್ನು ಕೊಲ್ಲುವುದಕ್ಕಾಗಿ ಹೊಂಚುಹಾಕುತಿದ್ದ ಮೃತ್ಯುವು ಮೇಲೆ ಬಿದ್ದಿತು ಈ ಆಂಗೀರಸನ ಕಿರಿಯ ಹೆಂಡತಿಯು ತನ್ನ ಮಗನನ್ನೂ, ಮಗಳನ್ನೂ ಹಿರಿಯವಳ ವಶಕ್ಕೆ ಒಪ್ಪಿಸಿ, ತಾನೂ ಸಹಗಮನ ವನ್ನುಮಾಡಿ ಪರಲೋಕವನ್ನು ಸೇರಿದಳು ಕರ್ಮಪ್ರಧಾನವಾದ ವೇದ ಮಾರ್ಗದಲ್ಲಿಯೇ ಬುದ್ಧಿಮೋಹಗೊಂಡವರಾಗಿಯೂ, ಆತ್ಮವಿದ್ಯೆಯಲ್ಲಿ ಅಕ್ಕರೆಯಿಲ್ಲದವರಾಗಿಯೂ ಇದ್ದ ಆ ಅಂಗಿರಸನ ಒಂಬತ್ತುಮಂದಿ ಪುತ್ರ ರೂ, ತಂದೆಯು ಮರಣಹೊಂದಿದಮೇಲೆ, ತಮ್ಮ ಸಹೋದರನಾದ ಭರ ತನ ಮಹಿಮೆಯನ್ನು ತಿಳಿಯದೆ, ಅವನನ್ನು ಕೇವಲಮೂಢನೆಂದೇ ಭಾವಿಸಿ, ಅವನಿಗೆ ವಿದ್ಯೆಯನ್ನು ಹೇಳಿದರೂ ಫಲವಿಲ್ಲವೆಂಬ ನಿಶ್ಚಯದಿಂದ, ಅವನಿಗೆ ವಿದ್ಯಾಭ್ಯಾಸದ ನಿರ್ಬಂಧವನ್ನು ತಪ್ಪಿಸಿ ಯಥೇಚ್ಛವಾಗಿ ಬಿಟ್ಟುಬಿಟ್ಟರು. ಎರಡುಕಾಲಿನ ಪಶುಗಳಂತೆ ಮೂಢರಾದ ಪ್ರಾಕೃತಜನರೆಲ್ಲರೂ, ಇವನ ಮಹಾಮಹಿಮೆಯನ್ನು ತಿಳಿಯದೆ, ಕಂಡುಕಂಡಾಗ ಅವನನ್ನು ಹುಚ್ಚ ನೆಂದೂ, ಮಂಕನೆಂದೂ, ಕಿವುಡನೆಂದೂ ಮೂದಲಿಸುತಿದ್ದರು ಅವರ ತಿರಸ್ಕಾರವಾಕ್ಯಗಳನ್ನೂ ಲಕ್ಷ್ಯಮಾಡದೆ ಇವನು, ಅವರವರ ಭಾವನೆಗೆ ತ ಕ್ಕಂತೆಯೇ ಹುಚ್ಚನಂತೆಯೂ ಬೆಪ್ಪನಂತೆಯೂ ನಟಿಸುತಿದ್ದನು. ಆ ಭರತ

ನಿಗೆ ತನಗಾಗಿ ತಾನು ಮಾಡಬೇಕಾದ ಕಾರ್ಯವೊಂದೂ ಇಲ್ಲದಿದ್ದರೂ, ಬಿಟ್ಟಿಗಾಗಿಯೋ, ಕೂಲಿಗಾಗಿಯೋ ಇತರರು ತನ್ನನ್ನು ನಿರ್ಬಂಧಿಸಿ ಹೇಳಿದ ಕೆಲಸಗಳೆಲ್ಲವನ್ನೂ ಮಾಡುತಿದ್ದನು. ಮತ್ತು ಅವನು ಇಂದ್ರಿಯತೃಪ್ತಿಯನ್ನಾಗಲಿ, ಶರೀರ ಸುಖವನ್ನಾಗಲಿ ಬಯಸದೆ, ದೇಹಧಾರಣಕ್ಕಾಗಿಯೇ ಆಹಾರವನ್ನು ತೆಗೆದುಕೊಳ್ಳುತಿದ್ದುದರಿಂದ, ಆಗಾಗ ಯಾಚನೆಯಿಂದಲೋ, ದೈವವಶದಿಂದಲೋ ತನ್ನ ಕೈಗೆ ಬಿದ್ದ ಅನ್ನವು, ಸ್ವಲ್ಪವಾಗಿದ್ದರೂ, ಹೆಚ್ಚಾಗಿದ್ದರೂ, ಕದನ್ನವಾಗಿದ್ದರೂ, ಮೃಷ್ಟಾನ್ನವಾಗಿದ್ದರೂ, ಅದನ್ನೇ ತಿಂದು ತೃಪ್ತನಾಗುತಿದ್ದನು. ಮತ್ತು ಅವನು ನಿತ್ಯವಾಗಿಯೂ, ನಿಜಸ್ವರೂಪವನ್ನು ನೀಗಿಸತಕ್ಕ ಕರ್ಮಸಂಬಂಧವಿಲ್ಲದುದಾಗಿಯೂ, ಸ್ವತಸ್ಸಿದ್ಧವಾಗಿಯೂ, ಶುದ್ಧವಾಗಿಯೂ, ಕೇವಲ ಜ್ಞಾನಾನಂದಮಯವಾಗಿಯೂ ಇರುವ ಆತ್ಮಸ್ವರೂಪವನ್ನು ಚೆನ್ನಾಗಿ ಬಲ್ಲವನಾಗಿದ್ದುದರಿಂದ, ತನ್ನ ದೇಹದಲ್ಲಿ ಸ್ವಲ್ಪಮಾತ್ರವೂ ಅಭಿಮಾನವಿಲ್ಲದವನಾಗಿ, ಶೀತೋಷ್ಣಗಳೇ ಮೊದಲಾದ ದ್ವಂದ್ವಗಳಿಂದ ತೋರುವ ಸುಖದುಃಖಗಳನ್ನೂ ಗಮನಿಸದಿದ್ದನು. ಮತ್ತು ಅವನು ಗೂಳಿಯಂತೆ ಮೈಮೇಲೆ ಹೊದ್ದಿಕೆಯಿಲ್ಲದೆ, ಚಳಿ, ಗಾಳಿ, ಬಿಸಿಲುಗಳಲ್ಲಿ ತಿರುಗುತಿದ್ದರೂ, ಅವನ ಅವಯವಗಳೆಲ್ಲವೂ ಚೆನ್ನಾಗಿ ಉಬ್ಬಿಬಲಿತಿದ್ದುವು. ಅವನು ಬರೀನೆಲದಮೇಲೆ ಮಲಗುತಿದ್ದುದರಿಂದಲೂ, ಅವನಿಗೆ ತೈಲಾಭ್ಯಂಗನಸ್ನಾನಾದಿಗಳೊಂದೂ ಇಲ್ಲದಿದ್ದುದರಿಂದಲೂ, ಅವನ ದೇಹವು, ಅವನ ಬ್ರಹ್ಮತೇಜಸ್ಸನ್ನು ಹೊರಕ್ಕೆ ಕಾಣಿಸದೆ ಸಾಣೆಯಿಕ್ಕದ ಮಹಾರತ್ನದಂತೆ ಕಾಣುತಿತ್ತು. ಅವನು ಕೆಲಸಕ್ಕೆ ಬಾರದ ಒಂದು ಹರಕು ಬಟ್ಟೆಯನ್ನು ಸೊಂಟಕ್ಕೆ ಸುತ್ತಿ, ಕೊಳೆಹಿಡಿದು ಕಪ್ಪಾದ ಯಜ್ಞೋಪವೀತವನ್ನು ಧರಿಸಿದ್ದುದರಿಂದ, ಮೂಢಜನರು ಅವನ ಮಹಿಮೆಯನ್ನು ತಿಳಿಯದೆ ಅವನನ್ನು ನಿಪಮಾತ್ರದ ಬ್ರಾಹ್ಮಣನೆಂದೂ, ಬ್ರಾಹ್ಮಣಾಧಮನೆಂದೂ ಮೊದಲಿಸಿ ಅವಮಾನಪಡಿಸುತಿದ್ದರು. ಹೀಗೆ ಎಲ್ಲರಿಂದಲೂ ತಿರಸ್ಕೃತನಾಗಿ ಅಲ್ಲಲ್ಲಿ ಸುತ್ತುತಿದ್ದ ಆ ಬ್ರಾಹ್ಮಣನು, ತನ್ನ ದೇಹಧಾರಣಕ್ಕಾಗಿ ಕಂಡಕಂಡವರಲ್ಲಿ ಕೂಲಿಕೆಲಸಮಾಡುತ್ತಿರುವುದನ್ನು ಕಂಡು, ಅವನ ಸಹೋದರರೂಕೂಡ, ಅವನನ್ನು ಕೂಲಿಯ ಕೆಲಸಕ್ಕಾಗಿ ಹಿಡಿದು, ತಮ್ಮ

ಹೊಲಗದ್ದೆಗಳ ಕೆಲಸಕ್ಕಾಗಿ ನಿಯಮಿಸಿದರು. ಅವನು ಆ ಕೆಲಸವನ್ನೂ ಮಾಡುತ್ತಬಂದನು ಆದರೆ ಅವನು ಹೊಲದಲ್ಲಿ ಹಳ್ಳವೆಂದೂ, ತಿಟ್ಟೆಂದೂ ಹೆಚ್ಚೆಂದೂ, ಕಡಿಮೆಯೆಂದೂ ತಿಳಿಯದವನಂತೆ ತನಗೆ ತೋರಿದರೀತಿಯಲ್ಲಿ ಕೆಲಸಮಾಡುತಿದ್ದನು. ಈ ಕೆಲಸದ ಕೂಲಿಗಾಗಿ ಸಹೋದರರು ತನಗೆ ತಂದುಕೊಟ್ಟ, ಆಕ್ಕಿಯ ನುಚ್ಚನ್ನಾಗಲಿ, ಹಿಂಡಿಯನ್ನಾಗಲಿ, ತವುಡು, ಹುರುಳಿ, ಅನ್ನದ ಕೆರಕಲು, ಮುಂತಾಗಿ ಯಾವುದನ್ನು ಕೊಟ್ಟರೂ ಅದ ನ್ನೇ ಅಮೃತದಂತೆ ಭಾವಿಸಿ ತಿಂದು ತೃಪ್ತನಾಗುತಿದ್ದನು. ವಿಷ್ಣುಭಕ್ತೋ ತ್ತಮನಾದ ಎಲೈ ಪರೀಕ್ಷಿದ್ರಾಜನೆ! ಆ ಜಡಭರತನ ವಿಷಯವಾಗಿ ಮ ತ್ತೊಂದು ವಿಚಿತ್ರವೃತ್ತಾಂತವನ್ನು ತಿಳಿಸುವೆನು ಕೇಳು

**ಕಳ್ಳರು ನರಬಲಿಗಾಗಿ ಭರತನನ್ನು ಕಾಳಿಕಾಲಯಕ್ಕೆ ಕರೆತಂದುದು.**

ಈ ಕಾಲದಲ್ಲಿ ಕಳ್ಳರ ಗುಂಪಿಗೆ ಪ್ರಮುಖನಾದ ಶೂದ್ರನೊಬ್ಬನು, ತನಗೆ ಮಕ್ಕಳಾದರೆ, ತನ್ನ ಗ್ರಾಮದೇವತೆಯಾದ ಭದ್ರಕಾಳಿಗೆ ನರಬಲಿ ಯನ್ನು ಕೊಡುವುದಾಗಿ ಹರಕೆಮಾಡಿಕೊಂಡಿದ್ದನು. ಅದರಂತೆಯೇ ಅವ ನಿಗೆ ಒಬ್ಬಮಗನು ಹುಟ್ಟಿದುದರಿಂದ, ಅವನು ತನ್ನ ಅನುಚರರನ್ನು ಕರೆದು. ದೈವಾಧೀನವಾಗಿ ಸಿಕ್ಕಿದ ಯಾವನಾದರೂ ಒಬ್ಬಮನುಷ್ಯನನ್ನು ಹಿಡಿದು ತರಬೇಕೆಂದು ನಿಯಮಿಸಿ ಕಳುಹಿಸಿದನು ಈ ದೂತರು ಅಲ್ಲಲ್ಲಿ ಸುತ್ತಿಸುತ್ತಿ ಹುಡುಕುತಿದ್ದರು. ಬಹುಕಾಲದವರೆಗೆ ಇವರ ಕೈಗೆ ಯಾವನೂ ಸಿಕ್ಕಲಿಲ್ಲ. ಕೊನೆಗೆ ಅವರು ನಿರಾಶರಾಗಿ ಹಿಂತಿರುಗಿ ಬರುತ್ತಿರುವಾಗ, ಗಾಢಾಂಧಕಾರ ದಿಂದ ಕವಿದ ಒಂದಾನೊಂದುರಾತ್ರಿಯಲ್ಲಿ, ಮಾರ್ಗವಶದಿಂದ, ಆ ಜಡಭರ ತನು ಕೆಲಸಮಾಡುತಿದ್ದ ಹೊಲದ ಸಮೀಪಕ್ಕೆ ಬಂದರು. ನಡುರಾತ್ರಿಯಲ್ಲಿ ಆ ಹೊಲದನಡುವೆ ವೀರಮಂಡಿಯನ್ನು ಹಾಕಿ ಕುಳಿತು, ಕಾಡುಮೃಗಗಳಿಂ ದ ಅಲ್ಲಿನ ಪೈರುಗಳಿಗೆ ಅಪಾಯವಿಲ್ಲದಂತೆ ಕಣ್ಣಿಟ್ಟುಕಾಯುತಿದ್ದ ಭರತ ನನ್ನು ಕಂಡರು ನಿರ್ದುಷ್ಟವಾದ ಲಕ್ಷಣಗಳುಳ್ಳ ಆ ಮನುಷ್ಯನನ್ನು ಕಂ ಡೊಡನೆ, ನರಬಲಿಗೆ ತಕ್ಕ ಮನುಷ್ಯನು ಸಿಕ್ಕಿದನೆಂಬ ಸಂತೋಷದಿಂದ, ಅರ ಳಿದ ಮುಖವುಳ್ಳವರಾಗಿ, ಅವನನ್ನು ಹಗ್ಗಗಳಿಂದ ಬಿಗಿದು ಕಾಳಿಕಾಲಯಕ್ಕೆ

ತಂದರು. ಅಲ್ಲಿ ಕಳ್ಳರೆಲ್ಲರೂ ಸಂತೋಷದಿಂದ ಗುಂಪುಗೂಡಿ, ತಮ್ಮ ಶಾಸ್ತ್ರಕ್ಕೆ ತಕ್ಕಂತೆ ಕೆಲವರು ಅವನಮೇಲೆ ನೀರನ್ನು ತಂದು ಸುರಿದರು ಕೆಲವರು ಹೊಸಬಟ್ಟೆಯನ್ನು ತಂದುಡಿಸಿದರು ಕೆಲವರು ಅವನಿಗೆ ಕಾಡುಹೂಗಳಿಂದಲೂ, ಸೊಪ್ಪುಸದೆಗಳಿಂದಲೂ ಬಲಿಕಾಲಕ್ಕೆ ತಕ್ಕ ಅಲಂಕಾರಗಳನ್ನು ಮಾಡಿಟ್ಟರು. ಕೆಲವರು ಕೆಂಪುಗಂಧವನ್ನು ಮೈಗೆ ಬಳಿದರು. ಕೆಲವರು ಕೆಂಪುಹೂವಿನ ದಂಡೆಯನ್ನು ಕೊರಳಿಗೆ ಹಾಕಿದರು ಕೆಲವರು ಮುಖಕ್ಕೆ ಕೆಂಪುತಿಲಕವನ್ನಿಟ್ಟರು ಕೆಲವರು ಅವನಿಗೆ ಕಂಠಪೂರ್ತಿಯಾಗಿ ಊಟವನ್ನು ಮಾಡಿಸಿದರು. ಆಮೇಲೆ ಆ ಕಳ್ಳರೆಲ್ಲರೂ ಸೇರಿ, ತಮ್ಮ ಶಾಸ್ತ್ರರೀತಿಯಾಗಿ, ಧೂಪ, ದೀಪ, ಪುಷ್ಪಮಾಲಿಕೆ, ಅರಳು, ಚಿಗುರು, ಹಣ್ಣು ಮೊದಲಾದ ಪೂಜಾದ್ರವ್ಯಗಳನ್ನು ಸಿದ್ಧಪಡಿಸಿಕೊಂಡು, ಮದ್ದಲೆ, ಭೇರಿ ಮುಂತಾದ ವಾದ್ಯಗಳೊಡನೆ ಹಾಡುಗಳನ್ನು ಹಾಡುತ್ತ, ಮಹಾಘೋಷದಿಂದ ಸ್ತೋತ್ರಮಾಡುತ್ತ, ಭರತನನ್ನು ಸೆಳೆತಂದು ಭದ್ರಕಾಳಿಯಮುಂದೆ ಕುಳ್ಳಿರಿಸಿದರು. ಅವರಲ್ಲಿ ಪುರೋಹಿತನಾದ ಶೂದ್ರನೊಬ್ಬನು, ಆ ನರಪಶುವಿನ ರಕ್ತವೆಂಬ ಮದ್ಯದಿಂದ ಕಾಳಿಯನ್ನು ಪೂಜಿಸುವುದಕ್ಕಾಗಿ, ಹರಿತವಾದ ಅಲಗುಳ್ಳುದಾಗಿಯೂ, ಭಯಂಕರವಾಗಿಯೂ ಇರುವ ಒಂದು ಕತ್ತಿಯನ್ನು ಕಾಳಿಯ ಮುಂದಿಟ್ಟು, ಮಂತ್ರವನ್ನು ಹೇಳುತ್ತ ಅದನ್ನು ಕೈಗೆತ್ತಿಕೊಂಡನು. ಎಲೈ ಪರೀಕ್ಷಿದ್ರಾಜನೆ! ಆ ಚೋರರು ಎಷ್ಟು ಕ್ರೂರಸ್ವಭಾವವುಳ್ಳವರೆಂಬುದನ್ನು ನೋಡಿದೆಯಾ? ಕೇವಲರಜಸ್ತಮೋಗುಣವುಳ್ಳವರಾಗಿಯೂ, ಧನಮದದಿಂದಮುಂಗಾಣದವರಾಗಿಯೂ, ನಿರ್ದಯರಾಗಿಯೂ ಇರುವ ಚೋರರು, ತಪಸ್ವಿಗಳಾದ ಇಂತಹಬ್ರಾಹ್ಮಣರು ಭಗವದಂಶದಿಂದ ಹುಟ್ಟಿದವರೆಂಬುದನ್ನು ಬಲ್ಲರೆ? ಆದುದರಿಂದಲೇ ಇವರು ಬ್ರಹ್ಮಕುಲವನ್ನು ಸ್ವಲ್ಪಮಾತ್ರವೂ ಲಕ್ಷ್ಯಮಾಡದೆ ಇಷ್ಟಬಂದಂತೆ ದುರ್ಮಾರ್ಗದಲ್ಲಿಯೇ ವರ್ತಿಸುವರು! ಯಾವಾಗಲೂ ಪ್ರಾಣಿಹಿಂಸೆಯಿಂದಲೇ ವಿನೋದಿಸುವರು! ಈ ಭರತನಾದರೋ ಬ್ರಹ್ಮಸಾಯುಜ್ಯವನ್ನು ಹೊಂದುವುದಕ್ಕೆ ಸಿದ್ಧನಾಗಿರತಕ್ಕವನು! ಸಮಸ್ತ ಭೂತಗಳಲ್ಲಿಯೂ ಸಮಬುದ್ಧಿಯುಳ್ಳವನು! ಬ್ರಹ್ಮರ್ಷಿಗಳಲ್ಲಿ ಮೇಲೆನಿಸಿಕೊಂಡವನು. ಇಂತಹ

ಮಹಾತ್ಮನು, ಆ ಘಾತುಕರ ಕೈಗೆ ಸಿಕ್ಕಿಬಿದ್ದನು. ಆಗ ಕಳ್ಳರೆಲ್ಲರೂ ಮಹಾಭಯಂಕರವಾಗಿಯೂ, ಕೇವಲ ನಿಷಿದ್ಧವಾಗಿಯೂ ಇರುವ ಕೊಲೆಗೆಲಕ್ಕಾಗಿ ಕೈಗಟ್ಟಿ ಅವನನ್ನು ಸುತ್ತಿ ನಿಂತಿದ್ದರು. ಆಗ ಆ ಗುಡಿಯೊಳಗಿನ ಕಾಳಿಕಾವಿಗ್ರಹವು, ಸಹಿಸಲಸಾಧ್ಯವಾದ ಆ ಜಡಭರತನ ಬ್ರಹ್ಮತೇಜಸ್ಸಿನಿಂದ ದಗ್ಧವಾದಂತೆ ಸಿಡಿದು, ಅದರಿಂದ ಕಾಳಿಕಾದೇವತೆಯು ನಿಜಾಕಾರದೊಡನೆ ಪ್ರತ್ಯಕ್ಷವಾಗಿ ಎದ್ದುಬಂದಳು. ಆಗ ಆ ಭದ್ರಕಾಳಿಯ ಭಯಂಕರ ಸ್ವರೂಪವನ್ನು ಕೇಳಬೇಕೆ? ಮಹತ್ತಾದ ಕೋಪಾವೇಶದಿಂದ ಮುಖದಲ್ಲಿ ಗಂಟಿಕ್ಕಿದ ಹುಬ್ಬುಗಳು! ವಕ್ರವಾದ ಕೋರೆದಾಡೆಗಳು! ಕೆಂಡದಂತೆ ಕೆಂಪೇರಿದ ಕಣ್ಣಾಲೆಗಳು! ಭಯಂಕರವಾದ ಮುಖ! ಹೀಗೆ ಘೋರಾಕಾರದಿಂದ ಜಗತ್ತೆಲ್ಲವನ್ನೂ ಒಂದೇ ತುತ್ತಾಗಿ ನುಂಗಿ ಬಿಡುವಂತೆ, ಅಟ್ಟಹಾಸದಿಂದ ಕೂಗುತ್ತ ಮುಂದೆ ಬಂದು, ಆ ಬ್ರಾಹ್ಮಣನ ತಲೆಯನ್ನು ಕಡಿಯುವುದಕ್ಕಾಗಿ, ಕಳ್ಳರು ಕೈಯಲ್ಲಿ ಹಿಡಿದಿದ್ದ ಕತ್ತಿಯನ್ನು ತನ್ನ ಕೈಗೆ ಕಿತ್ತಿಟ್ಟುಕೊಂಡಳು ಪರಮಪಾಪಿಗಳಾಗಿಯೂ, ಗರ್ವದಿಂದ ಕೊಬ್ಬಿದವರಾಗಿಯೂ ಇದ್ದ ಆ ಕಳ್ಳರ ತಲೆಗಳೆಲ್ಲವನ್ನೂ ಅದೇ ಕತ್ತಿಯಿಂದ ಕತ್ತರಿಸುತ್ತ ಬಂದಳು ಅವರ ಕಂಠನಾಳದಿಂದ ಚಿಮ್ಮಿ ಹಾರುತ್ತಿರುವ ಬಿಸಿಬಿಸಿಯಾದ ರಕ್ತವನ್ನು, ತನ್ನ ಕಡೆಯ ಭೂತಗಳೊಡನೆ ತಾನೂ ಯಥೇಚ್ಛವಾಗಿ ಪಾನಮಾಡಿ ಈ ರಕ್ತಪಾನಮದದಿಂದ ಮೈಮರೆತು, ಬಹಳ ಹೊತ್ತಿನವರೆಗೆ ತನ್ನ ಪರಿವಾರಗಳೊಡನೆ ಹಾಡುತ್ತಲೂ, ಕುಣಿಯುತ್ತಲೂ, ತಲೆಬುರುಡೆಗಳಿಂದ ಚೆಂಡಾಡುತ್ತಲೂ ವಿನೋದಿಸುತಿದ್ದಳು. ರಾಜೇಂದ್ರಾ! ಆ ಕಳ್ಳರ ಗತಿಯೇನಾಯಿತು ನೋಡು! ದೊಡ್ಡವರಿಗೆ ಕೇಡನ್ನು ಬಯಸಿದವರು ತಾವೇ ಆ ಕೇಡಿಗೆ ಗುರಿಯಾಗುವರು. ಆದರೆ "ಭರತನು ಮರಣಕಾಲದಲ್ಲಿಯೂ ಹೆದರದಿದ್ದುದೂ, ನರಬಲಿಯಿಂದಲೇ ತೃಪ್ತಿಹೊಂದತಕ್ಕ ಭದ್ರಕಾಳಿಗೂ ಆವನಲ್ಲಿ ಈವಿಧವಾದ ದಯೆಯುಂಟಾದುದೂ ಆಶ್ಚರ್ಯವಲ್ಲವೆ?" ಎಂದು ನೀನು ಶಂಕಿಸಬಹುದು. ಇದೇನೂ ಆಶ್ಚರ್ಯವಲ್ಲ! ಇಂತಹ ಮಹಾತ್ಮರು, ಅಹಂಕಾರಮಮಕಾರಗಳೆಂಬ ಹೃದಯಗ್ರಂಥಿಯನ್ನು ಭೇದಿಸಿ, ದೇಹಾಭಿಮಾನವಿಲ್ಲದೆ, ಯಾರಲ್ಲಿಯೂ ವೈರಭಾವವಿಲ್ಲದಂತಿ

ರುವರು. ಯಾವವಿಧದಲ್ಲಿಯೂ ಭಯವಿಲ್ಲದ ಭಗವಂತನ ಪಾದಮೂಲವನ್ನೇ ನಂಬಿರುವರು! ಪರಮಹಂಸಾಶ್ರಮದಲ್ಲಿರುವ ಇಂತಹ ಭಗವದ್ಭಕ್ತರಿಗೆ ಸರ್ವವಿಧದಲ್ಲಿಯೂ ಆ ಭಗವಂತನೇ ರಕ್ಷಕನಾಗಿರುವನು. ಯಾವಾಗಲೂ ಎಚ್ಚರಗೊಂಡು ಕಾದಿರುವ ತನ್ನ ಕಾಲಚಕ್ರದಿಂದಲೂ ಸಮಯೋಚಿತ ಸಂವಿಧಾನಗಳಿಂದಲೂ ಅವರನ್ನು ರಕ್ಷಿಸುವನು. ಅವರಿಗೆ ತಮ್ಮನ್ನು ಕೊಲ್ಲುವುದಕ್ಕೆ ಬಂದವರ ಮೇಲೆಯೂ ಕೋಪವಿರದು. ಆದಕ್ಕಾಗಿಯೇ ಭರತನು ತನ್ನ ತಲೆಯನ್ನು ಕಡಿಯುವ ಸಂದರ್ಭದಲ್ಲಿಯೂ ನಿರ್ಭಯನಾಗಿದ್ದನು. ಇದೇನೂ ಅತಿಶಯವಲ್ಲ. ಇದು ಒಂಬತ್ತನೆಯ ಅಧ್ಯಾಯವು

---

### { ಜಡಭರತನಮೇಲೆ ರಹೂಗಣನೆಂಬ ರಾಜನು ಪಲ್ಲಕ್ಕಿಯನ್ನು ಹೊರಿಸಿದುದು. }

ಎಲೈ ಪರೀಕ್ಷಿದ್ರಾಜನೆ! ಆ ಜಡಭರತನು ಎಂತಹ ಮಹಾಜ್ಞಾನಿಯೆಂಬುದನ್ನು ತಿಳಿಸುವುದಕ್ಕೆ,ಮತ್ತೊಂದು ಕಥೆಯನ್ನು ತಿಳಿಸುವೆನು ಕೇಳು! ಸಿಂಧುಸೌವೀರದೇಶಗಳನ್ನಾಳುತಿದ್ದ ರಹೂಗಣನೆಂಬ ರಾಜನೊಬ್ಬನಿದ್ದನು. ಅವನು ಕಪಿಲಮುನಿಯಿಂದ ತತ್ವೋಪದೇಶವನ್ನು ಪಡೆಯುವುದಕ್ಕಾಗಿ, ಪಲ್ಲಕ್ಕಿಯನ್ನೇರಿ ಬರುತಿದ್ದಾಗ, ಇಕ್ಷುಮತೀನದಿಯ ತೀರದಲ್ಲಿ ಈ ಅಂಗಿರಸಪುತ್ರನಾದ ಜಡಭರತನು ಕೇವಲಧ್ಯಾನಪರನಾಗಿ ಕುಳಿತಿದ್ದನು. ರಾಜನು ಪಲ್ಲಕ್ಕಿಹೊರುವವರನ್ನು ಬಹಳವಾಗಿಆತುರಗೊಳಿಸುತಿದ್ದುದರಿಂದ, ಅವರಲ್ಲಿ ಪ್ರಮುಖನಾದವನು, ಪಲ್ಲಕ್ಕಿಯನ್ನು ಹೊರುವುದಕ್ಕಾಗಿ ಇನ್ನೂ ಕೆಲವು ಆಳುಗಳನ್ನು ಹಿಡಿದು ಸೇರಿಸಬೇಕೆಂದು ಹುಡುಕುತಿದ್ದ ಸಮಯದಲ್ಲಿ, ದೈವಿಕವಾಗಿ ಈ ಬ್ರಾಹ್ಮಣನುಕಣ್ಣಿಗೆ ಬಿದ್ದನು ಆಗ ಆತನು, “ಭಲೆ!ಇವನು ಯೌವನಸ್ಥನಾಗಿಯೂ,ದೃಢಗಾತ್ರನಾಗಿಯೂ, ಪುಷ್ಟಾಂಗನಾಗಿಯೂ ಇರುವುದರಿಂದ ಕತ್ತೆಯಂತೆಯೂ, ಗೂಳಿಯಂತೆಯೂ ಭಾರವನ್ನು ಹೊರುವುದಕ್ಕೆ ಸಮರ್ಥನಾಗಿರುವನು!” ಎಂದು ನಿಶ್ಚಯಿಸಿಕೊಂಡ ಅವನನ್ನು ಬಲಾತ್ಕಾರದಿಂದಸೆಳೆದುತಂದು,ಮೊದಲಿದ್ದ ಆಳುಗಳ ಜತೆಗೆ ಅವನನ್ನೂ ಬಿಟ್ಟಿಯಾಳಾಗಿ ಸೇರಿಸಿಕೊಂಡನು. ಮಹಾತ್ಮನಾದ ಭರತನು ಇಂತಹಕಾರ್ಯಗಳಿಗೆ

ಅನರ್ಹನಾಗಿದ್ದರೂಹಿಂತೆಗೆಯದೆ,ಪಲ್ಲಕ್ಕಿಯಕೊಂಬಿಗೆ ಹೆಗಲನ್ನು ಕೊಟ್ಟು, ಸಾಧ್ಯವಾದಷ್ಟು ಭಾರವನ್ನು ಹೊತ್ತು ನಿಷ್ಕಪಟವಾಗಿ ದಾರಿನಡೆಯುತಿದ್ದನು. ಆದರೆ ಆ ಬ್ರಾಹ್ಮಣನಿಗೆ ಅಭ್ಯಾಸವಿಲ್ಲದುದರಿಂದ, ವಕ್ರವಕ್ರವಾಗಿ ಕಾಲಿಡುತಿದ್ದನು. ಇವನನ್ನನುಸರಿಸಿ ಹೋಗಬೇಕಾದುದರಿಂದ ಇತರವಾಹಕರ ನಡೆಯೂ ವಕ್ರವಾಗುತಿತ್ತು. ಒಂದು ಬಾಣಪಾತದಷ್ಟು ದೂರದವರೆಗೆ ಹೀಗೆಯೇ ನಡೆಯುತ್ತಬಂದಾಗ, ಪಲ್ಲಕ್ಕಿಯು ಬಹಳ ವಕ್ರವಾಗಿ ಹಿಂದೆಮುಂದೆ ತೂಗಾಡುತ್ತಿರುವುದನ್ನು ನೋಡಿ, ಮೇಲೆ ಕುಳಿತಿದ್ದ ರಾಜನಿಗೆ ಮನಸ್ಸಿನಲ್ಲಿ ಕೋಪವು ಹುಟ್ಟಿತು. ಆಗ ರಾಜನು ತನ್ನ ವಾಹಕರನ್ನು ನೋಡಿ "ಎಲೈ ಸೇವಕರೆ! ಇದೇನಿದು! ಕ್ರಮವಾಗಿ ಕಾಲಿಡಬಾರದೆ? ಹೀಗೆ ವಕ್ರವಕ್ರವಾಗಿ ನಡೆಯುವುದೇಕೆ! ಸರಿಯಾಗಿ ನಡೆಯಿರಿ!" ಎಂದು ಗರ್ಜಿಸಿದನು. ಆಗ ದೂತರು ರಾಜನ ಕೋಪಕ್ಕೆ ಹೆದರಿ "ರಾಜೇಂದ್ರಾ! ನಾವು ಎಷ್ಟೋ ಎಚ್ಚರದಿಂದ ನಿಷ್ಕಪಟವಾಗಿ ನಡೆಯುತ್ತಿರುವೆವು. ನಿನ್ನ ನಿಯಮವನ್ನು ಮೀರಿ ಹೋಗತಕ್ಕವರಲ್ಲ! ಆದರೆ ಈ ಬ್ರಾಹ್ಮಣನು ಈಗಲೇ ಒಂದು ಹೆಗಲುಕೊಟ್ಟವನಾಗಿದ್ದರೂ, ಭಾರವನ್ನು ಹೊತ್ತು ಬಳಲಿದವನಂತೆ ತಪ್ಪುಹೆಜ್ಜೆಯನ್ನು ಹಾಕುತ್ತಿರುವನು. ಶೀಘ್ರವಾಗಿಯೂ ನಡೆಯಲಾರನು. ಕಪಟಿಯಾದ ಈ ಬ್ರಾಹ್ಮಣನ ದೆಸೆಯಿಂದ ನಮ್ಮ ನಡೆಯೂ ವಕ್ರವಾಗುತ್ತಿರುವುದು ಆದುದರಿಂದ ಓ ಮಹಾರಾಜಾ! ಇನ್ನು ಮುಂದೆ ನಾವು ಖಂಡಿತವಾಗಿ ಇವನೊಡನೆ ಪಲ್ಲಕ್ಕಿಯನ್ನು ಹೊರಲಾರೆವು" ಎಂದರು ಹೀಗೆ ದೂತರು ದೈನ್ಯದಿಂದ ಹೇಳಿದ ಮಾತನ್ನು ಕೇಳಿ ರಾಜನು "ಹೌದು! ನಿಜ! ಒಬ್ಬನು ದೋಷಿಯಾಗಿದ್ದರೆ ಅವನ ಸಹವಾಸದಿಂದ ಬೇರೆ ಯವರೆಲ್ಲರೂ ಆ ದೋಷಕ್ಕೆ ಗುರಿಯಾಗಬೇಕಾಗುವುದು. ಇದು ಸಹವಾಸದೋಷವೇಹೊರತು ದೂತರ ತಪ್ಪಲ್ಲ" ವೆಂದು ನಿಶ್ಚಯಿಸಿಕೊಂಡನು ಆ ರಾಜನು ಬಹುಕಾಲದವರೆಗೆ ಹಿರಿಯರಲ್ಲಿ ಸೇವೆಮಾಡಿದವನಾಗಿದ್ದರೂ, ಪ್ರಕೃತಿಸಂಬಂಧವಾದ ರಜೋಗುಣವು ಅವನ ಮನಸ್ಸನ್ನು ಕದಲಿಸಿತು. ಅವನಿಗೆ ಮನಸ್ಸಿನಲ್ಲಿ ಸ್ವಲ್ಪಸ್ವಲ್ಪವಾಗಿಕೋಪವು ಅಂಕುರಿಸುತ್ತ ಬಂದಿತು! ಹೀಗೆ ಕುಪಿತನಾದ ರಾಜನು, ಬೂದಿಮುಚ್ಚಿದ ಕೆಂಡದಂ

ತೆ ತನ್ನ ಬ್ರಹ್ಮತೇಜಸನ್ನು ಹೊರಕ್ಕೆ ಕಾಣಿಸದಿದ್ದ ಆ ಬ್ರಾಹ್ಮಣನನ್ನು ಕುರಿತು, ಪರಿಹಾಸವಾಕ್ಯದಿಂದ ಹೀಗೆಂದು ಹೇಳುವನು. “ಅಪ್ಪಾ ಅಣ್ಣಾ ! ಅಯ್ಯೋ ಪಾಪ! ಬಹುದೂರದಿಂದ ನೀನೊಬ್ಬನೇ ಈ ಪಲ್ಲಕ್ಕಿಯನ್ನು ಹೊತ್ತು ತಂದು ಎಷ್ಟು ಬಳಲಿದೆಯೋ ಕಾಣೆನು! ಕೈಕಾಲುಗಳೆಲ್ಲವೂ ಸೋತು ಹೋಗಿರುವುವಲ್ಲವೆ? ಅಯ್ಯೋ ಪಾಪವೆ? ನಿನಗೆ ದೇಹದಲ್ಲಿ ಪುಷ್ಟಿಯಿಲ್ಲದೆ, ಮೈಯ್ಯೆಲ್ಲವೂ ಬಹಳ ಒಡವಾಗಿರುವುದಲ್ಲವೆ? ಇದಲ್ಲದೆ ನೀನು ಹಣ್ಣು ಮುದುಕನಾದುದರಿಂದ ಕೈಲಾಗದವನಲ್ಲವೆ? ನಿನ್ನೊಡನೆ ಪಲ್ಲಕ್ಕಿಯನ್ನು ಹೊತ್ತಿರುವ ಬೇರೆ ಆಳುಗಳೆಲ್ಲರೂ ಈಗಲೇ ಬಂದವರಾದುದರಿಂದ ಅವರು ಅನಾಯಾಸವಾಗಿ ನಡೆಯುತ್ತಿರಬಹುದಲ್ಲವೆ?” ಎಂದು ವಿಪರೀತಾರ್ಥವುಳ್ಳ ಈ ಮಾತುಗಳಿಂದ ಆ ಬ್ರಾಹ್ಮಣನನ್ನು ಮೂದಲಿಸುತಿದ್ದನು. ಇವೆಲ್ಲವೂ ಕಿವಿಗೆ ಬೀಳುತಿದ್ದರೂ ಭರತನು ಬಾಯೆತ್ತದೆ ಮೊದಲಿನಂತೆಯೇ ತನಗೆ ಬಂದಹಾಗೆ ಪಲ್ಲಕ್ಕಿಯನ್ನು ಹೊತ್ತು ನಡೆಯುತ್ತಲೇ ಇದ್ದನು. ಅದರೆ ಭರತನು ತನಗೆ ಪ್ರಾಪ್ತವಾಗಿರುವ ಆ ಶರೀರಸಂಬಂಧವು ಕರ್ಮಮೂಲಕವಾದುದೇಹೊರತು ಸಹಜವಲ್ಲವೆಂದೂ, ಕರ್ಮಗಳ ಮೂಲಕವಾಗಿ ಪರಿಣಮಿಸಿದ ಪಂಚಭೂತಗಳೂ, ಶಬ್ದಾದಿವಿಷಯಗಳೂ, ಕರ್ಮೇಂದ್ರಿಯಗಳಿಂದ ನಡೆಯತಕ್ಕನಡೆ, ನುಡಿ ಮೊದಲಾದ ಕಾರ್ಯಗಳೂ, ಇಂದ್ರಿಯಗಳೂ, ಮನಸ್ಸು ವಾಸನೆ, ಇವೆಲ್ಲವೂಸೇರಿ ಈ ಶರೀರವೆಂಬ ಒಂದು ಆಕಾರವಿಶೇಷದಿಂದೇರ್ಪಟ್ಟಿರುವುದೆಂದೂ, ಇದು ಯಾವಾಗಲೂ ಒಂದು ನೆಲೆಯಲ್ಲಿ ನಿಲ್ಲದೆ ಬದಲಾಯಿಸುತ್ತಿರುವ ಸ್ವಭಾವವುಳ್ಳುದರಿಂದ ಅಸತ್ತೆನಿಸಿಕೊಳ್ಳುವುದೆಂದೂ, ಅದೇ ತನಗೆ ಕೊನೆಯ ಶರೀರವೇಹೊರತು ತಿರುಗಿ ತನಗೆ ಆವಿಧವಾದ ಶರೀರಸಂಬಂಧವಿಲ್ಲವೆಂದೂ, ಚೆನ್ನಾಗಿ ತಿಳಿದವನಾದುದರಿಂದ, ಆ ಶರೀರದಲ್ಲಿಯಾಗಲಿ, ಆ ಶರೀರಸಂಬಂಧಗಳಲ್ಲಿಯಾಗಲಿ ಸ್ವಲ್ಪವೂ ಅಭಿಮಾನವಿಲ್ಲದಂತಿದ್ದನು. ಈ ಮಿಥ್ಯಾಭಿಮಾನವನ್ನು ಬಿಟ್ಟು, ಬ್ರಹ್ಮಸಾಯುಜ್ಯವನ್ನು ಪಡೆಯುವುದಕ್ಕೆ ಸಿದ್ಧನಾಗಿದ್ದುದರಿಂದಲೇ, ಆ ರಾಜನ ತಿರಸ್ಕಾರವಾಕ್ಯಗಳಿಗೆ ಕಿವಿಗುಡದೆ, ಮೊದಲಿನಂತೆಯೇ ತನ್ನ ಕೆಲಸದಲ್ಲಿ ತಾನಿದ್ದನು. ಸ್ವಲ್ಪದೂರದವರೆಗೆ ನಡೆಯುವಷ್ಟರಲ್ಲಿ ಪಲ್ಲ

ಕ್ಕಿಯು ಮೊದಲಿನಂತೆಯೇ ವಕ್ರವಕ್ರವಾಗಿ ತಿರುಗುತ್ತಿರಲು, ಮೇಲೆ ಕುಳಿತಿದ್ದ ರಾಜನಿಗೆ ಕೋಪವು ಉಕ್ಕುತ್ತ ಬಂದಿತು. ಆ ಕೋಪಾವೇಶದಿಂದ ರಹೂಗಣನು ಭರತನನ್ನು ನೋಡಿ, "ಏನೆಲಾ! ರಾಜನಾದ ನನ್ನ ಮಾತನ್ನೂ ಲಕ್ಷ್ಯಮಾಡದೆ ಸ್ವೇಚ್ಛೆಯಾಗಿ ನಡೆಯುತ್ತಿರುವೆ! ತಿಂದುತಿಂದು ಕೊಬ್ಬಿಬೆಳೆದಿದ್ದರೂ ಜೀವಚ್ಛವದಂತೆ ಕೆಲಸಮಾಡುವೆಯಾ? ಇರಲಿ! ನಿನ್ನ ಕೊಬ್ಬನ್ನು ಮುರಿಯುವೆನು ನೋಡು! ದಂಡಪಾಣಿಯಾದ ಯಮನು ಪ್ರಾಣಿಗಳನ್ನು ಶಿಕ್ಷಿಸುವಂತೆ ನಿನ್ನನ್ನು ದಂಡಿಸಿ, ನಿನ್ನನ್ನು ಸರಿಯಾದ ಮಾರ್ಗಕ್ಕೆ ತರುವೆನು ನೋಡು!" ಎಂದನು. ರಜಸ್ತಮೋಗುಣಗಳ ಹೆಚ್ಚುಗೆಯಿಂದ ತಾನೇ ರಾಜನೆಂದೂ, ತಾನೇ ಪಂಡಿತನೆಂದೂ ಭಾವಿಸಿ, ಮದಾಂಧನಾಗಿ ಭಾಗವತೋತ್ತಮರೆಲ್ಲರನ್ನೂ ಅವಮಾನಪಡಿಸುತಿದ್ದ ಆ ರಾಜನು, ಹೀಗೆ ಅಸಂಬದ್ಧಪ್ರಲಾಪವನ್ನು ಮಾಡುತ್ತಿರುವಾಗಲೂ, ಭರತನು ಅವನ ಮಾತಿಗೆ ಕೋಪಿಸಲಿಲ್ಲ! ಇಷ್ಟುಮಾತ್ರವಲ್ಲ! ಮನಸ್ಸಿನಲ್ಲಿಯೇ ಪರಬ್ರಹ್ಮನನ್ನು ಸಾಕ್ಷಾತ್ಕರಿಸಿದವನಾಗಿಯೂ, ಬ್ರಹ್ಮಸ್ವರೂಪನಾಗಿಯೂ, ಸರ್ವಭೂತ ಸುಹೃತ್ತಾಗಿಯೂ, ಮಹಾನುಭಾವನಾಗಿಯೂ ಇದ್ದ ಆ ಭರತನು, ಯೋಗಮಾರ್ಗವನ್ನರಿಯದ ಮೂಢನಾದ ಆರಾಜನಲ್ಲಿ ಕನಿಕರಗೊಂಡು, ಮುಗುಳ್ನಗೆಯೊಡನೆ ಮೃದುವಾಕ್ಯದಿಂದ ಹೀಗೆಂದು ಹೇಳುವನು. "ಓ ರಾಜೇಂದ್ರಾ! ಲೌಕಿಕದೃಷ್ಟಿಯಿಂದ ನೋಡಿದರೆ ನೀನು ಹೇಳಿದುದೆಲ್ಲವೂ ವಾಸ್ತವವೇ! ತತ್ವವನ್ನು ವಿಚಾರಿಸುವಾಗ ನಿನ್ನಮಾತುಗಳೆಲ್ಲವೂ ಅಸಂಬದ್ಧವಾಗುವುವು! ಏಕೆಂದು ಕೇಳುವೆಯಾ? ನೀನು ಕೇವಲಭ್ರಾಂತಿಯಿಂದ ಒಂದರ ಧರ್ಮವನ್ನು ಮತ್ತೊಂದರಲ್ಲಿ ಆರೋಪಿಸುತ್ತಿರುವೆ? ಲೋಕದಲ್ಲಿ ಭಾರವನ್ನು ಹೊತ್ತವನಿಗೆ ಶ್ರಮವೇಹೊರತು ನನಗಿಲ್ಲ! ಏಕೆಂದರೆ, ಈಗ ನಾನು ಭಾರವನ್ನು ಹೊತ್ತವನಲ್ಲ! ಬೇಗ ನಡೆಯೆಂದು ಹೇಳಿದೆಯಲ್ಲವೆ? ನಡೆಯತಕ್ಕವನಿಗೆ ಹೋಗಿ ಸೇರಬೇಕಾದ ಉದ್ದೇಶ್ಯಸ್ಥಳವೊಂದಿರಬಹುದು. ಅಂತಹಸ್ಥಳವೂ ನನ್ನ ಭಾಗಕ್ಕಿಲ್ಲ! ಏಕೆಂದರೆ, ನಾನು ನಡೆಯತಕ್ಕವನೂಅಲ್ಲ. ನನ್ನನ್ನು ಕೊಬ್ಬಿಬೆಳೆದವನೆಂದು ಹೇಳಿದೆಯಲ್ಲವೆ? ಆ ಬೆಳವಳಿಕೆಯೂ ನನ್ನ ದೇಹಕ್ಕೇಹೊರತು ನನಗಿಲ್ಲ! ಆದುದರಿಂದ ನಡೆಯುವುದಾಗಲಿ ಹೊರುವುದಾಗಲಿ, ಬೆಳೆಯುವುದಾಗಲಿ, ನನಗೆ

ಸಂಬಂಧಪಟ್ಟ ಕಾರ್ಯವಲ್ಲ. ಆತ್ಮಸ್ವರೂಪವನ್ನು ಚೆನ್ನಾಗಿ ತಿಳಿದವರ ಅಭಿ ಪ್ರಾಯವು ಇದೇ ! ಉಬ್ಬಿಬೆಳೆಯುವುದಾಗಲಿ, ಕೃಶವಾಗುತ್ತಿರುವುದಾಗ ಲಿ, ರೋಗಗಳಾಗಲಿ, ಮನಸ್ಸಂಕಟಗಳಾಗಲಿ, ಇದರಂತೆಯೇ ಹಸಿವು, ಬಾ ಯಾರಿಕೆ, ಭಯ, ಕಾಮಕ್ರೋಧಗಳು, ಮುಪ್ಪು, ನಿದ್ರೆ, ವಿಷಯಾಸಕ್ತಿ, ದುಃಖ, ಅಹಂಕಾರ, ಮೋಹ, ಮದ, ಇವೇ ಮೊದಲಾದುವುಗಳಾಗಲಿ, ದೇ ಹಕ್ಕೆ ಸಂಬಂಧಪಟ್ಟವುಗಳೇಹೊರತು ನನಗಲ್ಲ! ಏಕೆಂದರೆ, ಜನನಮರಣಾ ದಿವಿಕಾರಗಳಿಲ್ಲದ ನನ್ನ ಆತ್ಮಕ್ಕೂ, ಇವುಗಳಿಗೂ ಯಾವ ಸಂಬಂಧವೂ ಇಲ್ಲ. ನನ್ನನ್ನು ಜೀವಚ್ಛವವೆಂದು ಕರೆದೆಯಲ್ಲವೆ ? ಆ ಮಾತಿಗೂ ನನಗೆ ಸಂಬಂಧವಿಲ್ಲ ! ಬದುಕಿರುವುದಾಗಲಿ, ಸಾಯುವುದಾಗಲಿ, ವಿಕಾರ ಗಳನ್ನು ಹೊಂದುತ್ತಿರುವ ದೇಹಕ್ಕೇಹೊರತು, ಆತ್ಮನಿಗಿಲ್ಲ ! ರಾಜ ನಾದ ನಿನ್ನ ಆಜ್ಞೆಯನ್ನು ನಾನು ಲಕ್ಷ್ಯಮಾಡದೆ ಹೋದುದಾಗಿ ಹೇಳಿದೆಯಲ್ಲವೆ ? ಆ ನಿನ್ನ ಮಾತೂ ಯುಕ್ತವಾದುದಲ್ಲ ಒಬ್ಬನು ಪ್ರಭುವೆಂದೂ, ಮತ್ತೊಬ್ಬನು ಅವನಿಗೆ ದಾಸನೆಂದೂ, ಸ್ವಾಮಿಭೃ ತ್ಯಭಾವದಿಂದುಂಟಾದ ಈ ಸಂಬಂಧವು, ಯಾರಲ್ಲಿ ಎಂದೆಂದಿಗೂ ಚ್ಯುತಿಯಿಲ್ಲದೆ ನೆಲೆಯಾಗಿ ನಿಲ್ಲಬಹುದೋ, ಅಂತವರಲ್ಲಿಯೇ ಆವಿಧ ವಾದ ಭಾವನೆಯೂ ನಿಜವಾಗಿರುವುದು ! ಪ್ರಭುವಾದವನು ಆಯಾ ಕಾ ರ್ಯದಲ್ಲಿ ನಿಯಮಿಸುವುದೂ, ಭೃತ್ಯನಾದವನು ಅವನ ನಿಯಮಕ್ಕೆ ತಕ್ಕಂ ತೆ ನಡೆಯುವುದೂ ಅಂತವರಲ್ಲಿಯೇ ಸ್ಥಿರಪಡುವುದು. ಈವಿಧವಾಗಿ ಎಂ ದಿಗೂ ತಪ್ಪಿಹೋಗದ ಸ್ವಾಮಿಭೃತ್ಯಸಂಬಂಧವು ಪರಮಾತ್ಮನಿಗೂ, ಜೀ ವಾತ್ಮನಿಗೂ ಇರುವುದೇಹೊರತು, ನಿನಗೂ, ನನಗೂ ಆ ಸಂಬಂಧವಿಲ್ಲ. ಏಕೆಂದು ಕೇಳುವೆಯಾ ? ನೀನು ಎಂದೆಂದಿಗೂ ಹೀಗೆಯೇ ಪ್ರಭುವಾ ಗಿಯೇ ಇರುವೆಯೆಂಬ ನಿಶ್ಚಯವಿಲ್ಲ. ಈ ಜನ್ಮದಲ್ಲಿಯೇ ಆಗಲಿ, ಇನ್ನೊಂ ದು ಜನ್ಮಕ್ಕಾಗಲಿ, ನಿನ್ನ ರಾಜ್ಯವು ನನ್ನ ಕೈಗೆ ಬಂದರೆ, ಆಗ ನಿನ್ನ ಪ್ರಭು ತ್ವವೂ,ನನ್ನದಾಸ್ಯವೂ ಬದಲಾಯಿಸಿ, ನಾನು ರಾಜನಾಗಿಯೂ, ನೀನು ದಾಸನಾಗಿಯೂ ಇರಬೇಕಲ್ಲವೆ ? ಆದುದರಿಂದ ಪ್ರಭುವಲ್ಲದ ನಿನ್ನನ್ನು ಪ್ರಭುವಾಗಿ ತಿಳಿದುಕೊಂಡಿರುವುದೂ ಕೇವಲ ಭ್ರಮವು ! ನೀನು ನಿನ್ನ

ನ್ನು ಪ್ರಭುವೆಂದೂ, ನನ್ನನ್ನು ಭೃತ್ಯನೆಂದೂ ಬಾಯಿಂಬಾಡಿಕೊಳ್ಳುವು ದೊಂದೇಹೊರತು, ನಮ್ಮಿಬ್ಬರಲ್ಲಿ ಈ ಬೇಧವನ್ನು ತೋರಿಸುವುದಕ್ಕೆ ಸ್ವ ಲ್ಪವಾದರೂ ಅವಕಾಶವಿರುವಂತೆ ನನ್ನ ಬುದ್ಧಿಗೆ ತೋರಲಿಲ್ಲ ಈ ಲೋ ಕದಲ್ಲಿ ರಾಜನಾರು ? ಭೃತ್ಯನಾರು ? ನೀನು ನನಗೆ ಪ್ರಭುವಲ್ಲ ! ನಾನೂ ನಿನಗೆ ದಾಸನೂಅಲ್ಲ! ರಾಜೇಂದ್ರಾ! ನನ್ನ ಮಾತಿಗಾಗಿ ಕೋಪಿಸಬೇಡ! ನಾವು ಮಾಡತಕ್ಕುದೇನು? ಆಯಾ ವಸ್ತುವಿನ ನಿಜವಾದ ಸ್ವರೂಪವನ್ನು ಮಾರ್ಪ ಡಿಸುವುದಕ್ಕೆ ಯಾರಿಂದ ತಾನೇ ಸಾಧ್ಯವು ? ಅದೂ ಹೋಗಲಿ ! ನೀನು ನನ್ನನ್ನು ದಂಡಿಸುವುದಾಗಿ ಹೇಳಿದೆಯಲ್ಲವೆ ? ಇದೂ ಕೇವಲ ಭ್ರ ಮವು ! ಪರಬ್ರಹ್ಮಸ್ವರೂಪವಾದ ಆತ್ಮವನ್ನು ಅನುಭವಿಸುವುದರಲ್ಲಿಯೇ ನೆಲೆಯಾಗಿ ನಿಂತು, ಹುಚ್ಚನಂತೆಯೂ, ಮೂಗನಂತೆಯೂ, ಕುರುಡನಂತೆ ಯೂ ನಡೆಯುತ್ತಿರುವ ನಾನು, ಈಗಾಗಲೇ ಲೋಕದಲ್ಲಿ ಜನರಿಂದ ಎಷ್ಟೋ ತಿರಸ್ಕಾರವನ್ನು ಹೊಂದಿರುವೆನು ಇತರರು ನನ್ನನ್ನು ಹೊಡೆದು, ಬಡಿದು, ಹೆದ ರಿಸುತ್ತಿರುವುದನ್ನೆಲ್ಲಾ ಪ್ರೀತಿಯಿಂದಾದರಿಸುತ್ತಿರುವೆನು. ಹೀಗಿರುವಾಗ ನಿನ್ನ ದಂಡನೆಗಾಗಿ ನಾನು ದುಃಖಿಸುವೆನೆ? ನೀನು ನನ್ನನ್ನು ದಂಡಿಸುದುದ ರಿಂದ ಫಲವೇನು? ಒಂದುವೇಳೆ ಇತರಜನರಂತೆ ನಾನೂ ಆತ್ಮಸ್ವರೂಪವ ನ್ನು ತಿಳಿಯದೆ ಸಂಸಾರಿಯಾಗಿಯೇ ಕಷ್ಟಪಡುತ್ತಿದ್ದರೂ, ಆಗಲೂ ನಿನ್ನ ದಂಡನೆಯು, ಪಿಷ್ಟಪೇಷಣನ್ಯಾಯದಿಂದ ಸತ್ತ ಹಾವನ್ನು ಕೊಂದಂತೆಯೇ ಆಗುತಿತ್ತೇಹೊರತು, ಅದರಿಂದಲೂ ಏನೂ ಪ್ರಯೋಜನವಾಗುತ್ತಿರಲಿಲ್ಲ" ಎಂದನು. ಮನೋವಿಕಾರವಿಲ್ಲದವನಾಗಿಯೂ, ಜನ್ಮಾಂತರಕ್ಕೆ ಕಾರಣವಾದ ಕರ್ಮಸಂಬಂಧವಿಲ್ಲದವನಾಗಿಯೂ, ಅನುಭವದಿಂದಲೇ ಕರ್ಮಶೇಷವನ್ನು ಕಳೆದು ಶರೀರಾವಸಾನವನ್ನು ಇದಿರುನೋಡತಕ್ಕವನಾಗಿಯೂ ಇದ್ದ ಆ ಭರತನು, ರಾಜನು ಹೇಳಿದ ಒಂದೊಂದುಮಾತಿಗೂ ಹೀಗೆ ಪ್ರತ್ಯುತ್ತರ ವನ್ನು ಹೇಳಿ, ಮೊದಲಿನಂತೆ ಪಲ್ಲಕ್ಕಿಯನ್ನು ಹೊರುತಾತ್ತಮುಂದೆ ಹೋದನು ಎಲೈ ಪರೀಕ್ಷಿದ್ರಾಜನೆ ! ಆ ರಹೂಗಣನೆಂಬ ರಾಜನೂಕೂಡ ಈ ಆತ್ಮತ ತ್ವವನ್ನು ಕೇಳಬೇಕೆಂದೇ ಹೊರಟಿದ್ದವನಾದುದರಿಂದ, ಅಜ್ಞಾನವನ್ನು ನೀಗಿ ಸತಕ್ಕ ಆ ಭರತನ ವಾಕ್ಯವನ್ನು ಕೇಳಿದೊಡನೆ ಭಯಗ್ರಸ್ತನಾಗಿ, ಥಟ್ಟನೆಪಲ್ಲ

ಕ್ಕಿಯಿಂದ ಕೆಳಕ್ಕೆ ಧುಮುಕಿ, ತಾನು ರಾಜನೆಂಬ ಗರ್ವವನ್ನು ಬಿಟ್ಟು, ಆ ಭರ
ತನ ಪಾದಗಳನ್ನು ಹಿಡಿದು ಸಾಷ್ಟಾಂಗ ಪ್ರಣಾಮವನ್ನು ಮಾಡಿ, ಅಪರಾ
ಧ ಕ್ಷಮಾಪಣವನ್ನು ಮಾಡಿಕೊಳ್ಳುವನು. "ಓ ಮಹಾತ್ಮಾ! ನೀನು
ಯಾರು? ನೀನು ಬ್ರಹ್ಮತೇಜಸ್ಸನ್ನು ಗುಪ್ತವಾಗಿಟ್ಟುಕೊಂಡು,
ಹೀಗೆ ಸಂಚರಿಸುತ್ತಿರುವ ಕಾರಣವೇನು? ನಿನ್ನ ಕೊರಳಲ್ಲಿರುವ ಯಜ್ಞೋ
ಪವೀತವನ್ನು ನೋಡಿದರೆ, ನೀನು ಬ್ರಾಹ್ಮಣನೆಂಬುದರಲ್ಲಿ ಸಂದೇಹವಿಲ್ಲ.
ನೀನು ಹಾಸ್ಯಾಸ್ಪದವಾದ ಈ ವೇಷವನ್ನು ಧರಿಸಿರುವುದೇಕೆ? ನಿನ್ನ
ತಂದೆಯಾರು? ನಿನ್ನ ಗುರುವಾರು? ನಿನ್ನ ವಾಸಸ್ಥಳವಾವುದು? ನೀ
ನು ಇಲ್ಲಿಗೆ ಬಂದ ಕಾರಣವೇನು? ಒಂದುವೇಳೆ ನನ್ನನ್ನು ಅನುಗ್ರಹಿಸಬೇ
ಕೆಂದು ಬಂದ ಕಪಿಲಮುನಿಯೇ ನೀನಾಗಿರಬಹುದೆ? ಓ ಬ್ರಾಹ್ಮಣೋತ್ತ
ಮಾ! ನಾನು ಇಂದ್ರನ ವಜ್ರಾಯುಧಕ್ಕಾಗಲಿ, ರುದ್ರನ ಶೂಲಕ್ಕಾಗಲಿ,
ಯಮದಂಡಕ್ಕಾಗಲಿ, ಸೂರ್ಯಚಂದ್ರಾಗ್ನಿಗಳೇ ಮೊದಲಾದ ದಿಕ್ಪಾ
ಲಕರ ಅಸ್ತ್ರಗಳಿಗಾಗಲಿ ಹೆದರತಕ್ಕವನಲ್ಲ. ಬ್ರಾಹ್ಮಣತಿರಸ್ಕಾರವೆಂಬ
ಮಹಾಸ್ತ್ರವೊಂದಕ್ಕೆಮಾತ್ರ ನಾನು ಬಹಳವಾಗಿ ಹೆದರುವೆನು. ಅದು
ದರಿಂದ ನೀನು ನನಗೆ ನಿನ್ನ ನಿಜಸ್ಥಿತಿಯನ್ನು ಶೀಘ್ರದಲ್ಲಿ ತಿಳಿಸಬೇಕು!
ಸರ್ವಸಂಗಪರಿತ್ಯಾಗಮಾಡಿ, ಜ್ಞಾನವೆಂಬ ನಿನ್ನ ವೀರ್ಯವನ್ನು ಮರೆ
ಸಿಟ್ಟುಕೊಂಡು, ಬೇರೊಬ್ಬರಿಗೆ ತಿಳಿಯದೆ ಜಡನಂತೆ ಕಾಣಿಸಿಕೊಳ್ಳುತ್ತಿರು
ವೆಯಲ್ಲಾ! ನಿನ್ನ ಬಾಯಿಂದ ಹೊರಡತಕ್ಕ ಒಂದೊಂದು ಮಾತೂ, ಯೋಗ
ಶಾಸ್ತ್ರಮರ್ಯಾದೆಯನ್ನು ಮುಚ್ಚಿಟ್ಟುಕೊಂಡಿರುವುದು! ಎಷ್ಟೇ ಸೂಕ್ಷ್ಮ
ಬುದ್ಧಿಯಿಂದಾಲೋಚಿಸಿದರೂ, ನನಗೆ ನಿನ್ನ ಮಾತಿನ ಅಭಿಪ್ರಾಯವನ್ನು ಹೀ
ಗೆಂದು ತಿಳಿಯುವುದಕ್ಕೇ ಸಾಧ್ಯವಿಲ್ಲದಿರುವುದು. ಓ ಮಹಾತ್ಮಾ! ಈಗ
ನಾನು ತತ್ವಜ್ಞನಾಗಿಯೂ, ಹಿತೋಪದೇಶಕನಾಗಿಯೂ, ಜ್ಞಾನಾಂಶದಿಂ
ದವತರಿಸಿದ ಸಾಕ್ಷಾದ್ವಿಷ್ಣುರೂಪಿಯಾಗಿಯೂ ಇರುವ ಕಪಿಲಮಹರ್ಷಿಯ
ಬಳಿಗೆ ಹೋಗಿ, ಈ ಸಂಸಾರದಲ್ಲಿ ಪ್ರಾಣಿಗಳನ್ನುದ್ಧರಿಸತಕ್ಕ ಉಪಾಯ
ವಾವುದೆಂದು ಕೇಳಿ ತಿಳಿಯಬೇಕೆಂಬ ಉದ್ದೇಶದಿಂದಲೇ ಹೊರಟಿರುವೆನು.
ಆ ಕಪಿಲಮುನಿಯೇ ಲೋಕರಕ್ಷಣಕ್ಕಾಗಿ ವೇಷಾಂತರದಿಂದ ನಿಜರೂಪವ

ನ್ನು ಮರೆಸಿಕೊಂಡು ಹೀಗೆ ಬಂದಿರಬಹುದೆ? ಸಂಸಾರದಲ್ಲಿ ಬಿದ್ದ ನನ್ನಂತ ಹ ಮೂಢರು ಯೋಗೀಶ್ವರರ ವಿಚಿತ್ರವ್ಯಾಪಾರಗಳನ್ನು ಹೇಗೆತಾನೇ ತಿ ಳಿಯಬಲ್ಲೆವು. ಓ ಮಹಾತ್ಮಾ! ನನಗೊಂದು ಸಂದೇಹವುಂಟು. ಇದಕ್ಕೆ ಮೊದಲು ನೀನು ಪಲ್ಲಕ್ಕಿಯನ್ನು ಹೊರುತಿದ್ದಾಗಲೂ, ನಾನು ಹೊರುವವ ನಲ್ಲವೆಂದು ಹೇಳಿದೆಯಲ್ಲವೆ? ಅದರ ಅರ್ಥವೇನು? ದೇಹಕ್ಕಿಂತಲೂ ಜೀವಾ ತ್ಮವುವಿಲಕ್ಷಣವಾಗಿದ್ದರೂ,ಆ ಜೀವಕ್ಕೆ ದೇಹಸಂಬಂಧವಿದ್ದು ಕಾರ್ಯಗಳನ್ನು ನಡೆಸುವಾಗಲೇ ಶ್ರಮವು ತೋರುವುದು ಸಹಜವು! ಯುದ್ಧಾದಿಕಾಲಗಳಲ್ಲಿ ನಾನೂ ಇದನ್ನು ಚೆನ್ನಾಗಿ ಅನುಭವಿಸಿದವನಾದುದರಿಂದ,ಈಗ ಭಾರವನ್ನು ಹೊತ್ತು ದಾರಿನಡೆಯುತ್ತಿರುವ ನಿನಗೂ ಹಾಗೆಯೇ ಇರಬಹುದೆಂದು ಊಹಿಸಬೇಕಾಗಿದೆಯಲ್ಲವೆ? ಹೀಗಿರುವಾಗ ನೀನು ಭಾರವನ್ನು ಹೊತ್ತಿಲ್ಲ ವೆಂದು ಹೇಳಿದುದು ಹೇಗೆ? ಆದರೆ “ಇದೊಂದು ಲೋಕಪ್ರತೀತಿಮಾತ್ರವೇ ಹೊರತು ವಾಸ್ತವವಲ್ಲ” ವೆಂದು ನಿರಾಕರಿಸವುದಕ್ಕಿಲ್ಲ. ಏಕೆಂದರೆ, ಪಾತ್ರ ವಿದ್ದರೆ ನೀರನ್ನು ತರಬಹುದೇಹೊರತು, ಪಾತ್ರವಿಲ್ಲದ ಕಡೆಯಲ್ಲಿ ಆ ಕಾ ರ್ಯವೂ ಇಲ್ಲವಷ್ಟೆ? ಅದರಂತೆಯೇ ಪ್ರಮಾಣವಿಲ್ಲದೆ ಪ್ರತೀತಿಯೂ ಹುಟ್ಟ ಲಾರದು. ಆದುದರಿಂದ ಲೋಕವ್ಯವಹಾರವನ್ನು ಪ್ರಮಾಣವೆಂದೇ ಅಂ ಗೀಕರಿಸಬೇಕಲ್ಲದೆ, ಅಪ್ರಮಾಣವೆಂದು ನಿರಾಕರಿಸುವುದಕ್ಕಿಲ್ಲ! ಒಲೆ ಯಮೇಲಿಟ್ಟ ಪಾತ್ರವು, ಬೆಂಕಿಯ ಕಾವು ತಗುಲಿದಹಾಗೆಲ್ಲಾ ಕಾಯುತ್ತ ಬ ರುವುದು. ಆ ಪಾತ್ರೆಯ ಸಂಬಂಧದಿಂದ ಅದರಲ್ಲಿಟ್ಟ ನೀರೂ ಕುದಿಯುವು ದು. ಆ ನೀರಿನ ಸಂಬಂಧದಿಂದ ಅದರಲ್ಲಿ ಹಾಕಿದ ಅಕ್ಕಿಯೂ ಬೇಯುವುದು. ಇದರಂತೆಯೇ ಜೀವನಿಗೆ ದೇಹ, ಇಂದ್ರಿಯಗಳು, ಪ್ರಾಣ, ಕರ್ಮವಾಸನೆ, ಮನಸ್ಸು, ಇವುಗಳಸಂಬಂಧವು ಬಲವಾಗಿ ಅಂಟಿರುವಾಗ, ಶುದ್ಧಸ್ವರೂಪ ನಾದ ಆ ಆತ್ಮನಿಗೂ ದುಃಖಾಶ್ರಯವಾದ ಸಂಸಾರವು ತಗುಲುಕಟ್ಟದೆತೀರ ದು. ಇದಲ್ಲದೆ ಈಗ ನಾನು ಕರ್ಮವಶದಿಂದ ರಾಜನಾಗಿ ಹುಟ್ಟಿರುವೆನು. ದುಷ್ಟರನ್ನು ದಂಡಿಸಿ, ಶಿಷ್ಟರನ್ನು ಪಾಲಿಸತಕ್ಕ ಕಾರ್ಯವು ನನ್ನದಾಗಿದೆ. ಈ ನನ್ನ ಕ್ಷತ್ರಿಯಧರ್ಮವನ್ನು ನಾನು ಭಗವದಾರಾಧನರೂಪವಾಗಿ ನಡೆಸುವಪ ಕ್ಷದಲ್ಲಿ, ಅದನ್ನು ಪಿಷ್ಟಪೇಷಣದಂತೆ ವ್ಯರ್ಥವೆಂದು ನೀನು ಹೇಳುವುದು

ಯುಕ್ತವೆ? ತನ್ನ ವರ್ಣಾಶ್ರಮಧರ್ಮಗಳನ್ನು ನಡೆಸತಕ್ಕವನು, ತನ್ನ ಪಾಪರಾಶಿಗಳೆಲ್ಲವನ್ನೂ ಕಳೆದುಕೊಳ್ಳುವನಲ್ಲವೆ? ಈ ಸೂಕ್ಷ್ಮಾಂಶವನ್ನು ನಾನು ನಿನ್ನಿಂದಲೇ ತಿಳಿಯಬೇಕೆಂದಿರುವೆನು. ಆದುದರಿಂದ ಓ ಮಹಾತ್ಮಾ! ಇದಕ್ಕೆ ಮೊದಲು ರಾಜನೆಂಬ ಮದದಿಂದ ನಾನು ನಿನ್ನನ್ನು ತಿರಸ್ಕರಿಸಿದುದಕ್ಕಾಗಿ ಕೋಪಿಸದೆ, ನನ್ನ ತಪ್ಪನ್ನು ಮನ್ನಿಸಿ, ಸಜ್ಜನತಿರಸ್ಕಾರದಿಂದ ನನಗುಂಟಾದ ಆ ಮಹಾಪಾಪವು ನೀಗುವಂತೆ ನನ್ನಲ್ಲಿ ಕೃಪಾದೃಷ್ಟಿಯನ್ನಿಡಬೇಕು ಬ್ರಾಹ್ಮಣೋತ್ತಮಾ! ನಿನ್ನನ್ನು ಲೋಕಹಿತನಾದಪರಮಪುರುಷನಿಗೆ ಮಿತ್ರನೆಂದೆಣಿಸುವೆನು ನೀನು ಸಮಸ್ತವನ್ನೂ ಬ್ರಹ್ಮಸ್ವರೂಪವಾಗಿ ನೋಡತಕ್ಕವನಾದುದರಿಂದ, ದೇಹಾಭಿಮಾನವಾಗಲಿ, ಸ್ವತಂತ್ರಾಭಿಮಾನವಾಗಲಿ ಇಲ್ಲದವನು ಆದುದರಿಂದ ನಾನು ಮಾಡಿದ ತಿರಸ್ಕಾರಕ್ಕಾಗಿ, ನಿನ್ನ ಮನಸ್ಸು ಕಲಗದಿರುವುದೇನೋ ಸಹಜವು. ಹಾಗಿದ್ದರೂ, ಮಹಾತ್ಮರ ತಿರಸ್ಕಾರದಿಂದ ನನಗುಂಟಾಗುವ ಅಧೋಗತಿಯನ್ನು ತಪ್ಪಿಸಬೇಕು. ಸಾಕ್ಷಾದ್ರುದ್ರನಂತೆ ಸಮರ್ಥನಾಗಿದ್ದವನೂ ಕೂಡ ಮಹಾತ್ಮರ ತಿರಸ್ಕಾರದಿಂದ ಸ್ಥಾವರರೂಪವನ್ನು ಹೊಂದದಿರಲಾರನು ಇದು ಹತ್ತನೆಯ ಅಧ್ಯಾಯವು

---

**{ ಭರತನು ರಹೂಗಣನಿಗೆ ತತ್ವೋಪದೇಶವನ್ನು ಮಾಡಿದುದು. }**

ಅದಕ್ಕಾ ಬ್ರಾಹ್ಮಣನು ರಾಜನನ್ನು ಕುರಿತು. "ರಾಜೇಂದ್ರಾ! ನೀನು ಆತ್ಮಪರಮಾತ್ಮತತ್ವವನ್ನು ಚೆನ್ನಾಗಿ ತಿಳಿಯದವನಾದರೂ ಬಲ್ಲವನಂತೆ ಆಕ್ಷೇಪಿಸುತ್ತಿರುವೆಯಲ್ಲಾ! ಆದುದರಿಂದ ನಿನ್ನನ್ನು ವಿವೇಕಿಯೆಂದು ಹೇಳುವುದಕ್ಕಿಲ್ಲ! ನೀನು ಹೇಳತಕ್ಕಉಪಪಾದನಗಳೆಲ್ಲವೂ ಅಜ್ಞರಿಗೆ ಸಮರ್ಪಕವಾಗಿರಬಹುದೇಹೊರತು, ತತ್ವಜ್ಞರು ಇದನ್ನು ನಂಬಲಾರರು ಪ್ರಕೃತಿ ಪುರುಷ ಪರಮಾತ್ಮರೆಂಬ ತತ್ವತ್ರಯವನ್ನು ಚೆನ್ನಾಗಿವಿವರಿಸಿ ತೋರಿಸತಕ್ಕ ವೇದದ ಉತ್ತರಭಾಗವನ್ನು ಪರಿಶೀಲನಮಾಡದಿದ್ದವರಿಗೆ, ಈ ವಿಧವಾದ ದೇಹಾಭಿಮಾನವಾಗಲಿ, ಸ್ವತಂತ್ರಾಭಿಮಾನವಾಗಲಿ ಹುಟ್ಟುವುದು ಸಹಜವು. ಗೃಹಸ್ಥಾಶ್ರಮದಲ್ಲಿ ನಡೆಸತಕ್ಕ ಬಗೆಬಗೆಯ ಯಜ್ಞಾದಿಕರ್ಮಗಳನ್ನು ವಿವ

ರಿಸುತ್ತಾ ಹೋಗುವುದರಿಂದಲೇ ಬಹಳವಾಗಿ ಬೆಳೆದುಹೋಗಿರುವ ವೇದದ ಪೂರ್ವಭಾಗಗಳಲ್ಲಿ, ತ ತ್ವ ಸ್ವ ರೂ ಪ ವು ಅಷ್ಟು ಶುದ್ಧವಾಗಿ ಶೋಧಿಸಲ್ಪಡುವುದಿಲ್ಲ. ಕರ್ಮಗಳಲ್ಲಿ ರುಚಿಯುಳ್ಳವರಿಗೆ ಅದು ಜ್ಞಾನಮಾರ್ಗದಲ್ಲಿ ರುಚಿಯನ್ನು ಹುಟ್ಟಿಸಲಾರದು. ಇದಲ್ಲದೆ ಮೋಕ್ಷವೊಂದುಹೊರತು ಬೇರೆ ಇಹಪರಲೋಕದ ಸುಖವೆಲ್ಲವೂ ಸ್ವಪ್ನಸುಖದಂತೆ ಅಲ್ಪವೆಂದೂ, ಅಸ್ಥಿರವೆಂದೂ ತಿಳಿಯದೆ, ಅದಕ್ಕಾಗಿ ಆಸೆಪಡುವವನಿಗೆ ವೇದಾಂತಪರಿಚಯವಿದ್ದರೂ,ಅದು ತತ್ವಜ್ಞಾನವನ್ನು ಚೆನ್ನಾಗಿ ಹುಟ್ಟಿಸಲಾರದು. ಆದುದರಿಂದ ಮನುಷ್ಯನಿಗೆ ವೇದಾಂತಪರಿಶೀಲವೊಡನೆ ವಿರಕ್ತಿಯೂ ಇದ್ದರೆಮಾತ್ರ ತತ್ವಜ್ಞಾನೋದಯಕ್ಕೆ ಕಾರಣವಾಗುವುದು. ಜೀವನ ಮನಸ್ಸು, ಸತ್ವರಜಸ್ತಮಸ್ಸುಗಳೆಂಬ ಮೂರುಗುಣಗಳಲ್ಲಿ ಯಾವುದಾದರೂ ಒಂದಕ್ಕೆ ವಶವಾಗಿರುವವರೆಗೂ,ಆಯಾಗುಣಗಳಿಗೆ ತಕ್ಕಂತೆ ಕರ್ಮಗಳನ್ನು ನಡೆಸುವನು.ಇಂದ್ರಿಯಗಳ ಮೂಲಕವಾಗಿ ನಡೆಸಿದ ಆಯಾ ಕರ್ಮಗಳಿಗನುಸಾರವಾಗಿ ಉತ್ತಮಜನ್ಮವನ್ನೋ ನೀಚಜನ್ಮವನ್ನೋ ಹೊಂದುತ್ತಲೇ ಇರುವನು ಪಂಚಭೂತಗಳಿಗೂ, ಏಕಾದಶೇಂದ್ರಿಯಗಳಿಗೂ ಆತ್ಮದಂತೆ ಪ್ರಧಾನವಾದ ಮನಸ್ಸೆಂಬುದು, ಹೀಗೆ ಕರ್ಮವಾಸನೆಗೂ ವಿಷಯಾಸಕ್ತಿಗೂ, ಸತ್ವಾದಿಗುಣಗಳಿಗೂ ತ ಕ್ಕಂ ತೆ ಪ್ರವರ್ತಿಸುತ್ತ, ಸೂಕ್ಷ್ಮಶರೀರದಲ್ಲಿಯೂ ಜೀವಾತ್ಮನನ್ನು ಅಂಟಿಬರುತ್ತಿರುವುದು. ಕರ್ಮವಾಸನೆಯ ಮೂಲಕವಾಗಿ ಜೀವನಿಗೆ ಮೇಲೆಮೇಲೆ ದೇವಮನುಷ್ಯಾದಿ ಶರೀರಗಳನ್ನೂ, ಬೇರೆಬೇರೆ ಹೆಸರುಗಳನ್ನೂ, ಒಳಗೆ ರಾಗದ್ವೇಷಾದಿ ವಿಕಾರಗಳನ್ನೂ ಉಂಟುಮಾಡುತ್ತಿರುವುದು. ವಾಸ್ತವಕ್ಕೆ ಜೀವನು ಜ್ಞಾನಾನಂದಸ್ವರೂಪನಾಗಿ ಏಕರೂಪದಿಂದಿದ್ದರೂ, ಮನಸ್ಸೆಂಬುದು ಆ ಜೀವನಿಗೆ ನಾಮರೂಪಾದಿಗಳಿಂದ ಹೊರಗೂ, ರಾಗದ್ವೇಷಾದಿಗಳಿಂದ ಒಳಗೂ ವಿಕಾರವಿದ್ದಂತೆ ಕಾಣಿಸುವುದು. ಪ್ರಕೃತಿ ಪರಿಣಾಮರೂಪವಾದ ಮನಸ್ಸಿನೊಡಗೂಡಿ, ಇಂತಹ ಸಂಸಾರಚಕ್ರದಲ್ಲಿ ಪರ್ವತದಂತೆ ಅಲ್ಲಾಡದೆ ನಿಂತಿರುವ ಜೀವನು, ಆ ಸ್ಥಿತಿಯಲ್ಲಿಯೂ ತಾನು ಪರಮಾತ್ಮನಿಗೆ ಶರೀರ ಭೂತನಾಗಿ ಅವನೊಡನೆ ಸೇರಿಯೇ ಇದ್ದರೂ, ಅವನನ್ನು ಕಾಣದೆ, ಆ ಭಗವಂತನ ಸಂ

ಕೆಲ್ಪದಿಂದ ತನಗೆ ಅನಿವಾರ್ಯನಾಗಿ ಮೇಲೆಬಿದ್ದುಬರುವ ಸುಖದುಃಖಾ ದಿರೂಪಗಳಾದ ಕರ್ಮಫಲಗಳನ್ನು ಅನುಭವಿಸುತ್ತಿರುವನು. ಬೇರೆಬೇರೆ ಯವರಲ್ಲಿ ಆಕಾರ, ಹೆಸರು, ಜಾತಿ, ಮುಂತಾಗಿ ಹೊರಕ್ಕೆ ಕಾಣುವ ವಿಕಾ ರಗಳಾಗಲಿ, ಸುಖದುಃಖ ಮೊದಲಾದ ಒಳಗಿನ ವಿಕಾರಗಳಾಗಲಿ, ದೇಹಾ ತ್ಮಾಭಿಮಾನದಿಂದಲೇ ಉಂಟಾಗಿರತಕ್ಕುವು. ಈ ವಿಕಾರಗಳೆಲ್ಲವೂ ದೇಹ ಧರ್ಮಗಳೇ ಆಗಿದ್ದರೂ, ಮೂಢರು ಅಜ್ಞಾನದಿಂದ ಅವುಗಳನ್ನು ಕೇವಲ ಜ್ಞಾನಾನಂದಸ್ವರೂಪನಾದ ಆತ್ಮನಲ್ಲಿ ಆರೋಪಿಸಿ ಹೇಳುವರು. ಮನ ಸ್ಸಿನ ಮೂಲಕವಾದ ಆ ಕರ್ಮಸಂಬಂಧವು ನೀಗುವವರೆಗೂ ಆ ಅಜ್ಞಾ ನವೂ ಬಿಟ್ಟುಹೋಗಲಾರದು. ಆದುದರಿಂದ, ದುಃಖಹೇತುವಾದ ಸಂಸಾರ ಕ್ಕಾಗಲಿ, ಆನಂದರೂಪವಾದ ಮೋಕ್ಷಕ್ಕಾಗಲಿ, ದೇವಾದಿಜನ್ಮಗಳನ್ನು ಪ ಡೆಯುವುದಕ್ಕಾಗಲಿ,ಹೀನಜನ್ಮಕ್ಕಾಗಲಿ, ಆ ಮನಸ್ಸೇಮೊದಲನೆಯ ಕಾರಣ ವೆಂದು ಹಿರಿಯರು ನಿರ್ಣಯಿಸಿರುವರು. ಮನಸ್ಸು ಸತ್ವಾದಿಗುಣಗಳೊಡನೆ ಸಂಬಂಧಿಸಿ, ಆ ಗುಣಕ್ಕೆ ತಕ್ಕ ಕಾರ್ಯಗಳಲ್ಲಿ ಪ್ರವರ್ತಿಸುತ್ತಿದ್ದರೆ, ಅದೇ ದುಃಖಕಾರಣವಾದ ಸಂಸಾರಕ್ಕೆ ಮೂಲವಾಗುವುದು. ಆ ಮನಸ್ಸೇ ಗುಣ ಸಂಬಂಧವಿಲ್ಲದೆಯೂ, ನಿರ್ವ್ಯಾಪಾರವಾಗಿಯೂ ಇದ್ದರೆ ಮಹಾನಂದರೂ ಪವಾದ ಮೋಕ್ಷಕ್ಕೆ ಕಾರಣವಾಗುವುದು. ಅಗ್ನಿಯು ಎಣ್ಣೆಬತ್ತಿಗಳನ್ನು ಹಿಡಿದು ಉರಿಯುವಾಗ, ಅದರ ಜ್ವಾಲೆಯು ಹೊಗೆಯೊಡನೆ ಕೂಡಿಯೇ ಇರುವಂತೆ, ಮನಸ್ಸು ಸತ್ವಾದಿಗುಣಗಳೊಡನೆ ಕಲೆತು, ಅದರ ಮೂಲಕ ವಾಗಿ ಪುಣ್ಯಪಾಪಕರ್ಮಗಳಲ್ಲಿ ತೊಳಲುವುದರಿಂದ ರಾಗದ್ವೇಷಾದಿಗಳ ನ್ನೇ ಹೊಂದುವುದು. ಗುಣಗಳ ಸಂಪರ್ಕವಿಲ್ಲದೆ ನಿರ್ವ್ಯಾಪಾರವಾಗಿರು ವಾಗ, ಸಹಜವಾದ ಶುದ್ಧ ಸತ್ವರೂಪವನ್ನು ಹೊಂದುವುದು. ಮನಸ್ಸಿಗೆ ಹನ್ನೊಂದು ಬಗೆಯ ವ್ಯಾಪಾರಗಳುಂಟು. ಅವುಗಳಲ್ಲಿ ಕರ್ಮೇಂದ್ರಿಯಗ ಳಿಂದ ಕ್ರಿಯಾರೂಪವಾಗಿ ಉಂಟಾಗತಕ್ಕವುಗಳೈದು! ಜ್ಞಾನೇಂದ್ರಿ ಯಗಳಿಂದ ಜ್ಞಾನರೂಪವಾಗಿ ಉಂಟಾಗತಕ್ಕವುಗಳೈದು! ಮತ್ತೊಂದು ಅಹಂಕಾರ ಮಮಕಾರಾದಿ ರೂಪವಾಗಿರುವುದು! ಶಬ್ದ, ರೂಪ, ರಸ, ಗಂಧ, ಸ್ಪರ್ಶಗಳೆಂಬಿವೈದೂ ಜ್ಞಾನೇಂದ್ರಿಯಗಳ ಮೂಲಕವಾಗಿಯೂ

ಮಲವಿಸರ್ಜನೆ, ಸಂಭೋಗ, ಸಂಚಾರ, ಕೈಕೆಲಸ, ಬಾಯಿಮಾತು, ಇವೈದೂ ಕರ್ಮೇಂದ್ರಿಯಗಳ ಮೂಲಕವಾಗಿಯೂ ಮನೋವ್ಯಾಪಾರಕ್ಕೆ ವಿಷಯವಾಗುವುವು. ಶರೀರವನ್ನು ತನ್ನದೆಂದು ನೆನೆಸತಕ್ಕ ಮಮಕಾರವೆಂಬುದು ಮನಸ್ಸಿನಲ್ಲಿ ಸಾಕ್ಷಾತ್ತಾಗಿ ಉಂಟಾಗತಕ್ಕ ವ್ಯಾಪಾರವು. ದೇಹವನ್ನೇ ಆತ್ಮವೆಂದು ನೆನೆಸತಕ್ಕ ಅಹಂಕಾರವೆಂಬುದು ಮನಸ್ಸಿನ ಹನ್ನೆರಡನೆಯ ವ್ಯಾಪಾರವೆಂದೂ, ಇದೂ ಮನಸ್ಸಿನಲ್ಲಿ ಸಾಕ್ಷಾತ್ತಾಗಿಯೇ ಉಂಟಾಗತಕ್ಕುದೆಂದೂ ಕೆಲವರು ಹೇಳುವರು. ಮನಸ್ಸಿನಿಂದ ನಡೆಯತಕ್ಕ ಈ ಹನ್ನೊಂದು ವ್ಯಾಪಾರಗಳೇ, ಪೃಥಿವಿ ಮೊದಲಾದ ಪಂಚಭೂತಗಳಿಂದಲೂ ಅವುಗಳ ಸ್ವಭಾವಗಳಿಂದಲೂ, ಜನ್ಮಾಂತರ ವಾಸನೆಯಿಂದಲೂ, ಪುಣ್ಯಪಾಪಕರ್ಮಗಳಿಂದಲೂ, ಕಾಲದಿಂದಲೂ,ಬೇರೆ ಬೇರೆ ಅನೇಕವಿಧವನ್ನು ಹೊಂದಿ, ಸಹಸ್ರವಾಗಿಯೂ, ಲಕ್ಷವಾಗಿಯೂ, ಕೋಟಿಯಾಗಿಯೂ ಬೇರ್ಪಡುವುವು.ಇವೆಲ್ಲವೂ ಕೇವಲಮನಸ್ಸಿನ ಕಾರ್ಯಗಳೇ ಅಲ್ಲ! ಜೀವಾತ್ಮನ ಮೂಲಕವಾಗಿ ಮನಸ್ಸಿಗುಂಟಾಗತಕ್ಕ ವ್ಯಾಪಾರಗಳೇ ಹೊರತು,ಮನಸ್ಸಂಬಂಧದಿಂದ ನೇರವಾಗಿ ಜೀವನಿಗುಂಟಾಗತಕ್ಕವುಗಳೂ ಅಲ್ಲ. ಜೀವಾತ್ಮನ ಸಂಬಂಧವೊಂದೇ ಇದ್ದಮಾತ್ರಕ್ಕೂ ಮನಸ್ಸಿಗೆ ಈ ವ್ಯಾಪಾರಗಳುಂಟಾಗಲಾರವು. ಕರ್ಮಸಂಬಂಧವೆಂಬುದು ಇವಕ್ಕೆ ಮೂಲಕಾರಣವು. ಕರ್ಮಗಳನ್ನು ನಡೆಸುತ್ತಲೂ, ಅವುಗಳ ಫಲವನ್ನನುಭವಿಸುತ್ತಲೂ ಇರುವ ಜೀವನೊಡನೆ ಸಂಬಂಧವಿದ್ದಾಗ,ಮನಸ್ಸಿಗೆ ಪ್ರಕೃತಿಯಮೂಲಕವಾಗಿ ಸಂಭವಿಸತಕ್ಕ ಈವ್ಯಾಪಾರಗಳು ಪ್ರವಾಹದಂತೆ ನಿತ್ಯವಾಗಿನಡೆಯುತ್ತಲೇ ಇರುವುವು, ಆದರೆ ಒಮ್ಮೊಮ್ಮೆ(ಎಂದರೆ ಎಚ್ಚರದಲ್ಲಿದ್ದಾಗ) ಚೆನ್ನಾಗಿ ಹೊರಕ್ಕೆಕಾಣುತ್ತ, ಒಮ್ಮೊಮ್ಮೆ (ಎಂದರೆ ನಿದ್ರಾವಸ್ಥೆಯಲ್ಲಿ) ಮರೆಗೊಂಡಿರುವುವು ಈ ಮನೋವ್ಯಾಪಾರಗಳೆಲ್ಲವನ್ನೂ ಪರಮಾತ್ಮನು ತಾನು ಶುದ್ಧನಾಗಿಯೇ ನೋಡುತ್ತಿರುವನು. ಆತನು ಶರೀರಸ್ವರೂಪವನ್ನು ಯಥಾವತ್ತಾಗಿ ತಿಳಿದವನು. ಪ್ರಕೃತಿ ಪುರುಷರಿಬ್ಬರಲ್ಲಿಯೂ ಒಳಹೊಕ್ಕು ಅವುಗಳನ್ನು ಧರಿಸಿ ನಿಯಮಿಸತಕ್ಕವನು.ಅವನೇ ಜಗತ್ತಿಗೆಲ್ಲಾ ಆದಿಕಾರಣನು.ಪರಮಪುರುಷನು.ಸ್ವಯಂಪ್ರಕಾಶವುಳ್ಳವನು.ಜೀವಾತ್ಮನಿಗೂ ಈ ಸ್ವಯಂಪ್ರ

ಕಾಶವೆಂಬ ಗುಣವು ಸಹಜವಾಗಿದ್ದರೂ, ಅದು ಪರಮಾತ್ಮನ ನಿತ್ಯಸಂಕ
ಲ್ಪದಿಂದಲೇ ಇವನಿಗೆ ಏರ್ಪಟ್ಟಿರುವುದು. ಪರಮಾತ್ಮನಿಗಾದರೋ ಆ
ಗುಣವು ಸಹಜವಾದುದೇಹೊರತು ಬೇರೊಬ್ಬರ ಸಂಕಲ್ಪದಿಂದಾದುದಲ್ಲ.
ಮತ್ತು ಆ ಪರಮಾತ್ಮನು ಜನ್ಮಾದಿಗಳಿಲ್ಲದವನು. ಬ್ರಹ್ಮಾದಿಗಳಿಗೂ ನಿ
ಯಾಮಕನು. ನಾರಾಯಣನೆಂದೂ, ಭಗವಂತನೆಂದೂ, ವಾಸುದೇವನೆಂ
ದೂ ಹೇಳಲ್ಪಡುವ ಅಸಾಧಾರಣನಾಮಗಳೆಲ್ಲವೂ ಅವನೊಬ್ಬನಿಗೇ ಸಲ್ಲು
ವುವು ಆತನು ತನ್ನ ಆಶ್ಚರ್ಯಶಕ್ತಿಯಿಂದ ಜೀವನಲ್ಲಿ ಒಳಹೊಕ್ಕು ಮರೆಸಿ
ಕೊಂಡಿರುವನು. ವಾಯುವು ಚರಾಚರಾತ್ಮಕವಾದ ಸಮಸ್ತ ಭೂತಗಳಲ್ಲಿ
ಯೂ ಒಳಹೊಕ್ಕು, ಅವುಗಳನ್ನು ಕದಲಿಸುವಂತೆ, ಭಗವಂತನೂ ಸಮಸ್ತ
ಪ್ರಪಂಚದಲ್ಲಿಯೂ ಒಳಹೊಕ್ಕು, ವ್ಯಾಪಿಸಿ, ಅವುಗಳಿಂದ ಕೇಳಿಸಮಾಡಿಸುತ್ತಿ
ರುವನು. ರಾಜೇಂದ್ರಾ! ಅಹಂಕಾರ ಮಮಕಾರರೂಪವಾದ ಈ ಮಾಯೆ
ಯನ್ನು ಜ್ಞಾನೋದಯದಿಂದ ನೀಗಿಸಿ, ದೇಹಾದಿಗಳಲ್ಲಿ ಅಭಿಮಾನವನ್ನು
ತೊರೆದು, ಪಂಚೇಂದ್ರಿಯಗಳೊಡಗೂಡಿದ ಮನಸ್ಸೆಂಬ ಆರುಮಂದಿ ಒಳ
ಶತ್ರುಗಳನ್ನೂ ಜಯಿಸಿ, ಪರಮಾತ್ಮ ಸ್ವರೂಪವನ್ನು ತಿಳಿಯುವುದಕ್ಕೆ ಪ್ರ
ಯತ್ನಿಸಬೇಕಾದುದು ನಮಗೆ ಮೊದಲನೆಯಕಾರ್ಯವು. ಅದನ್ನು ತಿಳಿಯುವ
ವರೆಗೂ ಜೀವನು ಸಂಸಾರಚಕ್ರದಲ್ಲಿ ಸುತ್ತುತ್ತಲೇ ಇರಬೇಕಾಗುವುದು.
ಸಂಸಾರತಾಪಕ್ಕೂ, ಮೋಕ್ಷಕ್ಕೂ ಕಾರಣವಾದ ಮನಸ್ಸಿನಲ್ಲಿ ಮಮಕಾರ
ವೂ, ಅದರಿಂದುಂಟಾಗುವ ಶೋಕಮೋಹಾದಿಗಳೂ ನೀಗುವವರೆಗೆ ಜೀವ
ನು ಪರಮಾತ್ಮತತ್ವವನ್ನು ತಿಳಿಯುವುದಕ್ಕೆ ಸಮರ್ಥನಾಗಲಾರನು. ಆದು
ದರಿಂದ ಮನಸ್ಸೇ ಜೀವನಿಗೆ ಸಹಜಶತ್ರುವಾಗಿರುವುದು. ಅದನ್ನಡಗಿಸದೆ
ಉದಾಸೀನಮಾಡಿದಷ್ಟೂ, ಅದರ ವೀರ್ಯವು ಮೇಲೆಮೇಲೆ ಹೆಚ್ಚುತ್ತ ಬರುವು
ದು. ಅದು ಜೀವನಿಗೆ ಅಪ್ರಿಯವನ್ನೇ ಮಾಡುವ ಸ್ವಭಾವವುಳ್ಳುದಾದುದ
ರಿಂದ, ಆತ್ಮವನ್ನು ಕೆಡಿಸಿಬಿಡುವುದು. ಆದುದರಿಂದ ರಾಜೇಂದ್ರಾ! ನೀನೂ,
ಅಂತಹಮನಸ್ಸನ್ನು ಆಚಾರ್ಯರೂಪಿಯಾದ ಭಗವಂತನ ಪಾದಾಶ್ರಯವೆಂಬ
ಶಸ್ತ್ರದಿಂದ ವಧಿಸುವನಾಗು"ಎಂದನು.ಇಲ್ಲಿಗೆ ಹನ್ನೊಂದನೆಯಅಧ್ಯಾಯವು.

—•◆ಭರತನು ರಹೂಗಣನಿಗೆ ಆತ್ಮಸ್ವರೂಪವನ್ನು ತಿಳಿಸಿದುದು.◆•—

ಆ ಬ್ರಾಹ್ಮಣೋತ್ತಮನ ಉಪದೇಶವನ್ನು ಕೇಳಿ ರಹೂಗಣನು,ಆತ್ಮಾನಂದ ಭರಿತನಾಗಿ “ಓ ಮಹಾತ್ಮಾ!ಇದೋ! ನಿನಗೆ ಬಾರಿಬಾರಿಗೂ ನಮಸ್ಕಾರವು! ಲೋಕಕ್ಷೇಮವನ್ನೇ ಕಾರಣವಾಗಿಟ್ಟುಕೊಂಡು ಈ ಶರೀರವನ್ನೆತ್ತಿರುವ ನಿನಗೆ ನಮಸ್ಕಾರವು! ಆತ್ಮಜ್ಞಾನದಿಂದ ಯಾವ ಪ್ರಾಣಿಯಲ್ಲಿಯೂ ವೈರಬುದ್ಧಿಯಿಲ್ಲದೆ, ಸಮಸ್ತಭೂತಗಳನ್ನೂ ಸಮವಾಗಿ ಭಾವಿಸತಕ್ಕ ನಿನಗೆ ನಮಸ್ಕಾರವು! ಈ ಸಮಬುದ್ಧಿಯಿರುವುದರಿಂದಲ್ಲವೇ ಅಪರಾಧಿಯಾದ ನನ್ನಲ್ಲಿಯೂ ನೀನು ಕರುಣೆಯನ್ನು ತೋರಿಸುತ್ತಿರುವೆ! ಒಳಗೊಳಗೆ ಪರಮಾತ್ಮನನ್ನು ಸಾಕ್ಷಾತ್ಕರಿಸಿ, ಆ ಆನಂದದಲ್ಲಿರತಕ್ಕವನಾದರೂ ನೀನು ಬ್ರಾಹ್ಮಣಾಧಮನಂತೆ ಹಾಸ್ಯಾಸ್ಪದವಾದ ಈ ಅವಧೂತವೇಷದಿಂದ ನಿನ್ನ ಮಹಾಮಹಿಮೆಯನ್ನು ಹೊರಕ್ಕೆ ಕಾಣಿಸದಿರುವೆ! ಇಂತಹ ನಿನಗೆ ನಮಸ್ಕಾರವು! ಸ್ವಾಮೀ! ರೋಗಪೀಡಿತನಾದವನಿಗೆ ಮಹೌಷಧದಂತೆಯೂ, ಬಿಸಿಲಿನ ಬೇಗೆಯಿಂದ ಬೆಂದವನಿಗೆ ಹಿಮಜಲದಂತೆಯೂ, ದೇಹಾಭಿಮಾನವೆಂಬ ವಿಷಸರ್ಪದಿಂದ ಕಚ್ಚಲ್ಪಟ್ಟು ವಿವೇಕಹೀನನಾದ ನನಗೆ, ನಿನ್ನ ಹಿತೋಪದೇಶವು ಅಮೃತಮಯವಾದ ಔಷಧದಂತಿರುವುದು. ಆದುದರಿಂದ ನನ್ನ ಸಂದೇಹಪರಿಹಾರ್ಥವಾಗಿ ನಿನ್ನಲ್ಲಿ ಅನೇಕಪ್ರಶ್ನೆಗಳನ್ನು ಕೇಳಿ ತಿಳಿಯಬೇಕಾಗಿರುವುದು! ಅವುಗಳನ್ನು ಮುಂದೆ ಕೇಳುವೆನು. ಆದರೆ ಇದುವರೆಗೆ ನೀನು ಹೇಳಿದ ಮಾತುಗಳೆಲ್ಲವೂ ವಿಶೇಷವಾಗಿ ಅಧ್ಯಾತ್ಮತತ್ವವನ್ನೊಳಕೊಂಡಿರುವುದರಿಂದ, ಅದರ ಅರ್ಥವನ್ನು ನಾನು ಸ್ಪಷ್ಟವಾಗಿ ತಿಳಿಯಲಾರದೆ, ಹೋದೆನು. ಅದನ್ನು ತಿರುಗಿ ನಿನ್ನ ಬಾಯಿಂದಲೇ ಚೆನ್ನಾಗಿ ಕೇಳಿ ತಿಳಿಯಬೇಕೆಂಬ ಕುತೂಹಲವು ನನಗೆ ಬಹಳವಾಗಿರುವುದು. ಓ ಯೋಗೀಶ್ವರಾ! ಕಾರ್ಯಗಳನ್ನು ನಡೆಸುವಾಗ ಬೆವರು ಮುಂತಾದ ಶ್ರಮಚಿಹ್ನಗಳನ್ನು ನಾವು ಪ್ರತ್ಯಕ್ಷವಾಗಿ ಕಾಣುತ್ತಿರುವೆವು. “ನೀನು ಬಹಳ ಶ್ರಮಪಟ್ಟಿರುವೆ! ನಾನು ಶ್ರಮಪಟ್ಟೆನು” ಎಂದು ಲೋಕರೂಢಿಯಾಗಿ ವ್ಯವಹಾರದಲ್ಲಿಯೂ ಕಾಣುತ್ತಿರುವುದರಿಂದ,ಈ ಅರ್ಥವು ಮತ್ತಷ್ಟು ದೃಢಪಡುವುದು. ಈ ವಿಧವಾದ ವ್ಯವಹಾರಗಳು ಜಂಗಮಜೀವಿಗಳಲ್ಲಿ ಕಾಣುವುದೇಹೊರತು

ಸ್ಥಾವರಗಳಲ್ಲಿ ಕಾಣುವುದಿಲ್ಲ. ಹೀಗಿರುವಾಗಲೂ ನೀನುಬಳಲಿಕೆ ಬೆವರು ಮುಂತಾದುವು ಆತ್ಮನಿಗಿಲ್ಲವೆಂದು ಹೇಳುವೆಯಲ್ಲವೆ? ಅದರ ತತ್ವವನ್ನು ಚೆನ್ನಾಗಿ ತಿಳಿಯಬೇಕೆಂಬ ಆಸೆಯು ನನ್ನನ್ನು ಬಹಳವಾಗಿ ಬಾಧಿಸುತ್ತಿರುವುದು. ಅದನ್ನು ಮೊದಲು ನೀನು ತಿಳಿಸಬೇಕು" ಎಂದನು. ಆದಕ್ಕಾ ಭರತನು, "ರಾಜೇಂದ್ರಾ ಕೇಳು ! ಸ್ಥಾವರಗಳಾದರೇನು ? ಜಂಗಮಗಳಾದರೇನು ? ಅವೆಲ್ಲವೂ ಪಂಚಭೂತಗಳಿಂದ ಹುಟ್ಟಿದ ವಿಕಾರವೇ ಹೊರತು ಬೇರೆಯಲ್ಲ. ಅವುಗಳಲ್ಲಿ ಜೀವಾತ್ಮನ ಕರ್ಮವಿಶೇಷದಿಂದ ಕೆಲವು ಶರೀರಗಳು ಸಂಚಾರಶಕ್ತಿಯುಳ್ಳವುಗಳಾಗಿ ಪ್ರಾಣಿಗಳೆನಿಸಿಕೊಳ್ಳುವುವು. ಈ ನಿನ್ನ ಪಲ್ಲಕ್ಕಿಯನ್ನು ಹೊತ್ತಿರತಕ್ಕ ಶರೀರಗಳೂ ಅಂತಹವೆಂದೇ ತಿಳಿ ! ಈ ಸಂಚಾರಶಕ್ತಿಯಿಲ್ಲದ ಕಲ್ಲು ಮಣ್ಣು ಮುಂತಾದುವು ಅಚರಗಳೆನಿಸಿಕೊಳ್ಳುವುವು. ಹೀಗೆ ಜೀವನ ಕರ್ಮವಿಶೇಷದಿಂದಲೇ ಚರಾಚರತ್ವವೂ ಏರ್ಪಡುವುದು ಇದೋ ! ಇಲ್ಲಿ ನೋಡು! ಮೊದಲು ಕಾಲುಗಳು! ಅದರಮೇಲೆ ಕಣಕಾಲುಗಳು ! ಅವುಗಳ ಮೇಲೆ ಮೊಳಕಾಲುಗಳು! ಅವುಗಳಮೇಲೆ ತೊಡೆ! ತೊಡೆಯಮೇಲೆ ನಡು ! ಅದರಮೇಲೆ ಎದೆ! ಅದಕ್ಕೆಮೇಲೆ ಹೆಗಲು ! ಅದರಮೇಲೆ ಈ ಮರದ ಪಲ್ಲಕ್ಕಿ ! ಆ ಪಲ್ಲಕ್ಕಿಯಮೇಲೆ ಸೌವೀರದೇಶಕ್ಕೆ ಅರಸನೆಂದು ಕರೆಯಲ್ಪಡುವ ಒಂದಾನೊಂದು ಶರೀರವು ಕಾಣುತ್ತಿರುವುದಷ್ಟೆ ? ಹೀಗೆ ಕಾಲಿನಿಂದ ಹಿಡಿದು,ಹೆಗಲಿನವರೆಗಿರುವ ಒಂದೇಬಗೆಯ ಮಾಂಸಪಿಂಡಗಳಿಗೆ, ಬೇರೆಬೇರೆ ಹೆಸರುಗಳು ಏರ್ಪಟ್ಟಿರುವಂತೆ, ಪಲ್ಲಕ್ಕಿಯಮೇಲಿರುವ ಒಂದುಮಾಂಸದಮುದ್ದೆಗೂ ರಾಜನೆಂಬವ್ಯವಹಾರವು ಬಂದಿರುವುದು.ನೀನು ಆಮಾಂಸದ ಮುದ್ದೆಯನ್ನೇ ತಾನೆಂದು ಭ್ರಮಿಸಿ "ನಾನುಸಿಂಧು ಸೌವೀರದೇಶಗಳಿಗೆರಾಜ"ನೆಂದು ಮಧಾಂಧನಾಗಿ,ನಿನ್ನ ಆತ್ಮದಲ್ಲಿ ರಾಜತ್ವವನ್ನಾರೋಪಿಸಿ ಕೊಂಡಿರುವೆ. ಸೌವೀರರಾಜನೆಂಬದು ವ್ಯವಹರಿಸಲ್ಪಡುವ ಮಾಂಸಪಿಂಡಕ್ಕೂ ನಿನಗೂ, ಸ್ವರೂಪಸ್ವಭಾವಗಳಲ್ಲಿ ಎಷ್ಟೋಭೇದವುಂಟು. ಅದನ್ನರಿಯದೆ ನೀನು ನಿನ್ನ ಶರೀರವನ್ನೇ ನಾನೆಂದು ತಿಳಿದಿರುವೆ.ಈ ದೇಹಾಭಿಮಾನದಿಂದಲೇ ಈಪಲ್ಲಕ್ಕಿಯನ್ನು ಹೊತ್ತಿರುವ ಈ ಬಡಜನರನ್ನೂ ಬಲಾತ್ಕಾರದಿಂದ ಬಿಟ್ಟೀಕೆಲಸಕ್ಕೆ ಹಿಡಿದು, ದಯಾಶೂನ್ಯನಾಗಿ ವರ್ತಿಸುತ್ತಿರುವೆ!ಮತ್ತು "ನಾನೇ ಜನಗಳನ್ನು

ಕಾಪಾಡುತ್ತಿರುವೆ"ನೆಂಬ ಅಹಂಕಾರದಿಂದಲೂ ಮೆರೆಯುತ್ತಿರುವೆ! ಅದರಿಂದ ನೀನು ದೇಹಾತ್ಮವಿವೇಕವುಳ್ಳ ಮಹಾತ್ಮರ ಸಭೆಗೆ ಯೋಗ್ಯನಲ್ಲ. ನಿನಗೆ "ನಾನು ರಾಜ"ನೆಂಬ ಬುದ್ಧಿಯು ಹುಟ್ಟದಿದ್ದಪಕ್ಷದಲ್ಲಿ, ಪ್ರಜೆಗಳನ್ನು ಕಾಪಾಡತಕ್ಕವನೆಂಬ ಬುದ್ಧಿಯೂ ಹುಟ್ಟಿರಲಾರದು. ತಾನು ರಾಜನೆಂದೂ ತಾನು ಕರ್ತೃವೆಂದೂ ತಿಳಿಯುವುದೆಲ್ಲವೂ, ಆತ್ಮಸ್ವರೂಪವನ್ನು ತಿಳಿಯದೆ ಭ್ರಾಂತಿಯಿಂದ ಹೇಳತಕ್ಕಮಾತೇಹೊರತು ನಿಜವಲ್ಲ! ಜಂಗಮ ಸ್ಥಾವರರೂಪಗಳಾದ ಇಂತಹ ದೇಹಗಳೆಲ್ಲವೂ ಭೂಮಿಯಲ್ಲಿಯೇ ಹುಟ್ಟಿ ಅವರಲ್ಲಿಯೇ ಲಯಹೊಂದುವುದನ್ನು ನಾವು ಕಣ್ಣಾರೆ ನೋಡುತ್ತಿರುವೆವು. ಆತ್ಮವು ನಿತ್ಯವಸ್ತುವಾಗಿ ವಿಕಾರವಿಲ್ಲದಿರುವುದು ಆ ಆತ್ಮನಲ್ಲಿ ತಾನು ರಾಜನೆಂದೂ, ಮತ್ತೊಬ್ಬನು ಭೃತ್ಯನೆಂದೂ, ಒಬ್ಬನು ಸಣ್ಣವನೆಂದೂ, ಇನ್ನೊಬ್ಬನು ಸ್ಥೂಲನೆಂದೂ ಹೇಳುವುದಕ್ಕೆ ಬುದ್ಧಿಮೋಹವಲ್ಲದೆ ಬೇರೆ ಕಾರಣವಿಲ್ಲ. ಈ ವ್ಯವಹಾರವು ಲೋಕಸಾಮಾನ್ಯವಾಗಿದ್ದರೂ ಹಾಗೆ ಹೇಳತಕ್ಕವರೆಲ್ಲರೂ ಆತ್ಮತತ್ವವನ್ನು ತಿಳಿಯದ ಅಜ್ಞಾನಿಗಳೆಂದೇ ತಿಳಿಯಬೇಕು. ಜ್ಞಾನಿಗಳು ಎಂದಿಗೂ ಹೀಗೆ ಹೇಳಲಾರರು. ಕಾರ್ಯರೂಪವಾಗಿ ಕಾಣುವ ಅನಿತ್ಯವಸ್ತುಗಳೆಲ್ಲಕ್ಕೂ ಲಯಸ್ಥಾನವಾದ ಈ ಭೂಮಿಯೂ ಅನಿತ್ಯವಾದುದೇಹೊರತು ಶಾಶ್ವತವಲ್ಲ. ಏಕೆಂದರೆ, ಇದೂ ಭೂತಸೂಕ್ಷ್ಮಗಳ ಸಮೂಹದಿಂದುಂಟಾಗಿರುವುದು. ಆ ಭೂತಸೂಕ್ಷ್ಮಗಳೂ ಸರ್ವೇಶ್ವರನಸಂಕಲ್ಪದಿಂದಪ್ರಕೃತಿಯಮೂಲಕವಾಗಿ ಹುಟ್ಟಿರುವುವು. ಆದುದರಿಂದ ಭೂಮಿ ಮೊದಲಾದುವೂ, ಕಾರ್ಯರೂಪವಾಗಿ ಅನಿತ್ಯವೆನಿಸಿಕೊಳ್ಳುವುವು. ಹೀಗೆಯೇ ಸಣ್ಣದೆಂದೂ ದೊಡ್ಡದೆಂದೂ, ಸಜೀವವೆಂದೂ, ನಿರ್ಜೀವವೆಂದೂ, ಬೇರೆ ಬೇರೆ ವಿಧದಿಂದ ಕರೆಯಲ್ಪಡುವ ಚರಾಚರಪ್ರಪಂಚವೆಲ್ಲವೂ ಆತ್ಮಕ್ಕಿಂತಲೂ ಬೇರೆಯಾಗಿರುವುದು. ಪ್ರಾಣಿಶರೀರಗಳೆಲ್ಲವೂ, ಪಂಚಭೂತಗಳಿಂದಲೂ, ಅವುಗಳ ಪರಿಣಾಮಸ್ವಭಾವಗಳಿಂದಲೂ, ಅಂತಃಕರಣದಿಂದಲೂ, ಕರ್ಮವಾಸನೆ, ಕಾಲ, ಮುಂತಾದುವುಗಳಿಂದಲೂ ಏರ್ಪಟ್ಟಿರುವುವು. ಇವೆಲ್ಲವೂ ಪ್ರಕೃತಿಯಿಂದುಂಟಾದ ವಿಕಾರಗಳಾದುದರಿಂದ ಆತ್ಮಕ್ಕೂ, ಇದಕ್ಕೂ ಏನೇನೂ ಸಂಬಂಧವಿಲ್ಲ. ಈ ವಿಷಯವನ್ನು ನೀನು ಸೂಕ್ಷ್ಮಬು

ದ್ಧಿಯಿಂದ ಚೆನ್ನಾಗಿ ವಿಚಾರಿಸಿ ತಿಳಿಯಬೇಕು. ರಾಜೇಂದ್ರಾ! ಈ ಶರೀರ
ಕ್ಕಿಂತಲೂ ಭಿನ್ನವಾದ ಆತ್ಮಸ್ವರೂಪವು ಎಂತದೆಂಬುದನ್ನು ತಿಳಿಸುವೆನು
ಕೇಳು. ಆತ್ಮವು ಕೇವಲ ಜ್ಞಾನಸ್ವರೂಪವಾಗಿರುವುದು. ನೈಜ ಸ್ಥಿ
ಯಲ್ಲಿ ಆ ಆತ್ಮನಿಗೆ ಕರ್ಮಸಂಬಂಧವಿಲ್ಲದುದರಿಂದ ಶುದ್ಧವೆನಿಸಿಕೊಂಡಿರು
ವುದು. ಅದು ಕೇವಲಪುರುಷಾರ್ಥಸ್ವರೂಪವಾಗಿರುವುದು. ಕೇವಲ ಜ್ಞಾ
ನಸ್ವರೂಪವಾದುದರಿಂದ ಎಲ್ಲೆಲ್ಲಿಯೂ ಏಕಾಕಾರವಾಗಿರುವುದು. ಅದಕ್ಕೆ
ಹೊರಗೆಂದೂ, ಒಳಗೆಂದೂ ಸ್ಥಲಭೇದವಿಲ್ಲ! ಜ್ಞಾನವೆಂಬ ಗುಣದಿಂದ
ಎಲ್ಲೆಲ್ಲಿಯೂ ವ್ಯಾಪಿಸಿ, ಸತ್ಯವೆನಿಸಿಕೊಂಡಿರುವುದು. ತನಗೆ ತಾನೇ
ಪ್ರಕಾಶಿಸತಕ್ಕುದು. ಅದಕ್ಕೆ ಹಸಿವು, ಬಾಯಾರಿಕೆ, ದುಃಖ, ಮೋಹ, ಜರೆ
ಮರಣಗಳೆಂಬ ಷಡೂರ್ಮಿಗಳೂ ಇಲ್ಲವು. ಭಗವಂತನೆಂದೂ ವಾಸುದೇ
ವನೆಂದೂ ಹೇಳಲ್ಪಡುವ ಪರಮಾತ್ಮನಿಗೆ, ಆ ಆತ್ಮವು ಸರ್ವವಿಧದಿಂದಲೂ
ಅಧೀನವಾದುದರಿಂದ,ಮಹಾತ್ಮರು ಅದನ್ನೇ ವಾಸುದೇವಾತ್ಮಕವೆಂದು ಹೇ
ಳುವರು. ಓ ರಹೋಗಣಾ! ಆ ಆತ್ಮನ ನಿಜಸ್ಥಿತಿಯನ್ನು ತಿಳಿಯತಕ್ಕ ಜ್ಞಾ
ನವು, ಭಗವದ್ಭಕ್ತರ ಪಾದಧೂಳಿಯನ್ನು ಸೇವಿಸುವುದರಿಂದಲೇ ಉಂಟಾಗ
ಬೇಕೇಹೊರತು,ಬೇರೆ ತಪಸ್ಸಿನಿಂದಲಾಗಲಿ, ಉಪವಾಸಾದಿವ್ರತಗಳಿಂದಲಾ
ಗಲಿ,ಯಜ್ಞಯಾಗಾದಿಕರ್ಮಗಳಿಂದಾಗಲಿ, ದಾನಧರ್ಮಗಳಿಂದಾಗಲಿ, ಗೃ
ಹಸ್ಥಧರ್ಮದಿಂದಾಗಲಿ, ವೇದಾಧ್ಯಯನದಿಂದಾಗಲಿ,ಅಗ್ನಿ ಜಲಸೂರ್ಯೋ
ಪಾಸನೆಗಳಿಂದಾಗಲಿ ಲಭಿಸಲಾರದು. ಮಹಾತ್ಮರ ಸೇವೆಯಲ್ಲಿ ಅಷ್ಟೊಂದು
ವಿಶೇಷವೇನೆಂದು ಕೇಳುವೆಯಾ?ಭಗವದ್ಭಕ್ತರಾದ ಮಹಾತ್ಮರು ಯಾವಾಗ
ಲೂ, ಪುಣ್ಯಶ್ಲೋಕನಾದಭಗವಂತನ ಗುಣಗಳನ್ನುಬಾಯಿಂದ ನುಡಿಯುತ್ತಿ
ರುವರು. ಕ್ಷಣಮಾತ್ರವಾದರೂ ದುಷ್ಕಥೆಗಳಲ್ಲಿ ಕಾಲವನ್ನು ಕಳೆಯುವವ
ರಲ್ಲ. ಇಂತವರ ಸೇವೆಯಲ್ಲಿದ್ದರೆ, ಸರ್ವಕಾಲಗಳಲ್ಲಿಯೂ ಭಗವಂತನ ಕಥೆ
ಗಳು ಕಿವಿಗೆ ಬೀಳುತ್ತಿರುವುವು. ಇದರಿಂದ ಮೋಕ್ಷವನ್ನು ಬಯಸತಕ್ಕ
ವನ ಮನಸ್ಸು ವಾಸುದೇವನಲ್ಲಿ ನೆಲೆಗೊಳ್ಳುವುದು. ಆದುದರಿಂದ ಓ
ರಾಜಾ! ಈಗ ನೀನು ಗೃಹಸ್ಥಧರ್ಮದಲ್ಲಿ ಆಸೆಯನ್ನು ನೀಗಿ, ಮಹಾತ್ಮರ
ಸೇವೆಯನ್ನು ಮಾಡುತಿದ್ದಪಕ್ಷದಲ್ಲಿ, ಆಗ ನಿನಗೆ ಆತ್ಮಜ್ಞಾನವುಂಟಾ

ಗುವುದು. ಇನ್ನು ನಿನಗೆ ನನ್ನ ಪೂರ್ವವೃತ್ತಾಂತವನ್ನು ತಿಳಿಸುವೆನು ಕೇಳು ನಾನು ಪೂರ್ವಜನ್ಮದಲ್ಲಿ ಭರತನೆಂಬ ರಾಜನಾಗಿದ್ದೆನು. ಆ ರಾಜ ಪದವಿಯಲ್ಲಿಯೂ ನಾನು ಇಹಲೋಕಸುಖಗಳಲ್ಲಿಯಾಗಲಿ, ಸ್ವರ್ಗಾದಿ ಸುಖಗಳಲ್ಲಿಯಾಗಲಿ ಅಪೇಕ್ಷೆಯಿಲ್ಲದೆ,ಭಗವದಾರಾಧನದಲ್ಲಿಯೇ ಕಾಲವನ್ನು ಕಳೆಯುತಿದ್ದೆನು. ಹೀಗಿದ್ದಾಗ ನನಗೆ ಒಂದಾನೊಂದು ಜಿಂಕೆಯಲ್ಲಿ ಪ್ರೇ ಮವು ಹುಟ್ಟಿತು ಮೇಲೆಮೇಲೆ ಅದರಲ್ಲಿ ಮೋಹವು ಹೆಚ್ಚುತ್ತಬಂದಿತು. ಯಾವಾಗಲೂ ಅದರ ಚಿಂತೆಯಲ್ಲಿಯೇ ಇರುತಿದ್ದೆನು. ಇದರಿಂದ ನಾ ನು ನಡೆಸುತಿದ್ದ ಭಗವದಾರಾಧನಗಳೆಲ್ಲವೂ ಕ್ರಮಕ್ರಮವಾಗಿ ತಗ್ಗಿ, ನನ್ನ ಮನಸ್ಸು ಆ ಜಿಂಕೆಯಮರಿಯ ಪೋಷಣೆಯಲ್ಲಿಯೇ ಪ್ರವರ್ತಿಸುತಿತ್ತು. ಮ ರಣಕಾಲದಲ್ಲಿಯೂ ಅದನ್ನೇ ಚಿಂತಿಸುತಿದ್ದುದರಿಂದ, ನಾನು ಮುಂದಿನಜನ್ಮ ದಲ್ಲಿ ಜಿಂಕೆಯಾಗಿ ಹುಟ್ಟಿದೆನು. ಎಲೆ ವೀರಾಗ್ರಣೀ ! ಭಗವದಾರಾಧನ ದ ಪ್ರಭಾವವನ್ನು ನಾನೇನೆಂದು ಹೇಳಲಿ ! ನಾನು ರಾಜನಾಗಿದ್ದಾಗ ನಡೆ ಸಿದ ಆ ಭಗವದುಪಾಸನದ ಮಹಿಮೆಯಿಂದ ನನಗೆ ಆ ಮೃಗಜನ್ಮದಲ್ಲಿ ಯೂ ಹಿಂದಿನ ಜನ್ಮದ ಸ್ಮರಣವು ತಪ್ಪಿಹೋಗಲಿಲ್ಲ. ಆ ಜಿಂಕೆಯ ಜನ್ಮವು ಬಿಟ್ಟುಹೋದಮೇಲೆ ನಾನು ಈ ಬ್ರಾಹ್ಮಣಜನ್ಮದಲ್ಲಿ ಹುಟ್ಟಿ ದೆನು. ಈಗಲೂ ನನಗೆ ಹಿಂದಿನ ಜನ್ಮದ ಸ್ಥಿತಿಯೆಲ್ಲವೂ ನೆನಪಿನಲ್ಲಿರುವು ದು. ಇದಕ್ಕೂ ನಾನು ಮೊದಲನೆಯ ಜನ್ಮದಲ್ಲಿ ನಡೆಸಿದ ಭಗವದಾರಾಧ ನವೇ ಕಾರಣವು. ಅದರಿಂದ ಈಗ ನಾನು, ಇತರಜನಗಳೊಡನೆ ಸಹವಾ ಸಮಾಡಿದರೆ ಯಾವಕೇಡುಂಟಾಗುವುದೋ ಎಂದು ಹೆದರಿ,ಸಮಸ್ತಸಂಗಗಳ ನ್ನೂ ಬಿಟ್ಟು, ನಿಂತಲ್ಲಿ ನಿಲ್ಲದೆ,ಮನೆಗಳೊಳಗೆಪ್ರವೇಶಿಸದೆ,ಭೂಸಂಚಾರದಿಂದ ಲೇ ಕಾಲವನ್ನು ಕಳೆಯುತ್ತಿರುವೆನು. ರಾಜೇಂದ್ರಾ! ದುಸ್ಸಹವಾಸವೆಂಬುದೇ ಜೀವವನ್ನು ಸಂಸಾರದಲ್ಲಿ ಕಟ್ಟಿಡುವುದು. ಆದುದರಿಂದ ಮೋಕ್ಷಾಪೇಕ್ಷೆಯು ಳ್ಳವನು, ಸರ್ವಸಂಗಪರಿತ್ಯಾಗಮಾಡಿದ ಹಿರಿಯರ ಸಹವಾಸವನ್ನು ಮಾಡುತ್ತ, ಅದರಿಂದುಂಟಾದ ಜ್ಞಾನವೆಂಬ ಶಸ್ತ್ರದಿಂದ, ದೇಹದಲ್ಲಿಯೂ ಅದಕ್ಕೆ ಸೇರಿದ ಪರಿವಾರಗಳಲ್ಲಿಯೂ, ಹೊಲ, ಮನೆ ಮುಂತಾದುವುಗಳಲ್ಲಿ ಯೂ, ಉಂಟಾಗುವ ಮೋಹವೆಂಬ ವೃಕ್ಷವನ್ನು ನಿರ್ಮೂಲವಾಗಿ ಛೇದಿಸ

ಬೇಕು. ಭಗವತ್ಕಥೆಗಳನ್ನು ಹೇಳುವುದರಿಂದಲೂ, ಕೇಳುವುದರಿಂದಲೂ, ಭಕ್ತಿಯನ್ನು ಹೆಚ್ಚಿಸಿಕೊಳ್ಳಬೇಕು. ಓ ರಹೂಗಣಾ! ನೀನೂ ಈ ಮಾರ್ಗವನ್ನೇ ಅನುಸರಿಸುತಿದ್ದರೆ, ಸಂಸಾರವೆಂಬ ಕಾಡಿಗೆ ಎಲ್ಲೆಯಂತಿರುವ ಆ ಭಗವಂತನ ಪಾದಮೂಲವನ್ನು ಸೇರಬಹುದು." ಇದು ಹನ್ನೆರಡನೆಯ ಅಧ್ಯಾಯವು

---

### *ಜಡಭರತನು ರಹೂಗಣನಿಗೆ ಸಂಸಾರದಲ್ಲಿರುವ ಕ್ಲೇಶಗಳನ್ನು ವಿವರಿಸಿದುದು.

ರಾಜೇಂದ್ರಾ! ಕೇಳು! ಪ್ರಕೃತಿಯೆಂಬುದೇ ಜೀವನನ್ನು ಕರ್ಮಮಾರ್ಗದಲ್ಲಿ ತಳ್ಳುವುದು. ಈ ದಾರಿಯಲ್ಲಿ ಪ್ರವೇಶಿಸಿ, ಸತ್ವರಜಸ್ತಮಸ್ಸುಗಳೆಂಬ ಗುಣಭೇದಕ್ಕೆ ತಕ್ಕಂತೆ ಆಯಾ ಕರ್ಮಗಳಲ್ಲಿಯೇ ಕಣ್ಣಿಟ್ಟಿರುವ ಜೀವನು, ಆ ದಾರಿಯನ್ನು ದಾಟಿಬರಬೇಕಾದರೆ, ಭಗವದನುಗ್ರಹವೊಂದುಹೊರತು ಬೇರೆ ಉಪಾಯವಿಲ್ಲ ವರ್ತಕನು ಹಣವನ್ನು ಸಂಪಾದಿಸುವುದಕ್ಕಾಗಿ ಕಾಡುಗುಡ್ಡಗಳೆಲ್ಲವನ್ನೂ ಸುತ್ತಿ ಬಳಲುವಂತೆ, ಜೀವನೂ ಧರ್ಮಾರ್ಥ ಕಾಮಗಳೆಂಬ ಪುರುಷಾರ್ಥಗಳನ್ನು ಸಂಪಾದಿಸಬೇಕೆಂಬ ಆತುರದಿಂದ, ಸಂಸಾರವೆಂಬ ಮಹಾರಣ್ಯದಲ್ಲಿ ಸುತ್ತಿಸುತ್ತಿ ಸಾಯುತ್ತಿರುವನು. ಅದರಲ್ಲಿ ಸ್ವಲ್ಪಮಾತ್ರವೂ ಸುಖವನ್ನು ಕಾಣಲಾರನು. ವರ್ತಕನು ತನ್ನಲ್ಲಿದ್ದ ಅಲ್ಪಸ್ವಲ್ಪ ಧನವನ್ನು ಸೇರಿಸಿಕೊಂಡು ಹೆಚ್ಚುಹಣವನ್ನು ಸಂಪಾದಿಸುವ ಆಸೆಯಿಂದ ಕಾಡುಗುಡ್ಡಗಳನ್ನು ಸುತ್ತುವಾಗ, ಕಳ್ಳರ ಕೈಗೆ ಸಿಕ್ಕಿ, ಮೊದಲಿದ್ದ ಧನವನ್ನೂ ಕಳೆದುಕೊಳ್ಳುವಂತೆ, ಜೀವನೂಕೂಡ, ಜನ್ಮಾಂತರಗಳನ್ನು ಹೊಂದಿ, ಸಂಸಾರವೆಂಬ ಘೋರಾಟವಿಯಲ್ಲಿ ಸುತ್ತುವಾಗ, ಇಂದ್ರಿಯಗಳೆಂಬ ಆರುಮಂದಿ ಒಳಗಳ್ಳರು ಹೊಂಚುಹಾಕುತಿದ್ದು, ಇವನ ಅಲ್ಪಸ್ವಲ್ಪ ಪುಣ್ಯಕರ್ಮಗಳನ್ನೂ ಸುಲಿಯುವರು. ರಾಜೇಂದ್ರಾ! ಸಂಸಾರವೆಂಬಘೋರಾಟವಿಯಲ್ಲಿ,ನರಿಮುಂತಾದ ಅನೇಕಕಾಡುಮೃಗಗಳುಂ

---

*ಈ ಅಧ್ಯಾಯಯದಲ್ಲಿ ಸಂಸಾರವು ಅರಣ್ಯರೂಪವಾಗಿ ಅನ್ಯಾಪದೇಶದಿಂದ ವರ್ಣಿಸಲ್ಪಡುವುದು, ಇವುಗಳ ಹೋಲಿಕೆಯು ಮುಂದಿನ ಅಧ್ಯಾಯದಲ್ಲಿ ಸ್ಪಷ್ಟವಾಗಿ ವಿವರಿಸಲ್ಪಟ್ಟಿದೆ.

ಟು. ಅವು ಕುರಿಯ ಮರಿಯನ್ನು ತೋಳಗಳು ಹೇಗೋಹಾಗೆ ಈ ಕಾಡಿನಲ್ಲಿ ಸಿಕ್ಕಿಬಿದ್ದವನನ್ನು ಸುತ್ತಿಮುತ್ತಿ ಕಿತ್ತು ತಿನ್ನುವುವು. ಮತ್ತು ಈ ಕಾಡು ದಾರಿಯಲ್ಲಿ ಬಳ್ಳಿಗಳೂ,ಪೊದೆಗಳೂ ಬಹಳವಾಗಿ ಬೆಳೆಯುತ್ತಲೇ ಇರುವುದ ರಿಂದ, ಅದರಲ್ಲಿ ಸೇರಿಕೊಂಡಿರುವ ಕಾಡುನೊಣ, ಸೊಳ್ಳೆ ಮುಂತಾದ ವಿಷಕ್ರಿಮಿಗಳು ಕಚ್ಚಿ ಕೊಲ್ಲುವುದಕ್ಕಾಗಿ ಬೆನ್ನಟ್ಟಿ ಬರುವುವು. ಈ ಕಾಡು ದಾರಿಯಲ್ಲಿ ಪ್ರಯಾಣಮಾಡುವವನು, ಅಲ್ಲಲ್ಲಿ ಕಾಣುವ ಗಂಧರ್ವನಗರದ ವಿಚಿತ್ರಾಕಾರವನ್ನು ನೋಡಿ,ಅದನ್ನು ನಿತ್ಯವೆಂದೇ ಭ್ರಮಿಸಿ ಮರುಳಾಗುವ ನು. ಇದರಲ್ಲಿ ಅಲ್ಲಲ್ಲಿ ಕೊಳ್ಳಿಯ ಪಿಶಾಚಗಳು ಸುತ್ತುತ್ತಿರುವುವು. ಆ ದಾ ರಿಯಲ್ಲಿ ಹೋಗುವವನು, ಆ ಪಿಶಾಚಿಗಳ ಕೈಕೊಳ್ಳಿಯನ್ನು ಕಿತ್ತುಕೊಳ್ಳುವು ದಕ್ಕೆ ಹೋಗಿ ಅಪಾಯಕ್ಕೆ ಗುರಿಯಾಗುವನು. ಅಲ್ಲಲ್ಲಿ ಕಾಣುವ ಬಿಸಿ ಲ್ಗೊರೆಯನ್ನು ನೀರೆಂದು ಭ್ರಮಿಸಿ, ಅದನ್ನು ಹಿಡಿಯುವುದಕ್ಕಾಗಿ ಬೆಂಗಾ ಡಿನಲ್ಲಿ ಸುತ್ತಿಸುತ್ತಿ ಸಾಯುವನು ಆಗಾಗ ಈ ಕಾಡಿನಲ್ಲಿ ಸುಳಿಗಾಳಿ ಯಿಂದ ಮೇಲೆದ್ದ ಧೂಳು ಕಣ್ಣಿಗೆ ಕವಿಯುವದರಿಂದ ಕುರುಡನಂತೆ ದಿಕ್ಕು ಕಾಣದೆ ಕಳವಳಿಸುವನು. ಅಲ್ಲಲ್ಲಿ ಮರೆಯಾಗಿ ಕೂಗುತ್ತಿರುವ ಜೀರುಂ ಡೆಗಳ ಧ್ವನಿಯಿಂದ ಕಿವಿಯ ಬೇನೆಯನ್ನು ಹೊಂದಿ ಕಷ್ಟಪಡುವನು! ಅಲ್ಲ ಲ್ಲಿ ಗೂಬೆಗಳ ಧ್ವನಿಯನ್ನು ಕೇಳಿ ಭಯಪಡುವನು! ಅಲ್ಲಲ್ಲಿ ಹಸಿವಿನಿಂದ ಪೀ ಡಿತನಾಗಿ, ನಡೆಯಲಾರದೆ ವಿಷವೃಕ್ಷಗಳನ್ನು ನಂಬಿ ನಿಲ್ಲುವನು. ಕೆಲವು ಕ ಡೆಗಳಲ್ಲಿ ದಾಹದಿಂದ ಪೀಡಿತನಾಗಿ, ಬಿಸಿಲ್ಗೊರೆಯನ್ನೇ ತಣ್ಣೀರೆಂದು ಭ್ರ ಮಿಸಿ ಅದಕ್ಕಿದಿರಾಗಿಓಡುವನು. ನೀರನ್ನು ಹುಡುಕುವಾಗ ಕೆಲವು ಕಡೆಗಳಲ್ಲಿ ನೀರಿಲ್ಲದ ಹಳ್ಳಗಳನ್ನು ನೋಡಿ, ಆ ಹಳ್ಳಕೊಳ್ಳಗಳಲ್ಲಿ ಬಿದ್ದು ಸಂಕಟಪ ಡುವನು. ಒಂದೊಂದು ಸಂದರ್ಭಗಳಲ್ಲಿ ತನಗೆ ಆಹಾರವು ಸಿಕ್ಕದಿದ್ದಾಗ ಮತ್ತೊಬ್ಬರ ಧನವನ್ನು ಕಳುವುದಕ್ಕೆ ಯತ್ನಿಸುವನು. ಆಗಾಗ ಕಾಡುಗಿ ಚ್ಚಿಗೆ ಸಿಕ್ಕಿ ಬೇಯುವನು. ಆಗಾಗ ಕ್ರೂರರಾದ ಯಕ್ಷರ ಕೈಗೆ ಸಿಕ್ಕಿ ಪ್ರಾಣಾಪಾಯಕ್ಕೆ ಗುರಿಯಾಗುವನು! ಒಮ್ಮೊಮ್ಮೆ ಶೂರರಾದ ರಾಜಭ ಟರ ಕೈಗೆ ಸಿಕ್ಕಿ, ತನ್ನ ಸರ್ವಸ್ವವನ್ನೂ ಕಳೆದುಕೊಂಡು ದುಃಖಿಸುವನು. ಆ ದುಃಖದಿಂದಲೂ, ಮೋಹದಿಂದಲೂ ಆಗಾಗ ಮೂರ್ಛೆಬೀಳುವನು.

ಒಮ್ಮೊಮ್ಮೆ ಗಂಧರ್ವನಗರದಂತೆ ಕಾಣುವ ಭೋಗವಸ್ತುಗಳನ್ನು ನೋಡಿ ಮುಹೂರ್ತಕಾಲದವರೆಗೆಅದರಿಂದಸಂತೋಷಪಡುತ್ತಿರುವನು. ಒಮ್ಮೊಮ್ಮೆ ಏರಲಸಾಧ್ಯವಾದ ಬೆಟ್ಟವನ್ನೇರುವುದಕ್ಕೆ ಯತ್ನಿಸಿ, ಕಲ್ಲುಮುಳ್ಳುಗಳನ್ನು ತುಳಿದು, ಅದರನೋವನ್ನು ತಡೆಯಲಾರದೆ ತತ್ತಳಿಸುವನು. ಹಸಿಸಿಂದ ಕೂಗಿ ಕೊಳ್ಳುತ್ತಿರುವ ತನ್ನ ಹೆಂಡಿರು ಮಕ್ಕಳೆಂಬ ಪರಿವಾರಗಳಿಗೆ ಅನ್ನ ವನ್ನಿಡಲಾರದೆ ಅವರಮೇಲೆ ಕೋಪಿಸಿಕೊಳ್ಳುವನು. ಒಮ್ಮೊಮ್ಮೆ ಬೆಟ್ಟ ದಹಾವಿನ ಬಾಯಿಗೆ ಸಿಕ್ಕಿ, ದಿಕ್ಕುತಿಳಿಯದೆ ಸಂಕಟಪಡುವನು. ಆಗಾಗ ವಿಷ ಸರ್ಪಗಳಿಂದ ಕಚ್ಚಲ್ಪಟ್ಟು ಮೂರ್ಛಿತನಾಗಿ ಹೆಣದಂತೆ ದಾರಿಯಲ್ಲಿ ಬಿದ್ದಿ ರುವನು. ಅಲ್ಲಲ್ಲಿ ಹಾಳುಬಾವಿಗಳಲ್ಲಿ ಜಾರಿಬಿದ್ದು ಕುರುಡನಂತೆ ಹಿಂದುಮುಂ ದು ಕಾಣದೆ ಮರುಗುವನು. ಒಮ್ಮೊಮ್ಮೆ ಜೇನಿನ ಆಸೆಗಾಗಿ ಅದರ ಗೂ ಡನ್ನು ಕಿತ್ತು, ಆ ಜೇನು ಹುಳುಗಳ ಬಾಧೆಗೆ ಸಿಕ್ಕಿ, ಆ ರಸವನ್ನೂ ಸಂಪಾ ದಿಸಲಾರದೆ ಕಷ್ಟಪಟ್ಟು ಹಿಂತಿರುಗುವನು. ಬಂದುವೇಳೆ ಬಹಳಶ್ರಮ ಪಟ್ಟು ಆ ಗೂಡನ್ನು ಕಿತ್ತು ಜೇನನ್ನು ತಂದರೂ, ಬೇರೆಯವರು ಇವನನ್ನು ವಂಚಿಸಿ ಅದನ್ನು ಕಿತ್ತುಕೊಂಡು ಹೋಗುವರು. ಅವರನ್ನೂ ವಂಚಿಸಿ ಬೇರೊಬ್ಬರು ಅದನ್ನು ಕಿತ್ತುಕೊಂಡು ಹೋಗುವರು. ಮತ್ತು ಈ ಕಾಡು ದಾರಿಯಲ್ಲಿ ತಿರುಗತಕ್ಕ ಮನುಷ್ಯನು,ಮಳೆಗಾಳಿಬಿಸಿಲುಗಳ ಬಾಧೆಯನ್ನು ತಡೆ ಯಲಾರದೆ, ಅದಕ್ಕೆ ತಕ್ಕ ಪ್ರತೀಕಾರವನ್ನೂ ಮಾಡಲಾರದೆ,ಕಷ್ಟದಲ್ಲಿಯೇ ನರಳುವನು. ಆಗಾಗ ಹಣದಾಸೆಯಿಂದ ಇತರರೊಡನೆ ವ್ಯಾಪಾರವನ್ನಾ ರಂಭಿಸಿ, ಅವರನ್ನು ವಂಚಿಸುವುದಕ್ಕೆ ಯತ್ನಿಸಿ, ಅವರೊಡನೆ ದ್ವೇಷವನ್ನು ಸಂಪಾದಿಸಿಕೊಳ್ಳುವನು. ಒಮ್ಮೊಮ್ಮೆ ತನ್ನ ಕೈಯಲ್ಲಿದ್ದ ಹಣವೆಲ್ಲವೂ ವೆಚ್ಚವಾದಮೇಲೆ, ನಿಲ್ಲುವುದಕ್ಕೆ ನೆಳಲಿಲ್ಲದೆ, ಮಲಗುವುದಕ್ಕೆ ಹಾಸಿಗೆ ಯಿಲ್ಲದೆ,ಮತ್ತೊಬ್ಬರಲ್ಲಿ ಯಾಚಿಸುವುದಕ್ಕೆ ತೊಡಗುವನು.ಈ ಯಾಚನೆಯಿಂ ದಲೂ ತನಗೆ ಬೇಕಾದವಸ್ತುವನ್ನು ಪಡೆಯಲಾರದೆ, ಪರಸ್ವತ್ತಿಗೆ ಆಸೆಪಟ್ಟು ಅದರಿಂದ ಅವಮಾನವನ್ನು ಹೊಂದುವನು. ಹಣಕ್ಕಾಗಿ ಒಬ್ಬರನೊಬ್ಬರು ವಂಚಿಸತೊಡಗುವುದರಿಂದ,ಪರಸ್ಪರದ್ವೇಷವು ಹೆಚ್ಚಿ ಕಲಹವನ್ನಾರಂಭಿಸ ಬೇಕಾಗುವುದು! ರಾಜೇಂದ್ರಾ! ಈ ಕಾಡುದಾರಿಯು ಅನೇಕ ಕಷ್ಟಗಳಿಗೆ ನೆಲೆ

ಯಾಗಿರುವುದರಿಂದ ಇದನ್ನು ಯಾರಿಂದಲೂ ಸುಲಭವಾಗಿದಾಟುವುದ. ಕ್ಕೆ ಸಾಧ್ಯವಲ್ಲ. ತಾನು ಗಳಿಸಿಟ್ಟ ಹಣವೆಲ್ಲವನ್ನೂ ಕಳೆದುಕೊಂಡು ಅನೇಕ ಜನಗಳದ್ವೇಷಕ್ಕೆ ಪಾತ್ರನಾಗಿ,ಬದುಕಿದ್ದರೂ ಹೆಣದಂತೆ ನಿಸ್ಸಾರನಾಗಿ ಕ ಷ್ಟಪಡುವನು. ಬಂಧುವರ್ಗಗಳಲ್ಲಿ ತಂದೆ ತಾಯಿ ಮುಂತಾಗಿ, ಹಿಂದೆ ಸ. ತ್ತವರನ್ನು ಬಿಟ್ಟು ಮುಂದೆ ಹುಟ್ಟುವ ಮಕ್ಕಳು ಮುಂತಾದುವರಲ್ಲಿ ಮಮ ತೆಯನ್ನಿಟ್ಟು,ಅವರನ್ನೆತ್ತಿ ಮುದ್ದಾಡುತ್ತ, ಈ ದಾರಿಯಲ್ಲಿಯೇ,ಸುತ್ತಿಸುತ್ತಿ ತೊಳಲುತ್ತಿರುವನೇಹೊರತು, ಈ ಅರಣ್ಯಮಾರ್ಗವನ್ನುದಾಟಿ ಹೋಗುವ ಉಪಾಯದಲ್ಲಿ ಯಾವನೂ ದೃಷ್ಟಿಯಿಡಲಾರನು. ಶೂರರಾಗಿಯೂ ದಿಗ್ಗಜ ಗಳನ್ನು ಜಯಿಸತಕ್ಕ ಬಾಹುಬಲವುಳ್ಳವರಾಗಿಯೂ ಇರುವ ರಾಜರೆಲ್ಲರೂ ಈ ಭೂಮಿಯನ್ನು "ನನ್ನದು ತನ್ನ"ದೆಂಬ ಅಭಿಮಾನದಿಂದ ಅದಕ್ಕಾಗಿ ಒಬ್ಬರಮೇಲೊಬ್ಬರು ವೈರವನ್ನು ಬೆಳಸಿ,ಹೊಡೆದಾಡಿ,ಕೊನೆಗೆ ಯುದ್ಧದಲ್ಲಿ ಮಡಿದರೇಹೊರತು, ಪ್ರಾಣಹಿಂಸೆಯನ್ನೂ, ವೈರವನ್ನೂ ತೊರೆದ ಯೋಗಿ ಗಳು ಹೊಂದತಕ್ಕಶಾಶ್ವತಸ್ಥಾನವನ್ನುಯಾರೂ ಹೊಂದಲಿಲ್ಲ!ರಾಜೇಂದ್ರಾ! ಪ್ರಾಪಂಚಿಕವಾದಸಂಸಾರದಲ್ಲಿರುವವೈಚಿತ್ರ್ಯವನ್ನು ಎಷ್ಟೆಷ್ಟುಹೇಳಿದರೂ ತೀರದು! ಈ ದುರ್ಗಮವಾದ ದಾರಿಯಲ್ಲಿ ಸಂಚರಿಸತಕ್ಕ ಜೀವನು, ಅಲ್ಲಲ್ಲಿ ಅಂದವಾದ ಬಳ್ಳಿಗಳನ್ನು ಹಿಡಿದು ಮಲಗುವನು! ಅಲ್ಲಲ್ಲಿ ಕಿವಿಗಿಂಪಾಗಿ ಕೂ ಗುವ ಹಕ್ಕಿಗಳ ಕಲಕಲಧ್ವನಿಯನ್ನು ಕೇಳಿ ಹಿಗ್ಗುವನು! ಅಲ್ಲಲ್ಲಿ ಭಯಂಕರ ವಾದ ಸಿಂಹದ ಗುಂಪನ್ನು ನೋಡಿ ಹೆದರಿ, ನರಿಗಳೂ, ಹದ್ದುಗಳೂ, ಬಕಗ ಳೂ ಸೇರಿರತಕ್ಕ ಗುಹೆಗಳಲ್ಲಿ ಸೇರಿ, ಆ ಕ್ಷುದ್ರಮೃಗಗಳೊಡನೆಯೇ ಸ್ನೇ ಹವನ್ನು ಬೆಳೆಸುವನು. ಕೊನೆಗೆ ಅವುಗಳಿಂದಲೇ ವಂಚಿಸಲ್ಪಟ್ಟು ತಾನೂ ಅವುಗಳನ್ನು ವಂಚಿಸಿ ಹಂಸಗಳ ಗುಂಪಿನಲ್ಲಿ ಸೇರುವನು. ಆ ಹಂಸಗಳ ನಡತೆ ಯು ತನಗೆ ರುಚಿಸದೆ ಹೋದಾಗ, ಕಪಿಗಳ ಗುಂಪನ್ನು ಸೇರುವನು. ಆ ಕಪಿಗಳ ಗುಂಪಿನಲ್ಲಿಯೇ ಆಡುತಿದ್ದು, ತನ್ನ ಇಂದ್ರಿಯಗಳ ದುರಾಸೆಯನ್ನು ತೀರಿಸುತ್ತಾ, ಈ ಸಹವಾಸಸುಖದಲ್ಲಿ ತನ್ನ ಮರಣಕಾಲವನ್ನೇ ಮರೆ ತುಬಿಡುವನು! ಐಹಿಕಸುಖಗಳಿಗೆ ನೆಲೆಯಾದ ಗೃಹಸ್ಥಾಶ್ರಮದಲ್ಲಿ ಆಸೆಪಟ್ಟು ಸ್ತ್ರೀಮೋಹದಿಂದ ಕಳವಳಿಸುತ್ತ, ಆ ಪುತ್ರಕಳತ್ರಾದಿಪರಿವಾರಗಳಲ್ಲಿರುವ

ವಾತ್ಸಲ್ಯದಿಂದ ಯಾವಾಗಲೂ ಕುದಿಯುತ್ತಿರುವನು. ಸಂಸಾರವೆಂಬ ಈ ಬಲೆಯಲ್ಲಿ ಸಿಕ್ಕಿ ಅದನ್ನು ಬಿಡಿಸಿಕೊಳ್ಳುವುದಕ್ಕೆ ದಾರಿಯನ್ನು ಕಾಣದೆ ತತ್ತಳಿಸುವನು. ಮತ್ತು ಈ ಕಾಡುದಾರಿಯಲ್ಲಿ ಹೋಗತಕ್ಕ ಮನುಷ್ಯನು, ಆಗಾಗ ಎಚ್ಚರತಪ್ಪಿ ಪರ್ವತಗುಹೆಗಳಲ್ಲಿ ಪ್ರವೇಶಿಸಿಬಿಡುವನು. ಅಲ್ಲಿದ್ದ ಕಾಡಾನೆಗೆ ಹೆದರಿ,ಯಾವುದಾದರೂ ಒಂದು ಕಾಡುಬಳ್ಳಿಯನ್ನು ಹಿಡಿದು ಮರೆಯಾಗಿ ನಿಲ್ಲುವನು. ಹೇಗೋ ಕಷ್ಟದಿಂದ ಆ ವಿಪತ್ತಿನಿಂದ ತಪ್ಪಿಬಂದರೂ,ತಿರುಗಿ ತನ್ನ ಗುಂಪಿನವರೊಡನೆ ಕಲೆತು,ತನ್ನನ್ನು ಸುಖಿಯೆಂದು ಭಾವಿಸುವನು. ಮೊದಲಿನಂತೆಯೇ ಆ ಸಂಸಾರವೆಂಬ ಅರಣ್ಯದಲ್ಲಿ ಭಗವಂತನ ಮಾಯೆಯಿಂದ ಕಟ್ಟಲ್ಪಟ್ಟವನಾಗಿ,ಅದರಿಂದ ತಪ್ಪಿಸಿಕೊಳ್ಳಲಾರದಂತಿರುವನು. ಆದುದರಿಂದ ಓ ರಹೂಗಣಾ! ನೀನೂ ಈಗ ಪ್ರಾಣಿಗಳನ್ನು ದಂಡಿಸುವೆನೆಂಬ ಅಧಿಕಾರಮದವನ್ನು ಬಿಟ್ಟು, ಸಮಸ್ತಭೂತಗಳಲ್ಲಿಯೂ ಸ್ನೇಹವುಳ್ಳವನಾಗಿ, ಶಬ್ದಾದಿವಿಷಯಗಳಲ್ಲಿ ಮನಸ್ಸಿಡದೆ, ನಿನ್ನ ವರ್ಣಾಶ್ರಮಧರ್ಮಗಳಿಂದ ಭಗವಂತನನ್ನಾರಾಧಿಸು! ಅದರಿಂದುಂಟಾದ ಆತ್ಮಜ್ಞಾನವೆಂಬ ಶಸ್ತ್ರದಿಂದ,ಪ್ರಕೃತಿಸಂಬಂಧವೆಂಬ ವೃಕ್ಷವನ್ನು ಕತ್ತರಿಸಿ,ಆ ಅರಣ್ಯಮಾರ್ಗವನ್ನು ದಾಟುವನಾಗು!ಅದರಿಂದಾಚೆಗೆ ನೀನು ವಿಷ್ಣುಸ್ಥಾನವನ್ನು ಕೊಂಡಬಹುದು"ಎಂದನು. ಇದನ್ನು ಕೇಳಿ ರಹೂಗಣನು,"ಓ ಮಹಾತ್ಮಾ!ಎಲ್ಲಾ ಜನ್ಮಗಳಿಗಿಂತಲೂ ಈ ಮನುಷ್ಯಜನ್ಮವೇ ಬಹಳ ಮೇಲಾದುದೆಂದು ಭಾವಿಸುವೆನು.ಪರಲೋಕದಲ್ಲಿ ದೇವತೆಗಳಾಗಿ ಹುಟ್ಟಿಯೂ ಫಲವಿಲ್ಲ!ದೇವಾದಿಜನ್ಮಗಳನ್ನು ಪಡೆದವರಿಗೆ ಭಗವದ್ಭಕ್ತಿಯಿಂದ ಶುದ್ಧಮನಸ್ಸುಳ್ಳ ನಿಮ್ಮಂತಹ ಮಹಾತ್ಮರಸಹವಾಸವು ದುರ್ಲಭವಲ್ಲವೆ?ನಿಮ್ಮಂತವರ ಪಾದಧೂಳಿಯಿಂದ ಪಾಪಗಳನ್ನು ನೀಗಿದ ಮನುಷ್ಯರಿಗೆ, ಭಗವಂತನಲ್ಲಿ ಭಕ್ತಿಯುಂಟಾಗುವುದೇನೂ ಆಶ್ಚರ್ಯವಲ್ಲ!ನಿಮ್ಮೊಡನೆ ಒಂದು ಮುಹೂರ್ತಕಾಲದವರೆಗೆ ಸಹವಾಸಮಾಡಿದುದರಿಂದಲ್ಲವೇ,ಈಗ ನನ್ನ ಮನಸ್ಸಿನಲ್ಲಿ ಕುಯುಕ್ತಿಗಳಿಂದುಂಟಾಗಿದ್ದ ಅವಿವೇಕಗಳೆಲ್ಲವೂ ನೀಗಿದುವು! ಓ ಮಹಾತ್ಮಾ!ನಿಮ್ಮಂತಹ ಜ್ಞಾನಿಗಳು ಲೋಕದಲ್ಲಿ ಯಾವಯಾವ ರೀತಿಯಿಂದ ತಮ್ಮ ಮಹಿಮೆಯನ್ನು ಮರೆಸಿಕೊಂಡು ಸಂಚರಿಸುತ್ತಿರುವರೋ,ಅದನ್ನು ತಿಳಿಯುವುದು ನಮ್ಮಂತಹ ಮೂಢರಿಗೆ ಸಾ

ಥ್ಯವಲ್ಲ! ಅದುದರಿಂದ ಮೊತ್ತಕ್ಕೆ ಒಂದೇ ಮಾತಿನಿಂದ ಅವರೆಲ್ಲರಿಗೂ ನಮ
ಸ್ಕರಿಸುವೆನು. ನಿಮ್ಮಂತೆ ನಮ್ಮ ದಿವ್ಯತೇಜಸ್ಸನ್ನು ಮರೆಸಿಕೊಂಡಿರತಕ್ಕವರು
ಪ್ರಾಯಪವರಾಗಲಿ, ವಟುಗಳಾಗಲಿ, ಮುದುಕರಾಗಿರಲಿ ಎಳೆಮಕ್ಕಳಾಗಿರಲಿ,
ಅವರೆಲ್ಲರಿಗೂ ಇದೋ ನಮಸ್ಕಾರವು! ನಿಮ್ಮಂತೆಯೇ ಅವಧೂತವೇಷದಿಂದ
ಭೂಮಿಯಲ್ಲಿ ತಿರುಗುತ್ತಿರುವ ಸಮಸ್ತಬ್ರಾಹ್ಮಣರಿಗೂ ಇದೋ ನಮಸ್ಕಾ
ರವು. ನಿಮ್ಮಂತಹ ಬ್ರಾಹ್ಮಣರಿಂದ ನಮ್ಮ ಕ್ಷತ್ರಿಯಕುಲಕ್ಕೆ ಸರ್ವವಿಧದಲ್ಲಿ
ಯೂ ಕ್ಷೇಮವುಂಟಾಗಲಿ" ಎಂದನು. ಎಲೈ ಪರೀಕ್ಷಿದ್ರಾಜನೆ! ಎಣೆಯಿಲ್ಲದ
ಮಹಿಮೆಯುಳ್ಳವನಾಗಿಯೂ, ಬ್ರಹ್ಮರ್ಷಿಪುತ್ರನಾಗಿಯೂ ಇರುವ ಆ
ಭರತನು, ತನ್ನನ್ನು ತಿರಸ್ಕರಿಸಿದ ರಹೂಗಣನಲ್ಲಿಯೂ ದಯಾರ್ದ್ರಹೃದ
ಯನಾಗಿ, ಆತನಿಗೆ ಆತ್ಮತತ್ವವನ್ನುಪದೇಶಿಸಿ, ಅವನಲ್ಲಿ ಸ್ನೇಹವನ್ನೇ
ತೋರಿಸುತಿದ್ದು, ಆ ರಾಜನಿಂದ ಸತ್ಕೃತನಾಗಿ, ಆ ಸ್ಥಳವನ್ನು ಬಿಟ್ಟು
ಹೊರಟನು. ಆ ಬ್ರಾಹ್ಮಣನು ಇಂದ್ರಿಯಗಳನ್ನೂ, ಹಸಿವು ಬಾಯಾರಿಕೆ
ಮುಂತಾದ ಷಡೂರ್ಮಿಗಳನ್ನೂ, ಅಂತಃಕರಣವನ್ನೂ ಜಯಿಸಿದವನಾದು
ದರಿಂದ, ಜಲಪೂರ್ಣವಾದ ಮಹಾಸಮುದ್ರದಂತೆ ನಿಶ್ಚಲನಾಗಿ ಭೂಮಿಯ
ನ್ನು ಸುತ್ತುತಿದ್ದನು. ಇತ್ತಲಾಗಿ ರಹೂಗಣನೂಕೂಡ, ಜಡಭರತನಿಂದ
ಅಧ್ಯಾತ್ಮತತ್ವವನ್ನುಪದೇಶಹೊಂದಿದೊಡನೆ, ಅಜ್ಞಾನದಿಂದುಂಟಾದ ದೇ
ಹಾತ್ಮಾಭಿಮಾನವನ್ನು ನಿಶ್ಶೇಷವಾಗಿ ತ್ಯಜಿಸಿದನು. ಓ ಪರೀಕ್ಷಿದ್ರಾಜೇಂ
ದ್ರಾ! ಭಗವದ್ಭಕ್ತರ ಮತ್ತು ಅವರನ್ನು ನಂಬಿದವರ ಪ್ರಭಾವವು ಇದೇರೀತಿ
ಯಾಗಿರುವುದು" ಎಂದನು. ಆಗ ಪರೀಕ್ಷಿದ್ರಾಜನು, "ಎಲೈ ಮಹಾ
ತ್ಮನೆ! ಸರ್ವಜ್ಞನಾದ ನಿನ್ನಿಂದ ಸಂಸಾರದುಃಖವೆಂಬುದು ಬಹಳ ಚಮ
ತ್ಕಾರವಾಗಿ ನಿರೂಪಿಸಲ್ಪಟ್ಟಿತು. ಆದರೆ ಅವೆಲ್ಲವನ್ನೂ ನೀನು ಒಂದು
ಕಾಡಿಗೆ ಹೋಲಿಸಿ, ಪರೋಕ್ಷವಾಗಿಯೇ ಹೇಳಿದುದರಿಂದ, ಅದು ಜ್ಞಾನಿ
ಗಳಿಗೆಮಾತ್ರ ಸುಲಭವಾಗಿ ತಿಳಿಯಬಹುದೇಹೊರತು, ನಮ್ಮಂತಹ ಅವ್ಯು
ತ್ಪನ್ನರಿಗೆ ತಿಳಿಯುವುದು ಕಷ್ಟವು. ಆದುದರಿಂದ ಅದನ್ನು ನೀನು ಪ್ರಕೃ
ತೋಚಿತವಾದ ಶಬ್ದಗಳಿಂದಲೇ ಸ್ಪಷ್ಟವಾಗಿ ವಿವರಿಸಬೇಕು" ಎಂದನು.

ಇದು ಹದಿಮೂರನೆಯ ಅಧ್ಯಾಯವು.

{ ಭರತನು ಅರಣ್ಯಶಾದೃಶ್ಯದಿಂದ ಗೂಢವಾಗಿ ಹೇಳಿದ ಸಂಸಾರಕಷ್ಟಗಳನ್ನು ವ್ಯಕ್ತಪಡಿಸಿದುದು. }

ರಾಜೇಂದ್ರಾ! ಹಾಗಿದ್ದರೆ ಅದನ್ನು ಸ್ಪಷ್ಟವಾಗಿಯೇ ವಿವರಿಸುವೆನು. ಕೇಳು! ಸರ್ವೇಶ್ವರನಾದ ಶ್ರೀಮನ್ನಾರಾಯಣನ ಅಧೀನವಾಗಿರುವ ಮಾಯೆ ಯೆಂಬುದು, ಪ್ರಾಣಿವರ್ಗವನ್ನು ಸಂಸಾರವೆಂಬ ಭಯಂಕರವಾದ ಕಾಡು ದಾರಿಗೆ ತಂದು ಸೇರಿಸುವುದು. ದೇಹಾತ್ಮಾಭಿಮಾನವುಳ್ಳವರು ಈ ಸಂ ಸಾರದಲ್ಲಿ ಸೇರಿದಾಗ ಸತ್ವಗುಣದಿಂದ ಸತ್ಕರ್ಮಗಳಲ್ಲಿಯೂ, ತಮೋಗುಣ ದಿಂದ ದುಷ್ಕರ್ಮಗಳಲ್ಲಿಯೂ, ರಜೋಗುಣದಿಂದ ಮಿಶ್ರಕರ್ಮಗಳಲ್ಲಿಯೂ ಪ್ರವರ್ತಿಸಿ, ಆಯಾಕರ್ಮಾನುಸಾರವಾಗಿ ಉತ್ತಮಜನ್ಮವನ್ನೋ, ನೀಚಜನ್ಮ ವನ್ನೋ ಹೊಂದುತ್ತಿರುವರು ಹೀಗೆ ದೇಹವನ್ನು ಸಂಪಾದಿಸುವುದು, ಅದ ನ್ನು ಬಿಟ್ಟಗಲುವುದು, ಆ ದೇಹವನ್ನು ಹೊಂದಿದ್ದಾಗ ಅದಕ್ಕುಂಟಾಗತಕ್ಕ ಬಾಲ್ಯ ಯೌವನಾದ್ಯವಸ್ಥೆಗಳಿಂದ ವಿಕಾರಹೊಂದುತ್ತಿರುವುದು. ಇದೇ ಸಂಸಾರವೆನಿಸುವುದು. ಇದು ಅನಾದಿಯಾಗಿ ಅನುಸರಿಸಿ ಬರುತ್ತಿರುವುದು. ಈ ಸಂಸಾರವನ್ನು ತಗುಲುಕಟ್ಟುವುದಕ್ಕೆ ಇಂದ್ರಿಯವರ್ಗಗಳೇ ದ್ವಾರ ವೆನಿಸಿರುವುವು. ಧನಾರ್ಜನೆಗಾಗಿ ಕಾಡುಗುಡ್ಡಗಳನ್ನು ಸುತ್ತಿ ತೊಳಲುವ ವರ್ತಕಸಮೂಹದಂತೆ, ಭಗವನ್ಮಾಯೆಯಿಂದ ಈ ಸಂಸಾರದಲ್ಲಿ ಕಟ್ಟಲ್ಪ ಟ್ಟ ಜೀವಸಮೂಹವು, ಕರ್ಮಮಾರ್ಗವೆಂಬ ದುರ್ಗಮವಾದ ಕಾಡುದಾ ರಿಯಲ್ಲಿಯೇ ಸುತ್ತುತ್ತಿರುವುದು. ಇದರಲ್ಲಿ ಸಿಕ್ಕಿದ ಜೀವನು ಹಿಂದಿನಕರ್ಮ ಫಲಗಳನ್ನನುಭವಿಸುತ್ತಿರುವಾಗಲೇ ತಿರುಗಿ ನಿಷ್ಫಲಗಳಾಗಿಯೂ, ವಿಘ್ನ ಪ್ರಚುರವಾಗಿಯೂ ಇರುವ ವ್ಯಾಪಾರಗಳನ್ನೇ ಮೇಲೆಮೇಲೆ ನಡೆಸುತ್ತಿ ರುವನು. ಶ್ಮಶಾನದಂತೆ ಅಮಂಗಳಸ್ವರೂಪವಾದ ಈ ಸಂಸಾರವೆಂಬ ಘೋರಾರಣ್ಯದಲ್ಲಿ ಸುತ್ತಿ ಸಂಕಟಪಡುತ್ತಿರುವಾಗಲೂ, ಸಂತಾಪ ನಿವಾರಕವಾಗಿಯೂ, ಭಕ್ತೋತ್ತಮರಿಂದ ಅನುಸರಿಸಲ್ಪಡತಕ್ಕುದಾಗಿಯೂ ಇರುವ ಭಕ್ತಿಮಾರ್ಗವನ್ನು ಕಾಣಲಾರದೆ ತಪ್ಪುದಾರಿಯಲ್ಲಿಯೇ ಹೋ ಗುವನು. ಈ ಕಾಡುದಾರಿಯಲ್ಲಿ ಆರುಮಂದಿಕಳ್ಳರು ಹೊಂಚುಹಾಕು ತ್ತಿರುವರೆಂದು ಹೇಳಿದೆನಲ್ಲವೆ? ಜ್ಞಾನೇಂದ್ರಿಯಗಳೈದು, ಮತ್ತು ಮನಸ್ಸು.

ಇವಾರೂ ಆರುಮಂದಿ ಕಳ್ಳರೆಂದು ತಿಳಿ! ಇವು ಹೆಸರಿಗೆಮಾತ್ರ ಇಂದ್ರಿಯ ಗಳೆನಿಸಿಕೊಂಡಿದ್ದರೂ, ಒಳಗಳ್ಳರಂತೆ ಕೆಲಸಮಾಡುತ್ತಿರುವುವು ವರ್ತಕನು ತನ್ನ ಕಷ್ಟಾರ್ಜಿತವಾದ ಅಲ್ಪಸ್ವಲ್ಪಧನವನ್ನು ಗಂಟುಕಟ್ಟಿಕೊಂಡು, ಧ ರ್ಮೋಪಯೋಗಿಯಾದ ಆ ಹಣದಿಂದ, ಹೆಚ್ಚು ಹಣವನ್ನು ಸಂಪಾದಿಸಬೇ ಕೆಂದು ಬಯಸಿ,ಕಾಡುದಾರಿಯಲ್ಲಿ ಹೋಗುವಾಗ,ಕಳ್ಳರ ಕೈಗೆ ಸಿಕ್ಕಿ ತನ್ನಲ್ಲಿ ಮೊದಲಿದ್ದ ಹಣವನ್ನೂ ಕಳೆದುಕೊಳ್ಳುವನಲ್ಲವೆ?ಅದರಂತೆಯೇ ಮನುಷ್ಯ ನು ತಾನು ಪೂರ್ವದಲ್ಲಿ ನಡೆಸಿದ ಭಗವದಾರಾಧನರೂಪವಾದ ಅಲ್ಪಸ್ವಲ್ಪ ಧರ್ಮದಿಂದ, ಉತ್ತಮಜನ್ಮವನ್ನು ಪಡೆದಿರುವಾಗಲೂ, ಅದರಲ್ಲಿ ಸಂಸಾರ ಸುಖಕ್ಕಾಸೆಪಟ್ಟು, ಬುದ್ಧಿಹೀನನಾಗಿ, ಇಂದ್ರಿಯಗಳನ್ನು ನಿಗ್ರಹಿಸಲಾರದೆ ಎಚ್ಚರತಪ್ಪಿ, ಕರ್ಮಮಾರ್ಗವನ್ನು ಹಿಡಿದಪಕ್ಷದಲ್ಲಿ, ಒಳಗಳ್ಳರಂತೆ ಅವನಲ್ಲಿ ಸೇರಿರುವ ಇಂದ್ರಿಯಗಳು, ದರ್ಶನ, ಸ್ಪರ್ಶನ, ಶ್ರವಣ, ಆಸ್ವಾದನ, ಆ ಘ್ರಾಣಗಳೆಂಬ ತಮ್ಮ ವ್ಯಾಪಾರಗಳಿಂದಲೂ, ಸಂಕಲ್ಪವ್ಯವಸಾಯಗ ಳೆಂಬ ಅಂತಃಕರಣವೃತ್ತಿಗಳಿಂದಲೂ ಆ ಪುರುಷನನ್ನು ಮರುಳುಗೊಳಿಸಿ, ಅವನಲ್ಲಿ ಮೊದಲಿದ್ದ ಧರ್ಮರನ್ನೂ ಅಪಹರಿಸಿಬಿಡುವುವು. ಸಂಸಾರವೆಂಬ ಅಡವಿಯಲ್ಲಿ, ಹೆಂಡಿರು, ಮಕ್ಕಳು ಮುಂತಾದ ಪರಿವಾರಗಳೇ, ನರಿ ತೋಳ ಮುಂತಾದ ಕಾಡುಮೃಗಗಳೆಂದು ತಿಳಿ! ಈ ಪರಿವಾರದವರೆಲ್ಲರೂ ಹೆಸರಿಗೆ ಮಾತ್ರ ನಂಟರೆನಿಸುವರೇಹೊರತು, ಸ್ವಭಾವದಲ್ಲಿ ಕಾಡುಮೃಗಗಳಲ್ಲದೆಬೇರೆ ಯಲ್ಲ! ಮಂದೆಯಲ್ಲಿ ಸಾಕಿದ ಮೇಕೆಯನ್ನು ಬಲಾತ್ಕಾರದಿಂದ ಹಿಡಿದು ಸಾ ಗಿಸುವ ತೋಳಗಳಂತೆ, ಇವರು ಸರ್ವವಿಧದಲ್ಲಿಯೂ ಭಗವಂತನಿಗೆ ಅಧೀನ ವಾದ ಜೀವನನ್ನು ತಮಗಧೀನಮಾಡಿಕೊಂಡು, ಸುತ್ತಿಮುತ್ತಿ ಕಿತ್ತು ತಿನ್ನು ವರು. ಈ ಸಂಸಾರವೆಂಬ ಹೊಲದಲ್ಲಿ ಮೇಲೆಮೇಲೆ ಬೆಳೆಯುತ್ತಿರುವ ಕರ್ಮ ಗಳೇ ಕಳೆಗಳು! ವರ್ಷವರ್ಷಕ್ಕೂ ಹೊಲವನ್ನು ಉತ್ತು ಕೃಷಿಮಾಡುತ್ತಿದ್ದ ರೂ, ತಿರುಗಿ ಬಿತ್ತುವ ಕಾಲಕ್ಕೆ ಕಳೆಗಳು ತುಂಬಿಹೋಗಿರುವುವಷ್ಟೆ? ಬೇರುಸಹಿತವಾಗಿ ಸುಟ್ಟಹೊರತು, ಆ ಕಳೆಗಳು ಹುಟ್ಟುವುದು ನಿಶ್ಶೇ ಷವಾಗಿ ತಪ್ಪಲಾರದು! ಅದರಂತೆಯೇ ಗೃಹಸ್ಥಾಶ್ರಮವು ಕರ್ಮಗ ಳೆಂಬ ಸೊಪ್ಪುಸದೆಗಳಿಗೆ ಉತ್ಪತ್ತಿಕ್ಷೇತ್ರ ವೆನಿಸಿರುವುದು. ಇದರಲ್ಲಿ

ಕರ್ಮಬೀಜಗಳನ್ನು ನಿಶ್ಶೇಷವಾಗಿ ನಾಶಹೊಂದಿಸದಿದ್ದರೆ, ಕಾಲಕಾಲಕ್ಕೆ ಮೊಳೆಯುತ್ತಲೇ ಇರುವುವು. ಮತ್ತು ಗೃಹವೆಂಬುದು ಕರ್ಮಗಳನ್ನು ತುಂಬಿಟ್ಟ ಕರಡಿಗೆಯಂತಿರುವುದು. ಭರಣಿಯಲ್ಲಿಟ್ಟ ಕರ್ಪೂರವು ತೀರಿ ಹೋದರೂ, ಅದರ ವಾಸನೆಯು ಬಿಟ್ಟು ಹೋಗದಂತೆ, ಕರ್ಮಗಳು ಬಿಟ್ಟು ಹೋದರೂ ಕರ್ಮವಾಸನೆಯೆಂಬುದು ಅಂಟಿಬರುತ್ತಲೇ ಇರುವುದು. ಹೀಗೆ ಕರ್ಮಕ್ಷೇತ್ರದ ದಾರಿಯಲ್ಲಿ ಹೋಗತಕ್ಕವನನ್ನು, ದುರ್ಜನರೆಂಬ ಕಾಡುನೊಣಗಳೂ, ಸೊಳ್ಳೆಗಳೂ ಸುತ್ತಿಮುತ್ತಿ ಬಾಧಿಸುವುವು. ಮತ್ತು ಹೊಲದಲ್ಲಿ ಬೆಳೆದ ಪೈರುಗಳಿಗೆ ಮಿಡಿತೆಗಳಿಂದಲೂ, ಹಕ್ಕಿಗಳಿಂದಲೂ, ಕಳ್ಳರಿಂದಲೂ, ಇಲಿಗಳಿಂದಲೂ, ಆಗಾಗ ಅಪಾಯವುಂಟಾಗುವಂತೆ, ಮನುಷ್ಯನು ಬಹಳ ಕಷ್ಟಪಟ್ಟು ಸಂಪಾದಿಸಿ,ತನ್ನ ಹೊರಗಿನ ಪ್ರಾಣದಂತೆ ರಕ್ಷಿಸಿಟ್ಟಿರುವ ಹಣವು ದುರ್ಜನರ ಪಾಲಾಗುವುದು. ಈ ಸಂಸಾರವೆಂಬ ಕಾಡುದಾರಿಯಲ್ಲಿ ತೊಳಲುತ್ತಿರುವ ಮನುಷ್ಯನು, ಅಹಂಕಾರಮಮಕಾರರೂಪವಾದ ಅವಿದ್ಯೆಯಿಂದಲೂ, ವಿಷಯಾಸಕ್ತಿಯಿಂದಲೂ, ಕರ್ಮವಾಸನೆಯಿಂದಲೂ, ಬುದ್ಧಿಗೆಟ್ಟವನಾಗಿ, ಗಂಧರ್ವನಗರದಂತೆ ಅಸ್ಥಿರವಾದ ತನ್ನ ಶರೀರಾದಿಗಳನ್ನು ನೋಡಿ, ಅವುಗಳನ್ನೇ ಸ್ಥಿರವೆಂದು ಭ್ರಮಿಸಿ, ಆಗಾಗ ತನ್ನಲ್ಲಿತಾನೇ ಸಂತೋಷಿಸುತ್ತಿರುವನು. ಮತ್ತು ಈ ದಾರಿಯಲ್ಲಿ ನಡೆಯುತ್ತಿರುವಾಗ, ಮೃಗತೃಷ್ಣೆಯಂತೆ ಸುಖಭ್ರಾಂತಿಯನ್ನು ಹುಟ್ಟಿಸತಕ್ಕ ಶಬ್ದಾದಿವಿಷಯಗಳು ಮನುಷ್ಯನ ಮನಸ್ಸನ್ನು ಮರುಳುಮಾಡುವುವು. ದಾಹಗೊಂಡವನು ಬಿಸಿಲ್ಗೊರೆಗೆ ಆಸೆಪಡುವಂತೆ, ಪಾನ, ಭೋಜನ, ಮೈಥುನಗಳೇ ಮೊದಲಾದ ವ್ಯಸನಗಳಲ್ಲಿ ಅಧಿಕಾತುರವುಳ್ಳ ಜೀವನು ಸುಖಾಭಾಸಗಳಾದ ಆ ವಿಷಯಗಳಿಗಾಗಿ ಆಸೆಪಡುವನು. ಕಾಡುದಾರಿಯಲ್ಲಿ ಕೊಳ್ಳಿಯ ಪಿಶಾಚಗಳಂತೆ ಇದರಲ್ಲಿ ಸುವರ್ಣವೆಂಬುದು ಆಗಾಗ ಕಣ್ಣಿಗೆ ಗೋಚರಿಸುತ್ತಿರುವುದು. ಕತ್ತಲೆಯಲ್ಲಿ ಕಣ್ಣುಕಾಣದೆ ತತ್ತಳಿಸುವವನು, ತನ್ನ ಬೆಳಕಿಗಾಗಿ ಪಿಶಾಚಿಗಳ ಕೈಕೊಳ್ಳಿಯನ್ನು ಕಿತ್ತುಕೊಳ್ಳುವಂತೆ, ಈ ಸಂಸಾರಮಾರ್ಗದಲ್ಲಿ ನಡೆಯತಕ್ಕ ಮನುಷ್ಯನು, ಆಸುವರ್ಣಕ್ಕಾಗಿ ಆಸೆಪಟ್ಟು ಅಪಾಯಕ್ಕೆ ಗುರಿಯಾಗುವನು. ರಾಜೇಂದ್ರಾ! ಆ ಸುವರ್ಣವೆಂಬುದನ್ನು ಅಗ್ನಿಯ ಮಲ

ವೆಂದು ಹೇಳುವರು. ಅದು ಸಮಸ್ತದೋಷಗಳಿಗೂ ನೆಲೆಯಾಗಿರುವುದು. ಆ ಬಂಗಾರದಂತೆಯೇ ಬಣ್ಣವುಳ್ಳ ರಜೋಗುಣದಿಂದ ಬುದ್ಧಿಗೆಟ್ಟವನಿಗೆ ಅದ ರಲ್ಲಿ ಆಸೆಹುಟ್ಟುವುದೇನೂ ಆಶ್ಚರ್ಯವಲ್ಲ. ಮತ್ತು ಈ ಸಂಸಾರವೆಂಬ ಅಡವಿ ಯಲ್ಲಿ ಸಂಚರಿಸತಕ್ಕವನು, ಮನೆ ಮಠಗಳಲ್ಲಿಯೂ, ಆಸ್ತಿಪಾಸ್ತಿಗಳಲ್ಲಿಯೂ ತನ್ನದೆಂಬ ಅಭಿಮಾನವನ್ನಿಟ್ಟು, ಅದರ ರಕ್ಷಣೆಗಾಗಿ ಎಡೆಬಿಡದೆ ದುಡಿಯು ತ್ತಿರುವನು. ಅರಣ್ಯದಲ್ಲಿ ಸಂಚರಿಸತಕ್ಕವನಿಗೆ ಸುಳಿಗಾಳಿಯಿಂದ ಮೇಲೆ ದ್ದ ಧೂಳು ಕಣ್ಣಿಗೆ ಕವಿದಾಗ, ಆ ಮನುಷ್ಯನು ದಿಕ್ಕುಕಾಣದೆ ತತ್ತಳಿಸುವ ನಲ್ಲವೆ? ಅದರಂತೆ ಈ ಸಂಸಾರವೆಂಬ ಅರಣ್ಯದಲ್ಲಿ ಸ್ತ್ರೀಯರೇ ಸುಳಿಗಾ ಳಿಯು! ಅವರು ಪುರುಷನನ್ನು ತಮ್ಮ ಲಾಲನಪಾಲನಗಳಿಂದ ಚೆನ್ನಾಗಿ ಮೇ ಲಕ್ಕೇರಿಸುವರು ಅವರು ಹುಟ್ಟಿಸತಕ್ಕ ಮೋಹರೂಪವಾದ ರಜೋಗುಣವೇ ಆ ಸುಳಿಗಾಳಿಯಿಂದೆದ್ದ ಧೂಳೆಂದು ತಿಳಿ! ಇದರಲ್ಲಿ ಸಿಕ್ಕಿ ಮೋಹಾಂಧನಾದ ಪುರುಷನು, ಕರ್ಮಸಾಕ್ಷಿಗಳಾದ ದೇವತೆಗಳನ್ನೂ ಲಕ್ಷ್ಯಮಾಡದೆ ಆ ಮಾ ರ್ಗಕ್ಕೆ ಹೋಗುವನು. ಶಬ್ದಾದಿವಿಷಯಗಳು ನಿಸ್ಸಾರವೆಂಬುದನ್ನು ಆಗಾಗ ತಾನು ತಿಳಿಯುತಿದ್ದರೂ, ಒಮ್ಮೊಮ್ಮೆ ದೇಹಾಭಿಮಾನದಿಂದ ಆತ್ಮಚಿಂ ತೆಯನ್ನು ಮರೆತು, ಬಾಯಾರಿದವನು ಬಿಸಿಲ್ಗೊರೆಗೆ ಆಸೆಪಟ್ಟೋ ಡುವಂತೆ, ಆ ವಿಷಯಸುಖಗಳನ್ನೇ ಪುರುಷಾರ್ಥವೆಂದು ಭ್ರಮಿಸಿ ಅದ ಕ್ಕಾಗಿ ದುಡಿಯುತ್ತಿರುವನು. ಗೂಬೆಗಳ ಧ್ವನಿಯಂತೆಯೂ, ಜೀರುಂಡೆಗಳ ಧ್ವನಿಯಂತೆಯೂ ಆಗಾಗ ಕರ್ಣಕಠೋರವಾಗಿ ಕೇಳಿಸುತ್ತಿರುವ ಶತ್ರು ಜನಗಳ ತಿರಸ್ಕಾರವಾಕ್ಯಗಳಿಂದಲೂ, ರಾಜಭಟರ ಪರ್ಜನಧ್ವನಿಗಳಿಂದಲೂ ಕಿವಿಬೇನೆಯನ್ನು ಹೊಂದಿ, ದೈನ್ಯದಿಂದ ಕೊರಗುವನು. ಕಾಡಿನಲ್ಲಿ ನಿರರ್ಥಕವಾಗಿ ಬೆಳೆಯುವ ವಿಷವೃಕ್ಷಗಳಂತೆಯೂ, ವಿಷದಬಳ್ಳಿಗಳಂತೆಯೂ, ವಿಷಜಲದಿಂದ ತುಂಬಿದ ಹಳೇಭಾವಿಗಳಂತೆಯೂ ತಮ್ಮಲ್ಲಿರುವ ಹಣವನ್ನು ತಮ್ಮ ದೇಹಸುಖಕ್ಕಾಗಲಿ, ದಾನಧರ್ಮಗಳಿಂದ ಕೀರ್ತಿಯನ್ನು ಸಂ ಪಾದಿಸುವುದಕ್ಕಾಗಲಿ ಉಪಯೋಗಿಸದೆ, ಒಳಗೊಳಗೆ ಬಚ್ಚಿಟ್ಟುಕೊಂ ಡು, ಜೀವಚ್ಛವದಂತೆ ವರ್ತಿಸುವ ಧನವಂತರು ಈ ಪ್ರಪಂಚದಲ್ಲಿ ಅನೇಕರುಂಟು. ಪುಣ್ಯಹೀನನಾಗಿ ಈ ಸಂಸಾರಾಟವಿಯಲ್ಲಿ ಸಂಚರಿಸತಕ್ಕ

ಮನುಷ್ಯನು, ಆ ವಿಷವೃಕ್ಷಗಳನ್ನು ನಂಬಿ ನಿಂತಂತೆ, ಧನಾಭಿಲಾಷೆಯಿಂದ ಅಂತಹ ಧನಿಕರ ಕಾಲನ್ನು ಹಿಡಿದು, ತಾನೂ ಜೀವಚ್ಛವದಂತೆ ಅವರಲ್ಲಿ ದೈನ್ಯದಿಂದ ವರ್ತಿಸುತ್ತಿರುವನು. ಕಾಡಿನಲ್ಲಿ ತಿರುಗುವವನು, ಅಲ್ಲಲ್ಲಿ ಕಾಣುವ ಹಳ್ಳಕೊಳ್ಳಗಳನ್ನು ನೋಡಿ ನೀರಿನಾಸೆಗಾಗಿ ಅದರಲ್ಲಿಳಿದು, ಅಲ್ಲಿ ನೀರನ್ನೂ ಕಾಣದೆ, ಕಾಲುಮುರಿದು ಬೀಳುವಂತೆ, ಈ ಸಂಸಾರವೆಂಬ ಅರಣ್ಯದಲ್ಲಿ ತೊಳಲುತ್ತಿರುವ ಜೀವನೂಕೂಡ, ದೇವಬ್ರಾಹ್ಮಣನಿಂದಕರಾದ ಪಾಷಂಡಿಗಳ ದುರ್ಬೋಧನೆಗೆ ಮರುಳಾಗಿ, ಇಹಲೋಕಪರಲೋಕದ ಸುಖಗಳೆರಡನ್ನೂ ಕೆಡಿಸಿಕೊಂಡು, ಎರಡುವಿಧದಿಂದಲೂ ದುಃಖಕ್ಕೊಳಗಾಗುವನು. ಮತ್ತು ಈ ಪ್ರಪಂಚದಲ್ಲಿ ಜೀವನು, ತನ್ನ ಜೀವನಕ್ಕಾಗಿ ಅನೇಕಜನರನ್ನು ಪೀಡಿಸಿದಾಗಲೂ, ತನಗೆ ಆಹಾರವು ದೊರಕದಿದ್ದಸಂದರ್ಭಗಳಲ್ಲಿ, ನೆಂಟರಿಷ್ಟರೆಂದೂ, ತಂದೆ ಮಕ್ಕಳೆಂದೂ ನೋಡದೆ ಎಲ್ಲರನ್ನೂ ಕಿತ್ತು ತಿನ್ನುವುದಕ್ಕೆ ಪ್ರಯತ್ನಿಸುವನು. ರಾಜಾ! ಸಂಸಾರಿಗೆ ಅವನು ವಾಸಮಾಡತಕ್ಕ ಮನೆಯೇ ಒಂದು ದೊಡ್ಡ ಜಂಗಾಡೆಂದು ತಿಳಿ! ಒಮ್ಮೊಮ್ಮೆ ಅವನು ಮನೆಗೆ ಬಂದು, ಅದರಲ್ಲಿ ತನಗೆ ಬೇಕಾದ ಭೋಗ್ಯವಸ್ತುಗಳಿಲ್ಲದುದನ್ನು ನೋಡಿದಾಗ, ಕಾಡುಗಿಚ್ಚಿನ ನಡುವೆ ಸಿಕ್ಕಿಬಿದ್ದವನಂತೆ ದುಃಖಾಗ್ನಿಯಿಂದ ಬೇಯುವನು. ಈ ಸಂಸಾರವೆಂಬ ಅರಣ್ಯದಲ್ಲಿ ಸಂಚರಿಸತಕ್ಕವನಿಗೆ, ದುಷ್ಕಾಲವಶದಿಂದ ಒಮ್ಮೊಮ್ಮೆ ರಾಜಭಟರೇ ಪ್ರತಿಕೂಲರಾಗುವರು. ಆ ರಾಜಭಟರೆಂಬ ರಾಕ್ಷಸರ ಕೈಗೆ ಸಿಕ್ಕಿಬಿದ್ದು, ತನ್ನ ಪ್ರಾಣದಂತಿರುವ ಧನವೆಲ್ಲವನ್ನೂ ಕಳೆದುಕೊಂಡು ಹೆಣದಂತಾಗುವನು. ತಂದೆ ಮಕ್ಕಳು ಮೊದಲಾದ ಬಂಧುವರ್ಗಗಳೆಲ್ಲವೂ ಸ್ವಪ್ನ ಪದಾರ್ಥಗಳಂತೆ ಸ್ವಲ್ಪಕಾಲವಿದ್ದು ಬಿಟ್ಟು ಹೋಗತಕ್ಕವುಗಳೇ ಹೊರತು ನಿತ್ಯವಲ್ಲ. ಮತ್ತು ಆಯಾ ಮನುಷ್ಯನ ಮನೋಭಾವನೆಯಿಂದಲೇ ಆ ಸಂಬಂಧಗಳೆಲ್ಲವೂ ಏರ್ಪಟ್ಟಿರುವುವು. ಹೀಗೆ ಅವೆಲ್ಲವೂ ಅನಿತ್ಯಗಳಾಗಿದ್ದರೂ, ಅವುಗಳನ್ನು ನಿತ್ಯವೆಂದು ಭ್ರಮಿಸುತ್ತ, ಸ್ವಪ್ನಸುಖದಿಂದ ಸಂತೋಷಪಡುವಂತೆ, ಅವರೊಡನೆ ಕ್ಷಣಮಾತ್ರಸುಖಕ್ಕಾಗಿ ಸಂತೋಷಪಡುವನು. ಮತ್ತು ಗೃಹಧರ್ಮದಲ್ಲಿದ್ದವನು ನಡೆಸಬೇಕಾದ ಕರ್ಮವಿಧಿಗಳು ಪರ್ವ

ದಂತೆ ಅಪಾರವಾಗಿ ಮೇಲೆ ಬಿದ್ದಿರುವುವು. ಬಹಳವಾದ ಹಣದಿಂದಲೂ, ಶರೀರಶ್ರಮದಿಂದಲೂ ನಡೆಸಬೇಕಾದ ಈ ಯಜ್ಞಾದಿಕರ್ಮಗಳನ್ನು ಕೊನೆ ಮುಟ್ಟಿಸುವುದಕ್ಕಾಗಿ ಪ್ರಯತ್ನಿಸುವವನು, ಪರ್ವತಶಿಖರವನ್ನೇರುವುದಕ್ಕೆ ಯತ್ನಿಸುವವನು ನಡುನಡುವೆ ಕಲ್ಲುಮುಳ್ಳುಗಳಲ್ಲಿ ಕಾಲುಮುರಿದು ಬೀಳು ವಂತೆ, ಆಗಾಗ ಸಾಂಸಾರಿಕದುಃಖಗಳಿಂದಲೂ, ಇತರವಿಘ್ನಗಳಿಂದ ಲೂ ಅದನ್ನು ಕೊನೆಮುಟ್ಟಿಸಲಾರದೆ ಬಹಳ ದುಃಖಕ್ಕೊಳಗಾಗು ವನು. ಮತ್ತು ಸಂಸಾರಿಯು, ಜೀವನವನ್ನು ಸಂಪಾದಿಸಲಾರದಿದ್ದಾಗ, ದುಸ್ಸಹವಾದ ಜಾಠರಾಗ್ನಿಯ ಬಾಧೆಯಿಂದ ಕಂಬಕುಂದಿ ಕೃಶನಾಗಿ, ಆಗಾಗ ತನ್ನ ಹೆಂಡಿರುಮಕ್ಕಳಮೇಲೆಯೇ ನಿಷ್ಕಾರಣವಾಗಿ ಉರಿದು ಬೀಳುವನು. ರಾಜಾ! ಈ ಸಂಸಾರವೆಂಬ ಅರಣ್ಯಮಾರ್ಗದಲ್ಲಿ ನಿದ್ರೆ ಯೆಂಬುದೇ ದೊಡ್ಡ ಬೆಟ್ಟದ ಹಾವೆಂದು ತಿಳಿ! ಆಗಾಗ ಈ ನಿದ್ರೆಯೆಂಬ ಹಾವಿನ ಬಾಯಿಗೆ ತುತ್ತಾದವನು, ಅಂಧತಮಸ್ಸಿನಂತಿರುವ ಅಜ್ಞಾ ನದಿಂದ, ತನ್ನನ್ನಾಗಲಿ, ಇತರರನ್ನಾಗಲಿ, ತಿಳಿಯದೆ, ಶೂನ್ಯಾರಣ್ಯ ದಲ್ಲಿ ಬಿಸುಟ ಬೀಳಿನಂತೆ ಪ್ರಜ್ಞೆಯಿಲ್ಲದೆ ಮಲಗಿರುವನು. ಆಗಾಗ ದು ರ್ಜನರೆಂಬ ವಿಷಸರ್ಪಗಳ ಬಾಯಿಗೆ ಬಿದ್ದು, ಕೊಬ್ಬಡಗಿ, ದುಃಖದಿಂದ ಬೇಯುತ್ತ, ಹಾಳುಬಾವಿಯಲ್ಲಿ ಕಾಲುಜಾರಿಬಿದ್ದ ಕುರುಡನಂತೆ ಜ್ಞಾನ ಹೀನನಾಗಿ ಕಳವಳಿಸುವನು. ಮತ್ತೊಮ್ಮೆ ಅತ್ಯಲ್ಪವಾದ ವಿಷಯಸುಖವ ನ್ನು ಹುಡುಕುತ್ತ, ಅದಕ್ಕಾಗಿ ಪರಸ್ವತ್ತಿಗೂ, ಪರಸ್ತ್ರೀಯರಿಗೂ ಆಸೆಪ ಟ್ಟು, ಅದರಿಂದ ರಾಜದಂಡಕ್ಕೂ, ಇತರರ ಪ್ರಹಾರಕ್ಕೂ ಗುರಿಯಾಗಿ,ನರ ಕಪ್ರಾಯವಾದ ಕಾರಾಗೃಹದಲ್ಲಿ ಬೀಳುವನು. ರಾಜೇಂದ್ರಾ! ಜೀವನಿಗೆ ಸಂಸಾರದ ಮೂಲಕವಾಗಿ ಇಹಲೋಕಪರಲೋಕಗಳೆರಡರಲ್ಲಿಯೂ ಇ ಷ್ಟೊಂದು ದುರವಸ್ಥೆಗಳುಂಟಾಗುವುದಕ್ಕೆ ಕರ್ಮಗಳೇ ಕಾರಣವು. ಪ್ರ ವೃತ್ತಿಮಾರ್ಗದಲ್ಲಿಬಿದ್ದು ಫಲಾಪೇಕ್ಷೆಯಿಂದ ನಡೆಸತಕ್ಕ ಕರ್ಮವೇ ಈ ಸಂಸಾರಕ್ಕೆ ಜನ್ಮಕ್ಷೇತ್ರವೆಂದು ಹಿರಿಯರು ನಿರ್ಣಯಿಸಿರುವರು.

ಜೇನುಗೂಡನ್ನು ಕಿಳುವಂತೆ ಇತರರು ಕೂಡಿಟ್ಟ ಹಣವನ್ನು ಕ ದ್ದು, ರಾಜಭಟರ ಸೆರೆಯಲ್ಲಿ ಬಿದ್ದವನು, ಕಷ್ಟದಿಂದ ಅದನ್ನು ತಪ್ಪಿಸಿ

ಕೊಂಡು ಬಂದರೂ, ತಾನು ದುರ್ಮಾರ್ಗದಿಂದ ಸಂಪಾದಿಸಿದ ಆ ಹಣವನ್ನನುಭವಿಸುತ್ತಿರುವಾಗ, ಅದನ್ನು ಬೇರೊಬ್ಬರು ಉಪಾಯದಿಂದ ಅಪಹರಿಸುವರು. ಅವರಿಂದ ಮತ್ತೊಬ್ಬರು ಕಿತ್ತುಕೊಳ್ಳುವರು. ಹೀಗೆ ಧನವೆಂಬುದು ಒಂದು ನೆಲೆಯಲ್ಲಿ ನಿಲ್ಲದೆ ಒಬ್ಬನ ಕೈಯಿಂದ ಮತ್ತೊಬ್ಬನ ಕೈಗೆ ಹಾರುತ್ತಿರುವುದೇಹೊರತು, ಅದನ್ನು ನೆಮ್ಮದಿಯಿಂದನ್ನುಭವಿಸತಕ್ಕವನೊಬ್ಬನೂ ಇಲ್ಲವು. ಸಂಸಾರವೆಂಬ ಕಾಡುದಾರಿಯಲ್ಲಿ ತಿರುಗತಕ್ಕವನು ಒಮ್ಮೊಮ್ಮೆ ಬಿಸಿಲು ಮಳೆ ಗಾಳಿಗಳ ಬಾಧೆಯನ್ನು ತಡೆಯಲಾರದೆ ಮರುಗುವನು. ಮತ್ತೊಮ್ಮೆ ರೋಗಾದಿಗಳಿಂದ ಪೀಡಿತನಾಗಿ ನರಳುವನು. ಹೀಗೆ ಆಧ್ಯಾತ್ಮಿಕವೆಂದೂ, ಆಧಿಭೌತಿಕವೆಂದೂ, ಆಧಿದೈವಿಕವೆಂದೂ ಕರೆಯಲ್ಪಡುವ ತಾಪತ್ರಯಗಳಿಗೆ ಆಗಾಗ ಸಿಕ್ಕಿ, ಅದಕ್ಕೆ ತಕ್ಕ ಪ್ರತೀಕಾರವನ್ನು ಕಾಣದೆ ದುಃಖಿಸುವನು. ಒಮ್ಮೊಮ್ಮೆ ವ್ಯಾಪಾರದ ನೆವದಿಂದ ಬೇರೆಯವರಲ್ಲಿರುವ ಒಂದೆರಡುಕಾಸನ್ನು ಕಿತ್ತುಕೊಳ್ಳುವುದಕ್ಕೆ ಯತ್ನಿಸಿ, ಆ ಧನದಾಸೆಯಿಂದ ಅನೇಕಜನಗಳ ದ್ವೇಷಕ್ಕೆ ಪಾತ್ರನಾಗುವನು. ಇದೇನೆವದಲ್ಲಿ! ಒಮ್ಮೊಮ್ಮೆ ತನ್ನಲ್ಲಿದ್ದುದೆಲ್ಲವನ್ನೂ ಕಳೆದುಕೊಂಡು, ಜೀವನಕ್ಕಿಲ್ಲದೆ ಸಂಕಟಪಡುತ್ತ, ಪರರಲ್ಲಿ ಯಾಚಿಸಿ ಅವಮಾನಾದಿಗಳನ್ನು ಹೊಂದುವನು. ಹೀಗೆ ಹಣದಮೂಲಕವಾಗಿ ಸ್ವಜನಗಳೊಡನೆ ವೈರವನ್ನು ಕಟ್ಟಿಕೊಂಡಾಗಲೂ, ಸ್ವಜಾತ್ಯಭಿಮಾನವೆಂಬ ಪೂರ್ವವಾಸನೆಯಿಂದ, ಆ ವೈರಿಗಳಲ್ಲಿಯೇ ವಿವಾಹಾದಿಕ್ರಿಯೆಗಳಿಂದ ಸಂಬಂಧವನ್ನು ಬೆಳೆಸುವನು. ಹೀಗೆ ಅನೇಕಕ್ಲೇಶಗಳಿಂದ ತುಂಬಿದ ಈ ಸಂಸಾರಮಾರ್ಗದಲ್ಲಿ ನಡೆಯುವವನು. ತಂದೆ, ತಾಯಿ ಮೊದಲಾದ ತನ್ನ ಬಂಧುವರ್ಗಗಳಲ್ಲಿ,ವಿಪತ್ತಿನಲ್ಲಿ ಸಿಕ್ಕಿದವರಿಗಾಗಿಯೂ, ಸತ್ತವರಿಗಾಗಿಯೂ ದುಃಖಿಸುವನು. ಸ್ವಲ್ಪಕಾಲದಲ್ಲಿಯೇ ಹಿಂದೆ ಸತ್ತವರ ಚಿಂತೆಯನ್ನು ಬಿಟ್ಟು, ಮುಂದೆ ಹುಟ್ಟಿದ ಮಕ್ಕಳನ್ನು ನೋಡಿ ಮುದ್ದಾಡಿ, ಸಂತೋಷದಿಂದ ಹಿಗ್ಗುವನು. ಆ ಮಕ್ಕಳಿಗೇನಾದರೂ ವಿಪತ್ತು ಸಂಭವಿಸಿದಾಗ, ಸಹಿಸಬಾರದ ಸಂಕಟದಿಂದ ಕೊರಗುವನು. ಕಣ್ಣೀರುಬಿಟ್ಟು ಗೋಳಿಡುವನು! ಬೇರೆ ಮಕ್ಕಳು ಹುಟ್ಟಿದಾಗ, ಮೊದಲಿನ ಮಕ್ಕಳ ಚಿಂತೆಯ

ನ್ನು ಬಿಟ್ಟು ಹೊಸಮಕ್ಕಳನ್ನು ಲಾಲಿಸುತ್ತ ಆ ಸಂತೋಷದಿಂದುಬ್ಬುವ ನು. ಒಮ್ಮೊಮ್ಮೆ ಆ ಮಕ್ಕಳಾಟವನ್ನು ನೋಡಿ ಆಶ್ಚರ್ಯಪಟ್ಟು ಅದನ್ನು ಮತ್ತೊಬ್ಬರೊಡನೆ ಹೇಳಿಹೇಳಿ ಹಿಗ್ಗುವನು. ಅಟ್ಟಹಾಸದಿಂದ ನಗುವ ನು ಆ ಮಕ್ಕಳಿಗೆ ಮುಂದೆ ಬರಬಹುದಾದ ವಿಪತ್ತನ್ನು ಶಂಕಿಸಿ ಇದ್ದ ಕ್ಕಿದ್ದಹಾಗೆ ಭಯಪಡುವನು. ಸಂಸಾರಿಯಾದ ಮನುಷ್ಯನು ಹೀಗೆ ಸುತ್ತಿ ಸುತ್ತಿ ಬರುತ್ತಿರುವ ದುಃಖಹರ್ಷಗಳಿಂದ ಮೈಮರೆತು, ತನ್ನ ಸತ್ಕರ್ಮ ಗಳೆಲ್ಲವನ್ನೂ ಮರೆತು ಬಿಡುವನು. ಎಷ್ಟುದಿನವಾದರೂ ಆ ಸಂಸಾರಮಾ ರ್ಗವನ್ನು ದಾಟುವುದಕ್ಕೆ ದಾರಿಯನ್ನು ಯೋಚಿಸಲಾರನು. ರಾಜೇಂದ್ರಾ! ಆ ಸಂಸಾರಮಾರ್ಗವನ್ನು ದಾಟಿಸುವುದಕ್ಕೆ, ಕರ್ಮಜ್ಞಾನಯೋಗಗಳಿಂದ ಸಹಕರಿಸಲ್ಪಟ್ಟ ಭಕ್ತಿಯೋಗವೊಂದು ಹೊರತು ಬೇರೆ ದಾರಿಯಿಲ್ಲ. ಆ ಭಕ್ತಿಯೇ ನಿರತಿಯಾನಂದರೂಪವಾದ ಪರಮಾತ್ಮನನ್ನು ಸಾಕ್ಷಾತ್ಕರಿಸು ವುದಕ್ಕೆ, ಮುಖ್ಯೋಪಾಯವಾದ ಯೋಗಾನುಶಾಸನವೆನಿಸುವುದು. ಕೇವಲ ಶಾಂತಸ್ವಭಾವರಾಗಿಯೂ, ಜಿತೇಂದ್ರಿಯರಾಗಿಯೂ, ಮನಸ್ಸ ನ್ನು ನಿಗ್ರಹಿಸಿದವರಾಗಿಯೂ, ವೈರಬುದ್ಧಿಯಿಲ್ಲದವರಾಗಿಯೂ, ಸರ್ವಭೂತ ಸುಹೃತ್ತುಗಳಾಗಿಯೂ ಇರುವ ಮಹರ್ಷಿಗಳುಹೊರತು, ಬೇರೆ ಯಾರೂ ಅದನ್ನು ಪಡೆಯಲಾರರು. ದಿಗ್ಗಜಗಳನ್ನು ಜಯಿಸತಕ್ಕ ಬಾಹುಬಲವುಳ್ಳ ರಾಜಾಧಿರಾಜರಾದರೂ, ತಮ್ಮ ಮನಸ್ಸನ್ನು ಜಯಿಸಲಾರದಿದ್ದಪಕ್ಷದಲ್ಲಿ ಆ ಯೋಗಸಿದ್ಧಿಯನ್ನು ಪಡೆಯಲಾರರು ಅಂತಹ ರಾಜರು ಈ ಭೂಮಿಯ ಲ್ಲಿ "ನನ್ನದು ತನ್ನ"ದೆಂಬ ಅಭಿಮಾನವಿಟ್ಟು, ಯುದ್ಧದಲ್ಲಿ ಒಬ್ಬರಿಗೊಬ್ಬ ರು ಹೊಡೆದಾಡಿ,ಕೊನೆಗೆ ಯಾರೂ ಅದನ್ನು ಸ್ಥಿರವಾಗಿ ಅನುಭವಿಸಲಾರ ದೆ, ಆ ನೆಲದಮೇಲೆಯೇ ಸತ್ತುಬಿದ್ದರೇ ಹೊರತು, ಯೋಗಿಗಳು ಹೊಂದತಕ್ಕ ಗತಿಯನ್ನು ಯಾರೂ ಪಡೆಯಲಿಲ್ಲ. ರಾಜಾ! ಈ ಸಂಸಾರ ಮಾರ್ಗದಲ್ಲಿರುವ ಕಷ್ಟಪರಂಪರೆಗಳಿಗೆ. ಮಿತಿಯೇಇಲ್ಲವು ಸುಖದುಃಖಗಳು, ರಾಗದ್ವೇಷಗಳು, ಭಯ, ಅಭಿಮಾನ, ಸಂತೋಷ, ಶೋಕ, ಮೋಹ, ಮ ದ, ಮಾತ್ಸರ್ಯ, ಅಸೂಯೆ, ಅವಮಾನ, ಹಸಿವು, ಬಾಯಾರಿಕೆ, ಆಧಿ, ವ್ಯಾಧಿ, ಹುಟ್ಟು, ಮುಪ್ಪು, ಸಾವು, ಇವೇ ಮೊದಲಾದ ಅನರ್ಥಗಳೆಲ್ಲವೂ ತಿರುಗಿತಿರುಗಿ ಮೇಲೆ ಬಿದ್ದುಬರುತ್ತಲೇ ಇರುವುವು.

ಈ ಸಂಸಾರ ಮಾರ್ಗದಲ್ಲಿ ಸ್ತ್ರೀಯರೇ ಕಾಡುಬಳ್ಳಿಗಳೆಂದುತಿಳಿ!ಭಗವಂತನ ಮಾಯೆಯೇ ಈ ಸ್ತ್ರೀರೂಪದಿಂದಿದ್ದು ತನ್ನನ್ನು ನಂಬಿನಿಂತವರ ವಿವೇಕವನ್ನು ಕೆಡಿಸುವುವು. ತನಗೆ ಕ್ರೀಡಾಗೃಹದಂತಿರುವ ಈಭಗವನ್ಮಾಯೆಯಿಂದ ಮೋಹಿತವಾದ ಮನಸ್ಸುಳ್ಳ ಮನುಷ್ಯನು, ಆ ಹೆಂಡಿರುಮಕ್ಕಳ ನಡೆ ನುಡಿ ನೋಟಗಳಿಂದ ಆಕರ್ಷಿಸಲ್ಪಟ್ಟ ಮನಸ್ಸುಳ್ಳವನಾಗಿ, ಹಿಂದುಮುಂದು ತಿಳಿಯದೆ, ಇಂದ್ರಿಯಗಳನ್ನೂ ಜಯಿಸಲಾರದೆ, ತನ್ನ ಆತ್ಮವನ್ನು ದುಃಖರೂಪವಾದ ಮಹಾನರಕದಲ್ಲಿ ತಳ್ಳುವನು. ರಾಜೇಂದ್ರಾ! ಭಗವಂತನಿಗೆ ಅಧೀನವಾಗಿ ನಡೆಯುತ್ತಿರುವ ಕಾಲಚಕ್ರದ ಮಹಿಮೆಯನ್ನೇನೆಂದು ಬಲ್ಲೆ? ಪರಮಾಣುವಿನಿಂದ ಹಿಡಿದು, ದ್ವಿಪರಾರ್ಧಪರ್ಯಂತವಾದ ಕಾಲವೇ ಇದರ ಸ್ವರೂಪವು! ಇದರ ವೇಗವನ್ನು ಯಾರೂ ತಡೆದು ನಿಲ್ಲಿಸಲಾರರು! ಇದು, ಬ್ರಹ್ಮನು ಮೊದಲು, ಹುಲ್ಲುಕಡ್ಡಿಯವರೆಗಿರತಕ್ಕ ಸಮಸ್ತಭೂತಗಳ ಆಯುರ್ದಾಯವನ್ನೂ ಅಳೆಯುತ್ತಿರುವುದು. ಎಚ್ಚರತಪ್ಪಿದವರ ಮೇಲೆ ಬಿದ್ದು ಅವರ ಆಯುಸ್ಸನ್ನು ಕ್ಷಣಮಾತ್ರದಲ್ಲಿ ಅಪಹರಿಸಿ ಬಿಡುವುದು. ಲೋಕದಲ್ಲಿ ಸಂಸಾರಿಯಾದವನು, ಈ ಕಾಲಚಕ್ರದಿಂದ ತನಗೆ ಯಾವಾಗ ಮರಣವುಂಟಾಗುವುದೋ ಎಂದು ಅನವರತವೂ ಹೆದರುತ್ತಿರುವನು. ಈ ಮರಣವನ್ನು ತಪ್ಪಿಸಿಕೊಳ್ಳಬೇಕೆಂಬ ಬುದ್ಧಿಯು ಹುಟ್ಟಿದಾಗಲೂ, ಆ ಕಾಲಚಕ್ರವು ಯಾವನಿಗೆ ಅಧೀನವಾಗಿ ನಡೆಯುತ್ತಿರುವುದೋ, ಅಂತಹ ವಾಸುದೇವನನ್ನು ಸ್ಮರಿಸದೆ. ಬೇರೆ ಪಾಷಂಡದೇವತೆಗಳನ್ನು ಭಜಿಸುವುದಕ್ಕೆ ಯತ್ನಿಸುವನು. ರಾಜೇಂದ್ರಾ! ಈ ಸಂಸಾರವೆಂಬ ಕಾಡಿನಲ್ಲಿ ಹೊಂಚುಹಾಕುತಿದ್ದು, ನಂಬಿ ಬಂದವರನ್ನು ಕೆಡಿಸತಕ್ಕ ರಣಹದ್ದು, ಕೊಕ್ಕರೆ, ಮುಂತಾದ ಕ್ಷುದ್ರಜೀವಿಗಳುಂಟೆಂದು ಹೇಳಿದೆನಲ್ಲವೆ? ವೈದಿಕಸಿದ್ಧಾಂತಗಳಿಗೆ ಹೊರಗಾಗಿರುವ ಈ ಪಾಷಂಡದೇವತೆಗಳನ್ನು ನಂಬಿ, ಅವರನ್ನು ಭಜಿಸತಕ್ಕವನು, ಹದ್ದು ಮೊದಲಾದ ಕಾಡುಹಕ್ಕಿಗಳ ಸಹವಾಸವನ್ನು ನಂಬಿ, ಅವುಗಳಲ್ಲಿ ಸೇರಿದಂತಾಗುವನೇಹೊರತು ಬೇರೆಯಲ್ಲ! ಈ ಅರಣ್ಯದಲ್ಲಿ ಸಂಚರಿಸತಕ್ಕವನು, ಆ ಕ್ಷುದ್ರಮೃಗಗಳಿಂದ ವಂಚಿತನಾದಾಗ, ಹಂಸಗಳ ಗುಂಪಿಗೆ ಸೇರುವನೆಂದು ಹೇಳಿದೆನಲ್ಲವೆ? ಆ ಹಂಸಗ

ಳೇ ಬ್ರಾಹ್ಮಣರೆಂದು ತಿಳಿ! ಯಾವಾಗ ಸಂಸಾರಿಯು, ಪಾಷಂಡಮತವನ್ನು ನಂಬಿ ತಾನು ಮೋಸಹೋದುದಾಗಿ ತಿಳಿದುಕೊಳ್ಳುವನೋ, ಆಗ ಬ್ರಾಹ್ಮಣಕುಲದಲ್ಲಿ ಪ್ರವೇಶಿಸುವನು. ಉಪನಯನವೇ ಮೊದಲಾದ ಸಂಸ್ಕಾರಗಳಿಂದಲೂ, ಶ್ರೌತಸ್ಮಾರ್ತಗಳೆಂಬ ನಿತ್ಯಕರ್ಮಾನುಷ್ಠಾನಗಳಿಂದಲೂ! ಯಜ್ಞಪುರುಷನಾದ ಭಗವಂತನನ್ನು ಎಡೆಬಿಡದೆ ಆರಾಧಿಸುತ್ತಿರುವುದೇ ಈ ಬ್ರಾಹ್ಮಣಕುಲದ ಸ್ವಭಾವವು! ಸಂಸಾರಿಯು ಹಂಸಗಳ ನಡತೆಯು ತನಗೆ ಸರಿಬೀಳದಿದ್ದಾಗ ಕಪಿಗಳ ಗುಂಪಿನಲ್ಲಿ ಸೇರುವನೆಂದು ಹೇಳಿದೆನಲ್ಲವೆ! ಇದರಿಂದ ಬ್ರಾಹ್ಮಣಜಾತಿಗೆ ಯೋಗ್ಯವಾದ ಕರ್ಮಾನುಷ್ಠಾನದಲ್ಲಿ ರುಚಿಯಿಲ್ಲದವನು, ವೈದಿಕಕರ್ಮಗಳಿಂದ ಶುದ್ಧಿಯಿಲ್ಲದವನಾಗಿ, ಶೂದ್ರರ ಗುಂಪಿನಲ್ಲಿ ಸೇರಿ, ಕಪಿಗಳಂತೆ ಸಂಭೋಗದಿಂದಲೂ, ಕುಟುಂಬ ಪೋಷಣೆಯಿಂದಲೂ ಕಾಲವನ್ನು ಕಳೆಯುವನು. ಇದರಲ್ಲಿ ಕಟ್ಟುಪಾಡಿಲ್ಲದೆ ದೇಶಕಾಲಗಳೊಂದನ್ನೂ ನೋಡದೆ, ಮನಸ್ಸಿಗೆ ಬಂದಹಾಗೆ ಕ್ರೀಡಿಸುವನು. ಒಂದಕೊಂದು ಮುಖವನ್ನು ನೋಡಿ ಹಲ್ಲುಗಿರಿಯುವ ಕಪಿಗಳಂತೆ, ಹೆಂಡಿರುಮಕ್ಕಳ ಮುಖಾವಲೋಕನವೇ ಮೊದಲಾದ ಗ್ರಾಮ್ಯಕರ್ಮಗಳಿಂದಲೇ ಸಂತೋಷಪಟ್ಟು, ಕಳೆದು ಹೋಗುವ ಕಾಲವನ್ನೂ ತಿಳಿಯದೆ, ಮೈಮರೆತಿರುವನು ಕಪಿಗಳು ತನ್ನ ಹೆಂಡಿರುಮಕ್ಕಳನ್ನು ಕಟ್ಟಿಕೊಂಡು ಮರದಮೇಲೆ ವಾಸಮಾಡುತ್ತ, ಆಗಾಗ ಮೈಥುನಸುಖದಿಂದ ಕಾಲವನ್ನು ಕಳೆಯುವವಂತೆ, ಈ ಸಂಸಾರಿಯೂಕೂಡ, ಅತ್ಯಲ್ಪವಾದಐಹಿಕಸುಖಗಳಿಗೆನೆಲೆಯಾದ ಮನೆಗಳಲ್ಲಿ ಹೆಂಡಿರು ಮಕ್ಕಳೆಂಬ ಸಂಸಾರಪಾಶದಲ್ಲಿ ಸಿಕ್ಕಿಬಿದ್ದು ನರಳುವನು. ಸುಖದುಃಖಗಳನ್ನನುಭವಿಸುತ್ತ ಈ ಸಂಸಾರವೆಂಬ ಕಾಡುದಾರಿಯಲ್ಲಿ ಸಂಚರಿಸತಕ್ಕವನಿಗೆ, ಮೃತ್ಯುವೇ ಬೆನ್ನಟ್ಟಿ ಬರುವ ಕಾಡಾನೆಯೆಂದು ತಿಳಿ! ಇದರ ಭಯದಿಂದ ಜೀವನು ಪರ್ವತಗುಹೆಯಲ್ಲಿ ಪ್ರವೇಶಿಸುವನೆಂದರೆ, ರೋಗಾದಿ ವಿಪತ್ತುಗಳಲ್ಲಿ ಸಿಕ್ಕಿ ಬೀಳುವನೆಂದರ್ಥವು. ಈ ಆನೆಯ ಭಯವನ್ನು ತಪ್ಪಿಸಿಕೊಳ್ಳುವುದಕ್ಕಾಗಿ ಕಾಡುಬಳ್ಳಿಯನ್ನು ಹಿಡಿದು ಮೇಲೇರುವನೆಂದರೆ, ಕರ್ಮಗಳ ಬಲದಿಂದ ಆ ವಿಪತ್ತನ್ನು ತಪ್ಪಿಸಿಕೊಂಡು ಸ್ವಲ್ಪವಾಗಿಚೇತರಿಸಿಕೊಳ್ಳುವನೆಂದರ್ಥವು. ಹೀಗೆ ಚೇತರಿಸಿಕೊಂಡಮೇಲೂ

ತಿರುಗಿ ಅದೇದಾರಿಯಲ್ಲಿ ಬಿದ್ದು, ತಿರುಗಿ ಅದೇವಿಧವಾದ ಕಷ್ಟಸುಖಗಳನ್ನು ಹೊಂದುತ್ತಿರುವನು. ರಾಜೇಂದ್ರಾ! ಈ ವಿಧವಾದ ಸಂಸಾರಚಕ್ರವೆಂಬುದು ಮನುಷ್ಯಲೋಕದವರಿಗೆಮಾತ್ರವೇ ಅಲ್ಲ ! ಊರ್ಧ್ವಲೋಕದಲ್ಲಿರುವ ದೇವಾದಿಗಳೂ ಇದೇ ವಿಧವಾಗಿ ಸಂಸಾರದಲ್ಲಿ ತೊಳಲುತ್ತಿರುವರೆಂದು ತಿಳಿ ! ಎಲೈ ಪರೀಕ್ಷಿದ್ರಾಜನೆ ! ಸಂಸಾರವಿಷಯದಲ್ಲಿ ಭರತನು ರಹೂಗಣನಿಗೆ ಹೇಳಿದ ಮಾತಿನ ಗೂಢಾರ್ಥವೇ ಇದು ! ಋಷಭಪುತ್ರನಾದ ಆ ಭರತನ ಪ್ರಭಾವವನ್ನು ಸಂಗ್ರಹವಾಗಿ ತಿಳಿಸತಕ್ಕ ಕೆಲವು ಶ್ಲೋಕಗಳುಂಟು. ಅವುಗಳ ಅರ್ಥವನ್ನು ವಿವರಿಸುವೆನು ಕೇಳು. "ಗರುಡನ ಗತಿಯನ್ನು ನೊಣವು ಹೇಗೋಹಾಗೆ, ಮಹಾತ್ಮನಾಗಿಯೂ, ರಾಜರ್ಷಿಯಾಗಿಯೂ ಇರುವ ಆ ಋಷಭಪುತ್ರನಾದ ಭರತನ ಮಾರ್ಗವನ್ನು ಈ ಲೋಕದಲ್ಲಿ ಬೇರೊಬ್ಬರಾಜನು ಮನಸ್ಸಿನಿಂದಲಾದರೂ ಹಿಂಬಾಲಿಸುವುದಕ್ಕೆ ಶಕ್ತನಾಗಲಾರನು. ಯಾವನು ಭಗವಂತನಲ್ಲಿಯೇ ನಟ್ಟ ಮನಸ್ಸುಳ್ಳವನಾಗಿ, ಬೇರೆ ಯಾರಿಂದಲೂ ಬಿಡುವುದಕ್ಕೆ ಸಾಧ್ಯವಲ್ಲದ ಹೆಂಡಿರುಮಕ್ಕಳು, ನಂಟರಿಷ್ಟರು, ರಾಜ್ಯಕೋಶಗಳು, ಇವೇ ಮೊದಲಾದ ಸಮಸ್ತಭೋಗಸಾಮಗ್ರಿಗಳನ್ನೂ ತನ್ನ ಯೌವನಕಾಲದಲ್ಲಿಯೇ ಮಲದಂತೆ ಜಿಹಾಸೆಯಿಂದ ತೊರೆದುಬಿಟ್ಟನೋ, ಅವುಗಳನ್ನು ಬಿಟ್ಟುಹೋದುದುಮಾತ್ರವಲ್ಲದೆ ಸ್ವಲ್ಪವಾದರೂ ಅವುಗಳ ಚಿಂತೆಯನ್ನೇ ಮನಸ್ಸಿನಲ್ಲಿಡದಿದ್ದನೋ, ಅಂತಹ ಭರತನ ನಡತೆಯನ್ನು ಬೇರೆ ಯಾರುತಾನೇ ಅನುಸರಿಸಬಲ್ಲರು? ಇವನು ತಾನಾಳುತಿದ್ದ ಸಮಸ್ತಭೂಮಂಡಲವನ್ನೂ, ತನ್ನ ಬಂಧುವರ್ಗಗಳನ್ನೂ, ತನ್ನ ಸಮಸ್ತಧನವನ್ನೂ ಬಿಟ್ಟು ಹೋದುದಲ್ಲದೆ, ದೇವತೆಗಳಿಗೂ ಆಸೆಹುಟ್ಟಿಸತಕ್ಕ ಭಾಗ್ಯಲಕ್ಷ್ಮಿಯು ತಾನಾಗಿ ಬಂದು ವರಿಸಿದ್ದಾಗಲೂ, ಅದನ್ನೂ ಕಣ್ಣೆತ್ತಿನೋಡದೆ ನಿರಾಕರಿಸಿದನು. ಮಹಾತ್ಮರಲ್ಲಿ ಇದೇನೂ ಆಶ್ಚರ್ಯವಲ್ಲ ! ಯಾವಾಗಲೂ ಭಗವತ್ಸೇವೆಯಲ್ಲಿಯೇ ಇರತಕ್ಕ ಮಹಾತ್ಮರು, ಮೋಕ್ಷಸುಖವನ್ನೂ ಕೂಡ ಆ ಭಗವತ್ಸೇವೆಗಿಂತಲೂ ಕಡಿಮೆಯೆಂದೇ ಭಾವಿಸುವರು ! ಅಂತವರಿಗೆ ಈ ಸಂಸಾರಸುಖದಲ್ಲಿ ವಿರಕ್ತಿಯುಂಟಾಗುವುದೇನಾಶ್ಚರ್ಯವು? ಯಾವ ಭರತನು ಪೂರ್ವಜನ್ಮದಲ್ಲಿ ತನ್ನ ಮೃಗಶರೀರವನ್ನು ಬಿಡುವ ಕಾಲದಲ್ಲಿಯೂಕೂಡ

ಆ ಭಗವಂತನನ್ನು ಕುರಿತು. ಓ ದೇವಾ! ಯಜ್ಞಸ್ವರೂಪನಾಗಿಯೂ ಯಜ್ಞಪತಿಯಾಗಿಯೂ, ಆಯಾ ಅವತಾರಗಳಿಂದ ವರ್ಣಾಶ್ರಮಧರ್ಮಗಳನ್ನು ಕಾಪಾಡತಕ್ಕವನಾಗಿಯೂ, ಭಕ್ತಿಯೋಗದಿಂದ ಲಭಿಸತಕ್ಕವನಾಗಿಯೂ, ಪ್ರಕೃತಿಯೆಂಬ ಮಾಯೆಯನ್ನು ನಿಯಮಿಸತಕ್ಕವನಾಗಿಯೂ, ಜೀವವರ್ಗಗಳಿಗೆ ಮುಖ್ಯಾಶ್ರಯನಾಗಿಯೂ, ಸಂಸಾರನಿವಾರಕನಾಗಿಯೂ, ಇರುವ ನಿನಗೆ ನಮಸ್ಕಾರವು"ಎಂದು ಉಚ್ಚಧ್ವನಿಯಿಂದ ಕೂಗಿ ಹೇಳುತ್ತ, ಆ ಜನ್ಮದಿಂದ ಮುಕ್ತನಾದನೋ, ಆ ಮಹಾತ್ಮನ ಆಶ್ಚರ್ಯಚರಿತ್ರವನ್ನು ಯಾರುತಾನೇ ಅನುಸರಿಸಬಲ್ಲರು?"ಎಂಬುದೇ ಆ ಶ್ಲೋಕಾರ್ಥವು. ರಾಜೇಂದ್ರಾ!ಇದೇ ಭಗವದ್ಭಕ್ತರಲ್ಲಿ ಮೇಲೆನಿಸಿದ ಭರತನ ಚರಿತ್ರವು! ಶುದ್ಧಗುಣಗಳಿಂದಲೂ ಶುದ್ಧವಾದ ನಡತೆಯಿಂದಲೂ ಪ್ರಸಿದ್ಧನಾದ ಆ ರಾಜರ್ಷಿಯ ಚರಿತ್ರವು ಮಂಗಳಕರವಾಗಿಯೂ, ಕೀರ್ತಿಕರವಾಗಿಯೂ ಇರುವುದು. ಆಯುಸ್ಸನ್ನೂ ಐಶ್ವರ್ಯವನ್ನೂ ಹೆಚ್ಚಿಸುವುದು.ಸ್ವರ್ಗಮೋಕ್ಷಗಳೆಲ್ಲವನ್ನೂ ಕೈಗೂಡಿಸುವುದು! ಹೀಗೆ ಎಲ್ಲರಿಂದಲೂ ಕೀರ್ತಿಸಲ್ಪಡುವ ಆ ಭರತನ ಚರಿತ್ರವನ್ನು ಯಾವನು ಕೇಳುವನೋ, ಯಾವನು ಹೇಳುವನೋ, ಯಾವನು ಅಭಿನಂದಿಸುವನೋ,ಅಂತವನಿಗೆ ಬೇರೊಬ್ಬರ ಅಪೇಕ್ಷೆಯಿಲ್ಲದೆ ಸರ್ವಾಭೀಷ್ಟಗಳೂ ತಾವಾಗಿ ಕೈಗೂಡಿ ಬರುವುವು." ಎಂದನು. ಇದು ಹದಿನಾಲ್ಕನೆಯ ಅಧ್ಯಾಯವು.

---

**( ಶುಕನು ಪರೀಕ್ಷಿದ್ರಾಜನಿಗೆ ಭರತನ ಸಂತತಿಯನ್ನು ತಿಳಿಸಿದುದು. )**

ರಾಜೇಂದ್ರಾ! ಭರತನ ಚರಿತ್ರವನ್ನು ತಿಳಿಸಿದೆನಷ್ಟೆ? ಇನ್ನು ಅವನ ಸಂತತಿಕ್ರಮವನ್ನು ತಿಳಿಸುವೆನು ಕೇಳು! ಆ ಭರತನಿಗೆ ಸುಮತಿಯೆಂಬ ಪುತ್ರನು ಹುಟ್ಟಿದನು.ಆ ಸುಮತಿಯು ತನ್ನ ಅಜ್ಜನಾದ ಋಷಭನು ನಡೆಸಿದಯೋಗಮಾರ್ಗವನ್ನೇ ತಾನೂ ಅನುವರ್ತಿಸುತಿದ್ದನು. ಇದಕ್ಕಾಗಿ ಮುಂದೆ ಕೆಲವು ಪಾಷಂಡಿಗಳು, ತಮ್ಮ ಕುತ್ಸಿತಬುದ್ಧಿಯಿಂದ, ಅವನನ್ನು ಬೌದ್ಧದೇವತೆಯೆಂದು ಹೇಳುವರು.ಅವನು ವಾಸ್ತವಕ್ಕೆ ಅಂತವನಲ್ಲ!ಆ ಸುಮತಿಗೆ ಗೃಧ್ರಸೇನೆಯೆಂಬ ಪತ್ನಿಯಲ್ಲಿ ದೇವತಾಜಿತ್ತೆಂಬ ಕುಮಾರನೊಬ್ಬನು ಹುಟ್ಟಿ

ದನು. ಆ ಕುಮಾರನಿಗೆ ಆಸುರಿಯೆಂಬ ಪತ್ನಿಯಲ್ಲಿ ದೇವದ್ಯುಮ್ನನೆಂಬ ಪು
ತ್ರನು ಹುಟ್ಟಿದನು. ಆ ದೇವದ್ಯುಮ್ನನಿಗೆ ಧೇನುಮತಿಯೆಂಬ ಭಾರ್ಯೆಯಲ್ಲಿ
ಪರಮೇಷ್ಠಿಯೆಂಬ ಪುತ್ರನು ಜನಿಸಿದನು, ಆತನಿಗೆ ಸುವರ್ಚಲೆಯೆಂಬ ಪತ್ನಿ
ಯಲ್ಲಿ ಪ್ರತೀಹನೆಂಬ ಪುತ್ರನು ಜನಿಸಿದನು. ಈ ಪ್ರತೀಹನು ಅನೇಕರಿಗೆ
ಆತ್ಮವಿದ್ಯೆಯನ್ನುಪದೇಶಿಸಿ,ತಾನೂ ಅದರಂತೆಯೇ ಶುದ್ಧಮನಸ್ಸುಳ್ಳವನಾ
ಗಿ, ಯಾವಾಗಲೂ ಪರಮಪುರುಷನನ್ನೇ ಉಪಾಸನೆಮಾಡುತಿದ್ದನು. ಈ ಪ್ರ
ತೀಹನಿಗೆ ಪ್ರತಿಹರ್ತೃವೆಂದೂ, ಪ್ರಸ್ತೋತೃವೆಂದೂ, ಉದ್ಗಾತೃವೆಂದೂ
ಮೂರುಮಂದಿಮಕ್ಕಳು ಹುಟ್ಟಿದರು. ಈ ಮೂವರೂ ಯಜ್ಞಾದಿಕರ್ಮಗ
ಳಲ್ಲಿ ಬಹಳ ನಿಪುಣರಾಗಿದ್ದರು. ಅವರಲ್ಲಿ ಪ್ರತಿಹರ್ತನೆಂಬ ಹಿರಿಯಮಗ
ನಿಗೆ,ಸ್ತುತಿಯೆಂಬ ಪತ್ನಿಯಲ್ಲಿ ಅಜನೆಂದೂ, ಭೂಮನೆಂದೂ ಇಬ್ಬರು ಪುತ್ರ
ರು ಹುಟ್ಟಿದರು. ಅವರಲ್ಲಿ ಕಿರಿಯವನಾದ ಭೂಮನು, ಋಷಿಕುತ್ಸೆಯೆಂಬ
ತನ್ನಪತ್ನಿಯಲ್ಲಿ ಉದ್ಗೀಥನೆಂಬ ಪುತ್ರನನ್ನು ಪಡೆದನು. ಈ ಉದ್ಗೀಥನಿಗೆ
ದೇವಕುತ್ಸೆಯೆಂಬ ಪತ್ನಿಯಲ್ಲಿ ಪ್ರಸ್ತಾರನೆಂಬವನೂ, ಆತನಿಗೆ ವಿಕುತ್ಸೆ
ಯೆಂಬ ಪತ್ನಿಯಲ್ಲಿ ವಿಭುವೆಂಬ ಪುತ್ರನೂ ಜನಿಸಿದರು. ಈ ವಿಭುವಿನ ಪತ್ನಿಗೆ
ರತಿಯೆಂದು ಹೆಸರು. ಇವಳಲ್ಲಿ ಪೃಥುಷೇಣನೆಂಬ ಪುತ್ರನು ಹುಟ್ಟಿದನು.
ಇವನಿಗೆ ಆಕೂತಿಯೆಂಬ ಭಾರ್ಯೆಯಲ್ಲಿ ಶಕ್ತನೆಂಬ ಮಗನು ಹುಟ್ಟಿದನು.
ಆ ಶಕ್ತನಿಗೆ ಕೃತಿಯೆಂಬ ಪತ್ನಿಯಲ್ಲಿ ಮಹಾಭಾಗವತೋತ್ತಮನಾದ ಗಯ
ನೆಂಬ ಕುಮಾರನು ಹುಟ್ಟಿದನು. ಈತನ ಕೀರ್ತಿಯು ಅಪಾರವಾದುದು! ಇವ
ನು ಲೋಕರಕ್ಷಣಕ್ಕಾಗಿ ಶುದ್ಧಸತ್ವಮೂರ್ತಿಯಾದ ಭಗವಂತನ ಅಂಶದಿಂದ
ಲೇ ಅವತರಿಸಿದ್ದವನು!ಉದಾರಮನಸ್ಸೇ ಮೊದಲಾದ ಗುಣಗಳಿಂದ ಮಹಾ
ಪುರುಷನೆಂದು ಪ್ರಖ್ಯಾತನಾಗಿದ್ದನು.ಈ ಮಹಾತ್ಮನು,ಪ್ರಜೆಗಳನ್ನು ಕ್ಷೇಮ
ದಿಂದ ರಕ್ಷಿಸುವುದು, ಅವರನ್ನು ಸಂತೋಷಪಡಿಸುವುದು, ಅವರನ್ನು ಲಾಲಿ
ಸುವುದು, ಅವರನ್ನು ಸನ್ಮಾರ್ಗದಲ್ಲಿ ನಿಯಮಿಸುವುದು, ಇವೇ ಮೊದ
ಲಾದ ತನ್ನ ರಾಜಧರ್ಮದಿಂದಲೂ, ಪಂಚಮಹಾಯಜ್ಞಗಳೇ ಮೊದಲಾದ
ನಿತ್ಯಕರ್ಮಗಳಿಂದಲೂ, ಸರ್ವ್ವದೇವೋತ್ತಮನಾದ ಆ ಪರಮಪುರುಷನನ್ನಾ
ರಾಧಿಸುತ್ತ, ಅವುಗಳ ಫಲಕ್ಕೂ ತಾನು ಆಸೆಪಡದೆ, ಆ ಫಲಗಳೆಲ್ಲವನ್ನೂ

ತನ್ನ ಮನೋವಾಕ್ಕಾಯಗಳೆಂಬ ತ್ರಿಕರಣಗಳಿಂದಲೂ ಆ ಭಗವಂತನಲ್ಲಿ ಯೇ ಅರ್ಪಿಸುತ್ತಿದ್ದನು. ಮತ್ತು ಆ ರಾಜನು ತನ್ನ ಕುಲಧರ್ಮದಿಂದಲೂ, ಬ್ರಹ್ಮವಿತ್ತುಗಳ ಪಾದಸೇವೆಯಿಂದ ತನಗೆ ಲಭಿಸಿದ ಭಕ್ತಿಯೋಗದಿಂದಲೂ ಮೇಲೆಮೇಲೆ ತನ್ನ ಮನಸ್ಸನ್ನು ಶುದ್ಧಪಡಿಸಿಕೊಂಡು, ದೇಹಾತ್ಮಭ್ರಾಂತಿ ಯನ್ನು ಬಿಟ್ಟು,ತನ್ನ ಹೃದಯಾಂತರ್ಯಾಮಿಯಾದ ಪರಮಾತ್ಮನನ್ನು ಸಾಕ್ಷಾ ತ್ಕರಿಸಿಕೊಂಡವನಾಗಿ, ಆ ಆನಂದವನ್ನನುಭವಿಸುತಿದ್ದನು. ದೇಹಾಭಿಮಾನ ವನ್ನೂ, ಸ್ವತಂತ್ರಾಭಿಮಾನವನ್ನೂ ತೊರೆದು, ಭೂಮಿಯನ್ನು ಪಾಲಿಸ್ಸು ತಿದ್ದನು. ರಾಜೇಂದ್ರಾ! ಪೂರ್ವವೃತ್ತಾಂತವನ್ನು ಬಲ್ಲ ಮಹರ್ಷಿಯರು, ಆಗ- ಯನ ಚರಿತ್ರವನ್ನು ಹೀಗೆಂದು ಕೊಂಡಾಡಿರುವರು “ಲೋಕದಲ್ಲಿ ಬೇರೆಯಾ ವ ರಾಜನೂ ಕರ್ಮಗಳಲ್ಲಿ ಈ ಗಯನನ್ನು ಹೋಲಲಾರನು. ಈ ಗಯನು ವೇದೋಕ್ತಗಳಾದ ಅನೇಕಯಜ್ಞಗಳನ್ನು ಮುಗಿಸಿದವನು. ಸಮಸ್ತವ ನ್ನೂ ಬಲ್ಲವನು! ಸಮಸ್ತಲೋಕಗಳಿಂದಲೂ ಸಮ್ಮಾನಿಸಲ್ಪಡುತಿದ್ದವನು! ಧರ್ಮಪರಿಪಾಲಕನು! ಸಮಸ್ತಭಾಗ್ಯಗಳನ್ನೂ ಪಡೆದವನು! ಸತ್ಪುರುಷರಿಗೆ ತಾನೇ ಅಧಿಪತಿಯೆನಿಸಿದ್ದರೂ, ಅವರನ್ನು ಭಕ್ತಿಯಿಂದ ಸೇವಿಸುತಿದ್ದವನು. ಸಾಕ್ಷಾದ್ಭಗವದಂಶದಿಂದ ಹುಟ್ಟಿದ್ದರಹೊರತು, ಬೇರೆ ಯಾವರಾಜನೂ ಈತನಿಗೆ ಸಮಾನನೆನಿಸಲಾರನು! ಅಮೋಘವಾದ ಅನುಗ್ರಹಶಕ್ತಿಯುಳ್ಳ ಶ್ರದ್ಧೆ, ಮೈತ್ರಿ, ದಯೆ, ಕೀರ್ತಿ, ಶ್ರೀ, ಸ್ಮೃತಿ, ಮೇಧೆ, ಧೃತಿ, ತಿತಿಕ್ಷೆ, ಕ್ಷಮೆಯೆಂಬ ಹೆಸರುಳ್ಳ ದಕ್ಷಕುಮಾರಿಯರೆಲ್ಲರೂ ತಮ್ಮ ತೇಜೋಬಲದಿಂ ದ ಯಾವನನ್ನು ಉತ್ತಮಸ್ಥಿತಿಗೆ ತಂದರೋ, ಕರುವನ್ನು ಕಂಡಾಗ ಸಮೃ ದ್ಧವಾದ ಹಾಲನ್ನು ಸೊರೆಯಿಕ್ಕುವ ಧೇನುವಿನಂತೆ,ಭೂದೇವಿಯು ಯಾವನ ಗುಣಗಳನ್ನು ನೋಡಿ,ತನ್ನಿಂದ ಬೇಕುಬೇಕಾದ ಪದಾರ್ಥಗಳನ್ನು ಕರೆಯು ತ್ತ ಆತನು ನಿಷ್ಕಾಮನಾಗಿದ್ದರೂ ಆತನ ಪ್ರಜೆಗಳ ಕೋರಿಕೆಗಳೆಲ್ಲವನ್ನೂ ತಾನಾಗಿಯೇ ಈಡೇರಿಸುತಿದ್ದಳೋ, ಅಂತಹ ಗಯಮಹಾರಾಜನ ಸದ್ಗುಣ ಗಳನ್ನು ಬೇರೆ ಯಾವರಾಜನು ತಾನೇ ಅನುಸರಿಸಬಲ್ಲನು?ಮತ್ತು ಆ ಗಯನು ನಿಷ್ಕಾಮನಾಗಿದ್ದರೂ,ವೇದೋಕ್ತಧರ್ಮಗಳು ತಾವಾಗಿ ಅವನ ಕೋರಿಕೆಗಳ ನ್ನು ಸಲ್ಲಿಸುತಿದ್ದುವು! ಯುದ್ಧದಲ್ಲಿ ನಿರ್ಜಿತರಾದ ರಾಜರೆಲ್ಲರೂ ತಾವಾಗಿ

ಅವನಿಗೆ ಯಥೇಚ್ಛವಾದ ಕಪ್ಪಗಳನ್ನು ತಂದೊಪ್ಪಿಸುತಿದ್ದರು! ಧರ್ಮಪರಿಪಾಲನದಿಂದ ಸಂತುಷ್ಟರಾದ ಬ್ರಾಹ್ಮಣರೆಲ್ಲರೂ, ತಾವು ಪರಲೋಕಸಾಧನೆಗಾಗಿ ಮಾಡಿದ ಧರ್ಮಗಳ ಫಲದಲ್ಲಿ, ಆರನೆಯ ಭಾಗವನ್ನು ಕಂದಾಯವಾಗಿ ಸಲ್ಲಿಸುತಿದ್ದರು. ಮತ್ತು ಆ ಗಯನು, ಇಂದ್ರಾದಿದೇವತೆಗಳೆಲ್ಲರೂ ಸೋಮಪಾನದಿಂದ ಮದವೇರುವಂತೆ ಮಹಾವೈಭವದಿಂದ ನಡೆಸುತಿದ್ದ ಯಜ್ಞಗಳಲ್ಲಿ, ನಿಷ್ಕಪಟವಾಗಿಯೂ, ನಿಶ್ಚಲವಾಗಿಯೂ ಇರುವ ಭಕ್ತಿಯೋಗದಿಂದ ಸಮರ್ಪಿಸಿದ ಯಜ್ಞಫಲಗಳನ್ನು ಯಜ್ಞಸ್ವರೂಪನಾದ ಭಗವಂತನು ತಾನಾಗಿಯೇ ಬಂದು ಪ್ರೀತಿಯಿಂದ ಕೈಕೊಳ್ಳುತ್ತಿದ್ದನು. ಯಾವ ಭಗವಂತನನ್ನು ಸಂತೋಷಪಡಿಸುವುದರಿಂದ, ಬ್ರಹ್ಮದೇವನು ಮೊದಲಾಗಿ ಹುಲ್ಲುಕಡ್ಡಿಯವರೆಗೆ ದೇವತಿರ್ಯಙ್ಮನುಷ್ಯಸ್ಥಾವರಗಳೇ ಮೊದಲಾದ ಸಮಸ್ತ ಪ್ರಪಂಚವೂ ತೃಪ್ತಿಹೊಂದುವುವೋ, ಯಾವನು ಸಮಸ್ತಪ್ರಪಂಚಕ್ಕೂ ಪ್ರಾಣಭೂತನೋ, ಆ ಭಗವಂತನೇ ಸಾಕ್ಷಾತ್ತಾಗಿ ಅವನ ಯಾಗದಲ್ಲಿ ಸಂಪ್ರೀತನಾಗಿ, ಅವನಿಗೆ ತನ್ನಲ್ಲಿ ಮೇಲೆಮೇಲೆ ಭಕ್ತಿಯೋಗವನ್ನು ಕರುಣಿಸುತಿದ್ದನು. ಇಂತಹ ಉದಾರಗುಣವುಳ್ಳ ಗಯನನ್ನು ಬೇರೆ ಯಾವರಾಜನುತಾನೇ ಅನುಕರಿಸಬಲ್ಲನು ?" ಎಂಬುದೇ ಆ ಗಯನ ಗುಣಗಳನ್ನು ವರ್ಣಿಸಿರತಕ್ಕ ಶ್ಲೋಕಾರ್ಥಗಳು. ಓ ಪರೀಕ್ಷಿದ್ರಾಜಾ! ಇನ್ನು ಆತನ ಮುಂದಿನ ಸಂತತಿಯನ್ನು ತಿಳಿಸುವೆನು ಕೇಳು. ಆ ಗಯನಿಗೆ ಜಯಂತಿಯೆಂಬ ಭಾರ್ಯೆಯಲ್ಲಿ, ಚಿತ್ರರಥನೆಂದೂ, ಸ್ವಾತಿಯೆಂದೂ, ಅವರೋಧನನೆಂದೂ ಮೂವರು ಮಕ್ಕಳು ಜನಿಸಿದರು. ಅವರಲ್ಲಿ ಚಿತ್ರರಥನೆಂಬವನಿಗೆ, ಊರ್ಜೆಯೆಂಬ ಪತ್ನಿಯಲ್ಲಿ ಸಮ್ರಾಜನೆಂಬ ಮಗನು ಹುಟ್ಟಿದನು. ಆತನಿಗೆ ಉತ್ಕಲೆಯೆಂಬ ಪತ್ನಿಯಲ್ಲಿ, ಮರೀಚಿಯೆಂಬವನೂ, ಆ ಮರೀಚಿಗೆ ಬಿಂದುಮತಿಯೆಂಬ ಪತ್ನಿಯಲ್ಲಿ ಬಿಂದುಮಂತನೆಂಬ ಪುತ್ರನೂ, ಆ ಬಿಂದುಮಂತನಿಗೆ ಸುಷೇಣೆಯೆಂಬ ಪತ್ನಿಯಲ್ಲಿ ಮಧುವೆಂಬವನೂ, ಆ ಮಧುವಿಗೆ ಸುಮನಸೆಯೆಂಬವಳಲ್ಲಿ ವೀರವ್ರತನೆಂಬ ಪುತ್ರನೂ ಜನಿಸಿದರು. ಹಾಗೆಯೇ ಆ ವೀರವ್ರತನಿಗೆ ಪ್ರಬೋಧೆಯೆಂಬ ಪತ್ನಿಯಲ್ಲಿ ಮಥುವೆಂದೂ, ಪ್ರಮಥುವೆಂದೂ ಇಬ್ಬರು ಮಕ್ಕಳಾದರು. ಆ ಮಥುವಿಗೆ ಸತ್ಯೆಯೆಂಬವಳಲ್ಲಿ

ಭೌಮನನೆಂಬ ಪುತ್ರನು ಹುಟ್ಟಿದನು. ಅವನಿಗೆ ದೂಷಣೆಯೆಂಬವಳಲ್ಲಿ ತ್ವಷ್ಟೃವೆಂಬವನೂ, ಆತನಿಗೆ ವಿರೋಚನೆಯೆಂಬವಳಲ್ಲಿ ವಿರಜನೆಂಬ ಪುತ್ರನೂ ಜನಿಸಿದರು. ಆ ವಿರಜನಿಗೆ ವಿಷೂಚಿಯೆಂಬ ಭಾರ್ಯೆಯಲ್ಲಿ ಶತ್ರುಜಿತ್ತು ಮೊದಲಾದ ನೂರುಮಂದಿಪುತ್ರರೂ, ಒಬ್ಬ ಕನ್ಯೆಯೂ ಹುಟ್ಟಿದರು. ಕೊನೆಯಲ್ಲಿ ಹುಟ್ಟಿದ ನೂರುಮಂದಿ ಮಕ್ಕಳಿಗೂ ತಂದೆಯಾದ ವಿರಜನು,ಶ್ರೀಮಹಾವಿಷ್ಣುವು ದೇವಕುಲವನ್ನು ಹೇಗೋಹಾಗೆ, ಪ್ರಿಯವ್ರತನ ವಂಶವನ್ನು ತನ್ನ ಎಣೆಯಿಲ್ಲದ ಕೀರ್ತಿಯಿಂದ ಅಲಂಕರಿಸುತ್ತಿದ್ದನು, ಇದು ಹದಿನೈದನೆಯ ಅಧ್ಯಾಯವು.

---

ಶುಕನು ಪರೀಕ್ಷಿದ್ರಾಜನಿಗೆಭೂಮಂಡಲದವಿಸ್ತಾರವನ್ನೂ ಅಲ್ಲಿನ ದ್ವೀಪಸಮುದ್ರಾದಿ ವಿಭಾಗಗಳನ್ನೂ ವಿವರಿಸಿದುದು.

ಪರೀಕ್ಷಿದ್ರಾಜನು ತಿರುಗಿ ಶುಕಮುನಿಯನ್ನು ಕುರಿತು "ಓ ಮಹರ್ಷೀ! ಹಿಂದೆ ನೀನು ಪ್ರಪಂಚಪರಿಮಾಣವನ್ನು ತಿಳಿಸುವಾಗ, ಸೂರ್ಯನು ಎಲ್ಲಿಯವರೆಗೆ ತನ್ನ ಕಿರಣಗಳಿಂದ ಬೆಳಗುವನೋ, ನಕ್ಷತ್ರಸಮೂಹಗಳೊಡನೆ ಚಂದ್ರನು ಎಲ್ಲಿಯವರೆಗೆ ಕಾಣುವನೋ ಆ ವಿಸ್ತಾರವನ್ನೂ, ಸಪ್ತದ್ವೀಪವಿಭಾಗಗಳನ್ನೂ, ಅವುಗಳ ಪರಿಮಾಣಾದಿಗಳನ್ನೂ ಸಂಗ್ರಹವಾಗಿ ಸೂಚಿಸಿದೆಯಲ್ಲವೆ? ಅವುಗಳ ಬೇರೆಬೇರೆ ಲಕ್ಷಣ,ಅಳತೆ, ಮುಂತಾದುವುಗಳನ್ನು ನಾನು ಇನ್ನೂ ಚೆನ್ನಾಗಿ ತಿಳಿಯಬೇಕೆಂದಿರುವೆನು. ಆದರೆ "ಭಗವತ್ಕಥೆಗಳನ್ನು ಬಿಟ್ಟು ಇವುಗಳನ್ನು ತಿಳಿಯುವುದರಿಂದ ಲಾಭ" ವೇನೆಂದು ನೀನು ಕೇಳಬಹುದು. ಎಷ್ಟೋ ಲಾಭವುಂಟು. ಸತ್ವಾದಿಗುಣಗಳ ಪರಿಣಾಮದಿಂದ ಹುಟ್ಟಿದ ಈ ಪ್ರಪಂಚವೆಲ್ಲವೂ ಭಗವಂತನ ಸ್ಥೂಲರೂಪವಲ್ಲದೆ ಬೇರೆಯಲ್ಲ. ಈ ಸ್ಥೂಲರೂಪವನ್ನು ಮೊದಲು ಮನನಮಾಡಿಕೊಂಡರೆ, ಅದರಮೇಲೆ ಗುಣಸಂಬಂಧವಿಲ್ಲದುದಾಗಿಯೂ, ಅಂಗುಷ್ಠಪ್ರಮಾಣವುಳ್ಳುದಾಗಿಯೂ, ಸ್ವಯಂಪ್ರಕಾಶವಾಗಿಯೂ, ವಾಸುದೇವಾದಿ ಶಬ್ದಗಳಿಂದ ಬೋಧಿತವಾಗಿಯೂ ಇರುವ ಪರಬ್ರಹ್ಮದಲ್ಲಿ ಆ ಮನಸ್ಸನ್ನು ಸ್ಥಿರವಾಗಿ ನಿಲ್ಲಿಸಿಡಬಹುದು. ಸ್ಥೂಲರೂಪವನ್ನು ತಿಳಿದಮೇಲೆ

ಯೇ ಮನಸ್ಸಿಗೆ ಸೂಕ್ಷ್ಮರೂಪವನ್ನು ತಿಳಿಯುವ ಸಾಮರ್ಥ್ಯವುಂಟಾಗುವು
ದು. ಆದುದರಿಂದ ಓ ಗುರುವರ್ಯಾ! ಆ ವಿವರವನ್ನು ನನಗೆ ತಿಳಿಸಬೇಕು"
ಎಂದನು. ಅದಕ್ಕಾ ಶುಕಮುನಿಯು, "ರಾಜೇಂದ್ರಾ ಕೇಳು! ಬ್ರಹ್ಮಾಂಡ
ಗಳು ಅನಂತವಾಗಿರುವುವು.ಇವೆಲ್ಲವೂ ಭಗವಂತನಸತ್ವರಜಸ್ತಮಸ್ಸುಗಳೆಂಬ
ಮಾಯಾಗುಣಗಳಿಂದುಂಟಾದ ಪರಿಣಾಮಗಳು! ಇವೆಲ್ಲವೂ ಭಗವಂತನ
ಲೀಲಾವಿಭೂತಿಗಳು! ಇವುಗಳೊಳಗೆ ಅಂತರ್ಗತವಾಗಿರುವ ಬೇರೆಬೇರೆ
ಲೋಕಗಳ ಹೆಸರು, ಆಕಾರ, ಮುಂತಾದುವುಗಳೆಲ್ಲವನ್ನೂ ಪೂರ್ತಿ
ಯಾಗಿ ಬಾಯಿಂದ ಹೇಳುವುದಕ್ಕಾಗಲಿ, ಮನಸ್ಸಿನಿಂದ ಊಹಿಸುವುದ
ಕ್ಕಾಗಲಿ ಯಾರಿಗೂ ಸಾಧ್ಯವಲ್ಲ. ದೇವತೆಗಳಂತೆ ಚಿರಾಯುಸ್ಸನ್ನು ಪಡೆದು
ಬಂದ ಮನುಷ್ಯನಾದರೂ, ಅವೆಲ್ಲವನ್ನೂ ಪೂರ್ಣವಾಗಿ ಮುಗಿಸುವು
ದಕ್ಕೆ ಸಮರ್ಥನಲ್ಲ. ಆದುದರಿಂದ ಅವುಗಳಲ್ಲಿ ಮುಖ್ಯಭಾಗಗಳ ಹೆಸರು.
ಅಳತೆ, ಅವುಗಳಲ್ಲಿರತಕ್ಕ ಒಳಬೇಧಗಳು, ಅವುಗಳ ಬೇರೆಬೇರೆ ಲಕ್ಷಣಗಳು,
ಇವುಗಳನ್ನುಮಾತ್ರ ಸ್ವಲ್ಪವಾಗಿ ವಿವರಿಸುವೆನು ಕೇಳು. ಈಗ ನಾವಿರುವ
ಸ್ಥಳವೇ ಪ್ರಸಿದ್ಧವಾದ ಜಂಬೂದ್ವೀಪವೆನಿಸುವುದು. ಇದು ಈ ಭೂಮಂಡಲ
ವೆಂಬ ಕಮಲದ ಒಳದಳಗಳಂತೆ ಎಲ್ಲಾದ್ವೀಪಗಳ ನಡುವೆ ಪ್ರಕಾಶಿ
ಸುತ್ತ, ಸುತ್ತಳತೆಯಲ್ಲಿ ಲಕ್ಷಯೋಜನವಿಸ್ತೀರ್ಣವಾಗಿ ಸಮವರ್ತುಳಾ
ಕಾರದಿಂದಿರುವುದು. ಇದರಲ್ಲಿ ವರ್ಷಗಳೆಂಬ ಒಂಬತ್ತುವಿಭಾಗಗಳುಂ
ಟು. ಒಂದೊಂದುವರ್ಷವೂ ಒಂಬತ್ತುಸಹಸ್ರಯೋಜನಗಳ ಅಳತೆಯಿಂದಿ
ರುವುವು. ಈ ವರ್ಷಗಳನ್ನು ಬೇರೆಬೇರೆ ವಿಭಾಗಿಸಿ ತೋರಿಸತಕ್ಕ ಎ
ಲ್ಲೆಯ ಕಲ್ಲುಗಳಂತೆ, ಶ್ವೇತ, ಶೃಂಗವಂತ, ನಿಷಧ, ಹೇಮಕೂಟ, ಹಿಮಾ
ಲಯ, ಮಾಲ್ಯವಂತ, ಗಂಧಮಾಧನಗಳೆಂಬ ಎಂಟುಪರ್ವತಗಳು ಆ ವರ್ಷ
ಗಳ ನಡುನಡುವೆ ಸೇರಿರುವುವು. ಈ ವರ್ಷಗಳಲ್ಲಿ ಇಲಾವೃತ
ವೆಂಬುದು ಎಲ್ಲಕ್ಕಿಂತಲೂ ನಡುವೆ ಇರುವುದು. ಆ ಇಲಾವೃತವರ್ಷದ
ಮಧ್ಯದಲ್ಲಿ, ಕುಲಗಿರಿಗಳಿಗೆ ಪ್ರಧಾನವೆನಿಸಿಕೊಂಡ ಮೇರುವೆಂಬ ಸುವ
ರ್ಣಪರ್ವತವಿರುವುದು. ಆ ಪರ್ವತವು ಔನ್ನತ್ಯದಲ್ಲಿ ಜಂಬೂದ್ವೀಪದ ಅ
ಗಲದಷ್ಟು ಎಂದರೆ ಲಕ್ಷಯೋಜನಪ್ರಮಾಣವುಳ್ಳುದು. ಭೂಮಂಡಲ

ವೆಂಬ ಕಮಲಕ್ಕೆ ಈ ಪರ್ವತವೇ ಕರ್ಣಿಕೆಯಂತಿರುವುದು. ಈ ಪರ್ವತವು ತುದಿಯಲ್ಲಿ ಮೂವತ್ತೆರಡು ಸಹಸ್ರಯೋಜನಗಳ ಸುತ್ತಳತೆಯುಳ್ಳುದಾಗಿಯೂ, ಬುಡದಲ್ಲಿ ಹದಿನಾರುಸಹಸ್ರಯೋಜನಗಳ ಸುತ್ತಳತೆಯುಳ್ಳುದಾಗಿಯೂ ಇರುವುದು. ಹಾಗೆಯೇ ನೆಲದೊಳಗೂ ಹದಿನಾರು ಸಹಸ್ರಯೋಜನಗಳವರೆಗೆ ವ್ಯಾಪಿಸಿರುವುದು. ಇಲಾವೃತವರ್ಷದ ಉತ್ತರಕ್ಕೆ,ನೀಲ,ಶ್ವೇತ, ಶೃಂಗವಂತಗಳೆಂಬಮೂರು ಪರ್ವತಗಳು,ಕ್ರಮವಾಗಿರಮ್ಯಕ,ಹಿರಣ್ಮಯ,ಕುರುಗಳೆಂಬ ಮೂರುವರ್ಷಗಳಿಗೆ ಎಲ್ಲೆಕಟ್ಟುಗಳಾಗಿರುವುವು. ಈಪರ್ವತಗಳೆಲ್ಲವೂ,ಪೂರ್ವಪಶ್ಚಿಮವಾಗಿ ವ್ಯಾಪಿಸಿ, ಎರಡು ದಿಕ್ಕುಗಳಲ್ಲಿಯೂ ಲವಣಸಮುದ್ರವನ್ನು ಮುಟ್ಟುತ್ತಿರುವುವು.ಒಂದೊಂದುಪರ್ವತವೂ ಎರಡುಸಹಸ್ರಯೋಜನಗಳಷ್ಟು ವಿಶಾಲವಾಗಿರುವುವು. ಇವುಗಳಲ್ಲಿ ಹಿಂದಿನದಕ್ಕಿಂತಲೂ ಮುಂದಿನದು, ಉದ್ದದಲ್ಲಿಮಾತ್ರ, ಹನ್ನೊಂದರಲ್ಲಿ ಒಂದು ಪಾಲಿನಷ್ಟು ಚಿಕ್ಕದಾಗಿರುವುವು. ಇವುಗಳಂತೆಯೇ ಇಳಾವೃತದ ದಕ್ಷಿಣಭಾಗದಲ್ಲಿ ನಿಷಧ, ಹೇಮಕೂಟ,ಹಿಮಾಲಯಗಳೆಂಬ ಮೂರುಪರ್ವತಗಳು,ಪೂರ್ವಪಶ್ಚಿಮವಾಗಿ ವ್ಯಾಪಿಸಿ, ಅಳತೆಯಲ್ಲಿಯೂ ಹಿಂದೆ ಹೇಳಿದ ನೀಲಾದಿ ಪರ್ವತಗಳಂತೆಯೇ ಇರುವುವು ಇವು ಕ್ರಮವಾಗಿ ಹರಿ,ಕಿಂಪುರುಷ,ಭಾರತವರ್ಷಗಳಿಗೆ ಎಲ್ಲೆಕಟ್ಟಾಗಿರುವುವು ಹಾಗೆಯೇ ಇಲಾವೃತದ ಪೂರ್ವಕ್ಕೆ ಗಂಧಮಾಧನವೂ,ಪಶ್ಚಿಮಕ್ಕೆ ಮಾಲ್ಯವಂತವೂ, ಉಭಯಪಾರ್ಶ್ವಗಳಲ್ಲಿರುವ ನೀಲ ನಿಷಧ ಪರ್ವತಗಳವರೆಗೂ ವ್ಯಾಪಿಸಿ, ಎರಡು ಸಹಸ್ರಯೋಜನಗಳ ಅಳತೆಯುಳ್ಳುದಾಗಿ,ಒಂದುಕಡೆಯಲ್ಲಿ ಭದ್ರಾಶ್ವವೆಂಬ ವರ್ಷಕ್ಕೂ,ಮತ್ತೊಂದುಕಡೆಯಲ್ಲಿ ಕೇತುಮಾಲವೆಂಬ ವರ್ಷಕ್ಕೂ ಎಲ್ಲೆಕಟ್ಟಾಗಿರುವುವು. ಇದಲ್ಲದೆ ಮೇರುವಿಗೆ ಪೂರ್ವಾದಿಚತುರ್ದಿಕ್ಕುಗಳಲ್ಲಿಯೂ, ಕ್ರಮವಾಗಿ, ಮಂದರ, ಮೇರುಮಂದರ, ಸುಪಾರ್ಶ್ವ,ಕುಮುದವೆಂಬ ನಾಲ್ಕುಪರ್ವತಗಳು, ಹತ್ತು ಸಾವಿರಯೋಜನಗಳ ಪ್ರಮಾಣವುಳ್ಳವುಗಳಾಗಿ, ಆ ಮೇರುಪರ್ವತದ ಸುತ್ತಲೂ ಜಗತಿಕಟ್ಟುಗಳಂತೆ ಏರ್ಪಟ್ಟಿರುವುವು. ಈ ನಾಲ್ಕುಪರ್ವತಗಳಲ್ಲಿ ಕ್ರಮವಾಗಿ, ಮಾವು, ನೇರಳೆ, ಕಡವು, ಆಲವೆಂಬ ನಾಲ್ಕುಬಗೆಯ ಗಿಡಗಳು ಆ ಪರ್ವತಗಳ ಜಯಧ್ವಜಗಳಂತೆ ಹನ್ನೊಂದುಸಹಸ್ರಯೋಜನಗಳ ಎತ್ತರಕ್ಕೂ, ನೂ

ರುಯೋಜನಗಳಅಗಲಕ್ಕೂ,ಶಾಖೋಪಶಾಖೆಯಿಂದ!ಹರಡಿರುವುವು.ಮತ್ತು ಆನಾಲ್ಕುಬೆಟ್ಟಗಳಲ್ಲಿಕ್ರಮವಾಗಿ ಹಾಲು,ಜೇನು,ಕಬ್ಬಿನರಸ,ಶುದ್ಧಜಲ ಇವು ಗಳಿಂದ ತುಬಿದ ನಾಲ್ಕುಮಡುಗಳುಂಟು ಓ ರಾಜೇಂದ್ರಾ! ಈ ಮಡುಗಳಲ್ಲಿ ಸ್ನಾನಪಾನಗಳನ್ನು ಮಾಡುತ್ತಿರುವ ಗಂಧರ್ವಸಮೂಹವು.ಜನ್ಮಸಿದ್ಧವಾದ ಅಣಿಮಾದಿಸಿದ್ಧಿಗಳನ್ನುಪಡೆದು ಸುಖಿಸುತ್ತಿರುವುದು.ಮತ್ತು ಆನಾಲ್ಕುಬೆಟ್ಟ ಗಳಲ್ಲಿಯೂ,ಕ್ರಮವಾಗಿ ನಂದನವೆಂದೂ, ಚೈತ್ರರಥವೆಂದೂ, ವೈಭ್ರಾಜಕ ವೆಂದೂ,ವಿಶ್ವತೋಭದ್ರವೆಂದೂ ಹೆಸರುಗೊಂಡ ನಾಲ್ಕು ದಿವ್ಯೋದ್ಯಾನಗ ಳುಂಟು. ಅಲ್ಲಿ ಯಾವಾಗಲೂ ದೇವಸ್ತ್ರೀಯರು ತಮ್ಮತಮ್ಮಪತಿಗಳೊಡ ಗೂಡಿ ಬಂದು,ಗಂಧರ್ವರಿಂದ ಸ್ತುತಿಸಲ್ಪಡುತ್ತ,ಸಂತೋಷದಿಂದ ವಿಹರಿಸು ತ್ತಿರುವರು, ಆ ಮಂದರಪರ್ವತಾಗ್ರಕ್ಕೆ ಸ್ವಲ್ಪಕೆಳಭಾಗದಲ್ಲಿ, ಒಂದುಸಾವಿ ರದ ನೂರುಯೋಜನಗಳ ಎತ್ತರಕ್ಕೆ ಬೆಳೆದಿರುವ (ದೇವಚೂತವೆಂಬ)ಒಂದು ಮಾವಿನ ಮರವುಂಟಷ್ಟೆ? ಅದು ಪರ್ವತಶಿಖರದಂತೆ ದೊಡ್ಡದಾಗಿಯೂ, ಅಮೃತಸಮಾನವಾಗಿಯೂ ಇರುವ ಫಲಗಳನ್ನು ಕೊಡುತ್ತಿರುವುದು ಇವು ಪಕ್ವವಾಗಿ ಕೆಳಗೆ ಬಿದ್ದು ಒಡೆಯುವಾಗ, ಅದರಿಂದ ಪ್ರವಹಿ ಸುತ್ತಿರುವ ಹಣ್ಣಿನ ರಸವು, ಅತ್ಯಂತಮಧುರವಾಗಿಯೂ, ಸುಗಂಧವಿಶಿ ಷ್ಟವಾಗಿಯೂ ಇರುವುದಲ್ಲದೆ,ಇನ್ನೂ ಅನೇಕವಸ್ತುಗಳ ಸುವಾಸನೆಯಿಂದ ಪರಿಮಳಿತವಾಗಿ ನದೀರೂಪದಿಂದ ಹರಿಯುತ್ತಿರುವುದು. ಈನದಿಯ ಬ ಣ್ಣವು ಕೆಂಪಾಗಿರುವುದರಿಂದ ಅದನ್ನು ಅರುಣೋದಯೆಂದು ಕರೆಯು ವರು. ಈ ಅರುಣೋದೆಯೆಂಬ ನದಿಯು, ಮಂದರಶಿಖರದಿಂದ ಕೆಳಕ್ಕೆ ಪ್ರವಹಿಸಿ, ಇಳಾವೃತವರ್ಷದ ಪೂರ್ವಭಾಗವೆಲ್ಲವನ್ನೂ ಜಲಸಮೃದ್ಧವಾಗಿ ಮಾಡುತ್ತಿರುವುದು. ಪಾರ್ವತೀದೇವಿಯ ಅನುಚರಸ್ತ್ರೀಯರೆಲ್ಲರೂ, ಆನದಿ ಯ ರಸವನ್ನೇ ಪಾನಮಾಡುತ್ತಿರುವುದರಿಂದ, ಅವರ ಮೈಮೇಲೆ ಬೀಸಿ ಬಂ ದ ಗಾಳಿಯು ಸಮಸ್ತದಿಕ್ಕುಗಳಲ್ಲಿಯೂ, ಹತ್ತುಯೋಜನದೂರಗಳವರೆಗೆ ಸುಗಂಧವಿಶಿಷ್ಟವಾಗಿ ಮಾಡುತ್ತಿರುವುದು ಇನ್ನು ಆಸ್ತ್ರೀಯರ ಶರೀರ ಗಂಧವು ಹೇಗಿರುವುದೆಂಬುದನ್ನು ಕೇಳಬೇಕೆ? ಮೇರುಮಂದರವೆಂಬ ಪರ್ವತ ಶಿಖರದಮೇಲೆ ಜಂಬೂವೃಕ್ಷವಿರುವುದೆಂದು ಹೇಳಿದೆನಲ್ಲವೆ? ಅದರಲ್ಲಿ ಬಿ

ಡತಕ್ಕ ನೇರಳೇಹಣ್ಣುಗಳು ಆನೆಯ ದೇಹದಷ್ಟು ದೊಡ್ಡವುಗಳಾಗಿರುವುವು. ಒಳಗಿನ ಬೀಜವು ಬಹುಸೂಕ್ಷ್ಮವಾಗಿರುವುದು. ಈ ಹಣ್ಣುಗಳು ಪಕ್ವವಾಗಿ ಕೆಳಗೆ ಬಿದ್ದು ಒಡೆದಾಗ ಅದರಿಂದುಂಟಾದ ಹಣ್ಣಿನ ರಸವುಜಂಬೂನದಿಯೆಂಬ ಹೆಸರಿನಿಂದ ಪ್ರವಹಿಸಿ, ಆ ಇಲಾವೃತದ ದಕ್ಷಿಣಭಾಗದಲ್ಲೆಲ್ಲಾ ವ್ಯಾಪಿಸಿರುವುದು. ಆ ನದಿಯು ಪ್ರವಹಿಸುವಾಗ, ಅದರ ಎರಡುಪಾರ್ಶ್ವದ ತೀರಗಳಲ್ಲಿಯೂ ಇರುವ ಮಣ್ಣು,ಆ ಜಂಬೂರಸದೊಡನೆ ಕಲೆತು, ಬಿಸಿಲುಗಾಳಿಗಳ ಸಂಯೋಗದಿಂದ ಒಂದುವಿಧವಾದ ಪಾಕವನ್ನು ಹೊಂದಿ ಸುವರ್ಣವೆನಿಸುವುದು. ಹೀಗೆ ಜಂಬೂನದಿಯಿಂದ ಹುಟ್ಟಿದುದಕ್ಕಾಗಿಯೇ ಸುವರ್ಣಕ್ಕೆ ಜಾಂಬೂನದವೆಂದು ಹೆಸರುಂಟಾಯಿತು.ಈಸುವರ್ಣದಿಂದಲೇ ದೇವತೆಗಳು,ತಮಗೂ,ತಮ್ಮಸ್ತ್ರೀಯರಿಗೂ ಬೇಕಾದ ಕಿರೀಟ ಕುಂಡಲಾದ್ಯಾಭರಣಗಳನ್ನುಮಾಡಿಸಿ ಧರಿಸುತ್ತಿರುವರು ಸುಪಾರ್ಶ್ವವೆಂಬ ಪರ್ವತದಮೇಲೆ ದೊಡ್ಡ ಕದಂಬವೃಕ್ಷವುಂಟೆಂದು ಹೇಳಿದೆನಲ್ಲವೆ? ಆ ವೃಕ್ಷದ ಬಿಲಗಳಲ್ಲಿ,ಐದುಕಡೆಗಳಿಂದ ಜೇನಿನ ಪ್ರವಾಹವು ಸುರಿಯುತ್ತಿರುವುದು. ಈಒಂದೊಂದುಧಾರೆಯೂ ಐದೈದು ಮಾರಿನಷ್ಟು ಅಗಲವಾಗಿ ಬೀಳುತ್ತಿರುವುದು.ಈ ಮಧುಧಾರೆಗಳು ಸುಪಾರ್ಶ್ವಶಿಖರದಿಂದ ಕೆಳಗೆ ಬಿದ್ದು, ಆಪರ್ವತದತಪ್ಪಲನ್ನೂ,ಇಲಾವೃತದಪಶ್ಚಿಮಭಾಗವನ್ನೂ ಪರಿಮಳಿಸುತ್ತಿರುವುದು ಈಜೇನಿನ ರಸವನ್ನು ಪಾನಮಾಡಿದವರ ಉಸಿರಿನಗಾಳಿಯು,ವಾಯುಮಂಡಲದಲ್ಲಿ ಕಲೆತು,ನಾಲ್ಕುಕಡೆಗೂ ನೂರುಯೋಜನಗಳದೂರದವರೆಗೆ ಸುಗಂಧವಿಶಿಷ್ಟವಾಗಿ ಮಾಡುತ್ತಿರುವುದು ಅತ್ತಲಾಗಿ ಕುಮುದಪರ್ವತದಮೇಲೆ ಬೆಳೆದಿರುವ ಆಲದ ಮರವೊಂದುಂಟೆಂದು ಹೇಳಿದೆನಲ್ಲವೆ? ಅದಕ್ಕೆಶತವಲಿಶವೆಂದೂ ಹೆಸರು. ಅದರ ಕೊಂಬೆಗಳಿಂದ ಕೆಲವು ನದಿಗಳು ಬೀಳುತ್ತಿರುವುವು. ಇವು ಹಾಲು, ಮೊಸರು, ಜೇನು, ತುಪ್ಪ, ಬೆಲ್ಲ, ಅನ್ನ. ಮೊದಲಾದ ಭಕ್ಷ್ಯಪದಾರ್ಥಗಳನ್ನೂ,ವಸ್ತ್ರಾಭರಣವೇಮೊದಲಾದ ಭೋಗಸಾಮಗ್ರಿಗಳನ್ನೂ, ಹಾಸಿಗೆ ಮೊದಲಾದ ಇನ್ನೂ ಬೇರೆಬೇರೆ ಕೋರಿಕೆಗಳನ್ನೂ, ಈಡೇರಿಸಬಲ್ಲುವು. ಈ ನದಿಗಳು ಕುಮುದಪರ್ವತದಿಂದ ಕೆಳಕ್ಕಿಳಿದು, ಇಳಾವೃತದ ಉತ್ತರಭಾಗದಲ್ಲಿರುವ ಜನರನ್ನು ಸರ್ವವಿಧದಿಂದಲೂತೃಪ್ತಿಪಡಿಸು

ತ್ತಿರುವುದು. ಈ ನದಿಗಳಲ್ಲಿ ಸ್ನಾನಪಾನಾದಿಗಳನ್ನು ಮಾಡತಕ್ಕವರು ಯಾ ವಜ್ಜೀವವೂ ಸುಖಿಗಳಾಗಿಯೇ ಇರುವರು. ಅವರ ದೇಹದಲ್ಲಿ ನರೆ, ಸುಕ್ಕು, ಮೊದಲಾದ ವಾರ್ಧಕಚಿಹ್ನಗಳಾಗಲಿ, ಆಧಿವ್ಯಾಧಿ, ಬೆವರು, ದುರ್ಗಂಧ, ಮುಂತಾದುವುಗಳಾಗಲಿ, ಎಂದಿಗೂ ಉಂಟಾಗಲಾರವು. ಅವರು ಮರಣ ಕ್ಕಾಗಲಿ, ಅಪಮೃತ್ಯುಗಾಗಲಿ ಗುರಿಯಾಗಲಾರರು. ಮತ್ತು ಅವರಿಗೆ ಶೀ ತೋಷ್ಣಗಳಿಂದುಂಟಾಗುವ ಬಾಧೆಗಳಾಗಲಿ, ರಾಗ ದ್ವೇಷ ಭಯಾದಿ ಮ ನೋವಿಕಾರಗಳಾಗಲಿ ತೋರಲಾರವು. ಇದಲ್ಲದೆ ಭೂಮಂಡಲವೆಂಬ ಕಮಲ ಕ್ಕೆ ಕರ್ಣಿಕೆಯಂತಿರುವ ಮೇರುವಿನ ಸುತ್ತಲೂ,ಕುರಂಗ,ಕುರರ,ಕುಸುಂಭ, ವೈಕಂಕತ, ತ್ರಿಕೂಟ, ಶಿಶಿರ, ಪತಂಗ, ರುಚಕ, ನಿಷಾದ, ಸಿತಿವಾಸ, ಕಪಿ ಲ, ಶಂಖ, ವೈಡೂರ್ಯ, ಚಾರುವಿಹಂಗ, ಋಷಭ, ನಾಗ, ಕಾಲಾಂಜನ, ನಾರದ, ಇವೇ ಮೊದಲಾದ ಪರ್ವತಗಳು ಆ ಕಮಲದ ಕುಸುರಿಗಳಂತೆ ಶೋಭಿಸುತ್ತಿರುವುವು. ಇವುಹೊರತು ಮೇರುವಿಗೆ ಪೂರ್ವಭಾಗದಲ್ಲಿ ಸಹಸ್ರ ಯೋಜನಗಳದೂರದಿಂದಾಚೆಗೆ ಜಠರ ದೇವಕೂಟಗಳೆಂಬ ಬೇರೆ ಎರಡು ಬೆ ಟ್ಟಗಳು ಕಾಣುತ್ತಿರುವುವು. ಅವೆರಡೂ ಹದಿನೆಂಟುಸಹಸ್ರಯೋಜನಗಳಷ್ಟು ಉದ್ದವಾಗಿಯೂ, ಅಗಲದಲ್ಲಿಯೂ, ಎತ್ತರದಲ್ಲಿಯೂ ಎರಡು ಸಾವಿರಯೋ ಜನಗಳ ಅಳತೆಯುಳ್ಳುದಾಗಿಯೂ ಇರುವುವು. ಇದೇರೀತಿಯಲ್ಲಿ ಮೇರುವಿನ ಪ ಶ್ಚಿಮಕ್ಕೆ ಪವನ ಪಾರಿಯಾತ್ರಗಳೆಂದೂ,ದಕ್ಷಿಣಕ್ಕೆ ಕೈಲಾಸ ಕರವೀರಗಳೆಂ ದೂ, ಉತ್ತರಕ್ಕೆ ತ್ರಿಶೃಂಗ ಮಕರಗಳೆಂದೂ ಎರಡೆರಡು ಪರ್ವತಗಳುಂಟು. ಹೀಗೆ ಎಂಟುಪರ್ವತಗಳಿಂದ ಪರಿವೃತವಾದ ಮೇರುಗಿರಿಯು, ದರ್ಭಾಸ್ತರಣ ಗಳಿಂದ ಪರಿವೇಷ್ಟಿತವಾದ ಯಾಗಾಗ್ನಿಯಂತೆ ಪ್ರಕಾಶಿಸುತ್ತಿರುವುದು. ಆ ಮೇರುಶಿಖರದ ಮಧ್ಯಭಾಗದಲ್ಲಿ ಚತುರ್ಮುಖನಿಂದ ನಿರ್ಮಿತವಾದ ಶಾತ ಕೌಂಭಿಯೆಂಬ ಪಟ್ಟಣವುಂಟು. ಅದು ಸಮಚತುರಶ್ರ (ಚಚ್ಚೌಕ) ವಾಗಿ ಹತ್ತು ಸಾವಿರಯೋಜನದಷ್ಟು ಅಗಲವಾಗಿರುವುದು. ಅದರ ಸುತ್ತಿನ ಎಂ ಟುದಿಕ್ಕುಗಳಲ್ಲಿಯೂ ಇಂದ್ರಾದ್ಯಷ್ಟದಿಕ್ಪಾಲಕರಿಂದ ಪಾಲಿಸಲ್ಪಡುವ ಎಂಟುಪುರಗಳುಂಟು. ಇವುಗಳಿಗೆ ಕ್ರಮವಾಗಿ, ಅಮರಾವತಿ, ತೇಜೋವತಿ, ಸಂಯಮನಿ, ಕೃಷ್ಣಾಂಗನೆ,!ಶ್ರದ್ಧಾವತಿ, ಗಂಧವತಿ, ಮಹೋದಯೆ, ಯ

ಶೋವತಿಯೆಂದು ಹೆಸರು. ಈ ಒಂದೊಂದು ಪುರವೂ ಎರಡೂವರೆ ಸಹ ಸ್ರಯೋಜನಗಳ ವಿಸ್ತಾರವುಳ್ಳದು." ಎಂದನು. ಇದು ಹದಿನಾರನೆಯ ಅಧ್ಯಾಯವು.

---

### ಗಂಗಾವತರಣವು ಮತ್ತು ಇಳಾವೃತವೇ ಮೊದಲಾದ ಆಯಾವರ್ಷಗಳಲ್ಲಿ. ಆರಾಧಿಸಲ್ಪಡುವ ಭಗವತ್ಸ್ವರೂಪಗಳು.

ರಾಜೇಂದ್ರಾ, ಕೇಳು! ಪೂರ್ವದಲ್ಲಿ ಯಾಗಸ್ವರೂಪಿಯಾದ ವಿಷ್ಣು ಮೂರ್ತಿಯು,ವಾಮನರೂಪದಿಂದವತರಿಸಿ,ತನ್ನ ಮೂರಡಿಗಳಿಂದ ಬ್ರಹ್ಮಾಂ ಡವನ್ನಳೆಯುವುದಕ್ಕೆ ಯತ್ನಿಸಿದನಷ್ಟೆ? ಆಗ ಆತನು ಊರ್ಧ್ವಲೋಕಗಳ ನ್ನಳೆಯುವುದಕ್ಕಾಗಿ ತನ್ನ ಎಡಗಾಲನ್ನು ಮೇಲೆ ನೀಡಿದಾಗ, ಆ ಪಾದದ ಹೆಬ್ಬೆರಳಿನ ಉಗುರಿನಿಂದ, ಬ್ರಹ್ಮಾಂಡಕಟಾಹದ ಮೇಲಿನ ಮುಚ್ಚಳದಲ್ಲಿ ಒಂದು ರಂಧ್ರವುಂಟಾಯಿತು. ಆ ರಂಧ್ರದ ಮೂಲಕವಾಗಿ ಹೊರಗಿನ ಆವರಣ ಜಲವು, ಆ ಬ್ರಹ್ಮಾಂಡಕಟಾಹದೊಳಗೆ ಪ್ರವೇಶಿಸಿತು. ಆ ತ್ರಿವಿ ಕ್ರಮಮೂರ್ತಿಯ ಪಾದಕಮಲದಲ್ಲಿದ್ದ ಕುಂಕುಮಬಣ್ಣದಿಂದ ಕೂ ಡಿದ ಆ ಜಲಧಾರೆಯು, ಕಮಲಕೇಸರದಿಂದ ಶೋಭಿತವಾದಂತೆ ಪ್ರ ಕಾಶಿಸುತಿತ್ತು. ಸಹಜವಾಗಿಯೇ ಸಕಲಪಾಪನಿವಾರಕವಾದ ಆ ಜಲವು ಭಗವಂತನ ಪಾದಸ್ಪರ್ಶದಿಂದ ಮತ್ತಷ್ಟು ಪವಿತ್ರವಾಯಿತು. ಸ್ನಾನಪಾ ನಗಳಿಂದ ಸಮಸ್ತಪಾಪಗಳನ್ನೂ ನೀಗಿಸತಕ್ಕ ಆ ಜಲಪ್ರವಾಹವು,ಅಲ್ಲಿ ಬೇ ರೆನಾಮಾಂತರಗಳಿಲ್ಲದೆ ವಿಷ್ಣುಪದಿಯೆಂಬ ಹೆಸರಿನಿಂದ ಕರೆಯಲ್ಪಡುತಿತ್ತು. ಈ ಜಲಪ್ರವಾಹವು ಅನೇಕ ಯುಗಸಹಸ್ರಗಳವರೆಗೆ ಆಕಾಶದಲ್ಲಿ ಎಲ್ಲಕ್ಕಿಂ ತಲೂ ಮೇಲೆನಿಸಿದ ಊರ್ಧ್ವಲೋಕದಲ್ಲಿಯೇ ಪ್ರವಹಿಸುತಿತ್ತು. ರಾಜೇಂ ದ್ರಾ! ಈ ಸ್ಥಾನಕ್ಕೂ ವಿಷ್ಣುಪದವೆಂದೇ ಹೆಸರು. ಉತ್ತಾನಪಾದ ನ ಮಗನಾಗಿಯೂ, ದೃಢವ್ರತನಾಗಿಯೂ, ಪರಮ ಭಾಗವತೋತ್ತಮ ನಾಗಿಯೂ ಇರುವ ಧ್ರುವನಿಗೆ, ಇದು ನಿವಾಸಸ್ಥಾನವಾದುದರಿಂದ ಇದ ನ್ನು ಧ್ರುವಲೋಕವೆಂದೂ ಹೇಳುವರು. ಈಗಲೂ ಆ ಧ್ರುವನು ಭಗವಂ ತನ ಪಾದಸ್ಪರ್ಶದಿಂದುಂಟಾದ ಆ ತೀರ್ಥವನ್ನು ನೋಡಿ, ಮೇಲೆಮೇಲೆ

ಹೆಚ್ಚುತ್ತಿರುವ ಭಕ್ತಿಯಿಂದ ಕರಗಿದ ಮನಸ್ಸುಳ್ಳವನಾಗಿ, ಆ ಭಗವಂತನ ಲ್ಲಿ ತನಗುಂಟಾದ ಪ್ರೇಮಾತಿಶಯದಿಂದ ಮೈಮರೆತು, ಅರ್ಧ ನಿಮೀಲಿತಗ ಳಾದ ನೇತ್ರಗಳಿಂದ ಆನಂದಬಾಷ್ಪವನ್ನು ತುಳುಕಿಸುತ್ತ, ಆ ಆನಂದದಿಂದ ಪುಳಕಿತವಾದ ಮೆಯ್ಯುಳ್ಳವನಾಗಿ, ತನ್ನ ಕುಲದೇವತೆಯ ಪಾದತೀರ್ಥವೆಂ ದು ಅದನ್ನು ಆಗಾಗ ತಲೆಯಿಂದ ಧರಿಸುತ್ತಿರುವನು. ಇದನ್ನು ನೋಡಿ ಆ ಧ್ರುವಮಂಡಲವನ್ನು ಸುತ್ತಿ ತಿರುಗುತ್ತಿರುವ ಸಪ್ತರ್ಷಿಗಳೂಕೂಡ, ತ ಮ್ಮ ತಪಸ್ಸಿಗೆ ಇದೇ ಉತ್ತಮಫಲವೆಂದು ತಿಳಿದು, ಬಹುಮಾನಪುರಸ್ಸರ ವಾಗಿ ಆ ತೀರ್ಥವನ್ನು ತಮ್ಮ ಜಟಾಭಾರಗಳಿಂದ ಧರಿಸುವರು. ಸರ್ವಾಂ ತರಾತ್ಮನಾದ ವಾಸುದೇವನಲ್ಲಿ ತಮಗುಂಟಾದ ಭಕ್ತಿಯೋಗದಿಂದ, ಧರ್ಮಾ ರ್ಥಕಾಮಗಳೇ ಮೊದಲಾದ ಬೇರೆ ಪುರುಷಾರ್ಥಗಳಿಗಾಗಲಿ, ಕೊನೆಗೆ ಕೈ ವಲ್ಯಕ್ಕಾಗಲಿ ಆಸೆಪಡದ ಈ ಮಹರ್ಷಿಗಳು, ಮುಮುಕ್ಷುಗಳು ಮುಕ್ತಿ ಯನ್ನು ಹೇಗೋ ಹಾಗೆ ಆ ತೀರ್ಥವನ್ನು ಅತ್ಯಾದರದಿಂದ ಕೈಕೊಳ್ಳುತ್ತಿ ರುವರು. ಹೀಗೆ ಮಹಾತ್ಮನಾದ ಧ್ರುವನಿಂದಲೂ, ಸಪ್ತರ್ಷಿಗಳಿಂದಲೂ ಬಹುಮಾನಿಸಲ್ಪಡುತ್ತಿರುವ ಆ ಪುಣ್ಯನದಿಯು, ಅನೇಕಸಹಸ್ರಕೋಟಿ ದೇವವಿಮಾನಗಳಿಂದ ತುಂಬಿದ ಆಕಾಶಮಾರ್ಗದಿಂದ ಕೆಳಗಿಳಿಯು ತ್ತ, ಚಂದ್ರಲೋಕವನ್ನು ದಾಟಿ, ಮೇರುಶಿಖರದಲ್ಲಿರುವ ಬ್ರಹ್ಮಪುರದಲ್ಲಿ ಬಂದು ಬೀಳುವುದು. ಅಲ್ಲಿ ನಾಲ್ಕು ಶಾಖೆಗಳಾಗಿ ಒಡೆದು, ಸೀತೆಯೆಂ ದೂ, ಅಲಕನಂದೆಯೆಂದೂ, ಚಕ್ಷುವೆಂದೂ, ಭದ್ರೆಯೆಂದೂ ಬೇರೆಬೇರೆ ಹೆಸರುಗಳಿಂದ ನಾಲ್ಕುದಿಕ್ಕುಗಳಿಗೂ ಹೊರಟು, ಕೊನೆಗೆ ಸಮುದ್ರ ವನ್ನು ಪ್ರವೇಶಿಸುವುದು. ಈ ನಾಲ್ಕು ಶಾಖೆಗಳಲ್ಲಿ, ಪೂರ್ವಾಭಿ ಮುಖವಾಗಿ ಹೊರಟ ಸೀತೆಯೆಂಬ ಪ್ರವಾಹವು, ಮೊದಲು, ಮೇರುವಿನತ ಳದಲ್ಲಿರುವ ಕೇಸರ, ಅಪಷ್ಟಂಭ ಮೊದಲಾದ ಪರ್ವತಶಿಖರಗಳಮಾರ್ಗವಾ ಗಿ ಹರಿದು, ಅವುಗಳಕೆಳಗೆ ಕ್ರಮಕ್ರಮವಾಗಿ ಕುಮುದಕುಕುರಾದಿಪರ್ವತ ಶಿಖರಗಳಿಂದ ಕೆಳಗಿಳಿದು, ಗಂಧಮಾದನ ಪರ್ವತದಮೇಲೆ ಬಿದ್ದು, ಅಲ್ಲಿಂ ದ ಹೊರಟು, ಭದ್ರಾಶ್ವವರ್ಷದಲ್ಲಿ ಪೂರ್ವಾಭಿಮುಖವಾಗಿಯೇ ಪ್ರವಹಿ ಸುತ್ತ ಬಂದು, ಕೊನೆಗೆ ಲವಣಸಮುದ್ರವನ್ನು ಸೇರುವುದು. ಹೀಗೆ

ಯೇ ಚಕ್ಷುವೆಂಬ ಶಾಖೆಯು ಮಾಲ್ಯವತ್ಪರ್ವತಶಿಖರದಿಂದಿಳಿದು, ಮಹಾ ವೇಗದಿಂದ ಪ್ರವಹಿಸುತ್ತ, ಕೇತುಮಾಲವರ್ಷದಲ್ಲಿ ವ್ಯಾಪಿಸಿ, ಪಶ್ಚಿಮದಿಕ್ಕಿನಲ್ಲಿ ಲವಣಸಮುದ್ರವನ್ನು ಸೇರುವುದು. ಉತ್ತರಾಭಿಮುಖವಾಗಿ ಹೊರಟ ಭದ್ರಾನದಿಯು, ಅನೇಕಸ್ಥಳಗಳಲ್ಲಿ ಶಿಖರದಿಂದ ಶಿಖರಕ್ಕೆ ಮೇಲುಮುಖವಾಗಿ ಹಾರುತ್ತ, ಕೊನೆಗೆ ಶೃಂಗವತ್ಪರ್ವತಶಿಖರದಿಂದ ಕೆಳಕ್ಕಿಳಿದು, ಉತ್ತರದಿಕ್ಕಿನಲ್ಲಿ ಕುರುವರ್ಷವೆಂಬ ಭೂಭಾಗವೆಲ್ಲವನ್ನೂ ವ್ಯಾಪಿಸಿ, ಲವಣಸಮುದ್ರದಲ್ಲಿ ಬೀಳುವುದು. ಅದರಂತೆಯೇ ದಕ್ಷಿಣಾಭಿಮುಖವಾಗಿ ಹೊರಟ ಅಲಕನಂದೆಯು, ಅನೇಕ ಪರ್ವತಶಿಖರಗಳನ್ನು ದಾಟಿ, ತನ್ನ ಮಹಾವೇಗದಿಂದ ಹೇಮಕೂಟ ಹಿಮಕೂಟಗಳೆಂಬ ಪರ್ವತಶಿಖರಗಳೆರಡನ್ನೂ ಭೇಧಿಸುತ್ತ ಬಂದು, ಕರ್ಮಕ್ಷೇತ್ರವೆನಿಸಿದ ಭಾರತವರ್ಷದಲ್ಲಿ ಪ್ರವಹಿಸಿ, ದಕ್ಷಿಣದಿಕ್ಕಿನಲ್ಲಿ ಸಮುದ್ರವನ್ನು ಸೇರುವುದು. ಇಷ್ಟೇ ಅಲ್ಲದೆ ಮೇರು ಮೊದಲಾದ ಪರ್ವತಗಳಲ್ಲಿ ಹುಟ್ಟಿದ ಇನ್ನೂ ಅನೇಕನದೀನದಗಳು, ಭಾರತವರ್ಷವೇ ಮೊದಲಾದ ಒಂದೊಂದು ಭೂಭಾಗದಲ್ಲಿಯೂ ಲಕ್ಷೋಪಲಕ್ಷವಾಗಿ ಪ್ರವಹಿಸುತ್ತಿರುವುವು. ರಾಜೇಂದ್ರಾ! ಜಂಬೂದ್ವೀಪದಲ್ಲಿ ಈ ಭಾರತವರ್ಷವೇ ಪುಣ್ಯಪಾಪಕರ್ಮಗಳನ್ನು ನಡೆಸತಕ್ಕ ಸ್ಥಾನವಾದುದರಿಂದ ಇದನ್ನು ಕರ್ಮಕ್ಷೇತ್ರವೆನ್ನುವರು. ಉಳಿದ ಎಂಟುವರ್ಷಗಳೂ, ಪುಣ್ಯಾತ್ಮರು ಹಿಂದೆ ತಾವು ಪರಲೋಕದಲ್ಲಿ ಅನುಭವಿಸಿ ಮಿಕ್ಕಿರುವ ಪುಣ್ಯಫಲವನ್ನು ಅನುಭವಿಸತಕ್ಕ ಸ್ಥಳಗಳಾಗಿರುವುದರಿಂದ ಅವು ಭೋಗಕ್ಷೇತ್ರಗಳೆನಿಸುವುವು. ಅಲ್ಲಿರತಕ್ಕವರೆಲ್ಲರೂ ತ್ರೇತಾಯುಗದ ಮನುಷ್ಯರಂತೆ ಸದಾಸುಖದಿಂದ ಕಾಲವನ್ನು ಕಳೆಯುತ್ತಿರುವರು! ಅವರೊಬ್ಬೊಬ್ಬರೂ ದೇವತೆಗಳಂತೆ ತೇಜಸ್ಸುಳ್ಳವರು. ಅವರೊಬ್ಬೊಬ್ಬರೂ ಹತ್ತುಸಾವಿರ ಆನೆಯಬಲವುಳ್ಳವರು! ಹತ್ತು ಸಹಸ್ರವರ್ಷಗಳ ಆಯುರ್ದಾಯವುಳ್ಳವರು. ಒಬ್ಬೊಬ್ಬರೂ ವಜ್ರದಂತೆ ದೃಢವಾದ ಮೈಯುಳ್ಳವರು! ಹೀಗೆ ಅವರಿಗೆ ಎಣೆಯಿಲ್ಲದ ಬಲವೂ, ಯೌವನವೂ, ಉತ್ಸಾಹವೂ ಇರುವುದರಿಂದ, ಅವರ ಅನ್ನಪಾನಸಂಭೋಗಾದಿಸುಖಗಳೇ ಅತಿಶಯಿತವಾಗಿ ತೋರುತ್ತಿರುವುವು. ಅಲ್ಲಿನ ಸ್ತ್ರೀಯರು, ತಮ್ಮ ಆಯುಃಕಾಲವು ಮುಗಿಯುವುದಕ್ಕೆ ಒಂದುವ

ರ್ಷವುಮಾತ್ರ ಉಳಿದಿರುವಾಗ,ಒಂದು ಸಂತಾನವನ್ನು ಮಾತ್ರಪಡೆಯುವರು. ಇದರಿಂದ ಅಲ್ಲಿನವರು ಕಳತ್ರಸುಖವನ್ನು ಎಂದಿಗೂ ಲೋಪವಿಲ್ಲದೆ ಅನುಭವಿಸುವರು. ಮತ್ತು ಅಲ್ಲಿನ ಉದ್ಯಾನವೃಕ್ಷಗಳು, ಎಲ್ಲಾ ಕಾಲಗಳಲ್ಲಿಯೂ, ಎಲ್ಲಾ ಋತುಗಳಲ್ಲಿ ಬಿಡುವ ಫಲಪುಷ್ಪಾದಿಗಳ ಭಾರದಿಂದ ಬಗ್ಗಿ, ನಾನಾಬಗೆಯ ಬಳ್ಳಿಗಳಿಂದಾವೃತವಾಗಿ ಶೋಭಿಸುತ್ತಿರುವುವು. ಇಂತಹರಮಣೀಯೋದ್ಯಾನಗಲ್ಲಿಯೂ, ಆಶ್ರಮಗಳಲ್ಲಿಯೂ ಪರ್ವತಕ್ರಾಂತಗಳಲ್ಲಿಯೂ, ಅರಳಿದ ತಾವರೆಕೊಳಗಳು ವಿಶೇಷವಾಗಿ ಕಂಗೊಳಿಸುತ್ತಿರುವುವು. ಆ ಕಮಲವನದಲ್ಲಿ ಮಕರಂದಪಾನದಿಂದ ಮದಿಸಿದ ಹಂಸಸಾರಸ ಚಕ್ರವಾಕಾದಿಪಕ್ಷಿಗಳು,ಮಧುರಗಾನವನ್ನು ಮಾಡುತ್ತಿರುವುವು.ಇವುಗಳ ಮಧುರತ್ವದಿಂದಲೂ, ಭ್ರಮರಝುಂಕಾರಗಳಿಂದಲೂ ಪ್ರತಿಧ್ವನಿತಗಳಾದತಾವರೆಕೊಳಗಳಲ್ಲಿ,ದೇವತಾಸ್ತ್ರೀಯರು ಜಲಕ್ರೀಡೆಗಳನ್ನಾಡುತ್ತಿರುವಾಗ ಆ ಸ್ತ್ರೀಯರಹಾವಭಾವ ವಿಲಾಸಗಳಿಂದಲೂ, ಅವರ ಮಂದಹಾಸದಿಂದಲೂ, ಅವರ ಮಧುರಗಾನದಿಂದಲೂ, ಮೋಹಿತರಾದ ದೇವಶ್ರೇಷ್ಠರು, ಅನೇಕ ಗಂಧರ್ವದಿಂದ ಸ್ತುತಿಸಲ್ಪಡುತ್ತ ಅಲ್ಲಲ್ಲಿ ಯಥೇಚ್ಛವಾಗಿ ವಿಹರಿಸುತ್ತಿರುವರು. ಇದಕ್ಕಾಗಿಯೇ ಆ ಪ್ರದೇಶಗಳನ್ನು ಭೂಸ್ವರ್ಗವೆಂದು ಹೇಳುವರು. ರಾಜಾ! ಇಳಾವೃತವೇ ಮೊದಲಾದ ಈ ಒಂಬತ್ತು ವರ್ಷಗಳಲ್ಲಿಯೂ ಭಗವಂತನಾದ ಶ್ರೀಮನ್ನಾರಾಯಣನೇ, ಆಯಾವರ್ಷಾಧಿಪತಿಗಳಾದ ಮಹಾಪುರುಷರಿಂದ ಆರಾಧಿಸಲ್ಪಡುತ್ತ, ಅವರನ್ನನುಗ್ರಹಿಸುವುದಕ್ಕಾಗಿ, ಬೇರೊಬ್ಬರಿಂದಲೂಹಿಸಿ ತಿಳಿಯುವುದಕ್ಕೂ ಸಾಧ್ಯವಲ್ಲದಕಲ್ಯಾಣಗುಣಗಳುಳ್ಳ ಬೇರೆಬೇರೆ ದಿವ್ಯಮಂಗಳವಿಗ್ರಹದೊಡನೆ ಈಗಲೂ ಸಾನ್ನಿಧ್ಯವನ್ನು ಮಾಡುತ್ತಿರುವನು. ಆಯಾ ವರ್ಷಪತಿಗಳನ್ನೂ, ಅವರಿಂದಾರಾಧಿಸಲ್ಪಟ್ಟಭಗವತ್ಸ್ವರೂಪವನ್ನೂ ವಿವರಿಸುವೆನು ಕೇಳು.

ಇಳಾವೃತವರ್ಷದಲ್ಲಿ ಮಹಾತ್ಮನಾದ ರುದ್ರನೊಬ್ಬನು ಹೊರತು ಅಲ್ಲಿ ಬೇರೆ ಪುರುಷಾಕೃತಿಯೇ ಇಲ್ಲವು. ಬೇರೆ ಯಾವ ಪುರುಷನೂ ಅದರಲ್ಲಿ ಪ್ರವೇಶಿಸಲಾರನೆಂದು ಪಾರ್ವತಿಯ ಶಾಪವುಂಟು. ಇದನ್ನು ತಿಳಿಯದೆ, ಯಾವನಾದರೂ ಅದರಲ್ಲಿ ಕಾಲಿಟ್ಟಪಕ್ಷದಲ್ಲಿ, ಒಡನೆಯೇಅವನೂ

ಸ್ತ್ರೀರೂಪವನ್ನು ಹೊಂದಿಬಿಡುವನು. ಪಾರ್ವತೀದೇವಿಯು ಈವಿಧವಾಗಿ ಶಾಪವನ್ನು ಕೊಡುವುದಕ್ಕೆ ಕಾರಣವೇನೆಂಬುದನ್ನೂ, ಆಶಾಪದಿಂದ ಯಾರಿಗೆ ಯಾವಾಗಸ್ತ್ರೀತ್ವವುಂಟಾಯಿತೆಂಬುದನ್ನೂ ಮುಂದೆ ಒಂಬತ್ತನೆಯಸ್ಕಂಧದಲ್ಲಿ ವಿವರವಾಗಿ ತಿಳಿಸುವೆನು. ಆ ಇಲಾವೃತವರ್ಷದಲ್ಲಿರುದ್ರನು,ಪಾರ್ವತೀದೇವಿಯ ಅನುಚರರಾದ ಅನೇಕಸಹಸ್ರಸ್ತ್ರೀಯರಿಂದ ಸೇವಿಸಲ್ಪಡುತ್ತ, ಭಗವಂತನ (ವಾಸುದೇವಾದಿ) ನಾಲ್ಕುವ್ಯೂಹಗಳಲ್ಲಿ ಕೊನೆಯದಾಗಿಯೂ, ಸಂಕರ್ಷಣವೆಂಬ ಹೆಸರುಳ್ಳುದಾಗಿಯೂ, ತಮೋರೂಪವಾದ ಪ್ರಕೃತಿಯನ್ನು ಅಡಗಿಸಿಕೊಂಡುದಾಗಿಯೂ ಇರುವ ಮೂರ್ತಿಯನ್ನು, ಧ್ಯಾನಯೋಗಗದಿಂದ ಸಾಕ್ಷಾತ್ಕರಿಸಿಕೊಂಡು, ಮುಂದೆ ಹೇಳುವ ಮಂತ್ರಾರ್ಥದಿಂದಆತನನ್ನು ಸ್ತೋತ್ರಮಾಡುತ್ತಿರುವನು, “ಓಂಕಾರಶಬ್ದವಾಚ್ಯನಾಗಿಯೂ, ಸಮಸ್ತಕಲ್ಯಾಣಗುಣವಿಶಿಷ್ಟನಾಗಿಯೂ, ಜಗತ್ತಿನ ಸೃಷ್ಟಿಸ್ಥಿತಿಸಂಹಾರಗಳಿಂದ ವಿನೋದಿಸತಕ್ಕವನಾಗಿಯೂ, ವಾಸುದೇವನೆಂಬ ಹೆಸರಿನಿಂದಕೀರ್ತಿಸಲ್ಪಡತಕ್ಕವನಾಗಿಯೂ, ಚೇತನಾಚೇತನಗಳಿಗಿಂತಲೂ ವಿಲಕ್ಷಣವಾದ ಸರ್ವಜ್ಞತ್ವಾದಿಗುಣಗಳಿಂದ ಕೂಡಿದವನಾಗಿಯೂ, ಅಪ್ರಮೇಯನಾಗಿಯೂ, ಎಲ್ಲೆಯಿಲ್ಲದ ಮಹಿಮೆಯುಳ್ಳವನಾಗಿಯೂ ಇರುವ ಪರಮಪುರುಷನಿಗೆ ನಮಸ್ಕಾರವು” ಎಂಬುದೇ ಆ ಮಂತ್ರಾರ್ಥವು, ಈ ಮಂತ್ರಜಪದೊಡನೆ ರುದ್ರನು, ಇನ್ನೂ ಅನೇಕವಿಧದಿಂದ ಹೀಗೆಂದು ಸ್ತೋತ್ರಮಾಡುವನು. “ಓ ಪರಮಪುರುಷಾ ! ನೀನು ಸರ್ವಲೋಕಾರಾಧ್ಯನು. ಆಶ್ರಿತರನ್ನು ಸರ್ವವಿಧದಲ್ಲಿಯೂ ರಕ್ಷಿಸತಕ್ಕ ಪಾದಾರವಿಂದಗಳುಳ್ಳವನು, ಜ್ಞಾನಶಕ್ತಿ ಮೊದಲಾದ ಆರುಗುಣಗಳಿಗೆ ನೆಲೆಯಾದವನು ! ಸಮಸ್ತಲೋಕಕ್ಕೂ ಮುಖ್ಯಾಶ್ರಯನು ! ಜಗತ್ಕಾರಣಭೂತವಾದ ತನ್ನ ರೂಪವನ್ನು ಭಕ್ತರಕೋರಿಕೆಗೆ ತಕ್ಕಂತೆ ಬೇರೆಬೇರೆ ವಿಧದಿಂದ ತೋರ್ಪಡಿಸತಕ್ಕವನು.! ಆಶ್ರಿತರಿಗೆ ಸಂಸಾರಬಂಧವನ್ನು ಬಿಡಿಸತಕ್ಕವನು ! ವಿಮುಖರಾದವರಿಗೆ ಸಂಸಾರವನ್ನು ಕಟ್ಟತಕ್ಕವನು!ಇಂತಹ ಸರ್ವೇಶ್ವರನಾದನಿನಗೆ ನಮಸ್ಕಾರವು.ಓ ದೇವಾ!ಎಲ್ಲವನ್ನೂ ಸಾಕ್ಷಾತ್ಕರಿಸತಕ್ಕವನಾಗಿ, ಸರ್ವಸ್ವತಂತ್ರನೆನಿಸಿಕೊಂಡ ನಿನ್ನ ಜ್ಞಾನವೆಂಬುದು, ಕಾಮಕ್ರೋಧಾದಿಗಳನ್ನು ಜಯಿ

ಸಲಾರದ ನಮ್ಮಂತವರ ಜ್ಞಾನದಂತೆ, ಮಾಯಾಗುಣದಿಂದುಂಟಾದ ರಾಗ ದ್ವೇಷಾದಿಗಳಿಂದ ಸ್ವಲ್ಪಮಾತ್ರವೂ ಕೆಡಲಾರದು. ಸಂಸಾರವನ್ನು ಜಯಿಸಬೇಕೆಂಬ ಆಸೆಯುಳ್ಳ ಯಾವ ವಿವೇಕಿಯುತಾನೇ ನಿನ್ನ ಪಾದಸೇವೆಯಲ್ಲಿ ವಿಮುಖನಾಗುವನು ? ಓ ಪರಮಪುರುಷಾ! ದೇಹವನ್ನೇ ಆತ್ಮವೆಂದು ಭಾವಿಸುವ ಮೂಢಜನರ ಭಾವನೆಗೆ ತಕ್ಕಂತೆ, ನೀನೂ ನಿನ್ನ ಮಾಯೆಯಿಂದ ಅವರಕಣ್ಣಿಗೆ ಮದ್ಯಮದದಿಂದ ಕೆಂಪೇರಿದ ಕಣ್ಣುಳ್ಳವನಂತೆಕಾಣಿಸುತ್ತಿರುವೆ. ಆದರೆ ವಾಸ್ತವದಲ್ಲಿ ನಿನ್ನ ದಿವ್ಯಮಂಗಳ ವಿಗ್ರಹವು ಅಪ್ರಾಕೃತವಾಗಿಯೂ, ಕರ್ಮವಶ್ಯವಲ್ಲದೆಯೂ ಇರುವುದು. ನೀನೇ ಸ್ವೇಚ್ಛೆಯಿಂದಲೇ ನಿನಗೆ ಬೇಕಾದ ರೂಪವನ್ನು ಸ್ವೀಕರಿಸತಕ್ಕವನು. ಈ ಕಾರಣದಿಂದಲ್ಲವೇ ಇಲ್ಲಿನ ನಾಗಕನ್ಯೆಯರೂ ನಿನ್ನ ಪಾದಾರವಿಂದವನ್ನು ಮುಟ್ಟಿದಮಾತ್ರಕ್ಕೆ ಕಾಮವಿಕಾರಹೊಂದಿ ಮನಸ್ಸು ಕಲಗಿ, ಮುಂದೆ ಪೂಜೆಯನ್ನೂ ನಡೆಸಲಾರದೆ ಸುಮ್ಮನಾಗುವರು. ಕಾಮದಿಂದ ಕಲಗಿದ ಮನಸ್ಸುಳ್ಳ ತಾವು. ಶುದ್ಧಸತ್ವಮೂರ್ತಿಯಾದ ನಿನ್ನ ಪಾದಗಳನ್ನು ಮುಟ್ಟುವುದಕ್ಕೆ ಹೆದರಿ ಹಿಂಜರಿಯುವರು! ಇಂತಹ ಮಹಾಮಹಿಮೆಯುಳ್ಳ ನಿನ್ನ ಸೇವೆಯಲ್ಲಿ ಯಾವನು ತಾನೇ ಅಸೆಪಡದಿರುವನು? ಓ ವಾಸುದೇವಾ ! ವೇದಾಂತಗಳೆಲ್ಲವೂ ನಿನ್ನನ್ನೇ ಸೃಷ್ಟಿಸ್ಥಿತಿಸಂಹಾರಗಳಿಗೆ ಕಾರಣನನ್ನಾಗಿ ಹೇಳುವುವು. ಮತ್ತು ನೀನು ಸ್ವರೂಪಸ್ವಭಾವಗಳಲ್ಲಿಯಾಗಲಿ, ದೇಶ, ಕಾಲ, ವಸ್ತು ಸ್ಥಿತಿಗಳಲ್ಲಿಯಾಗಲಿ ವ್ಯತ್ಯಾಸವಿಲ್ಲದವನು. ಸಹಸ್ರಫಣೆಗಳುಳ್ಳ ನಿನ್ನ ಶಿರಸ್ಸಿನ ಯಾವುದೋ ಒಂದುಕಡೆಯಲ್ಲಿ, ಸಾಸಿವೆಯಕಾಳಿನಂತೆ ಅಂಟಿಕೊಂಡಿರುವ ಈಭೂಮಂಡಲವನ್ನು ನೀನುಕೇವಲ ಲೀಲಾಮಾತ್ರದಿಂದಲೇ ಧರಿಸಿರತಕ್ಕವನು. ಇಂತಹ ಅಪಾರಮಹಿಮೆಯುಳ್ಳ ನಿನ್ನನ್ನು ಯಾವನುತಾನೇ ಸಂತೋಷದಿಂದಾದರಿಸಲಾರನು ? ಓ ಪರಮಾತ್ಮಾ ! ಮಹತ್ತತ್ವಕ್ಕೆ ಅಭಿಮಾನಿಯಾಗಿಯೂ, ಸೃಷ್ಟಿಕಾರ್ಯಕ್ಕೆ ಬೇಕಾದ ಜ್ಞಾನವುಳ್ಳವನಾಗಿಯೂ, ನಮ್ಮೆಲ್ಲರಿಗಿಂತಲೂ ಮೊದಲನೆಯವನಾಗಿಯೂ, ರಜೋಗುಣಪ್ರಧಾನನಾಗಿಯೂ ಇರುವ ಚತುರ್ಮುಖನೂಕೂಡ, ನಿನ್ನಿಂದಲೇ ಹುಟ್ಟಿದವನು. ದೇವಮನುಷ್ಯಾದಿಶರೀರಗಳಲ್ಲಿ ಸಾತ್ವಿಕ, ರಾಜಸ,

ತಾಮಸಗಳೆಂಬ ಮೂರುಬಗೆಯ ಅಹಂಕಾರಗಳನ್ನು ನಡೆಸುವುದಕ್ಕಾಗಿ ನಾನೂ ಆಬ್ರಹ್ಮದೇವನಿಂದ ಸೃಷ್ಟಿಸಲ್ಪಟ್ಟೆನು. ನೀನು ಕೊಟ್ಟಿರುವ ಜ್ಞಾನದಿಂದಲೇ ನಾನು ಆಕಾರ್ಯಗಳನ್ನು ನಡೆಸುತ್ತಿರುವೆನು. ಅದುದರಿಂದ ಮಹತ್ತು, ಮೂರುಬಗೆಯ ಅಹಂಕಾರಗಳು, ಮತ್ತು ಚತುರ್ಮುಖಬ್ರಹ್ಮನು ಮೊದಲಾದ ನಾವೆಲ್ಲರೂ, ಸೂತ್ರದಿಂದ ಬಿಗಿಯಲ್ಪಟ್ಟ ಹಕ್ಕಿಗಳಂತೆ, ನಿನ್ನ ಅಜ್ಞಾಧೀನರಾಗಿ ನಿನ್ನ ಅನುಗ್ರಹಬಲದಿಂದಲೇ ಆಯಾವ್ಯಾಪಾರವನ್ನು ನಡೆಸಬಲ್ಲವರಾಗಿ, ಬ್ರಹ್ಮಾಂಡವನ್ನೂ, ಅದರೊಳಗಿನ ವಸ್ತುಸಮೂಹಗಳೆನ್ನೂ ಸೃಷ್ಟಿಸುತ್ತಿರುವೆವು. ಓ ಸರ್ವೇಶ್ವರಾ! ಜೀವನು ದೇಹೇಂದ್ರಿಯಾದಿಗಳ ಸಂಬಂಧದಿಂದ ಆತ್ಮಪರಮಾತ್ಮಸ್ವರೂಪವನ್ನರಿಯಲಾರದೆ, ಸಂಸಾರದಲ್ಲಿ ಮುಳುಗಿ ಹೋಗುವನು. ತನ್ನನ್ನು ಕಟ್ಟಿರುವ ಧರ್ಮಗ್ರಂಥಿರೂಪವಾದನಿನ್ನ ಮಾಯೆಯಕಟ್ಟನ್ನೇ ತಿಳಿಯಲಾರದವನು,ಅದನ್ನು ಬಿಡಿಸಿಕೊಳ್ಳ ತಕ್ಕ ಉಪಾಯವನ್ನು ಹೇಗೆ ತಿಳಿಯಬಲ್ಲನು? ಆದುದರಿಂದ ಪ್ರಕೃತಿಸಂಬಂಧವನ್ನುಂಟುಮಾಡುವುದಕ್ಕಾಗಲಿ,ಅದನ್ನು ನೀಗಿಸುವುದಕ್ಕಾಗಲಿ ನೀನೇ ಸಮರ್ಥನು! ಇಂತಹ ವಿಚಿತ್ರಶಕ್ತಿಯುಳ್ಳ ನಿನಗೆ ನಮಸ್ಕಾರವು" ಎಂದು ರುದ್ರನು ಸಂಕರ್ಷಣಮೂರ್ತಿಯಾದ ಭಗವಂತನನ್ನು ಸ್ತುತಿಸುವನು. ಇದು ಹದಿನೇಳನೆಯ ಅಧ್ಯಾಯವು.

---

## ಭದ್ರಾಶ್ವವರ್ಷವೇ ಮೊದಲಾದ ಆರುವರ್ಷಗಳಲ್ಲಿ ಭಗವಂತನು ಆಯಾವರ್ಷಪತಿಗಳಿಂದ ಆರಾಧಿಸಲ್ಪಡುವ ಕ್ರಮಗಳು.

ರಾಜೇಂದ್ರಾ! ಕೇಳು! ಭದ್ರಾಶ್ವವರ್ಷಕ್ಕೆ ಧರ್ಮನೆಂಬವನಪುತ್ರನಾದ ಭದ್ರಶ್ರವನೆಂಬವನೇ ಅಧಿಪತಿಯು. ಇವನೊಡನೆ ಆತನ ವಂಶದಲ್ಲಿ ಪ್ರಧಾನರೆನಿಸಿಕೊಂಡ ಮಹಾಪುರುಷರೆಲ್ಲರೂ ಸಾಕ್ಷಾದ್ಭಗವಂತನಿಗೆಅತಿಪ್ರಿಯವಾಗಿಯೂ, ಧರ್ಮಸ್ವರೂಪವಾಗಿಯೂ ಇರುವ ಹಯಗ್ರೀವಮೂರ್ತಿಯನ್ನು ಯೋಗಬಲದಿಂದ ಸಾಕ್ಷಾತ್ಕರಿಸಿ, ಆರಾಧಿಸುತ್ತಿರುವರು. "ಓಂಕಾರಸ್ವರೂಪನಾಗಿಯೂ, ಬದ್ಧಜೀವನಿಗೆ ಪ್ರಕೃತಿಸಂಬಂಧವನ್ನು ನೀಗಿಸಿ,ಬ್ರಹ್ಮ

ಪ್ರಾಪ್ತಿರೂಪವಾದ ಮೋಕ್ಷವನ್ನು ಕೈಗೂಡಿಸತಕ್ಕವನಾಗಿಯೂ ಇರುವ ನಿನಗೆ ನಮಸ್ಕಾರವು," ಎಂಬೀ ಅರ್ಥವುಳ್ಳ ಮಂತ್ರವನ್ನು ಜಪಿಸಿ ಹೀಗೆಂದು ಸ್ತುತಿಸುವರು. "ಆಹಾ! ಇದಲ್ಲವೇ ಆಶ್ಚರ್ಯವು! ಲೋಕದಲ್ಲಿ ಮನುಷ್ಯನು, ತನ್ನ ತಂದೆ, ತಾಯಿ, ಮೊದಲಾದ ಬಂಧುವರ್ಗವು ಮೃತ್ಯುವಶವಾದುದನ್ನು ಕಣ್ಣಾರೆ ನೋಡಿಯೂ, ತಮಗೂ ಅದೇಗತಿಯೆಂಬುದನ್ನು ತಿಳಿಯದೆ, ತಮ್ಮ ಶರೀರವು ಸ್ಥಿರವೆಂದೇ ಎಣಿಸುತ್ತಿರುವನು. ಇವೆಲ್ಲವೂ ಭಗವಂತನಾದ ನಿನ್ನ ಮಾಯೆಯಲ್ಲದೆ ಬೇರೇನು? ಸತ್ತವರ ದೇಹವನ್ನು ಅತ್ತಲಾಗಿ ದಹನಮಾಡಿ ಬಂದಕೂಡಲೇ ಇತ್ತಲಾಗಿ, ಸುಖಭ್ರಾಂತಿಯನ್ನು ಹುಟ್ಟಿಸತಕ್ಕ ಶಬ್ದಾದಿವಿಷಯಗಳಿಗಾಗಿ ಆತುರಪಟ್ಟು,ಪಾಪಕರ್ಮಗಳಲ್ಲಿ ಪ್ರವರ್ತಿಸುವನು. ಆ ಹಿಂದಿನವರು ಗಳಿಸಿಟ್ಟ ಹಣದಿಂದಲೇ ತಾನು ಸುಖಪಡುವುದಕ್ಕೆ ಬಯಸುವನು. ಸಾಮಾನ್ಯಜನರ ಸಂಗತಿಯು ಹಾಗಿರಲಿ! ವೇದಾಂತವಿದ್ಯೆಯನ್ನು ಚೆನ್ನಾಗಿ ಓದಿ, ಆತ್ಮೋಪಾಸನೆಯಲ್ಲಿ ಅನುಭವವುಳ್ಳವರೂ ಕೂಡ, ಈಪ್ರಪಂಚವೆಲ್ಲವೂ ಅಸ್ಥಿರವೆಂದು ಹೇಳುತ್ತಿರುವುದು ಮಾತ್ರವೇ ಹೊರತು, ಅವರೂ ನಿನ್ನ ಮಾಯೆಯಿಂದ ಮೋಹಿತರಾಗಿ,ಸತ್ತವರನ್ನು ಕಂಡು ದುಃಖಿಸುವರು. ತಮಗೆ ಮಕ್ಕಳು ಹುಟ್ಟಿದಾಗ ಸಂತೋಷಿಸುವರು. ಆದುದರಿಂದ ಈ ನಿನ್ನ ವ್ಯಾಪಾರವು ಪರಮಾಶ್ಚರ್ಯಕರವಾಗಿರುವುದು. ದೇವಾ! ನಮಗೆ ಆವಿಧವಾದ ಮೋಹವನ್ನು ತಪ್ಪಿಸಬೇಕೆಂಬುದಕ್ಕಾಗಿಯೇ ನಾವು ನಿನ್ನಲ್ಲಿ ಮರೆಹುಗುವೆವು. ಇದಕ್ಕಿಂತಲೂ ಮತ್ತೊಂದಾಶ್ಚರ್ಯವೇನೆಂದರೆ, ನೀನು ಪ್ರಪಂಚ ಸೃಷ್ಟಿಸ್ಥಿತಿಸಂಹಾರಗಳೆಂಬ ಕಾರ್ಯಗಳನ್ನು ನಡೆಸುತ್ತಿದ್ದರೂ ಕರ್ಮರಹಿತನೆನಿಸಿಕೊಳ್ಳುವೆ? ಸೂಕ್ಷ್ಮದಶೆಯಲ್ಲಿಯೂ, ಸ್ಥೂಲದಶೆಯಲ್ಲಿಯೂ, ಪ್ರಕೃತಿಯನ್ನು ಶರೀರವಾಗಿ ಹೊಂದಿದ್ದವನಾದರೂ ಅಪ್ರಾಕೃತನೆನಿಸಿಕೊಳ್ಳುವೆ ? ಪ್ರಪಂಚದಲ್ಲಿ ಕಾಣುವ ಬೇರೆಬೇರೆ ಆಕಾರಭೇದದಿಂದ ಅವತರಿಸುತಿದ್ದರೂ, ವಿಕಾರರಹಿತನೆನಿಸಿಕೊಳ್ಳುವೆ! ತತ್ವವನ್ನು ವಿಚಾರಿಸಿದರೆ ಇದೇನೂ ಆಶ್ಚರ್ಯವಲ್ಲ. ಈ ಸೃಷ್ಟ್ಯಾದಿಕಾರ್ಯಗಳೆಲ್ಲವೂ ನಿನಗೆ ಲೀಲಾರ್ಥವಾಗಿರುವುವು. ಪುಣ್ಯಪಾಪಕರ್ಮಗಳು ಜೀವನನ್ನು ದೇವಮನುಷ್ಯಾದಿಶರೀರಗಳಲ್ಲಿ ಕಟ್ಟಿಡುವಂತೆ, ಆ ಕರ್ಮವು ನಿನ್ನನ್ನು ಕಟ್ಟಿಡಲಾರದು

ಆದುದರಿಂದ ನೀನು ಕರ್ಮರಹಿತನಾಗಿ ಸೃಷ್ಟ್ಯಾದಿಕಾರ್ಯಗಳನ್ನು ನಡೆಸು ವೆಯೆಂಬುದೂ ಯುಕ್ತವೇ! ನೀನು ಪ್ರಕೃತಿಶರೀರಕನಾಗಿದ್ದರೂ,ಜೀವನಂತೆ ನಿನಗೆ ಪ್ರಕೃತಿಸಂಬಂಧದಿಂದುಂಟಾದ ಜ್ಞಾನಸಂಕೋಚವಿಲ್ಲವಾದುದರಿಂ ದ ನೀನು ಅಪ್ರಾಕೃತನೆಂಬುದೂ ಯುಕ್ತವೇ! ಮತ್ತು ನೀನು ಹೊಂ ದತಕ್ಕರೂಪಾಂತರಗಳೆಲ್ಲವೂ ನಿನ್ನ ಸ್ವೇಚ್ಛೆಯಿಂದಲೇ ಅಂಗೀಕರಿಸಲ್ಪಟ್ಟು ದೇ ಹೊರತು, ಜೀವನಂತೆ ಕರ್ಮಸಂಬಂಧದಿಂದುಂಟಾದ ವಿಕಾರವಲ್ಲ. ಆದುದರಿಂದ ನೀನು ವಿಕಾರವಿಲ್ಲದವನೆಂಬುದೂ ಯುಕ್ತವೆ! ಶರೀರದಲ್ಲಿ ಸೇರಿರುವ ಜೀವನಿಗೆ ಆ ಶರೀರಗತವಾದ ಬಾಲ್ಯಯೌವನಾದಿವಿಕಾರಗಳು ಹೇಗೆ ಉಂಟಾಗುವುದಿಲ್ಲವೋ,ಅದರಂತೆ ನೀನು ವಿಕಾರಹೊಂದತಕ್ಕ ಎಲ್ಲಾ ವಸ್ತುಗಳಲ್ಲಿಯೂ ಅಡಗಿದ್ದರೂ ನಿನಗೂ ಆಯಾವಸ್ತುಗತವಾದ ವಿಕಾರ ವೊಂದೂ ಹುಟ್ಟಲಾರದು. ಹೀಗೆ ವಿಚಿತ್ರಶಕ್ತಿಯುಳ್ಳ ನಿನಗೆ ನಮಸ್ಕಾ ರವು. ಓ ದೇವಾ! ಹಿಂದೊಮ್ಮೆ ದೈನಂದಿನಪ್ರಳಯಕಾಲದಲ್ಲಿ, ದೈತ್ಯನೊ ಬ್ಬನು ವೇದಗಳನ್ನಪಹರಿಸಿಕೊಂಡು ಹೋಗಲು, ಬ್ರಹ್ಮನ ಪ್ರಾರ್ಥನೆಯಿಂ ದ ನೀನು ಈ ಹಯಗ್ರೀವಸ್ವರೂಪವನ್ನು ಧರಿಸಿ, ಆ ರಾಕ್ಷಸನನ್ನು ಕೊಂದು, ಆ ವೇದಗಳನ್ನು ತಿರುಗಿ ಬ್ರಹ್ಮನಿಗೊಪ್ಪಿಸಿದೆ! ಆದುದರಿಂದಲೇ ನೀನು ಧ ರ್ಮಮೂರ್ತಿಯೆನಿಸಿಕೊಂಡಿರುವೆ. ಅಂತಹ ಅಮೋಘಚರಿತ್ರವುಳ್ಳ ನಿನಗೆ ನಮಸ್ಕಾರವು.” ಎಂಬೀ ವಾಕ್ಯಗಳಿಂದ ಭದ್ರಾಶ್ವವರ್ಷದವರು ಭಗವಂತ ನಾದ ಹಯಗ್ರೀವನನ್ನು ಸ್ತುತಿಸುವರು

ರಾಜೇಂದ್ರಾ! ಹರಿವರ್ಷದಲ್ಲಿ ಭಗವಂತನು ನರಸಿಂಹಸ್ವರೂಪದಿಂದ ಕಂಗೊಳಿಸುವನು! ಆ ಅವತಾರಕಾರಣವನ್ನು ಮುಂದೆ ಚೆನ್ನಾಗಿ ವಿವರಿ ಸುವೆನು. ಗುಣಗಳಲ್ಲಿ ಸಾಕ್ಷಾದ್ಭಗವಂತನಿಗೆ ಸಮಾನನಾಗಿಯೂ, ಪರಮ ಭಾಗವತೋತ್ತಮನಾಗಿಯೂ, ತನ್ನ ನಡತೆಗಳಿಂದ ದೈತ್ಯದಾನವಕುಲವ ನ್ನೇ ಪವಿತ್ರಮಾಡತಕ್ಕವನಾಗಿಯೂ ಇರುವ ಪ್ರಹ್ಲಾದನೆಂಬವನೇ ಆ ವ ರ್ಷದ ಅಧಿಪತಿಯು. ಆ ಪ್ರಹ್ಲಾದನು ಫಲಾಂತರದಲ್ಲಿ ಅಪೇಕ್ಷೆಯಿಲ್ಲದ ಸ್ಥಿರವಾದ ಭಕ್ತಿಯೋಗದಿಂದ ಕೂಡಿದವನಾಗಿ, ಅಲ್ಲಿನ ನಿವಾಸಿಗಳಾದ ತ ನ್ನ ಪ್ರಜೆಗಳೊಡನೆ ಆ ನೃಸಿಂಹಸ್ವರೂಪವನ್ನು ಈ ಮಂತ್ರದಿಂದ ಜಪಿಸಿ

ಧ್ಯಾನಿಸುವನು. “ಓಂಕಾರವಾಚ್ಯನಾದ ಓ ಭಗವಂತಾ! ನೃಸಿಂಹರೂಪಿ ಯಾದ ನಿನಗೆ! ನಮಸ್ಕಾರವು! ಸಮಸ್ತ ತೇಜಸ್ಸುಗಳಿಗೂ ಪ್ರಕಾಶಕನಾದ ನಿನಗೆ ನಮಸ್ಕಾರವು! ವಜ್ರದಂತೆ ದೃಢವಾದ ನಖದಂಷ್ಟ್ರಗಳುಳ್ಳ ಓ ನಾರಸಿಂಹಾ! ಪ್ರತ್ಯಕ್ಷನಾಗು! ನಮ್ಮ ಕರ್ಮವಾಸನೆಗಳನ್ನು ತೊಲಗಿಸು ತೊಲಗಿಸು! ನಮ್ಮ ಸಂಸಾರಭಯವನ್ನು ನೀಗಿಸು! ಮೈದೋರು! ಮೈ ದೋರು!” ಎಂಬೀ ಉಪಾಸನಮಂತ್ರವನ್ನು ಜಪಿಸಿ, ಹೀಗೆಂದು ಸ್ತುತಿಸು ವನು. “ದೇವಾ! ನಿನ್ನಿಂದ ಲೋಕಕ್ಕೆಲ್ಲವೂ ಕ್ಷೇಮವಾಗಲಿ! ದುರ್ಜನರೆಲ್ಲರೂ ಕ್ರೋಧಾದಿಗಳನ್ನು ಬಿಟ್ಟು ಮನಶ್ಶಾಂತಿಯುಳ್ಳವರಾಗಲಿ! ಸಮಸ್ತಭೂತ ಗಳೂ ಅನ್ಯೋನ್ಯಕ್ಷೇಮಚಿಂತೆಯಿಂದಿರಲಿ! ಆ ಸಮಸ್ತಭೂತಗಳ ಮನಸ್ಸೂ ಶಮದಮಾದಿಗುಣಗಳಿಂದ ಸನ್ಮಾರ್ಗದಲ್ಲಿ ಪ್ರವರ್ತಿಸಲಿ! ನನ್ನ ಮತ್ತು ಬೇ ರೆ ಎಲ್ಲಾ ಭೂತಗಳ ಮನಸ್ಸೂ, ಬೇರೆ ಫಲಾಪೇಕ್ಷೆಯಿಲ್ಲದೆ ನಿನ್ನಲ್ಲಿಯೇ ಪ್ರವರ್ತಿಸುತ್ತಿರಲಿ! ಓ ಪರಮೇಶ್ವರಾ! ನಮ್ಮ ಮನಸ್ಸು ಮನೆಮಂದಿಮಕ್ಕ ಳಲ್ಲಿಯೂ, ಧನದಲ್ಲಿಯೂ! ಬಂಧುಗಳಲ್ಲಿಯೂ ಆಸಕ್ತಿಯನ್ನು ಬಿಟ್ಟು, ಭ ಗವದ್ಭಕ್ತರಲ್ಲಿಮಾತ್ರವೇ ಆಸೆಯುಳ್ಳುದಾಗಿರಲಿ! ಭಗವದ್ಭಕ್ತರಲ್ಲಿ ಸಹ ವಾಸಮಾಡತಕ್ಕವರ ಮನಸ್ಸು ಬೇರೆಚಿಂತೆಯಿಲ್ಲದೆ ನಿನ್ನಲ್ಲಿಯೇ ನೆಲೆ ಗೊಳ್ಳುವುದು! ಆಗ ಅದು ಸಂಸಾರದುಃಖವನ್ನೂ ಕಾಣಲಾರದು. ಅಂತಹ ಭಗವದ್ಭಕ್ತರ ಸಹವಾಸದಲ್ಲಿರುವವರು, ತಮ್ಮ ಪ್ರಾಣಧಾರಣೆಗೆ ಬೇಕಾದಷ್ಟು ವಸ್ತುಗಳಲ್ಲಿಮಾತ್ರವೇ ತೃಪ್ತಿಹೊಂದಿ, ಶೀಘ್ರದಲ್ಲಿ ಮುಕ್ತಿ ಯನ್ನೂ ಸಂಪಾದಿಸಬಲ್ಲರು. ಹಾಗಿಲ್ಲದೆ ಇಂದ್ರಿಯತೃಪ್ತಿಯಲ್ಲಿ ಆಸಕ್ತರಾ ಗಿ, ಶಬ್ದಾದಿವಿಷಯಗಳಲ್ಲಿ ಮನಸ್ಸಿಟ್ಟವರು, ಎಂದೆಂದಿಗೂ ಆ ಮುಕ್ತಿಯ ನ್ನು ಪಡೆಯಲಾರರು. ನನ್ನ ಬುದ್ಧಿಗೂಕೂಡ ನಿನ್ನನ್ನು ಎಡೆಬಿಡದೆ ಧ್ಯಾ ನಿಸತಕ್ಕ ಪ್ರವೃತ್ತಿಯು, ಅಂತಹ ಭಕ್ತೋತ್ತಮರ ಸಹವಾಸದಿಂದಲೇ ಲಭಿಸಿರುವುದು. ಗಂಗಾದಿಪುಣ್ಯತೀರ್ಥಗಳಂತೆ ಪರಿಶುದ್ಧವಾದ ನಿನ್ನ ಗುಣ ಗಳನ್ನು ಅನವರತವೂ ಕೀರ್ತಿಸತಕ್ಕ ಭಕ್ತರ ಮನಸ್ಸಿನಲ್ಲಿ, ನೀನು ಅವರ ಕಿವಿಯ ಮಾರ್ಗವಾಗಿ ಪ್ರವೇಶಿಸಿ, ಅವರ ಮನಸ್ಸಿನಲ್ಲಿರುವ ಕಲ್ಮಷಗಳೆಲ್ಲ ವನ್ನೂ ನೀಗಿಸತಕ್ಕವನು. ಭೋಗಮೋಕ್ಷಪ್ರದನಾದ ಆ ನಿನ್ನ ಗುಣಗ

ಳನ್ನು ವಿವೇಕಿಯಾದ ಯಾವ ಮನುಷ್ಯನುತಾನೇ ಕೊಂಡಾಡದಿರುವನು? ಮನುಷ್ಯನಿಗೆ, ಭಗವಂತನಾದ ನಿನ್ನಲ್ಲಿ ಫಲಾಪೇಕ್ಷೆಯಿಲ್ಲದೆ ಭಕ್ತಿಯೋಗ ವುಂಟಾದ ಪಕ್ಷದಲ್ಲಿ, ಇಂದ್ರಾದಿದೇವತೆಗಳೂ ಅವನ ಸೇವಕರಾಗುವರು. ಸಮಸ್ತಗುಣಗಳೂ ಅವನಿಗೆ ತಾನಾಗಿ ಕೈಗೂಡಿ ಬರುವುವು. ಆಶ್ರಿತರ ಪಾಪವನ್ನು ನೀಗಿಸತಕ್ಕ ಆ ನಿನ್ನಲ್ಲಿ ಭಕ್ತಿಯಿಲ್ಲದೆ, ವಿಷಯಾತುರನಾಗಿ, ಅಲ್ಲಲ್ಲಿ ತೊಳಲುತ್ತಿರುವವನಿಗೆ, ಮಹಾಮಹಿಮೆಯುಳ್ಳ ಭಗವದ್ಭಕ್ತರ ಗುಣಗಳಲ್ಲಿ ಲೇಶಮಾತ್ರವೂ ಲಭಿಸಲಾರದು. ಮೀನುಗಳಿಗೆ ಜಲವೇ ಜೀವನಾಧಾರವಾಗಿರುವಂತೆ, ಸಮಸ್ತ ಜೀವಗಳಿಗೂ ನೀನೇ ಧಾರಕನಾಗಿರುವೆ. ಆದುದರಿಂದ, ಮನುಷ್ಯನು ರೂಪಯೌವನಾದಿಗಳಿಂದಲೂ, ಮನೆ, ಮಕ್ಕಳು, ಹಣ,ಮುಂತಾದ ಭಾಗ್ಯಸಮೃದ್ಧಿಗಳಿಂದಲೂ ಪೂರ್ಣನಾಗಿದ್ದರೂ,ನಿನ್ನನ್ನು ಮರೆತು ಆ ಗೃಹಾದಿಗಳಲ್ಲಿಯೇ ಆಸಕ್ತನಾಗಿದ್ದಪಕ್ಷದಲ್ಲಿ, ಆಗ ಅವನು ಅನುಭವಿಸತಕ್ಕ ದಾಂಪತ್ಯಸುಖಕ್ಕೆ, ವಯಸ್ಸಿದ್ದಾಗ ಮೇಲ್ಮೆಯೇ ಹೊರತು, ಆತ್ಮಪರಮಾತ್ಮ ಜ್ಞಾನದಿಂದುಂಟಾಗುವ ನಿರತಿಶಯಾನಂದದಂತೆ ಆ ಸುಖವು ನಿತ್ಯವಾದುದಲ್ಲ. ನಿನ್ನ ಭಕ್ತಿಯೊಂದೇ ನಿರತಿಶಯಾನಂದಕ್ಕೆ ಕಾರಣವು. ವಿಷಯಸುಖಗಳೆಲ್ಲವೂ ದುಃಖಹೇತುಗಳು ! ಆದುದರಿಂದ ಕಾಮ, ಕ್ರೋಧ, ರಾಗ, ದುಃಖ, ಅಹಂಕಾರ, ಅತ್ಯಾಶೆ, ಭಯ, ದೈನ್ಯ. ಮನೋವ್ಯಾಧಿ, ಮುಂತಾದುವುಗಳಿಗೆ ಮುಖ್ಯಸ್ಥಾನವಾಗಿಯೂ, ಜನನಮರಣರೂಪವಾದ ಸಂಸಾರಚಕ್ರದಲ್ಲಿ ಸುತ್ತಿಸತಕ್ಕುದಾಗಿಯೂ ಇರುವ ಗೃಹಾದಿಗಳನ್ನು ತೊರೆದು, ನೃಸಿಂಹರೂಪಿಯಾದ ನಿನ್ನ ಪಾದಾರವಿಂದಗಳನ್ನು ಭಜಿಸತಕ್ಕವರಿಗೆ, ಯಾವ ವಿಧದಲ್ಲಿಯೂ ಭಯವಿರದು.” ಎಂಬುದಾಗಿ ಪ್ರಹ್ಲಾದನು ನೃಸಿಂಹಮೂರ್ತಿಯನ್ನು ಅನವರತವೂ ಸ್ತುತಿಸುವನು.

ರಾಜೇಂದ್ರಾ ! ಕೇತುಮಾಲವರ್ಷದಲ್ಲಿ ಭಗವಂತನು, ಶ್ರೀಮಹಾಲಕ್ಷ್ಮಿಗೂ, ಮತ್ತು ಆ ವರ್ಷಾಧಿಪತಿಗಳೆನಿಸಿದ ಸಂವತ್ಸರನೆಂಬ ಪ್ರಜಾಧಿಪತಿಯ ಮಕ್ಕಳಿಗೂ ಪ್ರಿಯವನ್ನುಂಟುಮಾಡುವುದಕ್ಕಾಗಿ, ಪ್ರದ್ಯುಮ್ನರೂಪದಿಂದ ನೆಲೆಗೊಂಡಿರುವನು. ಸಂವತ್ಸರನೆಂಬ ಪ್ರಜಾಧಿಪತಿಗೆ ರಾತ್ರ್ಯಭಿಮಾನಿದೇವತೆಗಳೆಂಬ ! ಮೂವತ್ತಾರುಸಾವಿರಮಂದಿ ಹೆಣ್ಣು ಮಕ್ಕಳೂ.

ಹಗಲಿನ ಅಭಿಮಾನಿದೇವತೆಗಳೆಂಬ ಮೂವತ್ತಾರುಸಾವಿರಮಂದಿ ಗಂಡು ಮಕ್ಕಳೂ ಇರುವರು. ಈ ಅಹೋರಾತ್ರಾಭಿಮಾನಿದೇವತೆಗಳೇ ಶತಸಂವತ್ಸರರೂಪವಾದ ಮನುಷ್ಯನ ಆಯುರ್ದಾಯವನ್ನು ಅಳೆಯತಕ್ಕವರು. ಈ ರಾತ್ರ್ಯಭಿಮಾನಿದೇವತೆಗಳು ಗರ್ಭವತಿಯರಾಗಿ, ಪ್ರಸವಕಾಲದಲ್ಲಿರುವಾಗ, ಸಂವತ್ಸರಾಂತದಲ್ಲಿ ಶ್ರೀವಿಷ್ಣುಚಕ್ರದ ತೇಜಸ್ಸಿನಿಂದ ಎದೆಯೊಡೆದು ಗರ್ಭಸ್ರಾವಹೊಂದುವರು. ಅವರ ಗರ್ಭಶಿಶುಗಳು ಸತ್ತು ಕೆಳಗೆ ಬೀಳುವುವು ಈ ಸ್ಥಿತಿಯಲ್ಲಿ ಭಗವಂತನು, ಮಹಾಲಕ್ಷ್ಮಿಗೂ, ಆ ಅಹೋರಾತ್ರಾಭಿಮಾನಿದೇವತೆಗಳಿಗೂ ಪ್ರಿಯವನ್ನುಂಟುಮಾಡುವುದಕ್ಕಾಗಿ ಪ್ರದ್ಯುಮ್ನರೂಪದಿಂದಿರುವನು ಆಗ ಪರಮಪುರುಷನುತನ್ನ ಅಂದವಾದ ಗತಿವಿಲಾಸದಿಂದಲೂ, ಮುಂದಹಾಸಸುಂದರವಾದ ಮುಖದಿಂದಲೂ, ಪ್ರಸನ್ನದೃಷ್ಟಿಯಿಂದಲೂ, ಸುಂದರವಾದ ಹುಬ್ಬಿನಾಟದಿಂದಲೂ, ಶ್ರೀಮಹಾಲಕ್ಷ್ಮಿಯನ್ನು ಸಂತೋಷಗೊಳಿಸುತ್ತ, ಅವಳ ಹಾವಭಾವವಿಲಾಸಗಳಿಂದ ತನ್ನ ಇಂದ್ರಿಯಗಳನ್ನೂ ಸಂತೋಷಗೊಳಿಸುತ್ತಿರುವನು. ಇದರಿಂದ ತೃಪ್ತಳಾದ ಮಹಾಲಕ್ಷ್ಮಿಯು, ಆ ಭಗವಂತನ ಮಾಯಾಮಯವಾದ ರೂಪವನ್ನು ನೋಡಿ, ರಾತ್ರಿಯಲ್ಲಿ ರಾತ್ರ್ಯಭಿಮಾನಿದೇವತೆಗಳಾದ ಆ ಹೆಣ್ಣುಮಕ್ಕಳೊಡನೆಯೂ, ಹಗಲಲ್ಲಿ ಅಹರಭಿಮಾನಿದೇವತೆಗಳಾದ ಆ ಗಂಡುಮಕ್ಕಳೊಡನೆಯೂ ಸೇರಿ, ಯೋಗನಿಷ್ಠಳಾಗಿ, ಬೀಜಾಕ್ಷರ ಪೂರ್ವಕವಾದ ಈ ಕೆಳಗಿನ ಮಂತ್ರದೊಡನೆ ಸ್ತುತಿಸುತ್ತಿರುವಳು." "ಓಂಕಾರವಾಚ್ಯನಾಗಿಯೂ,ಇಂದ್ರಿಯಗಳಿಗೆ ಅಧಿಪತಿಯಾಗಿಯೂ,ಪ್ರಕೃತಿಪುರುಷರಿಗೆ ದುರ್ಲಭವಾದ ಜ್ಞಾನಾದಿಗುಣಗಳುಳ್ಳವನೆಂದು ವೇದಾಂತಗಳಿಂದಪ್ರತಿಪಾದ್ಯನಾಗಿಯೂ,ಕರ್ಮೇಂದ್ರಿಯ ಜ್ಞಾನೇಂದ್ರಿಯಗಳ ಮತ್ತು ಮನಸ್ಸಿನ ವ್ಯಾಪಾರಗಳಿಗೂ, ಪೃಥಿವ್ಯಾದಿ ಪಂಚಮಹಾಭೂತಗಳಿಗೂ ಒಳಹೊಕ್ಕು ಪ್ರೇರಿಸತಕ್ಕವನಾಗಿಯೂ, ಆ ಪಂಚಭೂತಗಳೊಡಗೂಡಿದ ಏಕಾದಶೇಂದ್ರಿಯಗಳೆಂಬ ಹದಿನಾರುಕಲೆಗಳನ್ನೂ ಶರೀರವಾಗಿ ಹೊಂದಿದವನಾಗಿಯೂ, ವೇದಸ್ವರೂಪನಾಗಿಯೂ ಇರುವ ನಿನಗೆ ನಮಸ್ಕಾರವು. ವ್ಯಷ್ಟಿತತ್ವಗಳನ್ನೆಲ್ಲಾ ಶರೀರವಾಗಿ, ಹೊಂದಿ ಅನ್ನಮಯನೆನಿಸಿಕೊಂಡ ನಿನಗೆ ನಮ

ಸ್ಕಾರವು ! ಜೀವಶರೀರಕನಾದ ನಿನಗೆ ನಮಸ್ಕಾರವು ! ಸರ್ವಾತ್ಮಕನಾದ ನಿನಗೆನಮಸ್ಕಾರವು! ಮನೋಬಲ, ಇಂದ್ರಿಯ,ಬಲ,ದೇಹಬಲವೆಂಬಿವುಗಳಿಗೆ ಕಾರಣನಾಗಿಯೂ, ಸರ್ವಜನಪ್ರಿಯನಾಗಿಯೂ, ಆಶ್ರಿತರನ್ನು ಪ್ರೀತಿಸತಕ್ಕವನಾಗಿಯೂ ಇರುವ ನಿನಗೆ ಪ್ರತ್ಯಕ್ಷದಲ್ಲಿಯೂ, ಪರೋಕ್ಷದಲ್ಲಿಯೂ ನಮಸ್ಕಾರವು." ಎಂಬೀ ಅರ್ಥವುಳ್ಳ ಮಂತ್ರವನ್ನು ಜಪಿಸುತ್ತ ಹೀಗೆಂದು ಸ್ತುತಿಸುವರು. "ಓ ದೇವಾ!ಲೋಕದಲ್ಲಿ ಅನೇಕಸ್ತ್ರೀಯರು,ಸರ್ವೇಂದ್ರಿಯಗಳಿಗೂ ಸ್ವತಂತ್ರನಿಯಾಮಕನಾದ ನಿನ್ನನ್ನು ಅನೇಕವ್ರತಗಳಿಂದಾರಾಧಿಸಿ, ನೀನು ಪ್ರಸನ್ನನಾಗಿರುವಾಗಲೂ ನಿನ್ನ ಪಾದಸೇವೆಯನ್ನು ಕೇಳಿಕೊಳ್ಳದೆ, ತಮಗೆ ಬೇರೊಬ್ಬಪತಿಯನ್ನು ಕೊಡಬೇಕೆಂದು ಕೇಳಿಕೊಳ್ಳುವರು. ಇದು ಕೇವಲಮೌಢ್ಯವಲ್ಲದೆ ಬೇರೆಯಲ್ಲ! ಏಕೆಂದರೆ, ನಿನ್ನ ಅನುಗ್ರಹದಿಂದ ಅವರಿಗೆ ಲಭಿಸತಕ್ಕ ಪುರುಷರಾದರೋ ಯಾವ ವಿಧದಲ್ಲಿಯೂ ಸ್ವತಂತ್ರರಲ್ಲದುದರಿಂದ, ಅವರು ಆಪತ್ನಿಯರಿಗೆ ಅತಿಪ್ರಿಯರಾದ ಮಕ್ಕಳನ್ನಾಗಲಿ,ಧನವನ್ನಾಗಲಿ, ಅವರ ಆಯುಸ್ಸನ್ನಾಗಲಿ ಕಾಪಾಡುವುದಕ್ಕೆ ಸಮರ್ಥರಲ್ಲ.ಯಾವನು ಯಾವ ಸಂದರ್ಭದಲ್ಲಿಯೂ ತಾನು ಭಯವಿಲ್ಲದವನಾಗಿ, ಭಯಾತುರರಾದ ತನ್ನ ಕಡೆಯವರನ್ನು ಸರ್ವವಿಧದಿಂದಲೂ ರಕ್ಷಿಸಬಲ್ಲನೋ ಅಂತವನಿಗೆಮಾತ್ರವೇ ಪತಿಯೆಂಬ ಹೆಸರು ಸಲ್ಲುವುದು! ಪ್ರಸಿದ್ಧಗುಣವುಳ್ಳ ನೀನೊಬ್ಬನೇ ಆ ಶಕ್ತಿಯುಳ್ಳವನೇಹೊರತು, ಲೋಕದಲ್ಲಿ ನಿನ್ನಂತವನು ಬೇರೊಬ್ಬನಿಲ್ಲ. ಸಮಾನಬಲವುಳ್ಳವರಿಬ್ಬರಿದ್ದಾಗ, ಅವರಲ್ಲಿ ಪರಸ್ಪರಭಯಕ್ಕೆ ಕಾರಣವುಂಟು. ಈ ಭಯವು ಏಕಾಧಿಪತ್ಯದಲ್ಲಿರುವ ಚಕ್ರವರ್ತಿಗಳಿಗೂ ತಪ್ಪಿದುದಲ್ಲ. ನಿನಗೆ ಸಮಾನರೊಬ್ಬರೂ ಇಲ್ಲದುದರಿಂದ ನಿನಗೆ ಭಯವೆಂಬ ಪ್ರಸಕ್ತಿಯೇ ಇಲ್ಲವು. ಆದುದರಿಂದ ಪತಿಯೆಂಬ ಶಬ್ದಕ್ಕೆ ಲೋಕದಲ್ಲಿ ನೀನೊಬ್ಬನೇ ತಕ್ಕ ಪಾತ್ರವು. ಇದಲ್ಲದೆ ಸ್ತ್ರೀಯರು ತಮ್ಮಪತಿಯ ಪ್ರೀತಿಯನ್ನು ಸಂಪಾದಿಸಬೇಕಾದರೆ, ಅವನನ್ನು ನಾನಾಬಗೆಯ ಉಪಚಾರಗಳಿಂದ ಸಂತೋಷಗೊಳಿಸಬೇಕಾಗಿರುವುದು. ನೀನು ಜೀವರಾಶಿಯನ್ನು ರಕ್ಷಿಸುವುದರಲ್ಲಿ ಅದೊಂದನ್ನೂ ಅಪೇಕ್ಷಿಸತಕ್ಕವನಲ್ಲ. ಜೀವನಿಗೆ "ತಾನು ಸರ್ವವಿಧದಲ್ಲಿಯೂ ಪರಮಾತ್ಮನಿಗೆ ಅಧೀನ" ನೆಂಬ ಜ್ಞಾನವೊಂದು

ಮಾತ್ರ ಹುಟ್ಟಿದರೆ, ನೀನು ಬೇರೊಂದನ್ನೂ ಇದಿರುನೋಡದೆ, ಅದರಿಂದ ಲೇ ತೃಪ್ತನಾಗಿ ಅವನನ್ನು ರಕ್ಷಿಸುವೆ. ಲೋಕದಲ್ಲಿ ಸಮಸ್ತಪುರುಷಾರ್ಥಸ್ವ ರೂಪನಾದ ನಿನ್ನನ್ನು ಕುರಿತು, ಪತಿ ಪುತ್ರ ಧನಾಶೆಯುಳ್ಳ ಒಬ್ಬಸ್ತ್ರೀಯು ಎಷ್ಟೇವಿಧದಿಂದ ಆರಾಧಿಸಿದರೂ ನೀನು ಅವಳಿಗೆ, ಆ ಅಲ್ಪಫಲಗಳನ್ನೇ ಕೊಡತಕ್ಕವನು. ವಾಸ್ತವದಲ್ಲಿ ಎಲ್ಲರಿಗೂ ನೀನೊಬ್ಬನೇ ಆಶೆಪಡತಕ್ಕ ವಸ್ತುವೇ ಹೊರತು ಬೇರೆ ಯಾವುದೂ ಅಪೇಕ್ಷಿಸಲ್ಪಡತಕ್ಕವುಗಳಲ್ಲ. ಇದ ನ್ನು ತಿಳಿಯದೆ ಪತಿಪುತ್ರಾದಿಗಳನ್ನು ಕೋರತಕ್ಕ ಹೆಂಗಸು, ಕೊನೆಗೆ ಅವುಗಳ ವಿಯೋಗದಿಂದ ಅಪಾರವಾದ ದುಃಖಕ್ಕೆ ಗುರಿಯಾಗಬೇಕಾಗುವು ದು. ದೇವಾ! ನಿನ್ನನ್ನು ಕೈಹಿಡಿದ ನನಗೊಬ್ಬಳಿಗೆಮಾತ್ರ,ಎಂದೆಂದಿಗೂ ನಾ ಶವಿಲ್ಲದ ಶಾಶ್ವತಸುಖವುಂಟೇಹೊರತು ಬೇರೊಬ್ಬ ಹೆಂಗಸಿಗೆ ಈ ಸುಖವಿರ ಲಾರದು. ಇಷ್ಟೇಅಲ್ಲದೆ,.ಇಂದ್ರಿಯಪ್ರೀತಿಗಾಗಿ ವಿಷಯಭೋಗಗಳನ್ನು ಬ ಯಸುವ ಬ್ರಹ್ಮೇಂದ್ರರುದ್ರಾದಿದೇವತೆಗಳೂ ಕೂಡ, ನನ್ನ ಕಟಾಕ್ಷಲೇಶವ ನ್ನು ಪಡೆಯುವುದಕ್ಕಾಗಿ ಅನೇಕತಪಸ್ಸುಗಳಿಂದ ನನ್ನನ್ನು ಭಜಿಸುವರು.ನನ ಗೆ ಈ ವಿಧವಾದ ಮೇಲ್ಮೆಯುಂಟಾಗಿರುವುದಕ್ಕೂ,ನಾನು ನಿನ್ನಪ್ರೀತಿಗೆಪಾ ತ್ರಳಾಗಿರುವುದೇ ಕಾರಣವು. ಎಷ್ಟೇತಪಸ್ಸುಗಳಿಂದ ನನ್ನನ್ನು ಭಜಿಸಿದರೂ ನಿನ್ನಲ್ಲಿ ವಿಮುಖರಾದವರಿಗೆ ನಾನೂ ಒಲಿಯತಕ್ಕವಳಲ್ಲ. ಏಕೆಂದರೆ ನಾನು ನಿನಗಿಂತಲೂ ಬೇರೆಯಾದವಳಲ್ಲ! ಆದುದರಿಂದ ನಿನ್ನಪಾದಾಶ್ರಿತರಿಗೆಮಾತ್ರ ನಾನು ಅನುಕೂಲೆಯಾಗಿರುವೆನೇ ಹೊರತು, ಉಳಿದವರು ಎಷ್ಟೇತಪಸ್ಸ ನ್ನು ಮಾಡಿದರೂ ಅವರು ನನ್ನ ಕಟಾಕ್ಷಕ್ಕೆ ಪಾತ್ರರಾಗರು. ಓ ನಾಥಾ! ನೀನು ಆಶ್ರಿತವತ್ಸಲನು! ಸಕಲ ಪುರುಷಾರ್ಥಸ್ವರೂಪನು! ಸಮಸ್ತ ಪುರು ಷಾರ್ಥಪ್ರದವೆಂದು ಲೋಕಪ್ರಸಿದ್ಧಿಯನ್ನು ಹೊಂದಿದ ನಿನ್ನ ಹಸ್ತ ಕಮ ಲವನ್ನು, ನೀನು ನಿನ್ನ ಭಕ್ತರ ಶಿರಸ್ಸಿನಲ್ಲಿಡುವಂತೆ,ನನ್ನ ಶಿರಸ್ಸಿನಲ್ಲಿಯೂ ಇ ಟ್ಟು ಅನುಗ್ರಹಿಸುವನಾಗು! ನೀನು ನಿನ್ನ ಅಸಾಧಾರಣ ಚಿಹ್ನನಾದ ಶ್ರೀವ ತ್ಸವೆಂಬ ಮಚ್ಚೆಯನ್ನು ಹೇಗೋಹಾಗೆ,ನನ್ನನ್ನೂ ನಿನ್ನ ಎದೆಯಲ್ಲಿಯೇ ಧರಿ ಸಿರತಕ್ಕವನಾದರೂ,ನಿನಗೆ ನಿನ್ನ ಭಕ್ತರಲ್ಲಿರತಕ್ಕ ಅನುಗ್ರಹವು ನನ್ನಲ್ಲಿರದು. ಸರ್ವೇಶ್ವರನಾದ ನಿನ್ನ ಅಭಿಪ್ರಾಯವನ್ನೂ, ನಿನ್ನ ನಡತೆಯನ್ನೂ ಯಾರ

ತಾನೇ ತಿಳಿಯಬಲ್ಲರು! ನಾಥಾ! ನೀನು ನಿನ್ನ ಭಕ್ತರಲ್ಲಿ ತೋರಿಸತಕ್ಕ ಅನು ಗ್ರಹವನ್ನೇ ನನ್ನಲ್ಲಿಯೂ ತೋರಿಸುತ್ತಿರಬೇಕೆಂದು ನಾನು ಬಾರಿಬಾರಿಗೂ ಬೇಡಿಕೊಳ್ಳುವೆನು" ಎಂದು ಲಕ್ಷ್ಮೀದೇವಿಯು ಕಾಮದೇವರೂಪಿಯಾದ ಭಗವಂತನನ್ನು ಸ್ತುತಿಸುತ್ತಿರುವಳು.

ರಮ್ಯಕವರ್ಷದಲ್ಲಿ ಭಗವಂತನು, ಹಿಂದೆ ತಾನು ಯುಗಾಂತಸಮ ಯದಲ್ಲಿ ಆ ವರ್ಷಾಧಿಪತಿಯಾದ ಮನುವಿಗೆ ತೋರಿಸಿದುದಾಗಿಯೂ, ತನಗೆ ಅತ್ಯಂತಪ್ರಿಯವಾಗಿಯೂ ಇರುವ ಮತ್ಸ್ಯಾವತಾರದ ರೂಪವನ್ನೇ ಈಗ ಲೂ ಕಾಣಿಸುತ್ತಿರುವನು. ಆ ಮನುವು ಈಗಲೂ ಆ ಭೂಭಾಗದಲ್ಲಿ ಅವಿಚ್ಛಿ ನ್ನವಾದ ಭಕ್ತಿಯಿಂದ ಆ ಮೂರ್ತಿಯನ್ನೇ ಆರಾಧಿಸುತ್ತ, ಈ ಕೆಳಗಿನ ಮಂ ತ್ರವನ್ನು ಜಪಿಸುವನು "ಪ್ರಣವಸ್ವರೂಪನಾಗಿಯೂ, ಷಡ್ಗುಣ ಪರಿಪೂ ರ್ಣನಾಗಿಯೂ ಇರುವ ಆ ಶ್ರೀಹರಿಯ ಪ್ರಥಮಾವತಾರಕ್ಕೆ ನಮಸ್ಕಾರ ವು. ಶುದ್ಧಸತ್ವಮೂರ್ತಿಯಾಗಿಯೂ, ಪ್ರಾಣಾಶ್ರಯನಾಗಿಯೂ, ಇಂದ್ರಿ ಯಬಲಕ್ಕೂ ಮನೋಬಲಕ್ಕೂ, ದೇಹಬಲಕ್ಕೂ ಆಧಾರಭೂತನಾಗಿಯೂ, ಇರುವ ಮಹಾಮತ್ಸ್ಯರೂಪಕ್ಕೆ ನಮಸ್ಕಾರವು".ಎಂಬೀ ಮಂತ್ರಾರ್ಥವನ್ನು ಜಪಿಸಿ ಹೀಗೆಂದು ಸ್ತುತಿಸುವನು. "ದೇವಾ! ನಿನ್ನರೂಪವನ್ನು ಒಳಗಾಗಲಿ ಹೊರಗಾಗಲಿ ಹೀಗೆಂದು ನಿರ್ಣಯಿಸುವುದಕ್ಕೆ ಲೋಕಪಾಲಕರಿಗೂ ಸಾ ಧ್ಯವಿಲ್ಲ! ನೀನು ವೇದಾತ್ಮಕವಾದ ಮಹಾಧ್ವನಿಯೊಡನೆ ಸಂಚರಿಸು ತ್ತಿರುವೆ. ಮನುಷ್ಯನು ಸೂತ್ರದಿಂದ ಕಟ್ಟಿ ಬೊಂಬೆಯನ್ನಾಡಿಸು ವಂತೆ, ನೀನು ಚಿದಚಿದಾತ್ಮಕವಾದ ಸಮಸ್ತಜಗತ್ತನ್ನೂ ವೇದವಾ ಕ್ಯವೆಂಬ ಸೂತ್ರದಿಂದ ಕೈವಶಮಾಡಿಕೊಂಡು ಆಡಿಸತಕ್ಕವನು. ಆದು ದರಿಂದ ಸಮಸ್ತಲೋಕಗಳಿಗೂ ನೀನೊಬ್ಬನೇ ಈಶ್ವರನು. ಇಂದ್ರಾದಿ ಲೋಕಪಾಲಕರೆಲ್ಲರೂ ತಮ್ಮೊಳಗೆ ಅಸೂಯೆಯನ್ನು ಬಿಟ್ಟು ಐಕಮತ್ಯದಿಂ ದ ಒಂದಾಗಿ ಸೇರಿಯಾಗಲಿ, ಪ್ರತ್ಯೇಕವಾಗಿಯಾಗಲಿ,ಎಷ್ಟೆಷ್ಟೋ ವಿಧದಿಂ ದ ಪ್ರಯತ್ನಮಾಡಿದರೂ, ದ್ವಿಪಾತ್ತುಗಳೆಂದೂ, ಚತುಷ್ಪಾತ್ತುಗಳೆಂದೂ, ಸರೀಸೃಪಗಳೆಂದೂ, ನಾನಾಭೇದವುಳ್ಳ ಜಂಗಮಸ್ಥಾವರರೂಪವಾದ ಈ ಪ್ರಪಂಚವನ್ನು ತಮ್ಮ ಸ್ವಶಕ್ತಿಯಿಂದ ರಕ್ಷಿಸಲಾರರು.ಆದುದರಿಂದ ನೀನೊಬ್ಬನೇ

ಶಕ್ತನು! ದೇವಾ! ಹಿಂದೆ, ಪ್ರಳಯಕಾಲದ ಮಹಾಸಮುದ್ರಮಧ್ಯದಿಂದ ನಾನಾಬಗೆಯ ಓಷಧಿಗಳಿಗೂ ಗಿಡಬಳ್ಳಿಗಳಿಗೂ ಆಧಾರವಾಗಿದ್ದ ಈಭೂ ಮಂಡಲವನ್ನೂ, ನನ್ನನ್ನೂ. ಮೇಲೆತ್ತಿ ತಂದು, ಮಹಾವೀರ್ಯದಿಂದಸಂಚರಿ ಸಿದವನೇ ನೀನು! ಸಮಸ್ತಜಗತ್ತಿಗೂ ಪ್ರಾಣಸ್ವರೂಪನಾದ ನಿನಗೆ ನಮಸ್ಕಾರವು." ಎಂಬೀ ಸ್ತುತಿವಾಕ್ಯಗಳಿಂದ ಮನುವು ಮತ್ಸ್ಯರೂಪಿಯಾ ದ ಭಗವಂತನನ್ನು ಸ್ತುತಿಸುವನು.

ಹಿರಣ್ಮಯವರ್ಷದಲ್ಲಿ ಭಗವಂತನು ಕೂರ್ಮರೂಪದಿಂದ ನೆಲೆ ಗೊಂಡಿರುವನು. ಭಗವಂತನಿಗೆ ಅತ್ಯಂತಪ್ರಿಯವಾದ ಆ ಮೂರ್ತಿಯನ್ನು ಪಿತೃಗಣಾಧಿಪತಿಯಾದ ಅರ್ಯಮನೆಂಬುವನು, ಆ ಪ್ರದೇಶನಿವಾಸಿಗಳೊ ಡನೆ ಆರಾಧಿಸುತ್ತಿರುವನು. ಅವನು ಆ ಭಗವಂತನನ್ನು ಕುರಿತು. "ಓಂಕಾ ರವಾಚ್ಯನಾದ ಕೂರ್ಮರೂಪಿಯಾದ ಭಗವಂತನಿಗೆ ನಮಸ್ಕಾರವು! ಸಮ ಸ್ತಜಂತುಗಳನ್ನೂ, ಅವುಗಳ ಗುಣಗಳನ್ನೂ ತನ್ನಲ್ಲಿ ಧರಿಸಿದವನಾಗಿಯೂ ಅಗಾಧವಾದ ಸಮುದ್ರದಲ್ಲಿ ಬೇರೊಬ್ಬರಿಗೆ ತಿಳಿಯದೆ ವಾಸಮಾಡತಕ್ಕ ನಾಗಿಯೂ, ಪ್ರಕೃತಿಸಂಬಂಧಶರೀರವಿಲ್ಲದನಾಗಿಯೂ, ಮಹಾಮಹಿಮೆ ಯುಳ್ಳವನಾಗಿಯೂ, ಸರ್ವಾಧಾರನಾಗಿಯೂ ಇರುವ ನಿನಗೆ ನಮಸ್ಕಾರ ವು." ಎಂಬೀಮಂತ್ರವನ್ನು ಜಪಿಸಿ, ಈಕೆಳಗಿನ ವಾಕ್ಯಗಳಿಂದ ಸ್ತುತಿಸುವ ನು. "ಓ ದೇವಾ! ಈ ಪ್ರಪಂಚಸ್ವರೂಪವೆಲ್ಲವೂ ನಿನ್ನ ಮಾಯೆಯಿಂದ ಲೇ ಏರ್ಪಟ್ಟು, ಜೀವವರ್ಗಗಳಿಗೆ ಭೋಗಸಾಧನವಾಗಿ ಬೇರೆಬೇರೆ ಜಾತಿಗು ಣಾದಿಭೇದಗಳಿಂದ ಇಷ್ಟೆಂದು ನಿರ್ಣಯಿಸುವುದಕ್ಕಾಗದಷ್ಟು ಅನೇಕಾನೇ ಕರೂಪಗಳಿಂದ ತೋರುತ್ತಿರುವುದು. ಓ ದೇವಾ! ಜರಾಯುಜಗಳು (ಗರ್ಭ ಚೀರದಲ್ಲಿ ಹುಟ್ಟತಕ್ಕ ಮನುಷ್ಯಮೃಗಾದಿಜಾತಿಗಳು)ಸ್ವೇದಜಗಳು, (ಕಶ್ಮ ಲದಲ್ಲಿ ಶಾಕದಿಂದ ಹುಟತಕ್ಕ ಕ್ರಿಮಿಕೀಟಗಳು) ಅಂಡಜಗಳು, (ಮೊ ಟ್ಟೆಯೊಡೆದು ಹುಟ್ಟತಕ್ಕ ಪಕ್ಷಿ ಮುಂತಾದುವು) ಉದ್ಭಿಜ್ಜಗಳು,(ನೆಲದಿಂದ ಮೊಳಿತು ಬೆಳೆಯತಕ್ಕ ವೃಕ್ಷಜಾತಿಗಳು.) ಈ ನಾಲ್ಕುಭೇದವುಳ್ಳ ಚರಾಚ ರಾತ್ಮಕವಾದ ಸಮಸ್ತಪ್ರಪಂಚವೂ ನಿನ್ನ ಶರೀರವಲ್ಲದೆ ಬೇರೆಯಲ್ಲ. ಇ ದಲ್ಲದೆ ದ್ಯುಲೋಕ, ಆಕಾಶ, ಭೂಮಿ, ಪರ್ವತ, ನದನದೀಸಮುದ್ರಗಳು,

ದ್ವೀಪಗಳು, ಚಂದ್ರಸೂರ್ಯಾದಿಗ್ರಹಗಳು, ಅಶ್ವಿನಿ ಮೊದಲಾದ ತಾರೆಗಳು, ಇವೇ ಮೊದಲಾದ ಎಲ್ಲಾ ಶಬ್ದಗಳಿಂದಲೂ ನೀನೊಬ್ಬನೇ ಕರೆಯಲ್ಪಡುತ್ತಿರುವೆ ಲೆಕ್ಕವಿಲ್ಲದಷ್ಟು ಬೇರೆಬೇರೆ ವಿಧದಿಂದ ಕರೆಯಲ್ಪಡುವ ದೇವಾದಿನಾಮಗಳೂ, ದೇವಾದಿ ಶರೀರಗಳೂ, ಪೃಥಿವಿ ಮೊದಲಾದ ದ್ರವ್ಯಗಳೂ, ನಿನ್ನರೂಪಾಂತರಗಳಾಗಿದ್ದರೂ, ಮಂದಬುದ್ಧಿಯುಳ್ಳ ಮೂಢರಿಗೆ ಚೆನ್ನಾಗಿ ತಿಳಿಯುವುದಕ್ಕಾಗಿ, ಕಪಿಲಾದಿಮಹರ್ಷಿಗಳು ಆ ನಿನ್ನರೂಪಗಳನ್ನೇ ಇಪ್ಪತ್ತು ನಾಲ್ಕುತತ್ವಗಳೆಂದೂ, ಇಪ್ಪತ್ತೈದು ತತ್ವಗಳಿಂದೂ ವಿವರಿಸಿ ತೋರಿಸಿರುವರು. ಅಪ್ರಮೇಯಪ್ರಭಾವವುಳ್ಳ ನಿನ್ನ ಸ್ವರೂಪವನ್ನು ತಿಳಿದೊಡನೆಯೇ ಈ ಸಂಖ್ಯಾಭೇದಗಳೆಲ್ಲವೂ ಹಾರಿ ಹೋಗುವುದು, ಏಕೆಂದರೆ ಅವೆಲ್ಲವೂ ನಿನಗೆ ಶರೀರವಾಗಿ ಏಕರೂಪದಿಂದಿರುವುವು. ಆ ನಿನ್ನಸ್ವರೂಪವು ಸಾಂಖ್ಯಶಾಸ್ತ್ರದಿಂದ ಚೆನ್ನಾಗಿ ತಿಳಿಯತಕ್ಕುದಾಗಿರುವುದು ಅಂತಹ ನಿನಗೆ ನಮಸ್ಕಾರವು." ಎಂದು ಅರ್ಯಮನು ಕೂರ್ಮಮೂರ್ತಿಯನ್ನು ಸ್ತುತಿಸುವನು.

ಉತ್ತರ ಕುರುವರ್ಷದಲ್ಲಿ ಯಜ್ಞಪುರುಷನಾದ ಭಗವಂತನು ವರಾಹರೂಪದಿಂದ ನೆಲೆಗೊಂಡಿರುವನು, ಆತನನ್ನು ಭೂದೇವಿಯು,ಅಲ್ಲಿನಮಹಾಪುರುಷರೊಡನೆ, ನಿಶ್ಚಲವಾದ ಭಕ್ತಿಯೋಗದಿಂದ ಈಕೆಳಗಿನ ಮಂತ್ರವನ್ನು ಜಪಿಸಿ ಸ್ತೋತ್ರಮಾಡುತ್ತಿರುವಳು. "ಓಂಕಾರಶಬ್ದವಾಚ್ಯನಾದ ಭಗವಂತನಿಗೆ ನಮಸ್ಕಾರವು. ಬೇರೆಬೇರೆ ಮಂತ್ರಗಳಿಂದ ಕರೆಯಲ್ಪಡುವ ಇಂದ್ರಾದಿದೇವತೆಗಳೆಲ್ಲರನ್ನೂ ಶರೀರವಾಗಿ ಉಳ್ಳ ಯಜ್ಞಸ್ವರೂಪನಾದವರಾಹಮೂರ್ತಿಗೆ ನಮಸ್ಕಾರವು. ಸೋಮವಿಶಿಷ್ಟವಾಗಿಯೂ, ಸೋಮವಿಲ್ಲದೆಯೂ ನಡೆಸಲ್ಪಡುವ ಯಾಗಭೇದಗಳೆಲ್ಲವನ್ನೂ ಶರೀರವಾಗಿ ಹೊಂದಿದಮಹಾಪುರುಷನಿಗೆ ನಮಸ್ಕಾರವು. ತಾನೇ ಯಜ್ಞಸ್ವರೂಪನಾಗಿಯೂ,ತಾನೇ ಆ ಯಜ್ಞಗಳಿಂದ ಆರಾಧಿಸಲ್ಪಡತಕ್ಕವನಾಗಿಯೂ,ತಾನೇ ಆ ಯಜ್ಞಗಳಿಗೆ ಫಲವನ್ನು ಕೊಡತಕ್ಕವನಾಗಿಯೂ,ತಾನೇ ಯಜ್ಞಸಾಧನವಾಗಿಯೂ,ತಾನೇಹವಿಸ್ಸಾಗಿಯೂ ಇರುವ ಭಗವಂತನಿಗೆ ನಮಸ್ಕಾರವು,ಜ್ಞಾನಶಕ್ತಿ ಮೊದಲಾದ ಷಡ್ಗುಣಗಳಿಂದ ತುಂಬಿದ ಪರಮಪುರುಷನಿಗೆನಮಸ್ಕಾರವು.ರಕ್ತನೇ

ತ್ರಗಳುಳ್ಳ ಶ್ವೇತವರಾಹಮೂರ್ತಿಗೆ ನಮಸ್ಕಾರವು!" ಎಂಬೀ ಅರ್ಥವುಳ್ಳ ಮಂತ್ರವನ್ನು ಜಪಿಸಿ ಹೀಗೆಂದು ಸ್ತೋತ್ರಮಾಡುವಳು. "ದೇವಾ! ಕರ್ಮಬದ್ಧರಾಗಿ ದೇವಾದಿಶರೀರಗಳನ್ನು ಹೊಂದಿರುವ ಜೀವಾತ್ಮರಲ್ಲಿ, ಅರಣಿಯೊಳಗಿನ ಬೆಂಕಿಯಂತೆ ನೀನು ಮರೆಸಿಕೊಂಡಿರುವೆ! ನಿನ್ನನ್ನು ತಿಳಿಯುವುದಕ್ಕಾಗಿ,ಅರಣಿಯನ್ನು ಜ್ಜಿ ಬೆಂಕಿಯನ್ನು ತೆಗೆಯುವಂತೆ, ಪ್ರಾಜ್ಞರಾದಮಹನೀಯರು, ತಮ್ಮ ಮನಸ್ಸೆಂಬ ಕಡೆತದ ಕಲ್ಲಿನಿಂದ ಕಡೆದು,ನಿನ್ನನ್ನು ಸಾಕ್ಷಾತ್ಕರಿಸುವರು. ಇಂತಹ ಮಹಾಪ್ರಭಾವವುಳ್ಳವನಾಗಿಯೂ,ಸರ್ವಶರಣ್ಯನಾಗಿಯೂ ಸರ್ವನಿಯಾಮಕನಾಗಿಯೂ ಇರುವ ನಿನಗೆ ನಮಸ್ಕಾರವು. ಓಭಗವಂತಾ! ಆತ್ಮತತ್ವವನ್ನು ಚೆನ್ನಾಗಿ ತಿಳಿದ ಮಹಾಪುರುಷರು, ಭೂತೇಂದ್ರಿಯಗಳಸಮುದಾಯದಿಂದ ಏರ್ಪಟ್ಟಿರುವ ಶರೀರವನ್ನೂ ಅದರಲ್ಲಿ ಕರ್ತೃರೂಪದಿಂದಿರುವ ಜೀವಾತ್ಮರನ್ನೂ, ಅದಕ್ಕೆ ಕಾರಣವೆನಿಸಿದ ಪ್ರಕೃತಿಗುಣಗಳಾದ ಸತ್ತ್ವರಜಸ್ತಮಸ್ಸುಗಳನ್ನೂ ತಮ್ಮ ವಿವೇಚನೆಯಿಂದ ತಿಳಿದಿರುವರು. ನೀನೂ ಅವುಗಳಲ್ಲಿ ಸೇರಿ ಏಕರೂಪದಿಂದ ಕಲೆತಿದ್ದರೂ, ಅವೆಲ್ಲಕ್ಕೂ ನೀನೇ ನಿಯಾಮಕನಾಗಿ ಆಪ್ರಕೃತಿಪುರುಷರಿಗಿಂತಲೂ ವಿಲಕ್ಷಣನೆಂಬುದನ್ನೂ ಕಂಡುಕೊಳ್ಳುವರು. ಹೀಗೆ ಮಹಾತ್ಮರಿಗೆಮಾತ್ರ ಗೋಚರಿಸತಕ್ಕ ಸ್ವರೂಪವುಳ್ಳ ನಿನಗೆ ನಮಸ್ಕಾರವು. ಓ ದೇವಾ! ನೀನು ಪ್ರಕೃತಿಗುಣಗಳಾದ ರಜಸ್ಸತ್ವತಮೋಗುಣಗಳಿಂದಲೇ, ಜಗತ್ತಿನ ಸೃಷ್ಟಿಸ್ಥಿತಿಸಂಹಾರಗಳನ್ನು ನಡೆಸುತ್ತಿರುವೆ. ಜೀವಾತ್ಮರ ಕ್ಷೇಮಕ್ಕಾಗಿಯೇ ನೀನು ಇವುಗಳನ್ನು ನಡೆಸುವೆಯೇಹೊರತು, ಈ ಕಾರ್ಯದಿಂದ ನೀನು ಪಡೆಯಬೇಕಾದ ಪ್ರಯೋಜನವೊಂದೂ ಇರುವುದಿಲ್ಲ. ಅಯಸ್ಕಾಂತದ ಮುಂದಿರುವ ಲೋಹವು, ಅದರಮಾರ್ಗವನ್ನೇಹಿಡಿದು ಸುತ್ತುವಂತೆ, ಪ್ರಕೃತಿಯು, ನಿನ್ನ ಸಂಕಲ್ಪಾನುಸಾರವಾಗಿ ಸೃಷ್ಟ್ಯಾದಿಕಾರ್ಯಗಳನ್ನು ನಡೆಸುತ್ತಿರುವುದು. ಈಸೃಷ್ಟ್ಯಾದಿಕಾರ್ಯಗಳಿಗೂ, ಅನಾದಿಯಾದ ಪುಣ್ಯಪಾಪಕರ್ಮಗಳಿಗೂ ನೀನು ಸಾಕ್ಷಿಯಾಗಿಮಾತ್ರವೇ ಇರತಕ್ಕವನು. ಆದುದರಿಂದ ಜೀವನಿಗೆ ದುಃಖಕಾರಣಗಳಾದ ಜನ್ಮ ಜರಾ ಮರಣಾದಿಗಳುಂಟಾಗುವ ವಿಷಯದಲ್ಲಿ ನಿನ್ನನ್ನು ಪಕ್ಷಪಾತಿಯೆಂದಾಗಲಿ,ದಯಾಶೂನ್ಯನೆಂದಾಗಲಿ ಹೇಳುವುದಕ್ಕಿಲ್ಲ. ಹೀಗೆ ಸರ್ವಸಮನಾದ ನಿನಗೆ ನಮಸ್ಕಾ

ರವು ಹೇನಾಥಾ! ಪೂರ್ವದಲ್ಲಿ ರಾಕ್ಷಸನ ಕೈಗೆ ಸಿಕ್ಕಿದ್ದ ನನ್ನನ್ನು ಉದ್ಧ ರಿಸುವುದಕ್ಕಾಗಿಯೇ, ನೀನು ಈವರಾಹರೂಪವನ್ನು ಕೈಕೊಂಡು, ಪಾತಾಳದಲ್ಲಿ ಪ್ರವೇಶಿಸಿ, ಮದದಾನೆಯಂತೆ ಮೇಲೆ ಬಿದ್ದ ರಾಕ್ಷಸನನ್ನು ಕೊಂದು, ಲೀಲಾಮಾತ್ರದಿಂದಲೇ ಮಹಾಸಮುದ್ರದಲ್ಲಿ ಮುಳುಗಿಹೋಗಿದ್ದ ನನ್ನನ್ನ ನಿನ್ನ ಕೋರೆದಾಡೆಯಿಂದ ಮೇಲಕ್ಕೆತ್ತಿ ತಂದೆಯಲ್ಲವೆ? ಇಂತಹ ಆದಿವರಾಹ ಮೂರ್ತಿಯಾದ ನಿನಗೆ ನಮಸ್ಕಾರವು" ಎಂದು ಭೂದೇವಿಯು ವರಾಹಮೂರ್ತಿಯನ್ನು ಸ್ತುತಿಸುತ್ತಿರುವಳು. ಇದು ಹದಿನೆಂಟನೆಯ ಅಧ್ಯಾಯವು.

---

**ಕಿಂಪುರುಷವರ್ಷದಲ್ಲಿಯೂ, ಭರತವರ್ಷದಲ್ಲಿಯೂ ಭಗವಂತನ ರೂಪವನ್ನೂ, ಅಲ್ಲಿನ ಉಪಾಸಕರನ್ನೂ, ಭರತವರ್ಷದ ಮೇಲ್ಮೆಯನ್ನೂ ತಿಳಿಸಿವುದು**

ಕಿಂಪುರುಷವರ್ಷದಲ್ಲಿ ಆದಿಪುರುಷನಾದ ಭಗವಂತನು, ಲಕ್ಷ್ಮಣಾಗ್ರಜನಾಗಿಯೂ,ಸೀತಾಕಾಂತನಾಗಿಯೂ ಇರುವ ಶ್ರೀರಾಮಮೂರ್ತಿಯಾಗಿ ನೆಲೆಗೊಂಡಿರುವನು. ಆತನ ಪಾದಸೇವೆಯಲ್ಲಿ ಅತ್ಯಾದರವುಳ್ಳ ಪರಮಭಾಗವತೋತ್ತಮನಾದ ಆಂಜನೇಯನು, ಅಲ್ಲಿನ ನಿವಾಸಿಗಳಾದ ಕಿಂಪುರುಷರೊಡಗೂಡಿ, ಅವಿಚ್ಛಿನ್ನವಾದ ಭಕ್ತಿಯಿಂದ ಆತನನ್ನಾರಾಧಿಸುತ್ತಿರುವನು. ಗಂಧರ್ವರು ಆಕಿಂಪುರುಷವರ್ಷದ ಪ್ರಜೆಗಳಲ್ಲಿ ಪ್ರಮುಖನಾದ ಆರ್ಷ್ಟಿಷೇಣನನ್ನು ಮುಂದಿಟ್ಟುಕೊಂಡು, ಮಂಗಳಕರವಾದ ಶ್ರೀರಾಮಚರಿತ್ರವನ್ನು ಯಾವಾಗಲೂ ಗಾನಮಾಡುತ್ತಿರುವರು. ಆಂಜನೇಯನು ಅದನ್ನು ಭಕ್ತಿಯಿಂದ ಬದ್ಧಾಂಜಲಿಯಾಗಿ ಕೇಳುತ್ತಿರುವುದಲ್ಲದೆ, ತಾನೂ ಈ ಕೆಳಗಿನ ಮಂತ್ರಜಪದೊಡನೆ ಆ ಶ್ರೀರಾಮಮೂರ್ತಿಯನ್ನು ಸ್ತೋತ್ರಮಾಡುತ್ತಿರುವನು "ಓಂಕಾರಸ್ವರೂಪನಾದ ಭಗವಂತನಿಗೆ ನಮಸ್ಕಾರವು! ಬ್ರಹ್ಮಾದಿಗಳಿಂದಲೂ ಸ್ತುತಿಸಲ್ಪಡತಕ್ಕವನಾಗಿದ್ದರೂ, ಸಾಧುಗಳ ಲಕ್ಷಣಗಳನ್ನೂ, ನಡತೆಗಳನ್ನೂ, ವ್ರತಗಳನ್ನೂ ನಡೆಸಿ ತೋರಿಸುತ್ತಿರುವ ಆ ಪರಮಾತ್ಮನಿಗೆ ನಮಸ್ಕಾರವು! ಶಾಂತಚಿತ್ತನಾದ ಶ್ರೀರಾಮಮೂರ್ತಿಗೆ ನಮಸ್ಕಾರವು! ಸಾಮಾನ್ಯಜನದ ನಡತೆಯನ್ನನುವರ್ತಿಸುತ್ತಿರುವ ಆ ಪರಮಾತ್ಮನಿಗೆ ನಮ

ಸ್ಕಾರವು. ಸಾಧುವೆಂಬ ಪ್ರಸಿದ್ಧಿಗೆ ಒರೆಗಲ್ಲಿನಂತೆ ನಿರ್ಣಯಸ್ಥಾನವಾಗಿಯೂ, ಬ್ರಾಹ್ಮಣಕುಲಕ್ಕೆ ರಕ್ಷಕನಾಗಿಯೂ, ಮಹಾಪುರುಷಲಕ್ಷಣ ವಿಶಿಷ್ಟನಾಗಿಯೂ, ರಾಜಾಧಿರಾಜನಾಗಿಯೂ ಇರುವ ಶ್ರೀರಾಮದೇವನಿಗೆ ನಮಸ್ಕಾರವು" ಎಂಬೀ ಮಂತ್ರವನ್ನು ಜಪಿಸುತ್ತ ಹೀಗೆಂದು ಸ್ತುತಿಸುವನು. "ಕೇವಲ ಶುದ್ಧಜ್ಞಾನಸ್ವರೂಪನಾಗಿಯೂ ತನ್ನ ತೇಜಸ್ಸಿನಿಂದಲೇ ಸತ್ವರಜಸ್ತಮೋಗುಣಗಳಿಂದುಂಟಾಗತಕ್ಕ ಉತ್ಪತ್ತಿ ಸ್ಥಿತಿ ಮರಣಗಳೆಂಬ ಮೂರುಬಗೆಯ ವಿಕಾರಗಳನ್ನೂ ನೀಗಿದವನಾಗಿಯೂ, ಹಸಿವು, ಬಾಯಾರಿಕೆ, ಮುಂತಾದ ಷಡೂರ್ಮಿಗಳಿಲ್ಲದವನಾಗಿಯೂ,ಸ್ವಯಂಪ್ರಕಾಶವಿಶಿಷ್ಟನಾಗಿಯೂ, ಉತ್ತಮಜ್ಞಾನಕ್ಕೆ ಗೋಚರಿಸತಕ್ಕವನಾಗಿಯೂ, ನಾಮರೂಪಾದಿಭೇದಗಳಿಲ್ಲದವನಾಗಿಯೂ ಇರುವ ಪುರುಷೋತ್ತಮನನ್ನು ಮರೆಹುಗುವೆನು. ಓ ನಾಥಾ! ನೀನು ಮನುಷ್ಯಾವತಾರವನ್ನು ಕೈಕೊಂಡುದು ರಾಕ್ಷಸವಧಕ್ಕಾಗಿಮಾತ್ರವೇ ಅಲ್ಲ! ಲೋಕಕ್ಕೆ ಸಂಸಾರದಲ್ಲಿರುವ ದುಃಖಪರಂಪರೆಗಳನ್ನು ತಿಳಿಸುವುದರೊಡನೆ, ಧರ್ಮಸಂಸ್ಥಾಪನವನ್ನು ಮಾಡುವುದಕ್ಕಾಗಿಯೂ ನೀನೂ ಈ ಅವತಾರವನ್ನು ಪರಿಗ್ರಹಿಸಿರುವೆ! ಹಾಗಿಲ್ಲದಪಕ್ಷದಲ್ಲಿ ಆತ್ಮಾನುಭವದಿಂದಲೇ ನಿತ್ಯಾನಂದಮೂರ್ತಿಯಾಗಿ ನೆಲೆಗೊಂಡಿರುವ ನಿನಗೆ ದುಃಖವೆಂದರೇನು? ನಿತ್ಯಾನಪಾಯಿನಿಯಾದ ಲಕ್ಷ್ಮೀದೇವಿಯೊಡನೆ ವಿಹರಿಸುತ್ತಿರುವ ನಿನಗೆ, ಸೀತಾವಿಯೋಗವೇ ಮೊದಲಾದ ಕಷ್ಟಗಳೆಲ್ಲಿಯವು? ಇವೆಲ್ಲವೂ ಲೋಕದ ಜನಗಳಿಗೆ ಸಂಸಾರದುಃಖವನ್ನು ತೋರಿಸುವುದಕ್ಕಾಗಿ ಮಾಡಿದ ನಟನಗಳೇಹೊರತು ನಿಜವಲ್ಲ! ರಾಕ್ಷಸವಧವೇ ಈ ಅವತಾರದ ಮುಖ್ಯಪ್ರಯೋಜನವೆಂದು ಹೇಳುವ ಹಾಗಿದ್ದರೆ, ನೃಸಿಂಹಾದ್ಯವತಾರಗಳಂತೆ ದುಃಖಾನುಭವವಿಲ್ಲದಂತೆಯೇ ಕ್ರೂರರಾಕ್ಷಸರನ್ನು ಕೊಂದು, ನಿನ್ನ ಸರ್ವೇಶ್ವರತ್ವವನ್ನುಮಾತ್ರ ತೋರಿಸಬಹುದಾಗಿತ್ತಲ್ಲವೆ? ಸರ್ವಶಕ್ತನಾದ ನಿನಗೆ ಅದೊಂದಸಾಧ್ಯವೆ? ರಾಮರೂಪದಿಂದವತರಿಸಿದ ಓ ಪರಮಪುರುಷಾ! ನೀನು ಸಾಂಸಾರಿಕಧರ್ಮಗಳನ್ನು ನಿಶ್ಶೇಷವಾಗಿ ನೀಗಿದ ಶುದ್ಧಮನಸ್ಸುಳ್ಳ ಸನಕಾದಿಗಳಿಗೂ ಅಂತರಾತ್ಮನಾಗಿರತಕ್ಕವನು! ಆಶ್ರಿತರಲ್ಲಿ ಎಣೆಯಿಲ್ಲದ ವಾತ್ಸಲ್ಯ

ವುಳ್ಳವನು ! ಅವರ ಪ್ರೀತಿಗೂ ನೀನು ಮುಖ್ಯಪಾತ್ರನಾದವನು. ಜ್ಞಾನ, ಶಕ್ತಿ, ಮೊದಲಾದ ಷಡ್ಗುಣಗಳಿಂದ ತುಂಬಿದವನು. ಸಮಸ್ತಲೋಕವೂ ನಿನ್ನಲ್ಲಿ ಅಡಗಿರುವುದರಿಂದಲೂ, ನೀನೂ ಆ ಸಮಸ್ತವಸ್ತುಗಳಲ್ಲಿ ಅಂತರಾತ್ಮನಾಗಿರುವುದರಿಂದಲೂ, ವಾಸುದೇವನೆಂದು ಕರೆಯಲ್ಪಡುತ್ತಿರುವೆ? ಹೀಗೆ ಸಮಸ್ತವಸ್ತುಗಳಲ್ಲಿಯೂ ನೀನು ಕಲೆತಿದ್ದರೂ, ಆಯಾವಸ್ತು ದೋಷಗಳು ನಿನ್ನನ್ನು ಮುಟ್ಟಲಾರವು. ಆದುದರಿಂದಲೇ ನೀನು ನಿತ್ಯಶುದ್ಧನೆಂಬ ಹೆಸರುಗೊಂಡವನು. ಸರ್ವವ್ಯಾಪಿಯಾಗಿದ್ದರೂ ಶಬ್ದಾದಿವಿಷಯಗಳಲ್ಲಿ ಆಸಕ್ತಿಯಿಲ್ಲದ ನೀನು, ಪತ್ನಿಯಾದ ಸೀತೆಯನ್ನಾಗಲಿ, ತಮ್ಮನಾದ ಲಕ್ಷ್ಮಣನನ್ನಾಗಲಿ ಅಗಲಿ ದುಃಖಿಸುವುದೆಂದರೇನು ? ಇವೆಲ್ಲವೂ ಲೋಕಶಿಕ್ಷಣಕ್ಕಾಗಿ ನೀನು ಮಾಡಿದ ನಟನಮಾತ್ರವಲ್ಲದೆ ಬೇರೆಯಲ್ಲ."ದೇವಾ! "ಒಂದಾವರ್ತಿತನ್ನಲ್ಲಿಮಿತ್ರಭಾವವನ್ನು ತೋರಿಸಿದಮಾತ್ರಕ್ಕೆ ಅಂತವರನ್ನು ಎಂದೆಂದಿಗೂ ಕೈಬಿಡುವವನಲ್ಲ"ವೆಂದು ಪ್ರತಿಜ್ಞೆಮಾಡಿದ ನೀನು,ನಿನ್ನ ಪಾದಸೇವೆಯಲ್ಲಿಯೇ ನಿತ್ಯಾಸಕ್ತರಾಗಿಯೂ, ನಿನಗೆ ನಿತ್ಯಾನಪಾಯಿಗಳಾಗಿಯೂ ಇರುವ ಸೀತಾಲಕ್ಷ್ಮಣರನ್ನು ಅಗಲುವುದೆಂದರೇನು ? ಓ ಮಹನೀಯಾ ! ಆಶ್ರಿತರಕ್ಷಣೆಯವಿಷಯದಲ್ಲಿ, ನೀನು, ಉತ್ತಮಕುಲವನ್ನಾಗಲಿ, ಸೌಂದರ್ಯವನ್ನಾಗಲಿ, ಬುದ್ಧಿಚಾತುರ್ಯವನ್ನಾಗಲಿ, ಆಕಾರವನ್ನಾಗಲಿ ನೋಡತಕ್ಕವನಲ್ಲ. ಆದುದರಿಂದ ಸರ್ವಭೂತಸುಹೃತ್ತಾದ ಪರಬ್ರಹ್ಮವೇ ನೀನೆಂಬುದರಲ್ಲಿ ಸಂದೇಹವಿಲ್ಲ. ಹಾಗಿಲ್ಲದೆ ಕುಲರೂಪಾದಿಗಳ ಮೇಲ್ಮೆಯನ್ನು ನೋಡಿಯೇ ನೀನು ಸಂತೋಷಿಸುವಪಕ್ಷದಲ್ಲಿ, ತಿರ್ಯಗ್ಜಾತಿಯಲ್ಲಿ ಹುಟ್ಟಿದ ನಮ್ಮಂತಹ ಕಪಿಗಳಲ್ಲಿ ನೀನು ಸ್ನೇಹವನ್ನು ಮಾಡುತ್ತಿದ್ದೆಯಾ ? ಆದುದರಿಂದ ಓ ನಾಥಾ! ನೀನು ಭಕ್ತಾನುಗ್ರಹಾರ್ಥವಾಗಿಯೇ ಈ ಮನುಷ್ಯರೂಪವನ್ನು ಕೈಕೊಂಡಿರುವೆ ! ನಿನ್ನಲ್ಲಿ ಎಣೆಯಿಲ್ಲದ ಪ್ರಭಾವವಿರುವುದರಿಂದಲೇ ಕ್ರಿಮಿಕೀಟಗಳು ಮೊದಲಾಗಿ ಕೋಸಲದೇಶದ ಪ್ರಾಣಿಗಳೆಲ್ಲವೂ ನಿನ್ನೊಡನೆ ಉತ್ತಮಗತಿಯನ್ನು ಹೊಂದಿದುವು! ಓ ಪುರುಷೋತ್ತಮಾ ! ಹೀಗೆ ರಾಮರೂಪದಿಂದ ಮನುಷ್ಯಾವತಾರವನ್ನೆತ್ತಿ, ಸರ್ವಜನಪ್ರಿಯನಾಗಿಯೂ, ಉಪಕಾರಾಭಿಜ್ಞನಾಗಿಯೂ ಇರುವ ನಿನ್ನ ಮುಂದೆ ನಿಂತು, ಒಂದಾವರ್ತಿ ಕೈಮು

ಗಿದವನು, ದೇವತೆಯಾಗಲಿ, ರಾಕ್ಷಸನಾಗಲಿ, ನರನಾಗಲಿ, ವಾನರನಾಗಲಿ, ಅವನು ನಿನ್ನ ಪೂರ್ಣಾನುಗ್ರಹಕ್ಕೆ ಪಾತ್ರನಾಗಿ ಸಕಲಾಭೀಷ್ಟಗಳನ್ನೂ ಹೊಂದುವನು.,, ಎಂದು ಹನುಮಂತನು ಶ್ರೀರಾಮಮೂರ್ತಿಯನ್ನು ಸರ್ವ ದಾ ಸ್ತುತಿಸುತ್ತಿರುವನು.

ಭಾರತವರ್ಷದಲ್ಲಿ ಭಗವಂತನು ನಾರಾಯಣನೆಂಬ ಹೆಸರಿನಿಂದ ಬದ ರಿಕಾಶ್ರಮದಲ್ಲಿ ತಪಸ್ವಿಯಾಗಿ ನೆಲೆಗೊಂಡಿರುವನು. ಮೋಕ್ಷಾರ್ಥಿಗಳಿಗೆ ತ ಪೋಮಾರ್ಗವನ್ನು ತೋರಿಸಿ, ಆ ಮಾರ್ಗದಿಂದ ಅವರನ್ನುದ್ಧರಿಸಬೇಕೆಂಬ ದಯಾಬುದ್ಧಿಯಿಂದ, ಕರ್ಮಜ್ಞಾನ ಭಕ್ತಿಯೋಗಗಳನ್ನೂ, ಅಣಿಮಾದ್ಯೈ ಶ್ವರ್ಯಗಳನ್ನೂ ಹೆಚ್ಚಿಸತಕ್ಕದಾಗಿಯೂ, ಪ್ರಾಣೇಂದ್ರಿಯಜಯದಿಂದ ಆತ್ಮಸಾಕ್ಷಾತ್ಕಾರವನ್ನುಂಟುಮಾಡತಕ್ಕದಾಗಿಯೂ ಇರುವ ತಪಸ್ಸ ನ್ನು ಮಾಡುತ್ತ, ತನ್ನ ಮಹಿಮೆಯನ್ನು ಹೊರಕ್ಕೆ ಕಾಣಿಸದೆ, ಕಲ್ಪಾಂತದ ವರೆಗೆ ಇಲ್ಲಿಯೇ ಸಾನ್ನಿಧ್ಯವನ್ನು ಮಾಡುತ್ತಿರುವನು. ಈತನನ್ನು ಪೂ ಜ್ಯನಾದ ನಾರದನು, ವರ್ಣಾಶ್ರಮಧರ್ಮಗಳಲ್ಲಿ ನಿರತರಾದ ಆ ಭಾರತವ ರ್ಷವಾಸಿಗಳೊಡನೆ! ಸೇರಿ, ಭಗವಂತನಿಂದ ಸಾಕ್ಷಾತ್ತಾಗಿ ಉಪದೇಶಿಸಲ್ಪ ಟ್ಟ ಕರ್ಮಜ್ಞಾನಯೋಗಗಳಮೂಲಕವಾದ ಭಕ್ತಿಯೋಗದಿಂದ, ಆರಾ ಧಿಸುವನು. ಭಗವದನುಭವವನ್ನು ವಿವರಿಸತಕ್ಕ ಪಾಂಚರಾತ್ರವನ್ನು ಸಾವ ರ್ಣಿಮನುವಿಗೆ ಉಪದೇಶಿಸುತ್ತ, ಈಕೆಳಗಿನ ಮಂತ್ರಜಪದೊಡನೆ ಆ ನಾ ರಾಯಣಮೂರ್ತಿಯನ್ನು ಸ್ತುತಿಸುತ್ತಿರುವನು. "ದೇವಾ! ಓಂಕಾರಸ್ವರೂ ಪನಾಗಿ ಷಡ್ಗುಣಪೂರ್ಣನಾಗಿರುವ ನಿನಗೆ ನಮಸ್ಕಾರವು. ಏಣೆಯಿಲ್ಲದ ಸೌ ಶೀಲ್ಯಗುಣವುಳ್ಳವನಾಗಿಯೂ, ಆತ್ಮಕ್ಕಿಂತಲೂ ಬೇರೆಯಾದ ದೇಹೇಂದ್ರಿ ಯಾದಿಗಳ ವ್ಯಾಪಾರವನ್ನು ಜಯಿಸಿದವನಾಗಿಯೂ, ಮೋಕ್ಷಾರ್ಥಿಗಳಿಗೆ ಮುಖ್ಯಧನವಾಗಿಯೂ ಇರುವ ನಿನಗೆ ನಮಸ್ಕಾರವು! ಸಮಸ್ತಕಲ್ಯಾಣ ಗುಣಪರಿಪೂರ್ಣನಾಗಿಯೂ, ನಿಖಿಲದೋಷಗಳನ್ನು ನಿಗ್ರಹಿಸಿದವನಾಗಿ ಯೂ ಇರುವ ನಿನಗೆ ನಮಸ್ಕಾರವು. ಪರಮಹಂಸನೆನಿಸಿ ಹಿತೋಪದೇಶಕ ನಾದ ನಾರಾಯಣನಿಗೆ ನಮಸ್ಕಾರವು ! ನಮಸ್ಕಾರವು! ಜ್ಞಾನಾನಂದಸ್ವ ರೂಪವಾದ ಆತ್ಮಾನುಭವದಲ್ಲಿ ಮುಳುಗಿದವನಾಗಿಯೂ, ಸಮಸ್ತಭೂತಗ

ಳಿಗೂ ಪ್ರಭುವಾಗಿಯೂ ಇರುವ ನಿನಗೆ ನಮಸ್ಕಾರವು! ನಮಸ್ಕಾರವು.,, ಎಂಬೀ ಅರ್ಥವುಳ್ಳ ಮೂಲಮಂತ್ರವನ್ನು ಜಪಿಸುತ್ತ, ಆಭಗವದ್ಗುಣಗಳನ್ನು ಹೀಗೆಂದು ಗಾನಮಾಡುವನು. "ಯಾವನು ಈಜಗತ್ತಿಗೆ ತಾನೇ ಮೊದಲು ಸೃಷ್ಟಿಕರ್ತನಾಗಿದ್ದರೂ, ಜೀವಾತ್ಮರು ದೇವ ಮನುಷ್ಯಾದಿಶರೀರಭೇದಗಳನ್ನು ಹೊಂದುವುದಕ್ಕೆ ಅವರವರ ಕರ್ಮಗಳೇ ಪ್ರಧಾನಕಾರಣವಾದುದರಿಂದ, ಅದಕ್ಕೆ ತನ್ನನ್ನು ಕರ್ತನನ್ನಾಗಿ ಅಭಿಮಾನಿಸುವುದಿಲ್ಲವೋ, ಯಾವನು, ಆ ದೇವಮನುಷ್ಯಾದಿಶರೀರಗಳಲ್ಲಿ ತಾನೂ ಅಂತರಾತ್ಮನಾಗಿದ್ದರೂ, ಆ ದೇಹಸಂಬಂಧದಿಂದುಂಟಾಗುವ ಸುಖದುಃಖಗಳಿಗೆ ಗುರಿಯಾಗುವುದಿಲ್ಲವೋ, ಯಾವನು ಪ್ರಕೃತಿಯನ್ನು ತನಗೆ ಶರೀರವನ್ನಾಗಿ ಹೊಂದಿದ್ದರೂ, ಜೀವಾತ್ಮನಂತೆ ಅದರ ಗುಣಗಳಾದ ಸತ್ವರಜಸ್ತಮಸ್ಸುಗಳಿಂದ ಜ್ಞಾನಸಂಕೋಚವನ್ನು ಹೊಂದುವುದಿಲ್ಲವೊ. ಅಂತಹ ಮಹಾಪ್ರಭಾವದಿಂದ ಎಣೆಯಿಲ್ಲದವನಾಗಿಯೂ, ದೋಷರಹಿತನಾಗಿಯೂ, ಜಗತ್ಸಾಕ್ಷಿಯಾಗಿಯೂ ಇರುವ ಭಗವಂತನಿಗೆ ನಮಸ್ಕಾರವು. ಓ ಯೋಗೀಶ್ವರಾ! ಅನೇಕ ದುಃಖಕ್ಕೆ ಕಾರಣವಾಗಿ ಹೇಯಗಳೆನಿಸಿದ ದೇಹಾದಿಗಳನ್ನು ಅನಾದರಿಸಿ, ದೇಹಾವಸಾನದವರೆಗೆ ನಿನ್ನಲ್ಲಿ ಭಕ್ತಿಯಿಂದ ಮನಸ್ಸನ್ನು ನೆಲೆಗೊಳಿಸುವುದೊಂದೇ ಯೋಗಾಭ್ಯಾಸದ ಉತ್ತಮವಾದ ಫಲವು. ಬ್ರಹ್ಮದೇವನು ನನಗೆ ಹೇಳಿರುವುದೂ ಇಷ್ಟೇಹೊರತು ಬೇರೆಯಲ್ಲ. ನಿನ್ನಲ್ಲಿ ಭಕ್ತಿಯಿಲ್ಲದೆಲೌಕಿಕಗಳಾದ ಹೆಂಡಿರುಮಕ್ಕಳು, ಆಸ್ತಿಪಾಸ್ತಿಗಳು ಮುಂತಾದುವುಗಳಲ್ಲಿಯೂ, ಪಾರಲೌಕಿಕವಾದ ಸ್ವರ್ಗಾದಿಭೋಗಗಳಲ್ಲಿಯೂ ಆಸೆಯಿಟ್ಟು ಅದನ್ನುಪಡೆಯುವುದಕ್ಕೆ ಬೇಕಾದ ಉಪಾಯಗಳನ್ನೇ ಚಿಂತಿಸುತ್ತಿರುವವನು ಅನೇಕಶಾಸ್ತ್ರಗಳನ್ನು ತಿಳಿದ ಪಂಡಿತನಾಗಿದ್ದರೂ ನಿಂದ್ಯವಾದ ತನ್ನ ಈ ಶರೀರತ್ಯಾಗಕ್ಕಾಗಿ ಭಯಪಡುತ್ತಲೇ ಇರುವನು. ಅವನು ಶ್ರಮಪಟ್ಟು ಸಂಪಾದಿಸಿದ ಶಾಸ್ತ್ರಜ್ಞಾನವೆಲ್ಲವೂ ಕೆಲಸಕ್ಕೆ ಬಾರದಂತೆಯೇ ಆಗುವುವು. ಆದುದರಿಂದ ಓಪ್ರಭೂ! ನಿನ್ನಲ್ಲಿ ನಮಗೆ ಬೇರೆ ಫಲಾಪೇಕ್ಷೆಯಿಲ್ಲದ ಭಕ್ತಿಯೋಗವನ್ನು ಕರುಣಿಸಬೇಕು. ಮತ್ತು ದುಃಖಹೇತುವಾದ ಈ ಶರೀರದಲ್ಲಿ ನಿನ್ನ ಮಾಯೆಯಿಂದ ನಮಗುಂಟಾಗಿರು

ವ ಮಮತೆಯನ್ನು ತಪ್ಪಿಸಬೇಕು. ಈ ಅಜ್ಞಾನವನ್ನು ಬಿಡಿಸುವುದಕ್ಕೆ ನಿನ್ನಲ್ಲಿ ಭಕ್ತಿಯೊಂದುಹೊರತೇ ಬೇರೆ ಉಪಾಯವಿಲ್ಲ! ಆದುದರಿಂದ ನಮಗೆ ಸ್ವಾಭಾವಿಕವಾದ ಆ ಭಕ್ತಿಯು ಹುಟ್ಟುವಂತೆ ನೀನೇ ಅನುಗ್ರಹಿಸಬೇಕು" ಎಂದು ನಾರದನು ಸ್ತೋತ್ರಮಾಡುತ್ತಿರುವನು.

ಓ ಪರೀಕ್ಷಿದ್ರಾಜಾ! ಈಭಾರತವರುಷದಲ್ಲಿ, ಮಹಾನದಿಗಳೂ, ಪರ್ವತಗಳೂ ಅನೇಕವಾಗಿರುವುವು. ಮಲಯ, ಮಂಗಳಪ್ರಸ್ಥ, ಮೈನಾಕ, ತ್ರಿಕೂಟ, ಋಷಭ, ಕೂಟಕ, ಕೊಲ್ಲ,ಸಹ್ಯ,ವೇದಗಿರಿ,ಋಶ್ಯಮೂಕ,ಶ್ರೀಶೈಲ, ವೆಂಕಟಾದ್ರಿ, ಮಹೇಂದ್ರ, ವಾರಿಧರ, ವಿಂಧ್ಯ, ಶುಕ್ತಿಮಂತ, ಋಕ್ಷಗಿರಿ, ಪಾರಿಯಾತ್ರ, ದ್ರೋಣ, ಚಿತ್ರಕೂಟ, ಗೋವರ್ಧನ, ರೈವತಕ, ಕುಕುಂಭ ನೀಲ, ಕಾಕಮುಖ, ಇಂದ್ರಕೀಲ, ರಾಮಗಿರಿ,ಮುಂತಾದ ಇನ್ನೂ ಸಾವಿರಾರು ಪರ್ವತಗಳೂ, ಅವುಗಳ ತಪ್ಪಲಿನಿಂದ ಹುಟ್ಟಿದ ನದೀನದಗಳೂ, ಅಸಂಖ್ಯಾತವಾಗಿರುವುವು. ಈ ನದಿಗಳಿಂದ ಪ್ರವಹಿಸುವ ಪುಣ್ಯತೀರ್ಥವು, ಭಾರತವರ್ಷದಲ್ಲಿರುವ ಪ್ರಜೆಗಳನ್ನು ತಮ್ಮ ನಾಮೋಚ್ಚಾರಣಮಾತ್ರದಿಂದಲೇ ಪವಿತ್ರರನ್ನಾಗಿ ಮಾಡುತ್ತಿರುವುದು. ಹೀಗಿರುವಾಗ ಆ ನದೀತೀರ್ಥವನ್ನೇ ಸ್ನಾನಪಾನಗಳಿಗಾಗಿ ಉಪಯೋಗಿಸುತ್ತಿರುವ ಇಲ್ಲಿನ ನಿವಾಸಿಗಳು ಪಾಪರಹಿತರೆಂಬುದನ್ನು ಕೇಳಬೇಕಾದುದೇನು? ಇಲ್ಲಿನ ನದಿಗಳಲ್ಲಿ, ಚಂದ್ರವಸೆ, ತಾಮ್ರಪರ್ಣಿ, ಅವಟೋದೆ, ಕೃತಮಾಲೆ, ವೈಹಾಯಸಿ, ಕಾವೇರಿ, ವೇಣಿ, ಪಯಸ್ವಿನಿ, ಪಯೋದೆ, ಶರ್ಕಾವರ್ತೆ, ತುಂಗಭದ್ರೆ, ಕೃಷ್ಣವೇಣಿ, ಭೀಮರಥಿ, ಗೋದಾವರಿ, ನಿರ್ವಿಂಧ್ಯೆ, ಪಯೋಷ್ಣಿ, ತಾಪಿ, ರೇವಾನದಿ, ಶಿಲಾನದಿ, ಸುರಸೆ, ನರ್ಮದೆ, ಚರ್ಮಣ್ವತಿ, ಎಂಬಿವುಗಳೂ, ಸಿಂಧು, ಶೋಣಗಳೆಂಬ ನದಗಳೂ, ಮಹಾನದಿ, ವೇದಸ್ಮೃತಿ,ಋಷಿಕುಲ್ಯೆ,ತ್ರಿಸಮೆ, ಕೌಶಿಕಿ, ಮಂದಾಕಿನಿ, ಯಮುನೆ, ಸರಸ್ವತಿ, ದೃಷದ್ವತಿ, ಗೋಮತಿ, ಸರಯು, ಭೋಗವತಿ, ಸುಷುಮ್ನೆ, ಶತದ್ರು, ಚಂದ್ರಭಾಗೆ, ಮರುದ್ವೃಧೆ, ಕಾವೇರಿ, ವಿತಸ್ತೆ, ವಿಶ್ವೆಯೆಂಬ ಮಹಾನದಿಗಳೂವಿಶೇಷಪ್ರಸಿದ್ಧವಾಗಿರುವುವು. ಈ ವರ್ಷದಲ್ಲಿ ಹುಟ್ಟಿದ ಪುರುಷರು, ತಾವುತಾವು ನಡೆಸಿದ ಸಾತ್ವಿಕ, ರಾಜಸ,ತಾಮಸಗಳೆಂಬಮೂರುಬಗೆಯಕರ್ಮಗಳಿಗನುಸಾರವಾಗಿ, ದೇವಗತಿಯ

ನ್ನೂ, ಮನುಷ್ಯಗತಿಯನ್ನೂ, ನರಕಗತಿಯನ್ನೂ ಹೊಂದುವರು. ತಮ್ಮತ ಮ್ಮವರ್ಣಾಶ್ರಮಧರ್ಮಗಳನ್ನು ನಡೆಸುತ್ತ, ಅದರಿಂದ ಭಕ್ತಿಯೋಗವನ್ನು ಹೆಚ್ಚಿಸಿಕೊಂಡವರು ಮುಕ್ತಿಯನ್ನೂ ಹೊಂದಬಹುದು. ಆದರೆ ಈವ ರ್ಣಾಶ್ರಮಧರ್ಮಾನುಷ್ಠಾನಗಳಿಂದ ಸ್ವರ್ಗಾದಿಗತಿಗಳನ್ನುಂಟು ಮಾಡ ತಕ್ಕ ಕರ್ಮಗ್ರಂಥಿಯನ್ನು ಸಂಪೂರ್ಣವಾಗಿ ತೊರೆದು, ಭಗವಂತನಲ್ಲಿ ಫಲಾಪೇಕ್ಷೆಯಿಲ್ಲದ ಭಕ್ತಿಯೋಗವನ್ನು ಹೆಚ್ಚಿಸಿಕೊಂಡಾಗಮಾತ್ರವೇ, ಮೋಕ್ಷವು ಲಭಿಸ್ಸುವುದು. ಈಕರ್ಮಗಳೆಲ್ಲವೂ ಸ್ವರ್ಗಾದಿಲೋಕಗಳಿಗೆ ಸಾಧಕವಾಗಿದ್ದರೂ, ಭಗವಂತನಲ್ಲಿ ನಿಶ್ಚಲವಾದ ಭಕ್ತಿಯನ್ನಿಟ್ಟು ಅವುಗಳ ನ್ನು ನಡೆಸುತ್ತಬಂದರೆ, ಆಭಕ್ತಿಯೋಗವು ಸ್ವರ್ಗಾದಿಗತಿಗಳನ್ನು ತಡೆದು, ಮೋಕ್ಷಮಾರ್ಗಕ್ಕೆ ತಿರುಗಿಸುವುದು ಈ ವಿಧವಾದ ಮನೋದಾರ್ಢ್ಯವುಕೆಲ ವು ಮಹಾಪುರುಷರಲ್ಲಿಮಾತ್ರವೇ ನೆಲೆಗೊಂಡಿರುವುದು ಭಗವಂತನುಸಮಸ್ತ ಭೂತಗಳಿಗೂ ಅಂತರಾತ್ಮನಾಗಿಯೇ ಇರುವುದರಿಂದ,ಅವನನ್ನು ಉಪಾಸನೆ ಮಾಡುವುದಕ್ಕಾಗಿ,ಬೇರಲ್ಲಿಯೂ ಹುಡುಕಿಕೊಂಡು ಹೋಗಬೇಕಾದುದಿಲ್ಲ. ಅವರವರ ಹೃದಯದಲ್ಲಿಯೇ ಯಾವಾಗಲೂ ನೆಲೆಗೊಂಡಿರುವನು. ಈಶರೀರ ಕ್ಕಿಂತಲೂ ಅವನು ಬೇರೆಯಾಗಿರುವನು. ಶರೀರಧರ್ಮಗಳೊಂದೂ ಅವನ ನ್ನು ಮುಟ್ಟಲಾರವು. ಅವನಿಗೆ ದೇವಮನುಷ್ಯಾದಿನಾಮರೂಪಭೇದಗಳಿಲ್ಲ! ತನಗೆತಾನೇ ಆಧಾರನೇ ಹೊರತು ತನಗೆ ಬೇರೊಂದಾಧಾರವನ್ನಪೇಕ್ಷಿಸತ ಕ್ಕವನಲ್ಲ. ಈ ಭಾರತವರ್ಷವಾಸಿಗಳೆಲ್ಲರೂ ವಾಸುದೇವನೆಂದು ಕರೆಯಲ್ಪ ಡುವ ಅಂತಹ ಪರಮಾತ್ಮನಲ್ಲಿ, ಭಕ್ತಿಯೋಗದಿಂದ ಮೋಕ್ಷವನ್ನು ಹೊಂ ದುವರು. ಆದುದರಿಂದ ಓ ಪರೀಕ್ಷಿದ್ರಾಜಾ! ದೇವತೆಗಳು ಮೊದಲಾಗಿ ಪರ ಲೋಕದವರೆಲ್ಲರೂ ಈ ಭಾರತವರ್ಷದ ಮಹಿಮೆಯನ್ನು ಹೀಗೆಂದು ಕೊಂ ಡಾಡುತ್ತಿರುವರು.

“ಆಹಾ! ಈ ಭಾರತವರ್ಷನಿವಾಸಿಗಳು ಎಷ್ಟು ಸುಕೃತವನ್ನು ಮಾಡಿ ರುವರೋ! ಅಥವಾ ಇಲ್ಲಿ ಹುಟ್ಟಿದಮಾತ್ರಕ್ಕೆ ಭಗವಂತನು ಅಂತವರಲ್ಲಿ ತಾನಾಗಿಯೇ ಅನುಗ್ರಹವನ್ನು ತೋರಿಸುತ್ತಿರಬಹುದೆ? ತಮ್ಮಜನ್ಮವನ್ನ ಭಗವಂತನ ಸೇವೆಯಿಂದ ಸಾರ್ಥಕಗೊಳಿಸುತ್ತಿರುವ ಇಲ್ಲಿನ ನಿವಾಸಿಗಳಲ್ಲವೇ

ಪರಮಧನ್ಯರು! ಆಹಾ! ಸ್ವರ್ಗಾದಿಸುಖಗಳನ್ನನುಭವಿಸುತಿದ್ದರೂ ನಮಗೆ, ಇಲ್ಲಿ ಜನ್ಮವನ್ನೆತ್ತಬೇಕೆಂಬ ಆಸೆಯು ಹುಟ್ಟುತ್ತಿರುವುದಲ್ಲಾ? ಈಸ್ವರ್ಗಾದಿ ಲೋಕಗಳನ್ನು ಸುಖಕರಗಳೆಂದು ಭಾವಿಸತಕ್ಕವರು ಕೇವಲಮೂಢರು! ಇಲ್ಲಿನ ಸುಖವೊಂದು ಸುಖವಲ್ಲ! ಇಲ್ಲಿನವರಿಗೆ ಶ್ರೀಮನ್ನಾರಾಯಣನ ಪಾದಸ್ಮರಣಕ್ಕೇ ಅವಕಾಶವಿಲ್ಲ. ಇಂದ್ರಿಯಸುಖಗಳಿಂದ ಮೈಮರೆಯುವ ಮತ್ತರಾಗಿರುವ ಇಲ್ಲಿನವರಿಗೆ ಹೇಗೆ ತಾನೇ ಭಗವಂತನ ಸ್ಮರಣವುಂಟಾಗುವು ದು?ಅಯ್ಯೋ! ಇಂತಹ ತುಚ್ಛವಾದ ಸ್ವರ್ಗವನ್ನಪೇಕ್ಷಿಸಿ ಕೆಲವರು ದುಷ್ಕ ರವಾದ ತಪಸ್ಸನ್ನು ನಡೆಸುವರು! ಕಷ್ಟಪಟ್ಟು ಯಾಗಗಳನ್ನು ಮಾಡುವ ರು! ಅನೇಕವ್ರತಗಳನ್ನೂ ದಾನಧರ್ಮಗಳನ್ನೂ ನಡೆಸುವರು! ಇಷ್ಟು ಕ ಷ್ಟಪಟ್ಟೂ, ಕೊನೆಗೆ ಅಸ್ಥಿರವಾದ ಅಲ್ಪಸುಖವನ್ನು ಹೊಂದುವರು! ಇದ ರಿಂದ ಲಾಭವೇನು? ಈ ಭಾರತವರುಷದಲ್ಲಿಯೋ, ಅಲ್ಪಾಯುಸ್ಸುಳ್ಳ ಶರೀರ ವನ್ನು ಪಡೆದಿದ್ದರೂ, ಆ ಸ್ವಲ್ಪಕಾಲದ ಶರೀರದಿಂದ ಮಾಡಿದ ಕರ್ಮಫಲ ಗಳನ್ನು ಭಗವಂತನಿಗೆ ಸಮರ್ಪಿಸಿ, ಅದರಿಂದ ಎಂದೆಂದಿಗೂ ಜರಾಮರಣ ಗಳಿಲ್ಲದ ಶ್ರೀವೈಕುಂಠವನ್ನು ಹೊಂದಬಹುದು. ಆದುದರಿಂದ ಪುನರ್ಜನ್ಮ ಕ್ಕೆ ಕಾರಣವಾದ ಈ ಲೋಕದಲ್ಲಿ ಒಂದು ಕಲ್ಪಕಾಲದವರೆಗೆ ದೀರ್ಘಾ ಯುಸ್ಸನ್ನು ಪಡೆಯುವುದಕ್ಕಿಂತಲೂ, ಶಾಶ್ವತವಾದ ಮೋಕ್ಷವನ್ನು ಹೊಂ ದಿಸತಕ್ಕ ಈ ಭಾರತವರುಷದಲ್ಲಿ ಸ್ವಲ್ಪಾಯುಸ್ಸುಳ್ಳ ಮನುಷ್ಯಜನ್ಮವನ್ನೆ ತ್ತುವುದೇ ಮೇಲೆಂದು ತೋರುವುದು. ಈ ಭಾರತವರ್ಷದಲ್ಲಿ ಹು ಟ್ಟಿದವರು ಸ್ವಲ್ಪಕಾಲವಿರತಕ್ಕ ತಮ್ಮ ಶರೀರದಿಂದಲೇ ಭಗವದನುಗ್ರಹವ ನ್ನು ಸಂಪಾದಿಸಿ ಪುನರ್ಜನ್ಮವಿಲ್ಲದಂತೆ ಮಾಡಿಕೊಳ್ಳುವರು. ಮುಖ್ಯವಾಗಿ ಯಾವಪ್ರದೇಶದಲ್ಲಿ ಭಗವತ್ಕಥಾರೂಪವಾದ ಅಮೃತನದಿಗಳು ಪ್ರವಹಿಸು ವುದಿಲ್ಲವೋ, ಯಾವಪ್ರದೇಶದಲ್ಲಿ ಭಗವತ್ಕಥೆಗಳಲ್ಲಿ ಆಸಕ್ತರಾದ ಸಾಧುಗಳಿ ರುವುದಿಲ್ಲವೋ, ಯಾವಪ್ರದೇಶದಲ್ಲಿ ಭಗವದಾರಾಧನರೂಪವಾದ ಮಹೋ ತ್ಸವಗಳನ್ನೂ, ಯಜ್ಞಾದಿಗಳನ್ನೂ ನಡೆಸುವುದಕ್ಕೆ ಅವಕಾಶವಿಲ್ಲವೋ, ಆ ಪ್ರದೇಶವು ಬ್ರಹ್ಮಲೋಕವಾಗಿದ್ದರೂ ಆಸೆಪಡುವುದಕ್ಕೆ ಯೋಗ್ಯವಲ್ಲ ಇಂತಹ ಭಾರತವರ್ಷದಲ್ಲಿ ಹುಟ್ಟಿರುವಾಗಲೂ, ಯಾರು,ಭಗವಂತನ ಪೂಜೆ

ಯಿಂದಲೂ, ಪ್ರದಕ್ಷಿಣನಮಸ್ಕಾರಗಳಿಂದಲೂ, ಕೀರ್ತನದಿಂದಲೂ, ದರ್ಶನದಿಂದಲೂ, ಆತನ ಪಾದಾರ್ಪಿತವಾದ ತುಲಸಿಯನ್ನಾಘ್ರಾಣಿಸುವುದರಿಂದಲೂ, ಆತನ ಅನುಗ್ರಹಕ್ಕೆಪಾತ್ರರಾಗದೆ, ಪುನರ್ಜನ್ಮರಹಿತವಾದ ಮೋಕ್ಷವನ್ನು ಪಡೆಯುವುದಕ್ಕೆ ಯತ್ನಿಸದೆ, ಪುನರ್ಜನ್ಮಕ್ಕೆ ಕಾರಣವಾದ ಸಂಸಾರದಲ್ಲಿಯೇ ಬಿಳುವರೋ, ಅಂತವರು ಬೇಡನ ಕೈಯಿಂದ ತಪ್ಪಿಸಿಕೊಂಡು ಹೋಗುವುದಕ್ಕೆ ತಕ್ಕ ಶಕ್ತಿಯಿದ್ದಾಗಲೂ, ತಾನಾಗಿ ಬಂದು ಬಲೆಗೆ ಬಿಳುವ ಕಾಡುಹಕ್ಕಿಗಳಂತೆಯೇಹೊರತು ಬೇರೆಯಲ್ಲ! ಮತ್ತು ಭಗವಂತನು ಎಲ್ಲೆಲ್ಲಿಯೂ ಏಕರೂಪನಾಗಿ ಪೂರ್ಣಕಾಮನಾಗಿದ್ದರೂ, ಈ ಭಾರತವರ್ಷವಾಸಿಗಳು ಯಾಗಕಾಲದಲ್ಲಿ ಅಗ್ನೀಂದ್ರಾದಿದೇವತೆಗಳ ಹೆಸರಿನಿಂದ ಮಂತ್ರಪೂರ್ವಕವಾಗಿ ಕೊಡತಕ್ಕ ಹವಿರ್ಭಾಗಗಳೆಲ್ಲವನ್ನೂ ತಾನು ಆಯಾ ರೂಪದಿಂದಲೇ ಬಂದು ಸಂತೋಷದಿಂದ ಸ್ವೀಕರಿಸುವನು. ಪೂರ್ಣಕಾಮನಾಗಿದ್ದರೂ ಅವನು ಅವುಗಳನ್ನು ಆಸೆಯಿಂದ ಗ್ರಹಿಸುವುದು ಆಯಾ ಯಾಗಕರ್ತರನ್ನನುಗ್ರಹಿಸುವುದಕ್ಕಾಗಿಯೇಹೊರತು ಬೇರೆಯಲ್ಲ. ಹೀಗೆ ಭಗವಂತನನ್ನಾರಾಧಿಸಿ ತಮ್ಮತಮ್ಮ ಕೋರಿಕೆಗೆ ತಕ್ಕಂತೆ ಉತ್ತಮಸಿದ್ಧಿಯನ್ನು ಪಡೆಯತಕ್ಕ ಈ ಭಾರತವರ್ಷವಾಸಿಗಳಲ್ಲವೇ ಧನ್ಯರು ? ಯಾವಯಾವ ಕೋರಿಕೆಗಳನ್ನು ಬಯಸಿ ಭಗವಂತನನ್ನಾರಾಧಿಸಿದರೂ, ಭಗವಂತನು ಅವರವರಿಗೆ ಆಯಾ ಕೋರಿಕೆಗಳನ್ನೀಡೇರಿಸುವನೆಂಬುದರಲ್ಲಿ ಸಂದೇಹವಿಲ್ಲ! ಆದರೇನು? ಫಲಾಪೇಕ್ಷೆಯಿಂದ ಮಾಡಿದ ಕರ್ಮಗಳಿಗೆ ಆಯಾಫಲವನ್ನೇ ಕೊಡುವನೇಹೊರತು, ಉತ್ತಮಪುರುಷಾರ್ಥವಾದ ಮೋಕ್ಷವನ್ನು ಕೊಡುವನಲ್ಲ. ಹೀಗೆ ಫಲಾಪೇಕ್ಷೆಯಿಂದ ಭಗವಂತನನ್ನಾರಾಧಿಸಿದವರು, ಆ ಫಲವು ಕೈಗೂಡಿದಮೇಲೆಯೂ ತೃಪ್ತಿಯಿಲ್ಲದೆ ಮತ್ತೊಂದು ಫಲಕ್ಕಾಗಿ ಆಸೆಪಡುವರು. ಆದುದರಿಂದ ಅಂತವರನ್ನು ನಿತ್ಯದರಿದ್ರರೆಂದೇ ಹೇಳಬೇಕು. ಏಕೆಂದರೆ, ಇಂತವರಿಗೆ ಎಂದಿಗೂ ತೃಪ್ತಿಯಿರುವುದಿಲ್ಲ. ಯಾವಫಲವನ್ನೂ ಅಪೇಕ್ಷಿಸದೆ ತನ್ನನ್ನಾರಾಧಿಸತಕ್ಕವರಿಗೆ, ಭಗವಂತನು, ಅವರ ಕೋರಿಕೆಗಳೆಲ್ಲವನ್ನೂ ತಾನಾಗಿಯೇ ಕೈಗೂಡಿಸತಕ್ಕ ತನ್ನ ಪಾದಾರವಿಂದವನ್ನು ಕೊಡುವನು. ಇನ್ನು ಹೆಚ್ಚು ಮಾತಿನಿಂದೇನು? ನಾವು ಹಿಂದೆ ಮಾಡಿದ ಯಜನಾ

ಧ್ಯಯನಗಳೇ ಮೊದಲಾದ ಸತ್ಕರ್ಮಫಲಗಳಲ್ಲಿ, ಇದುವರೆಗೆ ನಾವು ಅನುಭ ವಿಸಿದ ಸ್ವರ್ಗಾದಿಸುಖಗಳು ಹೋಗಿ, ಪುಣ್ಯಶೇಷವೇನಾದರೂ ಉಳಿದಿರುವ ಪಕ್ಷದಲ್ಲಿ, ಅದಕ್ಕೆ ಫಲವಾಗಿ, ಮುಂದೆಯಾದರೂ ನಮಗೆ ಈ ಭಾರತವರ್ಷ ದಲ್ಲಿ ಭಗವಂತನ ಪಾದಸೇವೆಗೆ ಅನುಕೂಲಿಸುವಂತೆ ಮನುಷ್ಯಜನ್ಮವುಂಟಾ ಗಲಿ! ಆ ಜನ್ಮವನ್ನೆತ್ತಿದವರಿಗೆ ಭಗವಂತನು ಸರ್ವವಿಧದಲ್ಲಿಯೂ ಕ್ಷೇಮವ ನ್ನುಂಟುಮಾಡುವನು" ಎಂದು. ದೇವಸಭೆಯಲ್ಲಿದೇವತೆಗಳು ಈ ಭಾರತ ವರ್ಷವನ್ನು ಯಾವಾಗಲೂ ಕೊಂಡಾಡುತ್ತಿರುವರು.

ಓ ಪರೀಕ್ಷಿದ್ರಾಜಾ! ಇದುವರೆಗೆ ಜಂಬೂದ್ವೀಪದೊಳಗಿನ ನವಖಂ ಡಗಳನ್ನೂ, ಅಲ್ಲಿನ ನದೀನದಗಳನ್ನೂ, ಅಲ್ಲಿನ ಮನುಷ್ಯರು ವರ್ಣಾಶ್ರಮ ಧರ್ಮನಿರತರೆಂಬುದನ್ನೂ ತಿಳಿಸಿದೆನಷ್ಟೆ? ಹಿಂದೆ ಸಗರಪುತ್ರರು ತಮ್ಮತಂದೆ ಯ ಯಾಗದ ಕುದುರೆಯನ್ನು ಹುಡುಕುವುದಕ್ಕಾಗಿ ಅಲ್ಲಲ್ಲಿ ನೆಲವನ್ನು ಭೇದಿ ಸಿದಾಗ.ಆದರಿಂದ ಎಂಟು ದ್ವೀಪಗಳಾದುವೆಂದೂ, ಅವು ಈಜಂಬೂದ್ವೀಪ ಕ್ಕೆ ಉಪದ್ವೀಪಗಳೆಂದೂ ಕೆಲವು ಮಹಾತ್ಮರು ಹೇಳಿರುವರು. ಈ ಉಪ ದ್ವೀಪಗಳಿಗೆ ಕ್ರಮವಾಗಿ, ಸ್ವರ್ಣಪ್ರಸ್ಥ, ಚಂದ್ರಶುಕ್ಲ, ಆವರ್ತನ, ರಮ ಣಕ, ಮಂದೇಹಾರುಣ, ಪಾಂಚಜನ್ಯ, ಸಿಂಹಳ, ಲಂಕೆಗಳೆಂದು ಹೆಸರು. ಓ ರಾಜೇಂದ್ರಾ! ನಿನ್ನ ಕೋರಿಕೆಯಂತೆ ಜಂಬೂದ್ವೀಪದೊಳಗಣ ದೇಶವಿ ಭಾಗಗಳೆಲ್ಲವನ್ನೂ ಕ್ರಮವಾಗಿ ವಿವರಿಸಿದುದಾಯಿತು"ಇಲ್ಲಿಗೆ ಹತ್ತೊಂಬತ್ತ ನೆಯ ಅಧ್ಯಾಯವು.

---

## ಪ್ಲಕ್ಷಾದಿದ್ವೀಪಗಳ ವಿವರಣವು.

ರಾಜೇಂದ್ರಾ! ಇನ್ನು ಪ್ಲಕ್ಷಾದಿದ್ವೀಪಗಳ ಲಕ್ಷಣಗಳನ್ನೂ ವಿಭಾಗ ಗಳನ್ನೂ, ಅಳತೆ, ಆಕಾರ ಮೊದಲಾದುವನ್ನೂ ವಿವರಿಸುವೆನು ಕೇಳು ! ಮೇರುಪರ್ವತವು ಜಂಬೂದ್ವೀಪದಿಂದಲೂ, ಆ ಜಂಬೂದ್ವೀಪವು ತನ್ನಷ್ಟೇ ಲಕ್ಷಯೋಜನವಿಸ್ತಾರವುಳ್ಳ ಲವಣಸಮುದ್ರದಿಂದಲೂ ಆವರಿಸಲ್ಪಟ್ಟಿರು ವಂತೆ, ಆ ಲವಣಸಮುದ್ರವು ಪ್ಲಕ್ಷದ್ವೀಪದಿಂದ ಆವೃತವಾಗಿರುವುದು. ಜಂಬೂದ್ವೀಪವನ್ನು ಸುತ್ತಿ ಲವಣಸಮುದ್ರವೂ, ಅದನ್ನು ಸುತ್ತಿ ಪ್ಲಕ್ಷ

ದ್ವೀಪವೂ ಆವರಿಸಿರುವುದನ್ನು ನೋಡಿದರೆ, ಒಂದು ಪಟ್ಟಣವನ್ನು ಸುತ್ತಿ ದೊಡ್ಡ ಕಂದಕವೂ, ಆ ಕಂದಕದ ಹೊರವಲಯದಲ್ಲಿ ದೊಡ್ಡ ಉದ್ಯಾನ ವನವೂ ಇರುವ ಸನ್ನಿವೇಶಕ್ಕೆ ಸರಿಹೋಲಿಸಬಹುದು. ಹೀಗೆ ಸಮುದ್ರ ದ್ವೀಪಗಳು ಮೇಲೆಮೇಲೆ ವಲಯಾಕಾರವಾಗಿ ವ್ಯಾಪಿಸಿರುವುದರಿಂದ, ಲವ ಣಸಮುದ್ರಕ್ಕಿಂತಲೂ ಈ ಪ್ಲಕ್ಷದ್ವೀಪದ ವಿಸ್ತಾರವು ಇಮ್ಮಡಿಯಾಗಿರು ವುದು. ಇದರಲ್ಲಿರತಕ್ಕ ಪ್ರಸಿದ್ಧವಾದ ಆಲದ (ಪ್ಲಕ್ಷ) ಮರವು, ಜಂ ಬೂದ್ವೀಪದೊಳಗಣ ಜಂಬೂವೃಕ್ಷದಂತೆಯೇ ಮಹತ್ತಾದ ಪ್ರಮಾಣಕ್ಕೆ ಬೆಳೆದಿರುವುದು. ಇದಕ್ಕಾಗಿಯೇ ಈ ದ್ವೀಪಕ್ಕೆ ಪ್ಲಕ್ಷದ್ವೀಪವೆಂದು ಹೆಸ ರು. ಈವೃಕ್ಷವು ಸುವರ್ಣಚ್ಛಾಯೆಯಿಂದ ಬೆಳಗುತ್ತಿರುವುದು ಈ ವೃ ಕ್ಷದ ಬುಡದಲ್ಲಿ ಅಗ್ನಿಯು ಸಪ್ತಜ್ವಾಲೆಗಳಿಂದ ಜ್ವಲಿಸುತ್ತಿರುವುದು. ಈ ದ್ವೀಪಕ್ಕೆ ಪ್ರಿಯವ್ರತಪುತ್ರನಾದ ಇಧ್ಮಜಿಹ್ವನೆಂಬವನು ಅಧಿಪತಿಯು. ಇವನು ಆ ದ್ವೀಪವನ್ನು ಏಳುವಿಭಾಗವಾಗಿ ಬೇರ್ಪಡಿಸಿ, ಅವುಗಳ ಅಧಿಕಾರ ವನ್ನು ತನ್ನ ಏಳುಮಂದಿ ಮಕ್ಕಳಿಗೆ ಹಂಚಿಕೊಟ್ಟನು. ಈ ವಿಭಾಗಗಳಿ ಗೆ ವರ್ಷಗಳೆಂದೇ ಹೆಸರು. ಈಸಪ್ತವರ್ಷಗಳೂ, ಆಯಾ ರಾಜಕುಮಾರರ ಹೆಸರಿನಿಂದಲೇ ಪ್ರಖ್ಯಾತವಾಗಿ, ಶಿವ, ಯಶಸ್ಯ, ಸುಭದ್ರ, ಶಾಂತ, ಕ್ಷೇಮ, ಅಭಯ, ಅಮೃತವೆಂಬ ನಾಮಗಳಿಂದ ಕರೆಯಲ್ಪಡುವುವು. ಕ್ರಮವಾಗಿ ಈ ಏಳುವರ್ಷಗಳಲ್ಲಿ ಏಳುಪರ್ವತಗಳೂ, ಏಳುನದಿಗಳೂಪ್ರಸಿ ದ್ಧಿಗೊಂಡಿರುವುವು. ಆಪರ್ವತಗಳೇಳೂ, ಆಯಾವರ್ಷಗಳನ್ನು ವಿಭಾಗಿಸಿ ತೋರಿಸತಕ್ಕ ಎಲ್ಲೆಕಟ್ಟುಗಳಾಗಿರುವುವು. ಈ ಪರ್ವತಗಳಿಗೆಕ್ರಮವಾಗಿ, ಮಣಿ ಕೂಟ, ವಜ್ರಕೂಟ, ಇಂದ್ರಸೇನ, ಜ್ಯೋತಿಷ್ಮಂತ, ತಾಮ್ರವರ್ಣ, ಹಿರ ಣ್ಯಗ್ರೀವ, ಮೇಘಮಾಲಗಳೆಂದು ಹೆಸರು. ಇಲ್ಲಿನ ಮಹಾನದಿಗಳಿಗೂ ಕ್ರ ಮವಾಗಿ, ಅರುಣೆ, ನೃಮಣೆ, ಆಂಗಿರಸಿ, ಸಾವಿತ್ರಿ, ಸುಪ್ರಭಾತೆ, ಋತಂ ಭರೆ, ಸತ್ಯಂಭರೆಯೆಂದು ಹೆಸರು. ಇಲ್ಲಿ ಹಂಸರೆಂದೂ, ಪತಂಗರೆಂದೂ, ಊರ್ಧ್ವಾಯನರೆಂದೂ, ಸತ್ಯಾಂಗರೆಂದೂ ಹೆಸರುಗೊಂಡ ನಾಲ್ಕುವರ್ಣ ದವರುಂಟು. ಇವರು ಈನದೀಜಲದ ಸ್ನಾನಪಾನಗಳಿಂದ ರಜಸ್ತಮೋ ಗುಣಗಳನ್ನು ನೀಗಿ, ಸಹಸ್ರಾಯುಷ್ಯವುಳ್ಳವರಾಗಿ, ದೇವಕುಮಾರರಿಗೆ ಸ

ಮಾನವಾದ ರೂಪಾತಿಶಯವುಳ್ಳ ಪು ತ್ರ ಸಂ ತಾ ನ ವ ನ್ನು ಪಡೆಯುತ್ತ ಶ್ರುತಿಸ್ಮೃತಿಗಳಲ್ಲಿ ಹೇಳಿದ ಕರ್ಮಯೋಗಗಳಿಂದ, ಷಾಡ್ಗುಣ್ಯಪರಿಪೂರ್ಣನಾಗಿಯೂ. ವೇದಮಯನಾಗಿಯೂ ಇರುವ ಸೂರ್ಯಶರೀರಕನಾದ ಭಗವಂತನನ್ನು ಎಡೆಬಿಡದೆ ಆರಾಧಿಸಿ ಈ ಮಂತ್ರದಿಂದ ಸ್ತುತಿಸುವರು. "ಅನಾದಿಯಾಗಿಯೂ, ನಿರ್ವಿಕಾರನಾಗಿಯೂ, ಸಮಸ್ತಕರ್ಮಗಳಿಗೂ ಫಲವನ್ನು ಕೊಡತಕ್ಕವನಾಗಿಯೂ, ತನ್ನನ್ನು ನಂಬಿದವರಿಗೆ ಮೋಕ್ಷಪ್ರದನಾಗಿಯೂ, ತನ್ನಲ್ಲಿ ವಿಮುಖರಾದವರಿಗೆ ಸಂಸಾರಬಂಧವನ್ನುಂಟುಮಾಡತಕ್ಕವನಾಗಿಯೂ ಇರುವ ಶ್ರೀಮಹಾವಿಷ್ಣುವಿಗೆ ಯಾವನು ಶರೀರವೆನಿಸಿಕೊಂಡಿರುವನೋ, ಅಂತಹ ಸೂರ್ಯರೂಪಿಯಾದ ಜೀವಾತ್ಮನನ್ನು ಮರೆಹುಗುವವು" ಎಂದು ಬಾರಿಬಾರಿಗೂ ಈ ಮಂತ್ರವನ್ನು ಜಪಿಸಿ, ಸೂರ್ಯೋಪಾಸನೆಯನ್ನು ಮಾಡುತ್ತಿರುವರು. ಪ್ಲಕ್ಷದ್ವೀಪವು ಮೊದಲಾಗಿಐದು ದ್ವೀಪಗಳಲ್ಲಿ, ಪ್ರಾಯಕವಾಗಿ ಸಮಸ್ತಪುರುಷರೂ,ಪೂರ್ಣಾಯುಸ್ಸು, ಮನೋಬಲ, ಇಂದ್ರಿಯಬಲ, ದೇಹಬಲ, ಬುದ್ಧಿಬಲ, ಮುಂತಾದುವುಗಳಲ್ಲಿ ಸಹಜವಾಗಿಯೇ ಮೇಲೆನಿಸಿಕೊಂಡಿರುವರು.

ಈ ಪ್ಲಕ್ಷದ್ವೀಪವು ತನ್ನಷ್ಟೇ ವಿಸ್ತಾರವುಳ್ಳಇಕ್ಷುಸಮುದ್ರದಿಂದಆವೃತವಾಗಿರುವಂತೆ, ಅದರಿಂದಾಚೆಗೆ ಶಾಲ್ಮಲಿದ್ವೀಪವೆಂಬುದು, ಈ ಸಮುದ್ರಕ್ಕೆ ಎರಡರಷ್ಟು ವಿಸ್ತಾರವುಳ್ಳುದಾಗಿ, ತನ್ನಷ್ಟೇವಿಶಾಲವಾದ ಸುರಾಸಮುದ್ರದಿಂದ ಪರಿವೇಷ್ಟಿತವಾಗಿರುವುದು. ಹಿಂದೆ ಹೇಳಿದ ಜಂಬೂಪ್ಲಕ್ಷ ವೃಕ್ಷಗಳಂತೆಯೇ ಇದರಲ್ಲಿ ಮಹೋನ್ನತವಾದ ಒಂದು ಶಾಲ್ಮಲಿ (ಬೂರಗದಮರ) ವೃಕ್ಷವುಂಟು. ಈ ಕಾರಣದಿಂದಲೇ ಈದ್ವೀಪಕ್ಕೆ ಶಾಲ್ಮಲಿದ್ವೀಪವೆಂದು ಹೆಸರು. ಛಂದೋಮೂರ್ತಿಯಾಗಿಯೂ, ಪೂಜ್ಯನಾಗಿಯೂ, ಪಕ್ಷಿರಾಜನಾಗಿಯೂ ಇರುವ ಗರುಡನಿಗೆ ಈ ವೃಕ್ಷವೇ ವಾಸಸ್ಥಾನವೆಂದು ಹೇಳುವರು. ಈಶಾಲ್ಮಲಿದ್ವೀಪವನ್ನು ಪೂರ್ವದಲ್ಲಿ ಪ್ರಿಯವ್ರತನಮಗನಾದ ಯಜ್ಞಬಾಹುವೆಂಬವನು, ಬಹುಕಾಲದವರೆಗೆ ಪಾಲಿಸುತಿದ್ದು, ಕೊನೆಗೆ ಆ ಭೂಭಾಗವನ್ನು ಏಳುವರ್ಷಗಳಾಗಿ ವಿಭಾಗಿಸಿ, ತನ್ನ ಏಳುಮಂದಿ ಮಕ್ಕಳಿಗೂ ಹಂಚಿಕೊಟ್ಟನು. ಈ ಏಳುವರ್ಷಗಳೂ,ಆ

ಯಾ ವರ್ಷಾಧಿಪತಿಗಳ ಹೆಸರಿನಿಂದಲೇ ಪ್ರಸಿದ್ಧಗಳಾಗಿ,ಸುರೋಚನ, ಸೌಮನಸ್ಯ, ರಮಣಕ, ದೇವಬರ್ಹ, ಪಾರಿಬರ್ಹ, ಆಪ್ಯಾಯನ, ಅಭಿಜ್ಞಾತಗಳೆಂಬ ಹೆಸರಿನಿಂದ ಕರೆಯಲ್ಪಡುವುವು. ಈಏಳುವರ್ಷಗಳಲ್ಲಿಯೂ ಕ್ರಮವಾಗಿ, ಸ್ವರಸ, ಶೀತಶೃಂಗ, ವಾಮದೇವ, ಕುಮುದ,ಮುಕುಂದ, ಪುಷ್ಪವರ್ಷ, ಶತಶ್ರುತಿಯೆಂಬ ಏಳುಪರ್ವತಗಳೂ, ಅನುಮತಿ, ಸಿನೀವಾಲಿ,ಸರಸ್ವತಿ, ಕುಹು, ರಜನಿ, ನಂದೆ, ರಾಕೆ, ಯಮುನೆಯೆಂಬ ಏಳುಮಹಾನದಿಗಳೂ ಪ್ರಸಿದ್ಧಿಗೊಂಡಿರುವುವು ಇಲ್ಲಿನ ನಿವಾಸಿಗಳಲ್ಲಿ, ಶ್ರುತಧರರೆಂದೂ, ವಿದ್ಯಾಧರರೆಂದೂ, ವಸುಂಧರರೆಂದೂ, ಇಷಂಧರರೆಂದೂ ನಾಲ್ಕು ವರ್ಣದವರುಂಟು ಇವರೆಲ್ಲರೂ ವೇದೋಕ್ತಗಳಾದ ಧರ್ಮಗಳಿಂದ, ವೇದಮಯನಾಗಿಯೂ, ಪರಮಪುರುಷನಿಗೆ ಶರೀರಭೂತನಾಗಿಯೂ ಇರುವ ಪೂಜ್ಯನಾದ ಚಂದ್ರನೆಂಬ ಜೀವನನ್ನು ಆರಾಧಿಸುತ್ತ, ಈ ಕೆಳಗಿನ ಮಂತ್ರದಿಂದ ಆತನನ್ನು ಸ್ತುತಿಸುವರು. “ಯಾವ ಮಹಾತ್ಮನು ಶುಕ್ಲಪಕ್ಷದಲ್ಲಿ ದೇವತೆಗಳಿಗೂ, ಕೃಷ್ಣಪಕ್ಷದಲ್ಲಿ ಪಿತೃದೇವತೆಗಳಿಗೂ ತನ್ನ ಕಿರಣಗಳಿಂದ ಅನ್ನವನ್ನು ವಿಭಾಗಿಸಿಕೊಟ್ಟು, ಪೋಷಿಸುತ್ತಿರುವನೋ, ಆಚಂದ್ರನು ಪ್ರಜೆಗಳಾದ ನಮ್ಮೆಲ್ಲರಿಗೂ ಪ್ರಭುವಾಗಿ, ನಮಗೆ ಸುಖವನ್ನುಂಟು ಮಾಡಲಿ !” ಎಂಬುದೇ ಆಮಂತ್ರಾರ್ಥವು.

ರಾಜೇಂದ್ರಾ! ಆ ಸುರಾಸಮುದ್ರದಿಂದಾಚೆಗೆ ಅದಕ್ಕೆ ಎರಡಷ್ಟು ವಿಶಾಲವಾದ ಕುಶದ್ವೀಪವು, ತನ್ನಷ್ಟೇ ವಿಸ್ತಾರವುಳ್ಳ (ಎಂದರೆ ಎಂಟು ಲಕ್ಷಯೋಜನದ ವಿಸ್ತಾರವುಳ್ಳ) ಘೃತಸಮುದ್ರದಿಂದಾವೃತವಾಗಿರುವುದು. ಆದ್ವೀಪದಲ್ಲಿ ಬ್ರಹ್ಮದೇವನಿಂದ ಸಾಕ್ಷಾತ್ತಾಗಿ ಸೃಷ್ಟಿಸಲ್ಪಟ್ಟುಅಗ್ನಿಯಂತೆ ಜಾಜ್ವಲ್ಯಮಾನವಾದ ಒಂದಾನೊಂದು ಕುಶಸ್ತಂಭವುಂಟು ಇದಕ್ಕಾಗಿಯೇ ಅದಕ್ಕೆ ಕುಶದ್ವೀಪವೆಂದು ಹೆಸರು. ಆಕುಶಸ್ತಂಬವು ತನ್ನ ಎಳೇಹುಲ್ಲುಗಳ ಕಾಂತಿಯಿಂದ ಹತ್ತುದಿಕ್ಕುಗನ್ನೂ ಬೆಳಗುತ್ತಿರುವುದು. ಪ್ರಿಯವ್ರತನ ಮಗನಾದ ಹಿರಣ್ಯರೇತಸ್ಸೆಂಬವನು, ಆ ದ್ವೀಪವನ್ನು ಕೆಲವುಕಾಲದವರೆಗೆ ಆಳುತಿದ್ದು, ಕೊನೆಗೆ ಅದನ್ನು ಏಳುವರ್ಷಗಳಾಗಿ ವಿಭಾಗಿಸಿ,ತನ್ನ ಏಳುಮಂದಿ ಮಕ್ಕಳಿಗೆ ಹಂಚಿಕೊಟ್ಟು ತಾನು ತಪಸ್ಸಿಗೆ ಹೋದನು. ಈ ಏಳು ಭೂಭಾ

ಗಗಳೂ ಕ್ರಮವಾಗಿ ಆ ವರ್ಷಾಧಿಪತಿಗಳ ಹೆಸರಿನಿಂದಲೇ ಪ್ರಖ್ಯಾತವಾಗಿ, ವಸು, ದಾನ,ದೃಢರುಚಿ, ನಾಭಿಗುಪ್ತ, ಸತ್ಯವ್ರತ, ವಿಪ್ರನಾಮ,ದೇವನಾಮಗಳೆಂದು ಕರೆಯಲ್ಪಡುವುವು. ಇದರಲ್ಲಿ ಆ ಏಳುವರ್ಷಗಳನ್ನೂ ಬೇರೆ ಬೇರೆ ವಿಭಾಗಿಸಿ ತೋರಿಸತಕ್ಕ ಏಳುಪರ್ವತಗಳುಂಟು. ಅವುಗಳಿಗೆ ಕ್ರಮವಾಗಿ, ಬಭ್ರು, ಚತುಶ್ಶೃಂಗ, ಕಪಿಲ, ಚಿತ್ರಕೂಟ, ದೇವಾನೀಕ ಊರ್ಧ್ವರೋಮ, ದ್ರವಿಣಗಳೆಂದು ಹೆಸರು. ಮತ್ತು ಇದರಲ್ಲಿ, ರಸಕುಲ್ಯೆ, ಮಧುಕುಲ್ಯೆ, ಶ್ರುತವಿಂದೆ, ಮಿತ್ರವಿಂದೆ, ದೇವಗರ್ಭೆ, ಘೃತಚ್ಯುತ, ಮಂತ್ರಮಾಲೆಗಳೆಂಬ ಏಳು ಮಹಾನದಿಗಳುಂಟು. ಈನದೀತೀರ್ಥವನ್ನೇ ಸ್ನಾನಪಾನಗಳಿಗಾಗಿ ಉಪಯೋಗಿಸುವುದರಿಂದ, ಅಲ್ಲಿನ ನಿವಾಸಿಗಳೆಲ್ಲರೂ ಪಾಪರಹಿತರಾಗಿರುವರು ಇವರಲ್ಲಿ ಕುಶಲರೆಂದೂ,ಕೋವಿದರೆಂದೂ,ಅಭಿಯುಕ್ತರೆಂದೂ ಕುಲಕರೆಂದೂ ನಾಲ್ಕು ವರ್ಣದವರುಂಟು. ಇವರೆಲ್ಲರೂ ತಮ್ಮ ಕರ್ಮನೈಪುಣ್ಯದಿಂದ ಅಗ್ನಿಶರೀರಕನಾದ ಭಗವಂತನನ್ನಾರಾಧಿಸುತ್ತ ಈ ಕೆಳಗಿನ ಮಂತ್ರಜಪದಿಂದ ಅವನನ್ನು ಸ್ತುತಿಸುವರು. “ಎಲೈ ಅಗ್ನಿದೇವನೆ! ನೀನು ಪರಬ್ರಹ್ಮನೆನಿಸಿಕೊಂಡ ಶ್ರೀಮನ್ನಾರಾಯಣನಿಗೆ ಶರೀರಭೂತನು. ಮತ್ತು ಭಗವದಂಶಭೂತರಾದ ಇಂದ್ರಾದಿದೇವತೆಗಳೆಲ್ಲರಿಗೂ ಯಜ್ಞಗಳಲ್ಲಿ ಕೊಟ್ಟ ಹವಿರ್ಭಾಗವನ್ನು ಅವರವರಿಗೆ ಸಲ್ಲಿಸತಕ್ಕವನು. ಆದುದರಿಂದ,ನಾವು ಇಂದ್ರಾದಿದೇವತೆಗಳನ್ನುದ್ದೇಶಿಸಿಕೊಡತಕ್ಕಹವಿಸ್ಸುಗಳಿಂದ, ಆಯಾದೇವತೆಗಳಿಗೆ ಅಂತರಾತ್ಮನಾದ ಶ್ರೀವಿಷ್ಣುವಿಗೆ ಪ್ರೀತಿಯನ್ನುಂಟುಮಾಡಿ, ಅವನ ಅನುಗ್ರಹಕ್ಕೆ ನಮ್ಮನ್ನು ಪಾತ್ರರಾಗುವಂತೆ ಮಾಡು!” ಎಂಬುದೇಅವರು ಜಪಿಸತಕ್ಕ ಮಂತ್ರಾರ್ಥವು.

ರಾಜೇಂದ್ರಾ! ಈ ಕುಶದ್ವೀಪಕ್ಕೆ ಎರಡಷ್ಟು ವಿಶಾಲವಾಗಿ,ಹದಿನಾರು ಲಕ್ಷಯೋಜನವಿಸ್ತಾರವುಳ್ಳ ಕ್ರೌಂಚದ್ವೀಪವು, ಘೃತಸಮುದ್ರವನ್ನು ಸುತ್ತಿಕೊಂಡಿರುವುದು. ಮತ್ತು ಈಕ್ರೌಂಚದ್ವೀಪವನ್ನು ಅದರಷ್ಟೇ ವಿಶಾಲವಾದ ದಧಿಸಮುದ್ರವು ಕೋಟೆಯ ಸುತ್ತಿನ ಕಂದಕದಂತೆ ಆವರಿಸಿರುವುದು. ಇದರಲ್ಲಿ ಕ್ರೌಂಚವೆಂಬ ಒಂದುಪರ್ವತವುಂಟು. ಪೂರ್ವದಲ್ಲಿ ಕುಮಾರಸ್ವಾಮಿಯು, ತನ್ನ ಬಾಣಗಳಿಂದ ಈ ಪರ್ವತವನ್ನು ಭೇದಿ

ಸುವುದಕ್ಕೆತೊಡಗಿ, ಇದರ ತಪ್ಪಲುಗಳೆಲ್ಲವನ್ನೂ ಕೆಡಹುತ್ತಬಂದಾಗ, ಈ ಪರ್ವತವು ದಧಿಸಮುದ್ರದಲ್ಲಿ ಮರೆಸಿಕೊಂಡಿತು. ವರುಣನು ಅದನ್ನು ಈಗ ಲೂ ಸುರಕ್ಷಿತವಾಗಿ ಕಾಪಾಡುತ್ತಿರುವುದರಿಂದ ನಿರ್ಭಯವಾಗಿರುವುದು. ಈಪರ್ವತಸಂಬಂಧದಿಂದಲೇ ಈ ದ್ವೀಪಕ್ಕೆ ಕ್ರೌಂಚದ್ವೀಪವೆಂಬ ಹೆಸರಾ ಯಿತು. ಪ್ರಿಯವ್ರತಕುಮಾರನಾದ ಘೃತಪೃಷ್ಠನೆಂಬವನು, ಇದನ್ನಾ ಳುತಿದ್ದು, ಕೊನೆಗೆ ಆ ಭೂಭಾಗವನ್ನು ಏಳುವರ್ಷಗಳಾಗಿ ವಿಭಾಗಿಸಿ, ತನ್ನ ಏಳುಮಂದಿಮಕ್ಕಳಿಗೂ ಹಂಚಿಕೊಟ್ಟು, ತಾನು ವಿರಕ್ತನಾಗಿ, ಪುಣ್ಯಶ್ಲೋ ಕನಾದ ಪರಮಾತ್ಮನ ಪಾದಸಾನ್ನಿಧ್ಯವನ್ನು ಸೇರಿದನು. ಈ ಘೃತಪೃಷ್ಠ ನ ಏಳುಮಂದಿಮಕ್ಕಳಿಗೂ ಕ್ರಮವಾಗಿ, ಆಮೋದ, ಮಧುವಹ, ಮೇಘ ಪೃಷ್ಠ, ಸುದಾಮ, ಋಷಿಜ್ಯ, ಲೋಹಿತಾರ್ಣ, ವನಸ್ಪತಿಗಳೆಂದು ಹೆಸರು. ಇವರು ಪಾಲಿಸುತಿದ್ದ ಆ ಏಳುವರ್ಷಗಳೂ ಅವರವರ ಹೆಸರಿನಿಂದಲೇ ಪ್ರ ಖ್ಯಾತವಾಗಿರುವುವು. ಈ ದ್ವೀಪದಲ್ಲಿ ಆಯಾವರ್ಷಗಳನ್ನು ವಿಭಾಗಿಸಿತೋ ರಿಸತಕ್ಕ ಏಳುಪರ್ವತಗಳುಂಟು. ಈ ಪರ್ವತಗಳಿಗೆ ಕ್ರಮವಾಗಿ, ಶುಕ್ಲ, ವರ್ಧಮಾನ, ಭೋಜನ, ಉಪಬರ್ಹಣ, ಆನಂದ, ನಂದನ, ಸರ್ವತೋಭದ್ರ ಗಳೆಂದು ಹೆಸರು, ಮತ್ತು ಇಲ್ಲಿ, ಅಭಯೆ, ಅಮೃತೌಘೆ, ಆರ್ಯಕೆ, ತೀರ್ಥ ವತಿ, ತೃಪ್ತಿರೂಪೆ, ಪವಿತ್ರವತಿ, ಶುಕ್ಲೆಯೆಂಬ ಏಳುಮಹಾನದಿಗಳುಂಟು. ಈ ನದೀಜಲದಲ್ಲಿ ಸ್ನಾನಪಾನಗಳಿಂದಇಲ್ಲಿನವರೆಲ್ಲರೂ, ಶುದ್ಧಾತ್ಮರಾಗಿರುವರು. ಇವರಲ್ಲಿ ಗುರುಗಳೆಂದೂ, ಋಷಭರೆಂದೂ, ದ್ರವಿಣಕರೆಂದೂ, ದೇವಕರೆಂ ದೂ ನಾಲ್ಕುವರ್ಣದವರುಂಟು. ಇವರೆಲ್ಲರೂ ಬೊಗಸೆಯಲ್ಲಿ ನೀರನ್ನು ತುಂ ಬಿಕೊಂಡು, ಭಗವಂತನಿಗೆ ಶರೀರವಾದ ಜಲದೇವತೆಯನ್ನು ಭಗವದ್ರೂಪ ದಿಂದಲೇ ಆರಾಧಿಸುತ್ತ, ಕೆಳಗಿನ ಮಂತ್ರದಿಂದ ಸ್ತುತಿಸುತ್ತಿರುವರು. “ಓ ಜಲದೇವತೆಗಳಿರಾ! ನೀವು ಭಗವಂತನಿಗೆ ಶಕ್ತಿಭೂತರಾಗಿರತಕ್ಕವರು. ಭೂ ಲೋಕಭುವರ್ಲೋಕ ಸುವರ್ಲೋಕಗಳೆಲ್ಲವನ್ನೂ ಪಾವನಮಾಡತಕ್ಕವರು. ಹೀಗೆ ಲೋಕಶುದ್ಧಿಗಾಗಿ ಪರಮಾತ್ಮನಿಂದ ಸಾಕ್ಷಾತ್ತಾಗಿ ಸೃಷ್ಟಿ ಸಲ್ಪಟ್ಟ ನೀವು, ನಿಮ್ಮ ಸ್ಪರ್ಶಮಾತ್ರದಿಂದ ನಮ್ಮ ಜನ್ಮವನ್ನು ಪಾವನ ಮಾಡಬೇಕು.” ಎಂಬುದೇ ಅವರು ಜಪಿಸತಕ್ಕ ಮಂತ್ರಾರ್ಥವು.

ರಾಜೇಂದ್ರಾ! ದಧಿಸಮುದ್ರದಿಂದಾಚೆಗೆ ಮೂವತ್ತೆರಡು ಲಕ್ಷ ಯೋಜನದ ವಿಸ್ತಾರವುಳ್ಳ ಶಾಕದ್ವೀಪವೆಂಬುದು, ಅಷ್ಟೇ ವಿಶಾಲವಾದ ಕ್ಷೀರಸಮುದ್ರದಿಂದ ಆವೃತವಾಗಿರುವುದು. ಆ ದ್ವೀಪದಲ್ಲಿ ಶಾಕವೆಂಬ ಒಂದಾನೊಂದು ವೃಕ್ಷವುಂಟು. ಈ ವೃಕ್ಷದ ವಾಸನೆಯು ಆ ದ್ವೀಪವನ್ನೆಲ್ಲಾ ಪರಿಮಳಿತವಾಗಿ ಮಾಡುತ್ತಿರುವುದು. ಈ ವೃಕ್ಷದ ಸಂಬಂಧದಿಂದಲೇ ಆ ದ್ವೀಪಕ್ಕೆ ಶಾಕದ್ವೀಪವೆಂಬ ಹೆಸರಾಯಿತು. ಪ್ರಿಯವ್ರತನ ಮಗನಾದ ಮೇಧಾತಿಥಿಯೆಂಬವನು, ಈ ದ್ವೀಪವನ್ನಾಳುತ್ತಿದ್ದು, ಕೊನೆಗೆ ಅಲ್ಲಿನ ಭೂಭಾಗವನ್ನು ಏಳುವರ್ಷಗಳಾಗಿ ವಿಭಾಗಿಸಿ,ತನ್ನ ಏಳುಮಂದಿ ಮಕ್ಕಳಿಗೆ ಹಂಚಿಕೊಟ್ಟನು. ಇವನ ಮಕ್ಕಳಿಗೆ ಕ್ರಮವಾಗಿ ಪುರೋಜವ, ಮನೋಜವ, ವೇಪಮಾನ, ತಾಮ್ರಾನೀಕ, ಚಿತ್ರರಥ,ಬಹುರೂಪ,ವಿಶ್ವಪಾರರೆಂದು ಹೆಸರು. ಇವರ ಭಾಗಕ್ಕೆ ಬಂದವರ್ಷಗಳೂ ಅದೇ ಹೆಸರಿನಿಂದ ಪ್ರಸಿದ್ಧಿಗೊಂಡಿರುವುವು. ಮೇಧಾತಿಥಿಯು ತನ್ನ ಮಕ್ಕಳಿಗೆ ರಾಜ್ಯವನ್ನು ಹಂಚಿಕೊಟ್ಟಮೇಲೆ, ತಾನು ನಿತ್ಯಾನಂದಸ್ವರೂಪನಾದ ಭಗವಂತನಲ್ಲಿ ನಟ್ಟ ಮನಸ್ಸುಳ್ಳವನಾಗಿ ತಪೋವನಕ್ಕೆ ಹೋದನು. ಈ ದ್ವೀಪದಲ್ಲಿ ಈಶಾನ, ಉರುಶೃಂಗ, ಬಲಭದ್ರ, ಶತಕೇಸರ, ಸಹಸ್ರಸ್ರೋತಸ್ಸು, ದೇವಬಾಲ, ಮಹಾನಸಗಳೆಂಬ ಎಂಟು ಸೀಮಾಪರ್ವತಗಳೂ, ಅಣಕೆ, ಆಯುರ್ದೆ, ಉಭಯಸೃಷ್ಟಿ, ಅಪರಾಜಿತೆ, ಪಂಚಪದಿ, ಸಹಸ್ರಸ್ರುತಿ, ನಿಜಧ್ರುತಿಯೆಂಬ ಏಳುಮಹಾನದಿಗಳೂ ಹೆಸರುಗೊಂಡಿರುವುವು. ಇಲ್ಲಿ ಋತವ್ರತ, ಸತ್ಯವ್ರತ, ದಾನವ್ರತ, ಸುವ್ರತರೆಂಬ ನಾಲ್ಕುವರ್ಣದವರುಂಟು. ಇವರೆಲ್ಲರೂ ಪ್ರಾಣಾಯಾಮಸಿದ್ಧಿಯಿಂದ ರಜಸ್ತಮೋಗುಣಗಳನ್ನು ಜಯಿಸಿ, ಭಗವಂತನಿಗೆ ಶರೀರಭೂತನಾದ ವಾಯುವನ್ನು ಧ್ಯಾನಯೋಗದಿಂದ ಆರಾಧಿಸುತ್ತ, ಆಗಾಗ ಈಕೆಳಗಿನ ಮಂತ್ರದಿಂದ ಸ್ತುತಿಸುವರು "ಶರೀರಗಳಲ್ಲಿ ಮುಖ್ಯಪ್ರಾಣನಾಗಿ ಒಳಹೊಕ್ಕು, ತನಗೆ ಚಿಹ್ನಗಳಾದ ಪ್ರಾಣಾಪಾನಗಳೇ ಮೊದಲಾದ ಐದುಬಗೆಯ ವ್ಯಾಪಾರಗಳಿಂದ ಸಮಸ್ತಪ್ರಾಣಿಗಳನ್ನೂ ಧರಿಸತಕ್ಕವನಾಗಿಯೂ, ಸಕಲಜಗತ್ತನ್ನೂ ತನ್ನ ವಶಪಡಿಸಿಕೊಂಡಿರತಕ್ಕವನಾಗಿಯೂ, ಇರುವ ಸರ್ವಾಂತರ್ಯಾಮಿಯಾದ ವಾಯುಶರೀರಕನಾದ ಸರ್ವೇಶ್ವರನು ನಮ್ಮನ್ನು ರಕ್ಷಿಸಲಿ!" ಎಂಬುದೇ ಆ ಮಂತ್ರಾರ್ಥವು.

ರಾಜಾ! ಕ್ಷೀರಸಮುದ್ರದಿಂದಾಚೆಗೆ ಪುಷ್ಕರದ್ವೀಪವುಂಟು. ಅದು ಅರುವತ್ತನಾಲ್ಕು ಲಕ್ಷಯೋಜನಗಳ ವಿಸ್ತಾರವುಳ್ಳುದಾಗಿ, ತನ್ನಷ್ಟೇ ವಿಸ್ತಾರವುಳ್ಳ ಶುದ್ಧಜಲಸಮುದ್ರದಿಂದ ಆವೃತವಾಗಿರುವುದು. ಆ ದ್ವೀಪದಲ್ಲಿ ಲಕ್ಷದಳಗಳುಳ್ಳ ಒಂದು ಸುವರ್ಣಮಯವಾದ ಕಮಲವು ಅಗ್ನಿಜ್ವಾಲೆಯಂತೆ ಬೆಳಗುತ್ತಿರುವುದು. ವಿಕಸಿತವಾದ ಆ ಕಮಲವೇ ಬ್ರಹ್ಮದೇವನ ಆಸನವೆಂದು, ಅಲ್ಲಿನ ಪ್ರಜೆಗಳಿಂದ ಧ್ಯಾನಿಸಲ್ಪಡುತ್ತಿರುವುದು. ಇದರಿಂದಲೇ ಅವನಿಗೆ ಕಮಲಾಸನನೆಂದೂ, ಆ ದ್ವೀಪಕ್ಕೆ ಪುಷ್ಕರದ್ವೀಪವೆಂದೂ ಹೆಸರುಂಟಾಯಿತು ಆ ದ್ವೀಪದನಟ್ಟನಡುವೆ ಹತ್ತುಸಾವಿರಯೋಜನಗಳ ಔನ್ನತ್ಯವುಳ್ಳ, ಮತ್ತು ಅಷ್ಟೇವಿಶಾಲವಾದ ಮಾನಸೋತ್ತರವೆಂಬ ಪರ್ವತವೊಂದುಂಟು. ಅದು ತನ್ನ ಒಳಗೂ ಹೊರಗೂ ಇರುವಭೂಭಾಗಗಳಿಗೆ ಸೀಮಾಪರ್ವತವಾಗಿ ಅದನ್ನು ಎರಡುವರ್ಷಗಳಾಗಿ ವಿಭಾಗಿಸುವುದು. ಈ ಬೆಟ್ಟದ ನಾಲ್ಕುದಿಕ್ಕುಗಳಲ್ಲಿಯೂ ಕ್ರಮವಾಗಿ ಇಂದ್ರ, ಯಮ, ಕುಬೇರ, ವರುಣರೆಂಬ ನಾಲ್ಕು ದಿಕ್ಪಾಲಕರ ಪಟ್ಟಣಗಳುಂಟು ದೇವತೆಗಳಿಗೆ ಅಹೋರಾತ್ರರೂಪವಾದ ಉತ್ತರಾಯಣ ದಕ್ಷಿಣಾಯನಗಳೆಂಬ ಎರಡು ವಿಭಾಗಗಳುಳ್ಳ ಸಂವತ್ಸರವೆಂಬುದು, ಆ ಮಾನಸೋತ್ತರಪರ್ವತದಮೇಲೆ, ಮೇರುವನ್ನು ಸುತ್ತಿಬರುತ್ತಿರುವ ಸೂರ್ಯರಥದ ಚಕ್ರದಂತಿರುವುದು. ಈ ಪುಷ್ಕರದ್ವೀಪವನ್ನು ಪ್ರಿಯವ್ರತನ ಮಗನಾದ ವೀತಿಹೋತ್ರನೆಂಬವನು, ಬಹುಕಾಲದವರೆಗೆ ಪಾಲಿಸುತಿದ್ದು, ಕೊನೆಗೆರಮಣ, ಕಥಾತಕರೆಂಬ ತನ್ನ ಮಕ್ಕಳಿಬ್ಬರಿಗೆ ಅದನ್ನು ಹಂಚಿಕೊಟ್ಟು, ತಾನು ತನ್ನಣ್ಣನಾದ ಮೇಧಾತಿಥಿಯಂತೆ ಭಗವದಾರಾಧನದಲ್ಲಿ ನಿರತನಾಗಿದ್ದನು. ಆ ವರ್ಷಗಳೆರಡೂ ಆ ರಾಜಕುಮಾರರ ಹೆಸರಿನಿಂದಲೇ ಕರೆಯಲ್ಪಡುವುವು. ಆ ದೇಶದ ಪುರುಷರೆಲ್ಲರೂ ತಮ್ಮ ಕರ್ಮಶೇಷವನ್ನು ಕಳೆಯುವುದಕ್ಕಾಗಿ, ಧ್ಯಾನಯೋಗದಿಂದ ಚತುರ್ಮುಖರೂಪಿಯಾದ ಭಗವಂತನನ್ನು ಆರಾಧಿಸುತ್ತ ಈ ಮಂತ್ರವನ್ನು ಜಪಿಸುತ್ತಿರುವರು, ''ದೇವಾ! ವರ್ಣಾಶ್ರಮಭೇದಗಳುಳ್ಳ ಲೋಕದ ಜನವೆಲ್ಲವೂ,ಪರಮಾತ್ಮನಿಗೆ ಶರೀರಭೂತನಾಗಿಯೂ, ವೇದವೇದ್ಯನಾಗಿಯೂ, ಸೃಷ್ಟಿಕರ್ತನಾಗಿಯೂ ಇರುವ ಯಾವ ನಿನ್ನನ್ನು. 'ಕಾರ್ಯರೂಪವಾಗಿ ಕಾ

ಣುವ ಈ ಸಮಸ್ತಪ್ರಪಂಚವೂ ನೀನೇ' ಎಂಬ ಅಭೇದಜ್ಞಾನದಿಂದ ಅವಿಚ್ಛಿನ್ನವಾದ ಭಕ್ತಿಯಿಟ್ಟು ಆರಾಧಿಸುತ್ತಿರುವುವೋ, ಅಂತಹ ನಿನಗೆ ನಮಸ್ಕಾರವು." ಎಂಬುದೇ ಆ ಮಂತ್ರಾರ್ಥವು.

ಓ ಪರೀಕ್ಷಿದ್ರಾಜೇಂದ್ರಾ! ಇದೇ ಸಪ್ತದ್ವೀಪಗಳ ಸನ್ನಿವೇಶವು. ಇದರಿಂದಾಚೆಗೂ ಕೆಲವು ಭಾಗಗಳುಂಟು. ಈ ಶುದ್ಧಸಮುದ್ರದಿಂದಾಚೆಗೆ ಲೋಕಾಲೋಕವೆಂಬ ಹೆಸರುಳ್ಳ ಒಂದಾನೊಂದು ಪರ್ವತವು,ಕೋಟೆಯಂತೆ ಸುತ್ತಲೂ ಆವರಿಸಿಕೊಂಡಿರುವುದು. ಶುದ್ಧಸಮುದ್ರದಿಂದಾಚೆಗೆ, ಜನಸಂಚಾರವುಳ್ಳ ಒಳಭಾಗಕ್ಕೂ, ಜನಸಂಚಾರಕ್ಕೆ ಅವಕಾಶವಿಲ್ಲದ ಹೊರಭಾಗಕ್ಕೂ ನಡುವೆ ಈಪರ್ವತವು ಏರ್ಪಟ್ಟಿರುವುದರಿಂದಲೇ, ಇದಕ್ಕೆ ಲೋಕಾಲೋಕವೆಂದು ಹೆಸರು. ಮೇರುಪರ್ವತಕ್ಕೂ ಮಾನಸೋತ್ತರಪರ್ವತಕ್ಕೂ ನಡುವೆ ಇರುವಷ್ಟು (೧೫೭೫೦೦೦) ವಿಸ್ತಾರವುಳ್ಳ ಒಂದು ಭೂಭಾಗವು, ಶುದ್ಧಸಮುದ್ರದಿಂದಾಚೆಗೆ ಲೋಕಾಲೋಕದವರೆಗಿರುವ ಭೂಮಿಯಷ್ಟೇ ವಿಶಾಲವಾಗಿರುವುದು. ಆದರಿಂದಾಚೆಗೆ ಮತ್ತೊಂದು ಭೂಭಾಗವು ಕೇವಲ ಸ್ವರ್ಣಮಯವಾಗಿ, ಕನ್ನಡಿಯಂತೆ ಥಳಥಳಿಸಿ ಮಿರುಗುತ್ತಿರುವುದು. (೮೯೦೦೦೦೦) ಯೋಜನ ವಿಸ್ತಾರವುಳ್ಳ ಆ ಭೂಮಿಯ ಮೇಲಿಟ್ಟ ವಸ್ತುವೊಂದೂ ತಿರುಗಿ ನಮ್ಮ ಕೈಗೆ ಸಿಕ್ಕಲಾರದು. ಲೋಕಾಲೋಕ ಪರ್ವತದಿಂದಾಚೆಗೆ ಯಾವಪ್ರಾಣಿಯೂ ಇಲ್ಲದೆ ಜನಶೂನ್ಯವಾಗಿರುವುದು. ಈ ಕಾರಣದಿಂದಲೇ ಅದನ್ನು ಅಲೋಕ (ಲೋಕವಲ್ಲದುದು) ವೆಂದು ಹೇಳುವರು.

ಲೋಕಾಲೋಕಪರ್ವತಕ್ಕೆ ಒಳಭಾಗದಲ್ಲಿರುವ ಭೂಮಿಯು ಲೋಕವೆಂದೂ, ಹೊರಭಾಗದಲ್ಲಿರುವ ಭೂಮಿಯು ಅಲೋಕವೆಂದೂ ಕರೆಯಲ್ಪಡುವುದರಿಂದ, ಇವುಗಳ ನಡುವೆ ಸೇರಿರುವ ಆ ಪರ್ವತಕ್ಕೆ ಲೋಕಾಲೋಕವೆಂದು ಹೆಸರಾಯಿತು. ಈ ಪರ್ವತವು ಮೂರುಲೋಕಕ್ಕೂ ಒಂದು ಕೋಟೆಯಂತೆ ಈಶ್ವರನಿಂದ ಸೃಷ್ಟಿಸಲ್ಪಟ್ಟಿರುವುದು. ಸೂರ್ಯನಿಂದ ಹಿಡಿದು ಧ್ರುವನವರೆಗಿರುವ ಜ್ಯೋತಿರ್ಮಂಡಲವೆಲ್ಲವೂ, ತಮ್ಮ ಕೆಳಗಡೆಯಲ್ಲಿರುವ ಭೂಲೋಕ ಮೊದಲಾದ ಈ ಮೂರುಲೋಕಗಳನ್ನೂ ತಮ್ಮ ಕಾಂತಿಯಿಂದ ಬೆಳಗುತ್ತಿರುವುವು. ಆದರಿಂದಾಚೆಗೆ ಈ ಚಕ್ರವಾಳಪರ್ವತವು ಆ

ಡ್ಡಲಾಗಿರುವುದರಿಂದ ಆ ಪರ್ವತದ ಹಿಂಭಾಗಕ್ಕೆ ಈ ಜ್ಯೋತಿಶ್ಚಕ್ರಗಳ ಕಾಂತಿಯು ವ್ಯಾಪಿಸಲಾರದು. ಏಕೆಂದರೆ, ಆ ಪರ್ವತವು ಧ್ರುವಮಂಡಲವನ್ನೂ ಮೀರುವಷ್ಟು ಮಹೋನ್ನತವಾಗಿರುವುದು. ಇದರಿಂದ ಈ ಪರ್ವತದ ಒಂದುಕಡೆಗೆ ಸೂರ್ಯನ ಬೆಳಕೂ, ಮತ್ತೊಂದುಕಡೆಗೆ ಕತ್ತಲೆಯೂ ವ್ಯಾಪಿಸಿರುವುದರಿಂದಲೂ ಇದಕ್ಕೆ ಲೋಕಾಲೋಕವೆಂದು ಹೆಸರು. ಪಂಡಿತರು ಈ ಭೂಮಂಡಲದ ಪ್ರಮಾಣಲಕ್ಷಣಗಳನ್ನು ಈ ವಿಧವಾಗಿ ನಿರೂಪಿಸಿರುವರು. ಲೋಕಾಲೋಕಪರ್ವತವು ಎತ್ತರದಲ್ಲಿಯೂ, ವಿಸ್ತಾರದಲ್ಲಿಯೂ *ಐವತ್ತುಕೋಟಿಯೋಜನವಿಸ್ತಾರವುಳ್ಳ ಈ ಭೂಮಿಯ ಅಳತೆಯಲ್ಲಿ ನಾಲ್ಕರಲ್ಲಿ ಒಂದು ಪಾಲಿನಷ್ಟು (ಎಂದರೆ ಹನ್ನೆರಡೂವರೆಕೋಟಿಯೋಜನಗಳ) ಪ್ರಮಾಣವುಳ್ಳುದೆಂದು ಹೇಳುವರು. ಈ ಪರ್ವತದಮೇಲೆ ನಾಲ್ಕುದಿಕ್ಕುಗಳಲ್ಲಿಯೂ ಕ್ರಮವಾಗಿ, ಋಷಭ, ಪುಷ್ಕರಚೂಡ, ವಿಮಾನ, ಅಪರಾಜಿತಗಳೆಂಬ ನಾಲ್ಕು ಮಹಾಗಜಗಳುಂಟು.ಇವುಲೋಕಕ್ಷೇಮಕ್ಕಾಗಿ ಲೋಕಗುರು

---

* ಇಲ್ಲಿ ಭೂಮಂಡಲ ವಿಸ್ತಾರವು ಐವತ್ತುಕೋಟಿ ಯೋಜನೆಗಳೆಂದು ಹೇಳಿದೆ. ಇದರ ವಿಭಾಗಕ್ರಮವೇನೆಂದರೆ:—ಜಂಬೂದ್ವೀಪದ ಒಂದು ಕೊನೆಯಿಂದ ಮತ್ತೊಂದು ಕೊನೆಯವರೆಗೆ ಒಂದು ಲಕ್ಷಯೋಜನಗಳಾದುದರಿಂದ, ಅದರ ನಡುವೆ ಇರುವ ಮೇರುಪರ್ವತದ ಬುಡದಿಂದ ನೆಟ್ಟಗೆ ಲವಣಸಮುದ್ರದವರೆಗೆ ಐವತ್ತುಸಾವಿರಯೋಜನಗಳಾಗುವುವು. ಅದರಿಂದಾಚೆಗೆ ಸಮುದ್ರದ್ವೀಪಾದಿಗಳ ಅಳತೆಯನ್ನು ಅಲ್ಲಲ್ಲಿ ಹೇಳಿರುವ ಪ್ರಮಾಣದಿಂದಲೇ ತೆಗೆದುಕೊಂಡರೆ, ಶುದ್ಧೋದಧಿಯ ಕೊನೆಯವರೆಗೆ ೨೫೩೫೦೦೦೦ ಯೋಜನಗಳಾಗುವುವು. ಶುದ್ಧೋದಧಿಯಿಂದಾಚೆಗಿರುವ ಮತ್ತೊಂದು ಭೂಭಾಗವು, ಮೇರುವಿಗೂ ಪುಷ್ಕರದ್ವೀಪದ ನಟ್ಟನಡುವೆ ಇರುವ ಮಾನಸೋತ್ತರಪರ್ವತಕ್ಕೂ ನಡುವೆ ಇರುವಷ್ಟು ವಿಸ್ತಾರವುಳ್ಳುದೆಂದು ಹೇಳಿರುವುದರಿಂದ, ಅದರ ವಿಸ್ತಾರವು ೧೫೭೫೦೦೦೦ ಯೋಜನಗಳು. ಅದರಿಂದಾಚೆಗೆ ಆದರ್ಶಭೂಮಿಯೆಂಬುದು, ೮೩೯೦೦೦೦೦ ಯೋಜನಗಳು. ಇವೆಲ್ಲವನ್ನೂ ಕೂಡಿಸಿದರೆ ಹನ್ನೆರಡೂವರೆ ಕೋಟಿಯೋಜನಗಳಾಗುವುವು. ಇಷ್ಟೇ ಭೂಭಾಗವು ಚಕ್ರವಾಳ (ಲೋಕಾಲೋಕ) ಪರ್ವತದಿಂದಾಚೆಗೂ ಇರುವುದರಿಂದಮೇರುವಿನಿಂದ ಅಂಡಭಿತ್ತಿಯವರೆಗೆಇಪ್ಪತ್ತೈದು ಕೋಟಿ ಯೋಜನಗಳಾಗುವುವು. ಒಂದು ಕಡೆಯ ಅಂಡಭಿತ್ತಿಯಿಂದ ಮತ್ತೊಂದು ಕಡೆಯ ಅಂಡಭಿತ್ತಿಯವರೆಗೆ ಐವತ್ತುಕೋಟಿಯೋಜನಗಳೆಂದು ಗ್ರಾಹ್ಯವು.

ವಾದ ಬ್ರಹ್ಮದೇವನಿಂದ ಏರ್ಪಡಿಸಲ್ಪಟ್ಟಿರುವುವು. ಆ ದಿಗ್ಗಜಗಳಿಗೂ, ತನ್ನ ಅಂಶಭೂತರಾದ ಇಂದ್ರಾದಿಲೋಕಪಾಲಕರಿಗೂ, ಆಯಾ ಕಾರ್ಯಗಳಿಗೆ ಬೇಕಾದ ವಿವಿಧಸಾಮರ್ಥ್ಯವನ್ನುಂಟುಮಾಡುವುದಕ್ಕಾಗಿಯೂ, ಈ ಸಮಸ್ತಜಗತ್ತಿನ ಕ್ಷೇಮಕ್ಕಾಗಿಯೂ, ನಿತ್ಯವಿಭೂತಿ,ಲೀಲಾವಿಭೂತಿಗಳೆಂಬವಿಭೂತಿದ್ವಯಕ್ಕೂ ಪ್ರಭುವಾದ ಪರಮಪುರುಷನು, ಕಲ್ಪಾಂತದವರೆಗೆ ತಾನೂ ಅಲ್ಲಿ ಸರ್ವಾಂತರ್ಯಾಮಿಯಾಗಿ ನೆಲೆಗೊಂಡಿರುವನು ಮತ್ತು ಯಾವ ಸ್ವರೂಪವು, ಜ್ಞಾನಯೋಗ ಕರ್ಮಯೋಗಗಳಿಂದಲೂ, ವೈರಾಗ್ಯದಿಂದಲೂ, ಅಣಿಮಾದ್ಯಷ್ಟಸಿದ್ಧಿಗಳನ್ನು ಪಡೆಯುವವರೆಗೆ ದೃಢವಾಗಿ ಸಾಧಿಸತಕ್ಕ ಉಪಾಸನಬಲದಿಂದಲೂ ಗೋಚರಿಸುವುದೋ,ಅಂತಹ ತನ್ನ ದಿವ್ಯಮಂಗಳವಿಗ್ರಹವನ್ನುಧರಿಸಿ, ವಿಷ್ವಕ್ಸೇನಾದಿ ಪರಿಚರರೊಡಗೂಡಿ,ಶಂಖಚಕ್ರಾದಿ ದಿವ್ಯಾಯುಧಗಳನ್ನು ಹಿಡಿದು, ಆ ಲೋಕಾಲೋಕಪರ್ವತದಮೇಲೆ ನಾನಾಕಡೆಗಳಲ್ಲಿಯೂ ಲೋಕಕ್ಷೇಮಕ್ಕಾಗಿ ಸಾನ್ನಿಧ್ಯವನ್ನು ಮಾಡುತ್ತಿರುವನು.

ಓ ರಾಜೇಂದ್ರಾ ! ಈ ಲೋಕಾಲೋಕದ ಹಿಂಭಾಗದಲ್ಲಿ ಸೇರಿದ ಅಲೋಕವೆಂಬ ಪ್ರದೇಶವೂ ಕೂಡ, ಆ ಪರ್ವತದ ಒಳಗಿನ ಲೋಕದಷ್ಟೇ ಅಳತೆಯುಳ್ಳುದಾಗಿರುವುದು. ಇದರಿಂದಾಚೆಗೆ ಶುದ್ಧವಾದ ಯೋಗಮಹಿಮೆಯುಳ್ಳ ಯೋಗೀಶ್ವರರುಮಾತ್ರ ಸಂಚರಿಸುವರೇ ಹೊರತು, ಬೇರೆ ಪ್ರಾಕೃತಜನರ ಪ್ರವೇಶಕ್ಕೆ ಅವಕಾಶವಿಲ್ಲ. ರಾಜೇಂದ್ರಾ! ಇವೆಲ್ಲವೂ ಭೂಮಂಡಲದ ಪರಿಮಾಣವು. ಬ್ರಹ್ಮಾಂಡದ ಒಟ್ಟುಪರಿಮಾಣವೆಷ್ಟೆಂಬುದನ್ನು ಸೂರ್ಯನ ನೆಲೆಯಿಂದ ತಿಳಿಯಬೇಕು. ಭೂಮಂಡಲದ ನಟ್ಟನಡುವೆ ಮೇರುವಿರುವಂತೆ, ಬ್ರಹ್ಮಾಂಡದ ಮಧ್ಯದಲ್ಲಿ, (ಭೂಮಂಡಲದ ಮತ್ತು ದ್ಯುಮಂಡಲದ ನಡುವೆ ಅಂತರಾಳದಲ್ಲಿ) ಸೂರ್ಯನಿರುವನು. ಸೂರ್ಯನಿಗೂ ಸುತ್ತಿನ ಅಂಡಭಿತ್ತಿಗೂ ನಡುವೆ, ಇಪ್ಪತ್ತೈದು ಕೋಟಿಯೋಜನಗಳ ಅವಕಾಶವು ಬಿಟ್ಟಿರುವುದು. ಈ ಬ್ರಹ್ಮಾಂಡವು ಕಾಲಕಾಲಕ್ಕೆ ನಾಶಹೊಂದತಕ್ಕುದಾದುದರಿಂದ ಇದನ್ನು ಮೃತಾಂಡವೆಂದು ಹೇಳುವರು. ಸೂರ್ಯನು ಇದರ ನಡುವೆ ಇರುವುದರಿಂದ ಅವನಿಗೆ ಮಾರ್ತಾಂಡನೆಂದು ಹೆಸರು. ಸುವರ್ಣದಂತೆ ರಮಣೀಯವಾದ ಈ ಅಂಡವೇ ಬ್ರಹ್ಮನಿಗೆ ಉತ್ಪತ್ತಿ

ಸ್ಥಾನವಾದುದರಿಂದ, ಆ ಬ್ರಹ್ಮನಿಗೆ ಹಿರಣ್ಯಗರ್ಭನೆಂದು ಹೆಸರಾಯಿತು. ಪೂರ್ವಾದಿದಿಕ್ಕುಗಳೂ, ಭೂಲೋಕ, ದ್ಯುಲೋಕ, ಅಂತರಿಕ್ಷಗಳೆಂಬ ದೇಶಭೇದಗಳೂ, ಹಾಗೆಯೇ ಸ್ವರ್ಗ ಮೋಕ್ಷಸ್ಥಾನಗಳೂ, ನರಕಗಳೂ, ಅತಲ, ವಿತಲ ಮೊದಲಾದ ಪಾತಾಳಲೋಕಗಳೂ, ಇವೆಲ್ಲವೂ ಆ ಸೂರ್ಯನ ನೆಲೆಯಿಂದಲೇ ವಿಭಾಗಿಸಲ್ಪಟ್ಟಿರುವುವು ಭಗವತ್ಸ್ವರೂಪನಾದ ಆ ಸೂರ್ಯನೇ ದೇವತಿರ್ಯಙ್ಮನುಷ್ಯವರ್ಗಗಳು, ಗಿಡಬಳ್ಳಿಗಳು, ಮೊದಲಾದ ಸಮಸ್ತ ಜೀವರಾಶಿಗಳ ನೇತ್ರೇಂದ್ರಿಯಗಳಲ್ಲಿ ಅಧಿಷ್ಠಾನದೇವತೆಯಾಗಿದ್ದು ಅದನ್ನು ಪ್ರಕಾಶಗೊಳಿಸುತ್ತಿರುವನು. ಇದು ಇಪ್ಪತ್ತನೆಯ ಅಧ್ಯಾಯವು.

---

## ಸೂರ್ಯಗತಿಕ್ರಮವು.

ಓ, ರಾಜೇಂದ್ರಾ! ಇಷ್ಟೇ ಭೂಲೋಕದ ಪ್ರಮಾಣವು. ಆ ಭೂಮಂಡಲದ ಸನ್ನಿವೇಶಗಳನ್ನೂ, ಲಕ್ಷಣಗಳನ್ನೂ ನಿನಗೆ ಕ್ರಮವಾಗಿ ವಿವರಿಸಿದುದಾಯಿತು. ದ್ಯುಮಂಡಲದ ಪರಿಮಾಣವೂ ಇಷ್ಟೇ ಎಂಬುದನ್ನು ಜ್ಞಾನಿಗಳಾದ ಹಿರಿಯರು ನಿಶ್ಚಯಿಸಿರುವರು. ಬೀಸುವ ಕಲ್ಲಿನಲ್ಲಿಯಾಗಲಿ, ದ್ವಿದಳಧಾನ್ಯಗಳಲ್ಲಿಯಾಗಲಿ, ಒಂದು ಹೋಳಿನ ಪ್ರಮಾಣವನ್ನು ತಿಳಿಸುವುದರಿಂದ, ಅದರ ಮತ್ತೊಂದು ಹೋಳಿನ ಪ್ರಮಾಣವನ್ನೂ ಹಾಗೆಯೇ ಊಹಿಸಬಹುದಲ್ಲವೆ? ಅದರಂತೆಯೇ ಬ್ರಹ್ಮಾಂಡವೆಂಬ ಗೋಳದಲ್ಲಿ, ಸೂರ್ಯನ ಕೆಳಗಿರುವ ಭೂಮಂಡಲವೆಂಬ ಅರ್ಧಭಾಗದ ಪ್ರಮಾಣಲಕ್ಷಣಗಳನ್ನು ತಿಳಿಸಿದುದರಿಂದ, ಅದರ ಮೇಲಿನ ಭಾಗವಾದ ದ್ಯುಲೋಕದ ಪ್ರಮಾಣವನ್ನೂ ಹಾಗೆಯೇ ಊಹಿಸಬಹುದು. ಈ ಭೂಮಂಡಲಕ್ಕೂ, ದ್ಯುಲೋಕಕ್ಕೂ ನಡುವೆ ಇರುವ ಭಾಗವನ್ನೇ ಅಂತರಿಕ್ಷಲೋಕವೆಂದು ಹೇಳುವರು. ಈ ಅಂತರಿಕ್ಷವು, ಮೇಲೆ ದ್ಯುಮಂಡಲವನ್ನೂ, ಕೆಳಗೆ ಭೂಮಂಡಲವನ್ನೂ ಮುಟ್ಟುತ್ತಿರುವುದು. ಭಗವಂತನಾದ ಸೂರ್ಯನು, ಈ ಅಂತರಿಕ್ಷದ ನಟ್ಟನಡುವೆ ನೆಲೆಗೊಂಡು ತನ್ನ ಕಿರಣದಿಂದ ಭೂರ್ಭುವಸ್ಸುವರ್ಲೋಕಗಳೆಂಬ ಮೂರು ಲೋಕಗಳನ್ನೂ ತಪಿಸುತ್ತಿರುವನು ಈ ಸೂರ್ಯನಿಗೆ ಉತ್ತರಾಯಣವೆಂದೂ, ದಕ್ಷಿಣಾಯನವೆಂದೂ, ವೈಷುವತ

ವೆಂದೂ ಕರೆಯಲ್ಪಡುವ ಮಂದಗತಿ, ಶೀಘ್ರಗತಿ, ಸಮಗತಿಗಳೆಂಬ ಮೂರು ಗತಿಗಳುಂಟು. ಈಗತಿಗಳಿಂದ ಆರೋಹಣ, ಅವರೋಹಣ, ಸಮವಸ್ಥಾನಗಳೆಂದು ಕರೆಯಲ್ಪಡುವ ಮಕರಾದಿರಾಶಿಗಳಲ್ಲಿ, ಭಗವಂತನ ನಿಯಮಕ್ಕನುಸಾರವಾಗಿ ಕಾಲಕ್ರಮದಿಂದ ಮೇಲೇರುತ್ತಲೂ, ಕೆಳಕ್ಕಿಳಿಯುತ್ತಲೂ ಇರುವನು. ಇದರಿಂದ ಹಗಲುರಾತ್ರಿಗಳು ಒಮ್ಮೊಮ್ಮೆ ಹ್ರಸ್ವವಾಗಿಯೂ, ದೀರ್ಘವಾಗಿಯೂ, ಸಮವಾಗಿಯೂ ನಡೆಯುತ್ತಿರುವುವು. ಸೂರ್ಯನು ಮೇಷತುಲಾರಾಶಿಗಳಲ್ಲಿರುವಾಗ, ಅಹೋರಾತ್ರಗಳೆರಡೂ ಸಮವಾಗಿರುವುವು ವೃಷಭ, ಮಿಥುನ, ಕಟಕ, ಸಿಂಹ, ಕನ್ಯಾರಾಶಿಗಳಲ್ಲಿ ಸಂಚರಿಸುವಾಗ, ಹಗಲು ಹೆಚ್ಚುತ್ತ ಬರುವುದು. ರಾತ್ರಿಕಾಲಗಳಲ್ಲಿ ಒಂದೊಂದು ತಿಂಗಳಿಗೆ ಒಂದೊಂದು ಗಳಿಗೆಯಂತೆ ಕಡಿಮೆಯಾಗುತ್ತ ಬರುವುದು. ವೃಶ್ಚಿಕ, ಧನುಸ್ಸು, ಮಕರ, ಕುಂಭ, ಮೀನರಾಶಿಗಳಲ್ಲಿ ಸೂರ್ಯನಿರುವಾಗ, ಅಹಃಪರಿಮಾಣದಲ್ಲಿ ತಿಂಗಳೊಂದಕ್ಕೆ ಒಂದೊಂದು ಗಳಿಗೆಯಂತೆ ಕಡಿಮೆಯಾಗುತ್ತಬರುವುದು. ಆದುದರಿಂದ ದಕ್ಷಿಣಾಯನದವರೆಗೆ ಹಗಲಿನ ಪ್ರಮಾಣವು ಹೆಚ್ಚುತ್ತಬರುವುದು. ಉತ್ತರಾಯಣದವರೆಗೆ ರಾತ್ರಿಯು ಹೆಚ್ಚುತ್ತಬರುವುದು. ಸೂರ್ಯನು ಮಾನಸೋತ್ತರಪರ್ವತದಲ್ಲಿದ್ದುಕೊಂಡು, ಮೇರುವನ್ನು ಸುತ್ತಿಬರುತ್ತಿರುವನೆಂದೂ, ಹೀಗೆ ಪ್ರತಿದಿನವೂ ಒಂಬತ್ತುಕೋಟಿಯೂ ಐವತ್ತೊಂದು ಲಕ್ಷಯೋಜನಗಳವರೆಗೆ ಸಂಚರಿಸುವನೆಂದೂ ಹಿರಿಯರು ನಿಶ್ಚಯಿಸಿರುವರು. ಆ ಮಾನಸೋತ್ತರ ಪರ್ವತದಮೇಲೆ, ಮೇರುವಿಗೆ ಪೂರ್ವದಕ್ಷಿಣ ಪಶ್ಚಿಮೋತ್ತರ ದಿಕ್ಕುಗಳಲ್ಲಿ ಕ್ರಮವಾಗಿ ಇಂದ್ರ,ಯಮ, ವರುಣ, ಸೋಮದೇವತೆಗಳ ಪಟ್ಟಣಗಳಾದ ದೇವಧಾನಿ ಸಂಯಮನಿ,ನಿಮ್ಲೋಚನಿ, ವಿಭಾವರಿಯೆಂಬ ನಾಲ್ಕು ಪಟ್ಟಣಗಳುಂಟು. ಹೀಗೆ ಮೇರುವಿಗೆ ನಾಲ್ಕುದಿಕ್ಕುಗಳಲ್ಲಿಯೂ ಇರುವ ಆ ನಾಲ್ಕು ಪಟ್ಟಣಗಳಲ್ಲಿ ಸಮಸ್ತಪ್ರಾಣಿಗಳ ವ್ಯಾಪಾರಕ್ಕೂ, ವಿಶ್ರಾಂತಿಗೂ ಕಾರಣಗಳೆನಿಸಿದ ಉದಯ, ಮಧ್ಯಾಹ್ನ, ಅಸ್ತಮಯ, ನಿಶೀಥ, (ರಾತ್ರಿ)ಗಳೆಂಬ ಕಾಲಭೇದಗಳುಂಟಾಗುವುವು. ಎಂದರೆ, ಮೇರುವಿನ ದಕ್ಷಿಣದಲ್ಲಿರತಕ್ಕವರಿಗೆ ಸೂರ್ಯನು ಇಂದ್ರಪಟ್ಟಣವಾದ ದೇವಧಾನಿಯಲ್ಲಿದ್ದಾಗ, ಸೂ

ಯೋದಯವೂ, ಯಮಪಟ್ಟಣವಾದ ಸಂಯಮನಿಯಲ್ಲಿದ್ದಾಗ ಮಧ್ಯಾ ಹ್ನವೂ, ವರುಣಪಟ್ಟಣವಾದ ನಿಮ್ಲೋಚನೆಯಲ್ಲಿದ್ದಾಗ ಅಸ್ತಮಯವೂ, ಸೋಮಪಟ್ಟಣವಾದ ವಿಭಾವರಿಯಲ್ಲಿದ್ದಾಗ ರಾತ್ರಿಯೂ ಆಗುವುದು. ಹೀಗೆ ಯೇ ಸೂರ್ಯನು ಮೇರುವನ್ನು ಸುತ್ತಿಬರುತ್ತಿರುವುದರಿಂದ, ಮೇರುವಿನ ಪಶ್ಚಿಮದಲ್ಲಿದ್ದವರಿಗೆ ದಕ್ಷಿಣದಿಕ್ಕಿನಿಂದಾರಂಭಿಸಿ, ಪೂರ್ವಾದಿದಿಕ್ಕುಗಳ ವಿಭಾಗವೂ, ಉದಯಾದಿಕಾಲಗಳೂ ಏರ್ಪಡುವುವು. ಉತ್ತರದಲ್ಲಿದ್ದವರಿಗೆ ಪಶ್ಚಿಮದಿಂದ ಮೊದಲಾಗಿ ಪೂರ್ವಾದಿದಿಗ್ವಿಭಾಗಗಳೂ ಉದಯಾದಿಕಾಲಗ ಳೂ ಬೇರ್ಪಡುವುವು. ಪೂರ್ವದಲ್ಲಿದ್ದವರಿಗೆ ಈ ದಿಗ್ವಿಭಾಗಗಳೂ, ಕಾಲ ಭೇದಗಳೂ ಮೇರುವಿನ ಉತ್ತರದಿಂದ ಆರಂಭವಾಗುವುದು. ಈ ವ್ಯತ್ಯಾ ಸಗಳು ಭೂಲೋಕದಲ್ಲಿರತಕ್ಕವರಿಗೇ ಹೊರತು ಮೇರುವಿನಲ್ಲಿದ್ದವರಿಗಿಲ್ಲ. ಅಲ್ಲಿ ಸೂರ್ಯನು ಸರ್ವದಾ ಮಧ್ಯಗತನಾಗಿ ಪ್ರಕಾಶಿಸುತ್ತಿರುವುದರಿಂದ, ಅವರಿಗೆ ಯಾವಾಗಲೂ ಮಧ್ಯಾಹ್ನವೇಹೊರತು ರಾತ್ರಿಯೆಂಬುದೇ ಇಲ್ಲ. ಸೂರ್ಯನು ಆಕಾಶದಲ್ಲಿ ಸಂಚರಿಸುವಾಗ, ತನ್ನನ್ನು ನೋಡುವ ಜನಗಳಿಗೆ ತಾನು ಬಲಭಾಗದಲ್ಲಿದ್ದು, ಮೇರುವನ್ನು ಅವರ ಎಡಕ್ಕೆ ಬಿಡುವನು. ಏಕೆಂ ದರೆ ಸೂರ್ಯನು ಮೇರುವಿಗೆ ಯಾವಾಗಲೂ ಎಡವಾಗಿಯೇ ತಿರುಗುತ್ತಿರು ವುದರಿಂದಲೂ, ಆದರಿಂದಲೇ ದಿಗ್ವಿಭಾಗಗಳುಂಟಾಗುವುದರಿಂದಲೂ, ಎಲ್ಲಾ ದ್ವೀಪವರ್ಷಗಳಿಗೂ ಮೇರುವೆಂಬುದು ಉತ್ತರದಲ್ಲಿಯೇ ಇರುವು ದು ಮತ್ತು ಎಲ್ಲಿ ಸೂರ್ಯೋದಯವು ಕಾಣುತ್ತಿರುವುದೋ, ಅದಕ್ಕೆ ನೆಟ್ಟಗಿರುವ ಇದಿರುಭಾಗದಲ್ಲಿ ಅಸ್ತಮಯವು ಕಾಣುತ್ತಿರುವುದು. ಎಂದ ರೆ ಪೂರ್ವದಿಕ್ಕಿನಲ್ಲಿ ಸೂರ್ಯೋದಯವಾದಾಗ ಅದಕ್ಕೆ ನೇರವಾದ ಪಶ್ಚಿಮ ದಿಕ್ಕಿನಲ್ಲಿ ಅಸ್ತಮಯವಾಗುವುದು. ಆದರಂತೆಯೇ ಒಂದು ದಿಕ್ಕಿನಲ್ಲಿ ಸೂ ರ್ಯನು ಮಧ್ಯಾಹ್ನಗತನಾಗಿ ತಪಿಸುತ್ತಿರುವಾಗ, ಅದಕ್ಕೆ ನೇರವಾದ ಇದಿರು ದಿಕ್ಕಿನಲ್ಲಿ ಅರ್ಧರಾತ್ರಿಯು ನಡೆಯುತ್ತಿರುವುದು. ಈ ಮೇರುವಿನ ನಾಲ್ಕು ದಿಕ್ಕುಗಳಲ್ಲಿಯೂ ಇರುವ ಪಟ್ಟಣಗಳಲ್ಲಿ, ಕ್ರಮವಾಗಿ ಒಂದಕ್ಕೊಂದಕ್ಕೆ ಎರಡುಕೋಟಿಯೂ, ಮೂವತ್ತೇಳುಲಕ್ಷದ ಇಪ್ಪತ್ತುಸಾವಿರಯೋಜನಗಳ ದೂರವಿರುವುದು. ಈ ದೂರವನ್ನು ಸೂರ್ಯನು ಹದಿನೈದುಗಳಿಗೆಗಳ ಕಾಲ

ದಲ್ಲಿ ದಾಟಿ ಹೋಗುವನು. ಹೀಗೆಯೇ ಚಂದ್ರಾದಿಗ್ರಹಗಳೂಕೂಡ, ಅಶ್ವಿನ್ಯಾದಿನಕ್ಷತ್ರಗಳೊಡನೆ, ಮೇಲೆ ಹೇಳಿದ ಇಂದ್ರಾದಿಪುರಗಳಲ್ಲಿ ಕ್ರಮವಾಗಿ ಉದಯಿಸುತ್ತಲೂ, ಅಸ್ತಮಿಸುತ್ತಲೂ ಇರುವುವು. ಸೂರ್ಯನ ವೇದಮಯವಾದ ರಥವು ಆ ನಾಲ್ಕುಪಟ್ಟಣಗಳಲ್ಲಿಯೂ ಒಂದು ಮುಹೂರ್ತಕಾಲಕ್ಕೆ ಮೂವತ್ತುನಾಲ್ಕುಲಕ್ಷದ ಎಂಟುನೂರುಯೋಜನಗಳಂತೆಸುತ್ತಿಬರುವುದು. ಆ ಸೂರ್ಯರಥಕ್ಕೆ ಒಂದೇ ಗಾಲಿಯು. ಅದನ್ನೇ ಸಂವತ್ಸರವೆಂದು ಹೇಳುವರು.ಈ ಗಾಲಿಗೆ ಮಾಸಗಳೆಂಬ ಹನ್ನೆರಡುಅಡ್ಡಗಡ್ಡಿ (ಅರ)ಗಳೂ, ಋತುಗಳೆಂಬ ಆರುಪಟ್ಟಿಗಳೂ, ಚಾತುರ್ಮಾಸ್ಯಗಳೆಂಬ ಮೂರು ತಿರುಗುಳಿಗಳೂ ಇರುವುವು. ಆ ರಥದ ಅಚ್ಚಿನ ಒಂದುಕೊನೆಯು ಮೇರುವಿನ ತುದಿಯಲ್ಲಿ ತಗುಲಿಸಲ್ಪಟ್ಟಿರುವುದು. ಮತ್ತೊಂದು ಕೊನೆಯು ಮಾನಸೋತ್ತರಪರ್ವತದಲ್ಲಿ, ಐವತ್ತುಸಾವಿರಯೋಜನಗಳ ಎತ್ತರದಲ್ಲಿ ತಗುಲಿಸಲ್ಪಟ್ಟಿರುವುದು. ಸೂರ್ಯರಥಕ್ಕಿರುವ ಒಂದುಚಕ್ರವು, ಆಅಚ್ಚಿನ ಕೊನೆಯಲ್ಲಿ ಸೇರಿ ಎಣ್ಣೆಯ ಗಾಣದಂತೆ ಮಾನಸೋತ್ತರಪರ್ವತದಮೇಲೆಯೇ ಉರುಳುತ್ತಿರುವುದು. ಮೇರುವಿನಿಂದ ಮಾನಸೋತ್ತರಪರ್ವತದವರೆಗೆ ನೀಡಿದ ಈ ಅಚ್ಚಿನ ಅಳತೆಯು, ಒಂದು ಕೋಟಿಯೂ, ಐವತ್ತೇಳುಲಕ್ಷದ ಐವತ್ತುಸಾವಿರಯೋಜನಗಳು. ಅದೇಚಕ್ರದಲ್ಲಿ ತಗುಲಿಸಲ್ಪಟ್ಟಿರುವ ಮತ್ತೊಂದು ಇರಿಚಿಯು, ಎಣ್ಣೆಯ ಗಾಣದ ಕಂಬದಂತೆ ಮೇಲುಮುಖವಾಗಿ ಹೊರಟು, ಅದರಮತ್ತೊಂದು ಕೊನೆಯಲ್ಲಿ ಧ್ರುವನಕ್ಷತ್ರಕ್ಕೆ ತಗುಲಿಸಲ್ಪಟ್ಟಿರುವುದು.ಇದರಅಳತೆಯು, ಮೇರುವಿನಿಂದ ಮಾನಸೋತ್ತರಪರ್ವತದವರೆಗೆ ನೀಡಿರುವ ಮೊದಲನೆಯ ಅಚ್ಚಿನ ಅಳತೆಯಲ್ಲಿ ಕಾಲುಪಾಲು ಎಂದರೆ ಮೂವತ್ತೊಂಬತ್ತುಲಕ್ಷದ ಮೂವತ್ತೇಳುಸಾವಿರದ ಐನೂರುಯೋಜನಗಳಿರುವುದು. ಈಸೂರ್ಯರಥದಲ್ಲಿ ರಥಿಕನು ಕುಳ್ಳಿರತಕ್ಕ ಸ್ಥಳವು,ಮೂವತ್ತಾರುಲಕ್ಷಯೋಜನಗಳ ಉದ್ದವುಳ್ಳುದಾಗಿಯೂ, ಅದರಲ್ಲಿ ಕಾಲುಪಾಲುಅಗಲವುಳ್ಳುದಾಗಿಯೂ ಇರುವುದು. ಈರಥನೊಗವೂಕೂಡ, ಉದ್ದದಲ್ಲಿಯೂ, ಅಗಲದಲ್ಲಿಯೂ ಆ ರಥದ ಜಗತಿಯನ್ನೇ ಹೋಲುತ್ತಿರುವುದು. ಆಸೂರ್ಯರಥದಲ್ಲಿ ಸಾರಥಿಯಾದ ಅರುಣನಿಂದ ನಡೆಸಲ್ಪಡುವ ಏಳು ಕುದುರೆಗಳುಂಟು.

ಅವು ಗಾಯಿತ್ರಿ ಮೊದಲಾದ ಛಂದಸ್ಸುಗಳ ಹೆಸರಿನಿಂದ ಕರೆಯಲ್ಪಡು ತ್ತ, ಸೂರ್ಯನನ್ನು ತಕ್ಕ ಸ್ಥಳಕ್ಕೆ ತಕ್ಕ ಕಾಲದಲ್ಲಿ ತಂದು ಸೇರಿಸುವುವು. ಸಾರಥಿಯಾದ ಅರುಣನು, ಸೂರ್ಯನಿಗೆ ಮುಂದೆ, ಹಿಂದುಮುಖವಾಗಿ ಕುಳಿತು ಕುದುರೆಗಳನ್ನು ನಡೆಸುತ್ತಿರುವನು. ಹೆಬ್ಬೆರಳಿನ ಗಿಣ್ಣಿನಷ್ಟು ಆಕಾರವುಳ್ಳ ವಾಲಖಿಲ್ಯರೆಂಬ ಅರುವತ್ತು ಸಾವಿರಮಂದಿ ಋಷಿಗಳು, ಹೀಗೆಯೇ ಸೂರ್ಯನಮುಂದೆ ಆ ರಥದಲ್ಲಿ ಕುಳಿತು. ಆತನ ನಿಯಮಾನುಸಾರವಾಗಿ ಸೂಕ್ತಗಳನ್ನು ಹೇಳಿ ಅವನನ್ನು ಸ್ತೋತ್ರಮಾಡುವರು. ಇದಲ್ಲದೆ ಋಷಿಗಳು, ಗಂಧರ್ವರು, ಅಪ್ಸರಸ್ತ್ರೀಯರು, ನಾಗರು, ಯಕ್ಷರು, ರಾಕ್ಷಸರು, ದೇವತೆಗಳೆಂಬ ಈ ಏಳು ದೇವಗಣಗಳಲ್ಲಿ ಒಂದೊಂದು ಗಣಕ್ಕೆ ಇಬ್ಬಿಬ್ಬರಂತೆ ಹದಿನಾಲ್ಕುಮಂದಿ ಪ್ರಧಾನರು. ಬಂದುಬೇರೆಬೇರೆ ತಿಂಗಳಲ್ಲಿ ಬೇರೆಬೇರೆ ಹೆಸರುಳ್ಳ ಪರಮಾತ್ಮಸ್ವರೂಪನಾದ ಸೂರ್ಯನನ್ನು ಬೇರೆಬೇರೆ ವ್ಯಾಪಾರಗಳಿಂದ ಉಪಾಸಿಸುತ್ತಿರುವರು. ಈ ಭೂಮಂಡಲವು ಒಂಭತ್ತು ಕೋಟಿಯೂ, ಐವತ್ತೊಂದು ಲಕ್ಷಯೋಜನಗಳ ಸುತ್ತಳತೆಯುಳ್ಳದು! ಅದರಲ್ಲಿ ಸೂರ್ಯನು ಒಂದು ಕ್ಷಣಕ್ಕೆ ಎರಡು ಸಾವಿರಯೋಜನಗಳಮೇಲೆ ಎರಡು ಹರಿದಾರಿಯ ದೂರವನ್ನು ದಾಟುವನು. ಇಲ್ಲಿಗೆ ಇಪ್ಪತ್ತೊಂದನೆಯ ಅಧ್ಯಾಯವು.

---

## ಚಂದ್ರಾದಿಗ್ರಹಗಳ ಸ್ಥಾನಗಳು ಮತ್ತು ಗತಿಗಳು.

ಪರೀಕ್ಷಿದ್ರಾಜನು ಶುಕಮುನಿಯನ್ನು ಕುರಿತು “ಓಮಹರ್ಷೀ! ಭಗವಂತನಾದ ಸೂರ್ಯನು ಮೇರುವನ್ನೂ ಧ್ರುವನನ್ನೂ ಪ್ರದಕ್ಷಿಣವಾಗಿ ಸುತ್ತುವನೆಂದು ಹೇಳಿದೆ! ನಕ್ಷತ್ರಗಳಿಗಿದಿರಾಗಿ ಮಕರಾದಿರಾಶಿಗಳಲ್ಲಿ ಸುತ್ತುವನೆಂದೂ ಹೇಳಿದೆಯಲ್ಲವೆ? ಪರಸ್ಪರವಿರುದ್ಧವಾದ ಈ ಎರಡು ಬಗೆಯ ಗತಿಗಳೂ ಒಬ್ಬನಿಗೆ ಏಕಕಾಲದಲ್ಲಿ ಹೇಗೆ ಸರಿಹೋಗುವುವೆಂಬುದನ್ನು ತಿಳಿಸಬೇಕು” ಎಂದನು. ಅಪಕ್ಕಾಶುಕನು “ಓ

ರಾಜೇಂದ್ರಾ! ಕೇಳು " ಕುಂಬಾರನ ಚಕ್ರವು ಸುತ್ತುವುದನ್ನು ನೋಡಿ ರುವೆಯಷ್ಟೆ? ಆ ಚಕ್ರದಮೇಲೆ ಬಂದು ಕುಳಿತ ಇರುವೆ ಮುಂತಾದ ಪ್ರಾಣಿಗಳೂ ಆ ಚಕ್ರದೊಡನೆ ಸುತ್ತುತ್ತಿರುವುವಲ್ಲದೆ, ತಾವೂ ಅದರಮೇಲೆ ತಮ್ಮ ಗತಿಯಿಂದ ಸಂಚರಿಸುವುದುಂಟು. ಮೊದಲು ಒಂ ದು ಸ್ಥಳದಲ್ಲಿ ಕಾಣುತಿದ್ದ ಒಂದು ಸಣ್ಣಹುಳುವನ್ನು ಸ್ವಲ್ಪಕಾಲದಮೇಲೆ ಅದೇ ಚಕ್ರದ ಮತ್ತೊಂದು ಸ್ಥಳದಲ್ಲಿ ಕಾಣುವೆವು. ಆದುದರಿಂದ ಆ ಹುಳುಗಳು ಚಕ್ರದೊಡನೆ ಸುತ್ತುವುದುಮಾತ್ರವಲ್ಲದೆ, ಆ ಚಕ್ರ ದಲ್ಲಿ ತಾವೂ ನಡೆಯುತ್ತಿರುವುವೆಂದು ಸ್ಪಷ್ಟವಾಗುವುದು. ಹೀಗೆಯೇ ಧ್ರುವನನ್ನೂ ಮೇರುವನ್ನೂ, ಪ್ರದಕ್ಷಿಣವಾಗಿ ಸುತ್ತುತ್ತಿರುವ ಕಾಲಚಕ್ರ ದೊಡನೆ, ಅದರಲ್ಲಿರುವ ಸೂರ್ಯನೂ, ಇತರ ಗ್ರಹಗಳೂ, ಸುತ್ತುವುದ ಲ್ಲದೆ, ಒಂದು ನಕ್ಷತ್ರದಲ್ಲಿಯೂ, ಒಂದು ರಾಶಿಯಲ್ಲಿಯೂ, ಸೇರಿದ್ದ ಆಗ್ರಹಗಳು ತಮ್ಮ ಗತಿಯಿಂದ ಸ್ವಲ್ಪಕಾಲದಮೇಲೆ ಅದಕ್ಕೆ ಮುಂದಿನ ಬೇ ರೆ ನಕ್ಷತ್ರದಲ್ಲಿಯೂ ರಾಶಿಯಲ್ಲಿಯೂ ಕಾಣುವುವು. ಆದುದರಿಂದ ಆ ಗ್ರ ಹಗಳಿಗೂ ಬೇರೆ ಗತಿಗಳುಂಟೆಂಬುದರಲ್ಲಿ ಸಂದೇಹವಿಲ್ಲ. ಷಡ್ಗುಣಪರಿಪೂ ರ್ಣನೂ, ಆದಿಪುರುಷನೂ ಆದ ಶ್ರೀಮನ್ನಾರಾಯಣನು, ಹೀಗೆ ಸೂರ್ಯ ಸ್ವರೂಪನಾಗಿ, ವೇದಮಯವಾದ ತನ್ನ ಸ್ವರೂಪವನ್ನು ಹನ್ನೆರಡುವಿಧವಾ ಗಿ ವಿಭಾಗಿಸಿಕೊಂಡು, ಲೋಕಕ್ಷೇಮಕ್ಕಾಗಿಯೂ, ಕಾಲನಿಯಮದಿಂದ ಕ ರ್ಮಗಳಿಗೆ ಶುದ್ಧಿಯನ್ನುಂಟುಮಾಡುವುದಕ್ಕಾಗಿಯೂ, ವಸಂತಾದಿಋತುಗ ಳಲ್ಲಿ, ಮಳೆ, ಗಾಳಿ, ಬಿಸಿಲು,ಮುಂತಾದ ಋತುಗುಣಗಳನ್ನು ಹುಟ್ಟಿಸುತ್ತಿರು ವನು. ಸೂರ್ಯರೂಪದಿಂದಿರುವ ಆ ಭಗವಂತನೇ ವೇದಗಳಿಂದಲೂ, ಪಂ ಡಿತರಿಂದಲೂ ಉಪಾಸನೆಮಾಡಲ್ಪಡುತ್ತಿರುವನು. ಲೋಕದ ಜನರು ವೇ ದೋಕ್ತವಾದ ತಮ್ಮತಮ್ಮ ವರ್ಣಾಶ್ರಮಧರ್ಮಗಳನ್ನನುಸರಿಸಿ, ಯಜ್ಞಾ ದಿಕರ್ಮಗಳಿಂದಲೂ, ಉಪಾಸನೆಯಿಂದಲೂ, ಆ ಸೂರ್ಯರೂಪಿಯಾದ ಭಗವಂತನನ್ನಾರಾಧಿಸಿ, ಅನಾಯಾಸವಾಗಿ ಶೀಘ್ರದಲ್ಲಿಯೇ ಸ್ವರ್ಗಮೋ ಕ್ಷಾದಿರೂಪವಾದ ಶ್ರೇಯಸ್ಸನ್ನೂ ಹೊಂದುವರು. ಹೀಗೆ ಸರ್ವಾಂತ ರ್ಯಾಮಿಯಾದ ಭಗವಂತನು ಆದಿತ್ಯರೂಪದಿಂದ ಭೂಮಿಗೂ, ಊರ್ಧ್ವ

ಲೋಕಗಳಿಗೂ ನಡುವೆ ಅಂತರಿಕ್ಷದ ಮಧ್ಯಭಾಗದಲ್ಲಿ * ಶಿಂಶುಮಾರವೆಂಬ ಕಾಲಚಕ್ರದಲ್ಲಿದ್ದುಕೊಂಡು, ಅದರಲ್ಲಿರುವ ಮೇಷಾದಿರಾಶಿಗಳಲ್ಲಿ ನಕ್ಷತ್ರಗಳಿಗಿದಿರಾಗಿ ನಡೆಯುತ್ತಬರುವುದರಿಂದ, ಸಂವತ್ಸರಕ್ಕೆ ಅವಯವಗಳೆನಿಸಿಕೊಂಡ ಹನ್ನೆರಡು ತಿಂಗಳುಗಳು ಏರ್ಪಡುವುವು. ಅವುಗಳನ್ನೇ ಸೂರ್ಯಗತಿಯಿಂದ ರಾಶಿಗಳೆಂದು ಹೇಳುವರು. ಈ ಮಾಸಗಳೇ ಚಾಂದ್ರಮಾನದಿಂದ ಶುಕ್ಲಕೃಷ್ಣಪಕ್ಷಗಳೆಂದೂ,ಸೌರಮಾನದಿಂದ ಎರಡೂಕಾಲು ಮಹಾನಕ್ಷತ್ರಗಳೆಂದೂ, ಪಿತೃಮಾಸದಿಂದ ಒಂದು ಅಹೋರಾತ್ರವೆಂದೂ ಕರೆಯಲ್ಪಡುವುದು. ಸೂರ್ಯನು ಹನ್ನೆರಡು ರಾಶಿಗಳಿಂದ ಕೂಡಿದ ಒಂದು ಸಂವತ್ಸರದಲ್ಲಿ, ಆರನೆಯಭಾಗವಾದ ಎರಡು ರಾಶಿಗಳನ್ನು ಎಷ್ಟು ಕಾಲದಲ್ಲಿ ದಾಟಿ ಹೋಗುವನೋ ಅದನ್ನು ಸಂವತ್ಸರಕ್ಕೆ ಅವಯವವಾದ

* ಇಲ್ಲಿ ತಿಳಿಯಬೇಕಾದ ಕ್ರಮವೇನೆಂದರೆ:—ಭಗವದಾತ್ಮಕವಾದ ಶಿಂಶುಮಾರವೆಂಬ ಕಾಲಚಕ್ರವು ಎಡೆಬಿಡದೆ ಸುತ್ತುತ್ತಿರುವುದು. ಇದು ಸಮಸ್ತಗ್ರಹ ನಕ್ಷತ್ರಗಳಿಗೆಲ್ಲಾ ಆಧಾರವಾಗಿ, ನೂರೆಂಬತ್ತುಮೂರು ವಲಯಾಕಾರ ರೇಖೆಗಳಿಂದಕೂಡಿರುವುದು. ಈ ರೇಖೆಗಳಲ್ಲಿ ಅಂತರ್ವಲಯವೆಂದೂ, ಬಹಿರ್ವಲಯವೆಂದೂ, ಮಧ್ಯವಲಯವೆಂದೂ ಮೂರು ವಿಭಾಗಗಳುಂಟು ಈ ವಲಯಗಳನ್ನು ದಾಟುತ್ತಿರುವುದರಿಂದಲೇ ಸೂರ್ಯನಿಗೆ ಗತಿಭೇದಗಳುಂಟಾಗುವುವು. ಇದರಿಂದ ಸೂರ್ಯನಿಗೆ ಆರೋಹಣ, ಅವರೋಹಣ, ಸಮಸ್ಥಾನಗಳೆಂದು ಮೂರವಸ್ಥೆಗಳುಂಟು. ಸೂರ್ಯನು ಹೊರವಲಯದಿಂದ ಒಳವಲಯಕ್ಕೆ ಏರಿಹೋಗುವುದೇ ಆರೋಹಣವು. ಇದನ್ನೇ ಉತ್ತರಾಯಣವೆನ್ನುವರು. ಆ ಒಳವಲಯದಿಂದ ಹೊರವಲಯಕ್ಕೆ ಬರುವಾಗ ಅವರೋಹಣವೆನಿಸುವುದು ಇದೇ ದಕ್ಷಿಣಾಯನವು. ಮಧ್ಯವಲಯದಲ್ಲಿದ್ದಾಗ ಸಮಸ್ಥಿತಿಯೆನಿಸುವುದು. ಇದರಲ್ಲಿ ರಾತ್ರಿ ಹಗಲುಗಳು ಸಮವಾಗಿರುವುವು ಇದಕ್ಕೆ ವೈಷುವತವೆಂದೂ ಹೆಸರು, ಉತ್ತರಾಯಣವೆಂಬ ಆರೋಹಣದಲ್ಲಿ ಮೇಲೇರುವುದಕ್ಕಾಗಿ ಬಹಳ ಹೊತ್ತು ಹಿಡಿಯುವುದರಿಂದ, ಆಗ ಸೂರ್ಯನಿಗೆ ಮಂದಗತಿಯುಂಟಾಗಿ, ಹಗಲು ದೀರ್ಘವಾಗುವುದು. ರಾತ್ರಿಯು ತಗ್ಗುವುದು. ದಕ್ಷಿಣಾಯನವೆಂಬ ಅವರೋಹಣದಲ್ಲಿ ಶೀಘ್ರಗಮನವಿರುವುದರಿಂದ ಹಗಲು ತಗ್ಗಿ, ರಾತ್ರಿಯು ದೀರ್ಘವಾಗುವುದು. ಈ ಎರಡಯನಗಳ ಸಂಧಿಕಾಲದಲ್ಲಿ ಸೂರ್ಯನ ಗತಿಯು ಸಮವಾದುದರಿಂದ ಆಗ ಅಹೋರಾತ್ರಗಳೂ ಸಮವಾಗಿ ನಡೆಯುವುವೆಂದು ಗ್ರಾಹ್ಯವು.

ಋತುವೆನ್ನುವರು. ಅದೇ ಸೂರ್ಯನು ಈ ಹನ್ನೆರಡು ರಾಶಿಗಳಲ್ಲಿ ಆರುರಾಶಿಗಳನ್ನು ಎಷ್ಟು ಕಾಲದಲ್ಲಿ ದಾಟುವನೋ ಆ ಕಾಲಕ್ಕೆ ಅಯನವೆಂದು ಹೆಸರು. ಈ ಹನ್ನೆರಡು ರಾಶಿಗಳಿಂದ ತುಂಬಿದ ನಭೋಮಂಡಲವನ್ನು, ಸೂರ್ಯನು ತನ್ನ ಮಂದಗತಿಯಿಂದಲೂ, ಶೀಘ್ರಗತಿಯಿಂದಲೂ, ಸಮಗತಿಯಿಂದಲೂ ಎಷ್ಟುಕಾಲದಲ್ಲಿ ಸಂಪೂರ್ಣವಾಗಿ ದಾಟಿಹೋಗುವನೋ ಆ ಕಾಲವು * ಸಂವತ್ಸರವೆಂದೂ, ಪರಿವತ್ಸರವೆಂದೂ, ಇಳಾವತ್ಸರವೆಂದೂ, ಇದ್ವತ್ಸರವೆಂದೂ, ಅನುವತ್ಸರವೆಂದೂ ಬೇರೆಬೇರೆ ಹೆಸರಿನಿಂದ ಕರೆಯಲ್ಪಡುವುದು. ಈ ಸೂರ್ಯಮಂಡಲಕ್ಕೆ ಲಕ್ಷಯೋಜನಗಳಮೇಲೆ ಚಂದ್ರನು ಬಹಳ ವೇಗದಿಂದ ಸಂಚರಿಸುತ್ತಿರುವನು. ಈ ಕಾರಣದಿಂದ ಇವನನ್ನು ಉಗ್ರಚಾರಿಯೆಂದು ಕರೆಯುವರು. ಸೂರ್ಯನು ಒಂದು ಸಂವತ್ಸರಕಾಲದಲ್ಲಿ ದಾಟಿಹೋಗುವ ಅಂತರಿಕ್ಷಮಂಡಲವನ್ನು, ಚಂದ್ರನು ಎರಡು ಪಕ್ಷಗಳಲ್ಲಿ ದಾಟಿ ಹೋಗುವನು ಸೂರ್ಯನು ಒಂದು ತಿಂಗಳಲ್ಲಿ ಸಂಚರಿಸತಕ್ಕ ದಾರಿಯನ್ನು, ಚಂದ್ರನು ಎರಡೂಕಾಲು ನಕ್ಷತ್ರಗಳನ್ನು ದಾಟುವ ಹೊತ್ತಿನಲ್ಲಿ

---

* ಇಲ್ಲಿನ ಭೇದಗಳು ಹೇಗೆಂದರೆ:—ಜ್ಯೋತಿಶ್ಶಾಸ್ತ್ರದಲ್ಲಿ ಸೌರಮಾನವೆಂದೂ, ಚಾಂದ್ರಮಾನವೆಂದೂ ಎರಡು ಭೇದಗಳುಂಟು. ಸೂರ್ಯಗತಿಯಿಂದ ಕಾಲವನ್ನಳೆಯುವುದು ಸೌರಮಾನವು. ಚಂದ್ರಗತಿಯಿಂದಳೆಯುವುದು ಚಾಂದ್ರಮಾನವು. ಸೂರ್ಯನು ಮಕರಾದಿರಾಶಿಗಳಲ್ಲಿ ಪ್ರವೇಶಿಸಿದದಿನವೇ ಸೌರಮಾನದಲ್ಲಿ ಆಯಾತಿಂಗಳಿಗೆ ಆರಂಭದಿನವಾಗುವುದು. ಶುಕ್ಲಪಕ್ಷದ ಪಾಡ್ಯವು ಚಾಂದ್ರಮಾನದಲ್ಲಿ ಮಾಸಾರಂಭ ದಿನವಾಗುವುದು. ಈ ಶುಕ್ಲಪಕ್ಷದ ಪಾಡ್ಯದ ದಿನವೇ ಸಂಕ್ರಮಣವಾಗಿ, ಎರಡು ವಿಧದಿಂದಲೂ ಮಾಸಾರಂಭವಾದ ವರ್ಷಕ್ಕೆ ಸಂವತ್ಸರವೆಂದು ಹೆಸರು. ಆ ಸಂವತ್ಸರದಲ್ಲಿ ಸೌರಮಾನ ರೀತಿಯಿಂದ ಆರುದಿನಗಳು ಹೆಚ್ಚಿ, ಚಾಂದ್ರಮಾನರೀತಿಯಿಂದ ಆರುದಿನಗಳು ತಗ್ಗುವುವು. ಹೀಗೆ ಐದುವರ್ಷಗಳು ಕಳೆದರೆ ನಡುವೆ ಎರಡು ಅಧಿಕಮಾಸಗಳು ಬಂದು, ಆ ದಿನಸಂಖ್ಯೆಯನ್ನು ಸರಿಮಾಡುವುವು. ಈ ಐದು ಸಂವತ್ಸರಗಳೇ ಕ್ರಮವಾಗಿ, ಅವಾಂತರಭೇದದಿಂದ, ಸಂವತ್ಸರ ಪರಿವತ್ಸರಾದಿ ನಾಮಗಳಿಂದ ಕರೆಯಲ್ಪಡುವುವು. ತಿರುಗಿ ಆರನೆಯ ವರ್ಷವು ಕ್ರಮವಾಗಿ ಒಂದೇ ದಿನದಲ್ಲಿ ತೊಡಗುವುದರಿಂದ ಅದು ಸಂವತ್ಸರವೆನಿಸುವುದು.

ದಾಟಿಬಿಡುವನು ಸೂರ್ಯನು ಒಂದು ಪಕ್ಷದಲ್ಲಿ ಸಂಚರಿಸುವ ದಾರಿಯನ್ನು ಚಂದ್ರನು ಒಂದು ಹಗಲಲ್ಲಿ ದಾಟುವನು. ಮತ್ತು ಎಲೈ ಪರೀಕ್ಷಿದ್ರಾಜನೆ! ಚಂದ್ರನು ಆಗಾಗ ಹೆಚ್ಚುತ್ತಲೂ, ಕುಂದುತ್ತಲೂ ಇರುವ ಕಳೆಗಳಿಂದ, ಪಿತೃದೇವತೆಗಳಿಗೆ ಅಹೋರಾತ್ರರೂಪವಾದ ಶುಕ್ಲಕೃಷ್ಣಪಕ್ಷಗಳನ್ನು ಮಾಡುತ್ತಿರುವನು. ಮತ್ತು ಸಮಸ್ತಜೀವರಾಶಿಗಳ ಪ್ರಾಣಗಳಿಗೂ ತೃಪ್ತಿಯನ್ನುಂಟುಮಾಡುತ್ತ, ಮೂವತ್ತು ಮುಹೂರ್ತಗಳೊಳಗಾಗಿ ಒಂದೊಂದು ನಕ್ಷತ್ರವನ್ನು ದಾಟುವನು. ಷೋಡಶಕಳೆಗಳಿಂದ ಕೂಡಿದ ಚಂದ್ರರೂಪಿಯಾದ ಭಗವಂತನು, ಮನಸ್ಸಿಗೆ ಅಧಿಷ್ಠಾನದೇವತೆಯಾದುದರಿಂದ, ಮನೋಮಯನೆಂದೂ, ಸರ್ವೌಷಧಿಗಳಿಗೂ ಪ್ರಭುವಾದುದರಿಂದ ಅನ್ನಮಯನೆಂದೂ, ಸಮಸ್ತಪ್ರಾಣಿಗಳ ಜೀವನಕ್ಕೂ ಕಾರಣವಾದುದರಿಂದ ಅಮೃತಮಯನೆಂದೂ, ದೇವತೆಗಳು, ಪಿತೃಗಳು, ಪಶುಪಕ್ಷಿ, ಮೃಗಾದಿಗಳು, ಮುಂತಾದ ಸಮಸ್ತಭೂತಗಳ ಪ್ರಾಣಗಳಿಗೂ ತೃಪ್ತಿಕರನಾದುದರಿಂದ ಸರ್ವಮಯನೆಂದೂ ಕೀರ್ತಿಸಲ್ಪಡುವನು. ಆ ಚಂದ್ರಮಂಡಲದಿಂದ ಮೂರುಲಕ್ಷಯೋಜನಗಳಿಗೆ ಮೇಲೆ, ಅಭಿಜಿತ್ತೆಂಬ ನಕ್ಷತ್ರದೊಡಗೂಡಿದ ಇಪ್ಪತ್ತೆಂಟು ನಕ್ಷತ್ರಗಳು, ಭಗವನ್ನಿಯಮದಿಂದ ಮೇರುವನ್ನು ಪ್ರದಕ್ಷಿಣವಾಗಿ ಸುತ್ತುತ್ತಿರುವುವು. ಈ ನಕ್ಷತ್ರಗಳಿಗೆ ಕಾಲಚಕ್ರದೊಡನೆ ಸುತ್ತುತ್ತಿರುವುದೊಂದುಹೊರತು ಸೂರ್ಯಾದಿಗಳಂತೆ ಬೇರೆ ವಿಧವಾಗಿ ಗತಿಯಿಲ್ಲವು. ಈ ನಕ್ಷತ್ರಮಂಡಲದಿಂದ ಎರಡುಲಕ್ಷಯೋಜನಗಗಳಿಗೆಮೇಲೆ ಶುಕ್ರನಿರುವನು. ಇವನು ಸೂರ್ಯನಿಗೆ ಹಿಂದೆಯೂ, ಮುಂದೆಯೂ ಸಮವಾಗಿಯೂ ಸಂಚರಿಸುವನು. ಇವನು ಸೂರ್ಯನೊಡನೆ ಸಂಚರಿಸುವ ಕಾಲದಲ್ಲಿ, ಅವನಂತೆಯೇ ಮಂದಗತಿ, ಶೀಘ್ರಗತಿ, ಸಮಗತಿಗಳೆಂಬ ಮೂರು ಬಗೆಯ ಗತಿಗಳಿಂದ ಹೋಗುವನು. ಇವನು ಯಾವಾಗಲೂ ಲೋಕಕ್ಕೆ ಅನುಕೂಲನಾಗಿಯೇ ಇರುವನು. ಈ ಶುಕ್ರನು ಆಯಾ ನಕ್ಷತ್ರಗಳನ್ನು ದಾಟಿ ಹೋಗುವ ಕ್ರಮದಿಂದಲೇ, ಪ್ರಜೆಗಳು ಪ್ರಾಯಕವಾಗಿ ಮಳೆಯನ್ನು ಊಹಿಸಿ ತಿಳಿಯುವರು. ಈ ಶುಕ್ರನು ಮಳೆಗೆ ಪ್ರತಿಬಂಧಕಗಳಾದ ಗ್ರಹಗಳನ್ನು ತಡೆದು, ಮಳೆಯುಂಟಾಗುವಂತೆ ಮಾಡುವ

ಸ್ವಭಾವವುಳ್ಳವನು. ರಾಜೇಂದ್ರಾ! ಈ ಶುಕ್ರಗತಿಯನ್ನು ಹೇಳಿದುದರಿಂ
ದ ಬುಧಗತಿಯನ್ನೂ ಹೇಳಿದಂತೆಯೇ ತಿಳಿ! ಈ ಬುಧನು ಶುಕ್ರನಿಂದಾಚೆ
ಗೆ ಎರಡುಲಕ್ಷ ಯೋಜನಗಳಮೇಲೆ ಕಾಣುತ್ತಿರುವನು. ಇವನು ಪ್ರಾಯ
ಕವಾಗಿ ಲೋಕಕ್ಕೆ ಅಶ್ರೇಯಸ್ಸನ್ನೇ ಸೂಚಿಸತಕ್ಕವನು. ಈತನು ಸೂ
ರ್ಯನನ್ನಗಲಿ ಬೇರೆಯಾಗಿ ಹೋದಾಗ, ಅತಿವೃಷ್ಟಿ, ಅನಾವೃಷ್ಟಿ, ಬಿರು
ಗಾಳಿ, ಮುಂತಾದ ಅನರ್ಥಗಳಿಗೆ ಕಾರಣವಾಗುವುದೆಂದು ಹಿರಿಯರು ಹೇಳಿ
ರುವರು. ಈ ಬುಧಗ್ರಹದಿಂದ ಎರಡುಲಕ್ಷಯೋಜನಗಳಿಗೆಮೇಲೆ ಅಂಗಾ
ರಕಗ್ರಹವು ಕಾಣುವುದು. ಈ ಅಂಗಾರಕನು ಮೂರುಮೂರುಪಕ್ಷಗಳಿಗೆ
ಒಂದೊಂದು ರಾಶಿಯನ್ನು ದಾಟಿ ಹೋಗುತ್ತಿರುವನು. ಇದುಸಹಜವಾಗಿ
ಅಶುಭಗ್ರಹವಾಗಿದ್ದರೂ, ವಕ್ರಗತಿಯಿಲ್ಲದಿದ್ದಾಗ ಲೋಕಕ್ಕೆ ಕ್ಷೇಮವನ್ನೇ
ಮಾಡುವುದು. ವಕ್ರಗತಿಯಲ್ಲಿದ್ದಾಗ ಹಾನಿಯನ್ನುಂಟುಮಾಡುವುದು.
ಅಂಗಾರಕಗ್ರಹದಿಂದ ಎರಡುಲಕ್ಷಯೋಜನಗಳಿಗೆಮೇಲೆ ಬೃಹಸ್ಪತಿಯಿ
ರುವನು. ಇವನು ಒಂದೊಂದು ರಾಶಿಯಲ್ಲಿ ಒಂದೊಂದು ಸಂವತ್ಸರಕಾಲ
ವಿರುವನು. ಇವನು ವಕ್ರಚಾರಿಯಲ್ಲದ ಕಾಲದಲ್ಲಿ ಬ್ರಾಹ್ಮಣರಿಗೆ ಕ್ಷೇಮವ
ನ್ನುಂಟುಮಾಡುವನು. ಈ ಗ್ರಹದಿಂದ ಎರಡುಲಕ್ಷಯೋಜನಗಳಿಗೆ ಮೇಲೆ
ಶನೈಶ್ಚರನು ಕಾಣುವನು. ಈತನು ಒಂದೊಂದು ರಾಶಿಯಲ್ಲಿ ಮೂವತ್ತು
ತಿಂಗಳು ನಿಲ್ಲುತ್ತ, ಕ್ರಮವಾಗಿ ಎಲ್ಲಾ ರಾಶಿಗಳನ್ನೂ ಸುತ್ತಿಬರುವನು.
ಇವನು ಪ್ರಾಣಿಗಳ ಜನ್ಮರಾಶಿಯಲ್ಲಿಯಾಗಲಿ, ಅದರ ಹಿಂದುಮುಂದಿನರಾಶಿ
ಗಳಲ್ಲಿಯಾಗಲಿ ಸಂಚರಿಸುವಾಗ, ಅವರಿಗೆ ಹಾನಿಯನ್ನುಂಟುಮಾಡುವನು.
ಈ ಏಳುವರೆವರುಷಗಳಲ್ಲಿ ಶನಿಪೀಡೆಯು ಅವರನ್ನು ಬಹಳವಾಗಿ ಬಾಧಿಸು
ತ್ತಿರುವುದು. ಈ ಶನಿಮಂಡಲಕ್ಕೆಮೇಲೆ ಹನ್ನೊಂದುಲಕ್ಷಯೋಜನಗಳ
ದೂರದಲ್ಲಿ ಸಪ್ತರ್ಷಿಮಂಡಲವುಂಟು. ಈಸಪ್ತರ್ಷಿಗಳೂ ಲೋಕಕ್ಷೇಮ
ವನ್ನುಂಟುಮಾಡುವುದಕ್ಕಾಗಿ, ವಿಷ್ಣುಸ್ಥಾನವೆಂದು ಕರೆಯಲ್ಪಡುವ ಧ್ರುವ
ಮಂಡಲವನ್ನು ಪ್ರದಕ್ಷಿಣವಾಗಿ ಸುತ್ತುತ್ತಿರುವರು. ಇಲ್ಲಿಗೆ ಇಪ್ಪತ್ತೆರಡ
ನೆಯ ಅಧ್ಯಾಯವು.

---

### ಧ್ರುವಮಂಡಲದ ಸ್ವರೂಪವು. ಶಿಂಶುಮಾರಚಕ್ರದ ವಿವರಣವು.

ರಾಜೇಂದ್ರಾ, ಕೇಳು "ಆ ಸಪ್ತರ್ಷಿಮಂಡಲಕ್ಕೆಮೇಲೆ, ಹದಿಮೂರುಲಕ್ಷಯೋಜನಗಳ ದೂರದಲ್ಲಿ ಧ್ರುವಮಂಡಲವುಂಟು. ಅದನ್ನೇ ಶ್ರೀಮಹಾವಿಷ್ಣುವಿನ ಸ್ಥಾನವೆಂದು ಹೇಳುವರು. ಉತ್ತಾನಪಾದನ ಪುತ್ರನಾದ ಮಹಾತ್ಮನಾದ ಧ್ರುವನು ಆ ಸ್ಥಾನದಲ್ಲಿರುವನು. ಇಂದ್ರಾಗ್ನಿಗಳೂ, ಕಶ್ಯಪ ಪ್ರಜಾಪತಿಯೂ, ಯಮನೂ ಆ ಧ್ರುವನನ್ನು ಗೌರವಪೂರ್ವಕವಾಗಿ ಪ್ರದಕ್ಷಿಣೆಮಾಡುತ್ತಿರುವರು. ಈಗಲೂ ಆ ಧ್ರುವನು ಕಲ್ಪಾಂತದವರೆಗೆ ಜೀವಿಸುವ ಪ್ರಜೆಗಳೆಲ್ಲರಿಗೂ ಆಶ್ರಯನಾಗಿರುವನು. ಇವನ ಚರಿತ್ರೆಗಳೆಲ್ಲವನ್ನೂ ನಾನು ಮೊದಲೇ ತಿಳಿಸಿರುವೆನಷ್ಟೆ? ಯಾರಿಗೂ ತಿಳಿಯದ ವೇಗದಿಂದ, ಯಾವಾಗಲೂ ಎಚ್ಚರತಪ್ಪದೆ ಓಡುತ್ತಿರುವ ಕಾಲಚಕ್ರವೆಂಬುದು, ಭಗವಂತನ ಸ್ವರೂಪವಲ್ಲದೆ ಬೇರೆಯಲ್ಲ. ಈ ಕಾಲಚಕ್ರದಿಂದ ಸುತ್ತಿಸಲ್ಪಡುವ ಅಶ್ವಿನಿ ಮೊದಲಾದ ತಾರೆಗಳಿಗೂ, ಸೂರ್ಯಾದಿಗ್ರಹಗಳಿಗೂ, ಇತರನಕ್ಷತ್ರಗಳಿಗೂ, ಈ ಧ್ರುವನು ಮೇಟಿಯಮರದಂತೆ ಆಧಾರವಾಗಿ ನಿಲ್ಲಿಸಲ್ಪಟ್ಟು, ಈಶ್ವರಾಜ್ಞೆಯಿಂದ ಅನವರತವೂ ಬೆಳಗುತ್ತಿರುವನು. ಕಳಗಳಲ್ಲಿ ಧಾನ್ಯದ ತೆನೆಗಳನ್ನು ತುಳಿಸುವುದಕ್ಕಾಗಿ, ಮಧ್ಯದ ಕಂಬಕ್ಕೆ ಮುಪ್ಪುರಿಯ ಹಗ್ಗಗಳಿಂದ ಬಿಗಿದ ಎತ್ತುಗಳು, ತಮ್ಮ ಹದ್ದನ್ನು ಬಿಟ್ಟು ಕದಲದೆ, ವಲಯಾಕಾರವಾಗಿ, ಸುತ್ತುತ್ತಿರುವುವಲ್ಲವೆ? ಅದರಂತೆಯೇ ಗ್ರಹನಕ್ಷತ್ರಾದಿಗಳೆಲ್ಲವೂ ಕಾಲಚಕ್ರದ ಒಳಗೂ, ಹೊರಗೂ ವಾಯುಪಾಶದಿಂದ ಕಟ್ಟಲ್ಪಟ್ಟು, ಈ ಧ್ರುವನನ್ನೇ ಆಧಾರಸ್ತಂಭವಾಗಿಟ್ಟುಕೊಂಡು ಕಲ್ಪಾಂತದವರೆಗೆ. ಸುತ್ತುತ್ತಿರುವುವು. ಮತ್ತು ಮೇಘಗಳೂ, ಹದ್ದು, ಗಿಡುಗ, ಮೊದಲಾದ ಪಕ್ಷಿಗಳೂ, ವಾಯುವೇಗಕ್ಕೆ ವಶವಾಗಿ ತಮ್ಮ ಕರ್ಮಬಲದಿಂದ ಆಕಾಶದಲ್ಲಿ ಸಂಚರಿಸುವಂತೆ, ಈ ನಕ್ಷತ್ರಗಳೆಂಬ ಜೀವಗಳೂಕೂಡ ಕರ್ಮಮೂಲಕವಾಗಿ ನಕ್ಷತ್ರಶರೀರವೆಂಬ ಈ ಪ್ರಕೃತಿಯ ಸಂಬಂಧವನ್ನು ಹೊಂದಿ, ಆ ಕರ್ಮಬಲದಿಂದಲೇ ಕೆಳಗೆ ಬೀಳದಂತೆ ಆಕಾಶಗಾಮಿಗಳಾಗಿ ಅಲ್ಲಿಯೇ, ಸಂಚರಿಸುತ್ತಿರುವುವು. ಹೀಗೆ ಗ್ರ

ಹನಕ್ಷತ್ರಗಳಿಗೆಲ್ಲಾ ಆಧಾರವಾದ ಶಿಂಶುಮಾರವೆಂಬ ಕಾಲಚಕ್ರವನ್ನು ಸಮಸ್ತಲೋಕಧಾರಕನಾದ ವಾಸುದೇವನ ಸ್ವರೂಪದಿಂದಲೇ ಧ್ಯಾನಿಸಬೇಕೆಂದು ವೇದಗಳು ನಿರೂಪಿಸುವುವು. ಈಶಿಂಶುಮಾರಚಕ್ರವು ಭಗವತ್ಸ್ವರೂಪದಿಂದ ಸಮಸ್ತಜ್ಯೋತಿರ್ಮಂಡಲಗಳಿಗೂ ಆಧಾರವೆಂಬುದನ್ನು, ಅನೇಕಯೋಗಿಗಳು ಯೋಗಧಾರಣೆಯಿಂದ ತಿಳಿದುಕೊಳ್ಳುತ್ತಿರುವರು. ಶಿಂಶುಮಾರಚಕ್ರರೂಪಿಯಾದ ಈ ಭಗವಂತನು,ಬಲಮುರಿಶಂಖದಂತೆ ತನ್ನ ದೇಹವನ್ನು ಬಲಮುಖವಾಗಿ ಸುಳಿಸುತ್ತ, ತಲೆಯನ್ನು ಕೆಳಗಿಟ್ಟು, ಬಾಲವನ್ನು ಮೇಲೆ ಮಾಡಿ ಮಲಗಿದ ಸರ್ಪದಂತಿರುವನು. ಅವನ ಬಾಲದ ತುದಿಯಲ್ಲಿ ಧ್ರುವನೂ, ಅದಕ್ಕೆ ಸ್ವಲ್ಪ ಕೆಳಭಾಗದಲ್ಲಿ ಕಶ್ಯಪಪ್ರಜಾಪತಿಯೂ, ಅವನಿಂದ ಕೆಳಕೆಳಗೆ ಕ್ರಮವಾಗಿ, ಅಗ್ನಿ, ಇಂದ್ರ, ಧರ್ಮದೇವತೆಗಳೂ, ಬಾಲದ ಬುಡದಲ್ಲಿ ಧಾತೃವಿಧಾತೃಗಳೂ, ಕಟಿ ಭಾಗದಲ್ಲಿ (ಸೊಂಟ) ಸಪ್ತರ್ಷಿಗಳೂ ಇರುವುದಾಗಿ ಯೋಗಿಗಳು ತಮ್ಮ ಯೋಗದೃಷ್ಟಿಯಿಂದ ನಿರ್ಧರಿಸಿರುವರು. ಹೀಗೆ ದೇಹವನ್ನು ಸುತ್ತಿ ಮಲಗಿದ ಸರ್ಪದೇಹದಂತಿರುವ ಆ ಶಿಂಶುಮಾರಚಕ್ರದ ಬಲಭಾಗದಲ್ಲಿ, ಉತ್ತರಾಯಣನಕ್ಷತ್ರಗಳೆನಿಸಿದ ಹದಿನಾಲ್ಕು ನಕ್ಷತ್ರಗಳಿರುವುವು. (ಅಭಿಜಿನ್ನಕ್ಷತ್ರವೂ ಸೇರಿ ಶ್ರವಣ ಮೊದಲಾಗಿ ಪುನರ್ವಸುವರೆಗಿನ ಹದಿನಾಲ್ಕು ನಕ್ಷತ್ರಗಳು ಉತ್ತರಾಯಣ ನಕ್ಷತ್ರಗಳೆನಿಸುವುವು.) ಆ ಚಕ್ರದ ಎಡಪಕ್ಕದಲ್ಲಿ, ಪುಷ್ಯ ಮೊದಲಾಗಿ ಉತ್ತರಾಷಾಢದವರೆಗೆ ಹದಿನಾಲ್ಕು ನಕ್ಷತ್ರಗಳುಂಟು. ಇವು ದಕ್ಷಿಣಾಯನ ನಕ್ಷತ್ರಗಳು. ಇದರಿಂದ ಉಭಯಪಾರ್ಶ್ವಗಳಲ್ಲಿಯೂ ಸಮವಾಗಿ ದ್ವಂದ್ವಾವಯವಗಳೇರ್ಪಡುವುವು. ಆ ಶಿಂಶುಮಾರದ ಬೆನ್ನಿನಮೇಲೆ ಅಜವೀಥಿಯೆಂಬ ಮಾರ್ಗವುಂಟು. ಅಜವೀಥಿಯೆಂದರೆ, ಸೂರ್ಯನು ಶೀಘ್ರಗತಿಯಿಂದ ಹೋಗುವ ದಕ್ಷಿಣಾಯನವೆಂಬ ಮಾರ್ಗವಿಶೇಷವು. ಉದರಭಾಗದಲ್ಲಿ ಆಕಾಶಗಂಗೆಯಿರುವುದು. ಅದರ ಉಭಯಪಾರ್ಶ್ವಗಳಲ್ಲಿ ದ್ವಂದ್ವಾವಯವಗಳಂತೆ ಏರ್ಪಟ್ಟಿರುವ ಇಪ್ಪತ್ತೆಂಟು ನಕ್ಷತ್ರಗಳಲ್ಲಿ, ಪುನರ್ವಸು ಪುಷ್ಯಗಳೆರಡೂ, ಕ್ರಮವಾಗಿ ಬಲಭಾಗದ ಮತ್ತು ಎಡಭಾಗದ ನಿತಂಬಸ್ಥಾನಗಳಲ್ಲಿರುವುವು. ಹಾಗೆಯೇ ಆರ್ದ್ರೆ ಮತ್ತು ಆ

ಶ್ಲೇಷೆಯೆಂಬಿವು, ಬಲದ ಮತ್ತು ಎಡದ ಪಾದಗಳಲ್ಲಿಯೂ, ಅಭಿಜಿತ್ತು ಉತ್ತರಾಷಾಢಗಳೆಂಬಿವೆರಡೂ ನಾಸಿಕೆಗಳಲ್ಲಿಯೂ,ಶ್ರವಣಪೂರ್ವಾಷಾಢಗಳು ಕಣ್ಣುಗಳ ಸ್ಥಾನದಲ್ಲಿಯೂ, ಧನಿಷ್ಠಾಮೂಲಗಳು ಕಿವಿಗಳ ಸ್ಥಾನದಲ್ಲಿಯೂ, ಮಖ ಮೊದಲಾದ ದಕ್ಷಿಣಾಯನನಕ್ಷತ್ರಗಳೆಂಟೂ ಎಡಭಾಗದ ಮುಖಗಳಲ್ಲಿಯೂ, ಮೃಗಶೀರ್ಷವೇ ಮೊದಲಾದ ಉತ್ತರಾಯಣನಕ್ಷತ್ರಗಳೆಂಟೂ ಬಲಭಾಗದ ಮುಖಗಳಲ್ಲಿಯೂ, ಶತಭಿಷಕ್ಕು, ಜ್ಯೇಷ್ಠೆ, ಈ ನಕ್ಷತ್ರಗಳೆರಡೂ ಕ್ರಮವಾಗಿ ದಕ್ಷಿಣವಾಮಭುಜಗಳಲ್ಲಿಯೂ ಇರುವುದಾಗಿ ಯೋಗಿಗಳು ಅನುಸಂಧಾನಮಾಡುವರು. ಮತ್ತು ಮೇಲಿನ ಮತ್ತು ಕೆಳಗಿನ ದವಡೆಗಳಲ್ಲಿ ಕ್ರಮವಾಗಿ ಅಗಸ್ತ್ಯಯಮರೂ,ಮುಖದಲ್ಲಿ ಅಂಗಾರಕನೂ, ಉಪಸ್ಥದಲ್ಲಿ ಶನಿಯೂ, ಹಿರಳಿನಲ್ಲಿ (ಕಂಠದ ಹಿಂಭಾಗ) ಬೃಹಸ್ಪತಿಯೂ, ಎದೆಯಲ್ಲಿ ಸೂರ್ಯನೂ,ಹೃದಯದಲ್ಲಿ ನಾರಾಯಣನೂ, ಮನಸ್ಸಿನಲ್ಲಿ ಚಂದ್ರನೂ, ಹೊಕ್ಕುಳಲ್ಲಿ ಶುಕ್ರನೂ, ಸ್ತನಗಳಲ್ಲಿ ಅಶ್ವಿನೀದೇವತೆಗಳಿಬ್ಬರೂ,ಪ್ರಾಣಾಪಾನಗಳಲ್ಲಿ ಬುಧನೂಕಂಠದಲ್ಲಿ ರಾಹುವೂ ಸರ್ವಾಂಗಗಳಲ್ಲಿಯೂ, ಕೇತುವೆಂಬ ನಕ್ಷತ್ರಸಮೂಹಗಳೂ ಇತರನಕ್ಷತ್ರಗಳೆಲ್ಲವೂ ರೋಮಕೂಪಗಳಲ್ಲಿಯೂ ಇರುವಂತೆ ಧ್ಯಾನಿಸುವರು. ರಾಜಾ ! ಇದೇ ಸರ್ವದೇವತಾಮಯವಾದ ಶಿಂಶುಮಾರಚಕ್ರವೆಂಬ ಭಗವಂತನ ಸ್ವರೂಪವು. ಈ ಸ್ವರೂಪವನ್ನು ಪ್ರತಿದಿನವೂ ತ್ರಿಸಂಧ್ಯಾ ಕಾಲಗಳಲ್ಲಿ, ಸಾವಧಾನಚಿತ್ತರಾಗಿ ಮೌನದಿಂದ ಧ್ಯಾನವಿಷಯವಾಗಿ ಮಾಡಿಕೊಂಡು ನೋಡುತ್ತ, ಈ ಕೆಳಗಿನ ಮಂತ್ರಗಳಿಂದ ಸ್ತುತಿಸಬೇಕು. 'ಜ್ಯೋತಿರ್ಮಂಡಲ ಸ್ವರೂಪನಾಗಿಯೂ, ಕಾಲಕ್ಕೆ ಆಧಾರಭೂತನಾಗಿಯೂ, ಬ್ರಹ್ಮಾದಿದೇವತೆಗಳಿಗೂ ಪ್ರಭುವಾಗಿಯೂ, ಇರುವ ಶಿಂಶುಮಾರ ಸ್ವರೂಪನಾದ ಪರಮಪುರುಷನಿಗೆ ನಮಸ್ಕಾರವು" ಎಂಬುದೇ ಆ ಮಂತ್ರಾರ್ಥವು. ರಾಜೇಂದ್ರಾ! ಸಕಲಗ್ರಹ ನಕ್ಷತ್ರ ತಾರಾಮಯವಾಗಿಯೂ, ಪಾಪನಿವಾರಕವಾಗಿಯೂ, ಸಮಸ್ತದೇವತೆಗಳಿಗೂ ಪ್ರಧಾನವಾಗಿಯೂ, ಭಗವಂತನ ಸ್ವರೂಪವಾಗಿಯೂ ಇರುವ ಈ ಶಿಂಶುಮಾರವೆಂಬ ಕಾಲಚಕ್ರವನ್ನು ತ್ರಿಸಂಧ್ಯಾಕಾಲಗಳಲ್ಲಿಯೂ ನಮಸ್ಕರಿಸಿದರೂ, ಸ್ಮರಿಸಿದ

ರೂ, ಮಂತ್ರಜಪದಿಂದ ಸ್ತುತಿಸಿದರೂ ಹಿಂದುಮುಂದಿನ ಪಾಪಗಳೆಲ್ಲವೂ ನಶಿಸುವುವು. ಇಪ್ಪತ್ತುಮೂರನೆಯ ಅಧ್ಯಾಯವು.

---

ಸೂರ್ಯನ ಕೆಳಗಿರುವ ರಾಹು ಮೊದಲಾದ ಗ್ರಹಗಳ ಗತಿಯನ್ನೂ, ಭೂಮಿಯ ಕೆಳಗಿನ ಅತಲಾದಿ ಲೋಕಗಳ ಸ್ಥಿತಿಯನ್ನೂ ವಿವರಿಸುವುದು

ರಾಜಾ ! ಸೂರ್ಯನಕೆಳಗೆ, ಹತ್ತು ಸಾವಿರಯೋಜನಗಳ ದೂರದಲ್ಲಿ ಸಿಂಹಿಕೆಯ ಮಗನಾದ ರಾಹುವು ನಕ್ಷತ್ರರೂಪದಿಂದಿರುವನೆಂದು ಕೆಲವು ತತ್ವಜ್ಞರು ನಿರ್ಣಯಿಸಿರುವರು. ಇವನು ಪಾಪಬುದ್ಧಿಯುಳ್ಳ ಅಸುರರಲ್ಲಿಯೂ ಪರಮನೀಚನೆನಿಸಿಕೊಂಡವನು. ಹೀಗೆ ಅಯೋಗ್ಯನಾಗಿದ್ದರೂ ಇವನು, ಭಗವಂತನ ಅನುಗ್ರಹದಿಂದ ದೇವತ್ವವನ್ನೂ, ನವಗ್ರಹಗಳಲ್ಲಿ ಒಂದು ಸ್ಥಾನವನ್ನೂ ಪಡೆದನು. ಇವನು ಹುಟ್ಟಿಬೆಳೆದುದು ಮೊದಲಾದ ಚರಿತ್ರಗಳನ್ನೆಲ್ಲಾ ಮುಂದೆ ವಿವರವಾಗಿ ತಿಳಿಸುವೆನು. ಈಗ ನಮಗೆ ಕಾಣುತ್ತಿರುವ ಸೂರ್ಯಮಂಡಲದ ಅಡಿನೆತ್ತಿಯು ಹತ್ತುಸಾವಿರಯೋಜನಗಳ ವಿಸ್ತಾರವುಳ್ಳುದೆಂದು ಹಿರಿಯರು ನಿರ್ಣಯಿಸಿರುವರು. ಹಾಗೆಯೇ ಚಂದ್ರಮಂಡಲವು ಹನ್ನೆರಡುಸಾವಿರಯೋಜನಗಳ ವಿಸ್ತಾರವುಳ್ಳುದೆಂದೂ, ರಾಹುಮಂಡಲವು ಹದಿಮೂರುಸಾವಿರಯೋಜನಗಳ ವಿಸ್ತಾರವುಳ್ಳುದೆಂದೂ ಹೇಳುವರು. ಹಿಂದೆ ಸಮುದ್ರಮಥನವಾದಮೇಲೆ ಭಗವಂತನು ಅಮೃತವನ್ನು ಹಂಚಿಕೊಡುವಾಗ, ಈ ರಾಹುವು ಚಂದ್ರಸೂರ್ಯರನಡುವೆ ಅವಿತುಕೊಂಡು, ತಾನೂ ಅಮೃತವನ್ನು ಕುಡಿಯುವುದಕ್ಕೆ ಯತ್ನಿಸಿದನು. ಆಗ ಚಂದ್ರಸೂರ್ಯರು ಈ ರಹಸ್ಯವನ್ನು ಹೊರಪಡಿಸಿದರು ಇದಕ್ಕಾಗಿ ರಾಹುವು ಚಂದ್ರಸೂರ್ಯರಮೇಲೆ ವೈರವನ್ನಿಟ್ಟು, ಒಮ್ಮೊಮ್ಮೆ ಪರ್ವಕಾಲದಲ್ಲಿ ಸೂರ್ಯಚಂದ್ರರಿಗುಂಟಾಗಬಹುದಾದ ಅಪಾಯವನ್ನು ತಪ್ಪಿಸುವುದಕ್ಕಾಗಿ ಭಗವಂತನು, ತನಗೆ ಅತ್ಯಂತಪ್ರಿಯವಾಗಿಯೂ,ದುಸ್ಸಹವಾದ ತೇಜಸ್ಸುಳ್ಳುದಾಗಿಯೂ ಇರುವ ಸುದರ್ಶನಚಕ್ರವನ್ನು ಪ್ರಯೋಗಿಸಿ, ಈ ರಾಹುವನ್ನು ತಡೆ

ಯುವನು. ಈ ಚಕ್ರಜ್ವಾಲೆಯನ್ನು ಸಹಿಸಲಾರದೆ ರಾಹುವು ಮುಹೂರ್ತ ಕಾಲದವರೆಗೆ, ಹಾಗೆಯೇ ಅದರಮುಂದೆ ಸ್ತಬ್ಧನಾಗಿ ನಿಂತಿದ್ದು, ಆಮೇಲೆ ಭಯದಿಂದ ಹಿಂಜರಿದು ಓಡಿಹೋಗುವನು. ಇವನು ಭಯಾತುರನಾಗಿ ಓಡುವಾಗ, ಅವನ ಬಿಂಬದ ನೆರಳು ಸೂರ್ಯಚಂದ್ರಮಂಡಲಗಳಮೇಲೆ ಬಿದ್ದು ಅವುಗಳನ್ನು ಮರೆಸುವುದು. ಅವನು ನೆಟ್ಟಗೆ ಓಡಿಹೋಗುವಾಗ ಬಿಂಬವು ಪೂರ್ಣವಾಗಿ ಮರೆಸಿಹೋಗುವುದುಂಟು. ಇವನು ವಕ್ರವಾಗಿ ಓಡುವಾಗ ಅದರಲ್ಲಿ ಸ್ವಲ್ಪಭಾಗವು ಕಾಣುವುದೂ ಉಂಟು. ಇದನ್ನೇ ಜನರು ಗ್ರಹಣವೆಂದು ಹೇಳುವರು. ಈ ರಾಹುಮಂಡಲದ ಕೆಳಗೆ ಹತ್ತು ಸಾವಿರಯೋಜನಗಳ ದೂರದಲ್ಲಿ ಸಿದ್ಧಚಾರಣವಿದ್ಯಾಧರರ ನಿವಾಸ ಸ್ಥಾನ ಗಳುಂಟು. ಇವುಗಳ ಕೆಳಗೆ ಭೂತಪ್ರೇತಪಿಶಾಚಗಳಿಗೂ, ಯಕ್ಷರಿಗೂ ವಿಹಾರಸ್ಥಾನವಾದ ಅಂತರಿಕ್ಷಲೋಕವಿರುವುದು. ಎಲ್ಲಿಯವರೆಗೆ ಗಾಳಿಯು ವೇಗವಾಗಿ ಬೀಸುತ್ತಿರುವುದೋ, ಎಲ್ಲಿಯವರೆಗೆ ಮೇಘಗಳು ಕಣ್ಣಿಗೆ ಕಾಣುವುವೋ, ಅಲ್ಲಿಯವರೆಗೆ ಅಂತರಿಕ್ಷಲೋಕವೆನಿಸುವುದು. ಈ ಅಂತ ರಿಕ್ಷದಿಂದ ನೂರುಯೋಜನಗಳ ಕೆಳಗೆ ಈ ಭೂಮಂಡಲ ವಿರುವುದು. ಹಂಸಗಳು, ಭಾಸಪಕ್ಷಿಗಳು, ಹದ್ದುಗಳು, ಗರುಡಪಕ್ಷಿ ಮೊದಲಾದ ಪ್ರಬಲಪಕ್ಷಿಗಳು, ತಮ್ಮ ಶಕ್ತಿಯಿಂದ ಎಷ್ಟು ಎತ್ತರಕ್ಕೆ ಹಾರಬಲ್ಲುವೋ, ಅಲ್ಲಿಯವರೆಗೂ ಭೂಲೋಕವೆಂದೇ ಕರೆಯಲ್ಪಡುವುದು. ಈ ಭೂಮಂಡ ಲದ ಲಕ್ಷಣಪರಿಮಾಣಾದಿಗಳನ್ನು ಇದಕ್ಕೆ ಮೊದಲೇ ಹೇಳಿರುವೆನಷ್ಟೆ? ಈ ಭೂಮಂಡಲದ ಕೆಳಗೆ ಭೂಮಿಯಲ್ಲಿ ಏಳುಬಿಲಗಳುಂಟು. ಈ ಒಂ ದೊಂದುಬಿಲವೂ ಹತ್ತುಸಾವಿರಯೋಜನಗಳ ವಿಸ್ತಾರವುಳ್ಳುದಾಗಿ ಅಷ್ಟೇ ಎತ್ತರದಿಂದಿರುವುದು. ಇವುಗಳೊಳಗಿನ ಭೋಗಾನುಭವದಲ್ಲಿಯೂ ಪರ ಸ್ಪರ ತಾರತಮ್ಯವುಂಟು. ಕ್ರಮವಾಗಿ ಮೇಲಿನಿಂದ ಕೆಳಕೆಳಗೆ ಕಾಣುವ ಈ ಲೋಕಗಳಿಗೆ, ಅತಲ, ವಿತಲ, ಸುತಲ, ರಸಾತಲ, ತಲಾತಲ, ಮಹಾ ತಲ ಪಾತಾಳಗಳೆಂದು ಹೆಸರು. ಇವುಗಳನ್ನು ಬಿಲಸ್ವರ್ಗಗಳೆಂದು ಕರೆ ಯುವರು. ಇಲ್ಲಿ ಸ್ವರ್ಗಕ್ಕಿಂತಲೂ ಮೇಲಾದ ಕಾಮಭೋಗಗಳಿಂದಲೂ, ಐಶ್ವರ್ಯಗಳಿಂದಲೂ,ಆನಂದದಿಂದಲೂ, ಸಂಪತ್ಸಮೃದ್ಧಿಯಿಂದಲೂ, ಪರಿ

ವಾರಸಮೃದ್ಧಿಯಿಂದಲೂ ತುಂಬಿದ ನಿವಾಸಸ್ಥಾನಗಳೂ, ಉದ್ಯಾನವನಗಳೂ, ಕ್ರೀಡಾಗೃಹಗಳೂ, ಸಂಭೋಗಸ್ಥಾನಗಳೂ ಕಂಗೊಳಿಸುತ್ತಿರುವುವು ದೈತ್ಯರೂ, ದಾನವರೂ, ಕದ್ರುವಿನ ಮಕ್ಕಳಾದ ನಾಗರೂ ಇಲ್ಲಿನ ನಿವಾಸಿಗಳು. ಇವರೆಲ್ಲರೂ ತಮ್ಮಲ್ಲಿ ಸಮಾನಪ್ರೀತಿಯುಳ್ಳ ಹೆಂಡಿರುಮಕ್ಕಳೊಡನೆಯೂ, ಬಂಧುಮಿತ್ರಪರಿವಾರಗಳೊಡನೆಯೂ ಸೇರಿ, ಕುಟುಂಬ ಧರ್ಮದಲ್ಲಿ ನಿತ್ಯಸಂತೋಷಿಗಳಾಗಿರುವರು. ಇವರು ಕುಟುಂಬಿಗಳಾಗಿದ್ದರೂ, ಭಗವಂತನಲ್ಲಿ ಭಕ್ತಿಯನ್ನು ಬಿಡದೆ, ಮಾಯಾಬಲದಿಂದ ವಿನೋದಿಸುತ್ತಿರುವರು. ಈ ಅತಲಾದಿಲೋಕಗಳಲ್ಲಿ ಬಹಳ ಮಾಯಾವಿಯಾದ ಮಯನೆಂಬ ಅಸುರಶಿಲ್ಪಿಯಿಂದ ನಿರ್ಮಿತಗಳಾದ ಅನೇಕಪಟ್ಟಣಗಳುಂಟು. ಈ ಪುರಗಳು ನೋಡುವವರಿಗೆ ಅತ್ಯಾಶ್ಚರ್ಯಕರಗಳಾಗಿ, ನವರತ್ನಖಚಿತಗಳಾದ ಅರಮನೆಗಳಿಂದಲೂ, ಕೋಟೆಗಳಿಂದಲೂ, ಗೋಪುರದೇವಾಲಯಗಳಿಂದಲೂ, ಸಭಾಸ್ಥಾನಗಳಿಂದಲೂ, ಅಂಗಳಗಳಿಂದಲೂ, ಇನ್ನೂ ಬಗೆಬಗೆಯ ಸನ್ನಿವೇಶಗಳಿಂದಲೂ, ನೇತ್ರಾನಂದವನ್ನುಂಟುಮಾಡುವುವು. ಮತ್ತು ಆ ಲೋಕಾಧಿಪತಿಗಳ ಅರಮನೆಗಳಲ್ಲಿ, ಗಿಳಿ, ಕೋಗಿಲೆ, ಪಾರಿವಾಳ, ಮುಂತಾದ ಪಕ್ಷಿಮಿಥುನಗಳ ಮಧುರಧ್ವನಿಯು, ಯಾವಾಗಲೂ ಕರ್ಣಾನಂದಕರವಾಗಿ ಕೇಳಿಸುತ್ತಿರುವುದು. ಅಲ್ಲಿನ ಉದ್ಯಾನಗಳು, ಚಿಗುರು, ಹಣ್ಣು, ಕಾಯಿ ಮುಂತಾದುವುಗಳ ಭಾರದಿಂದ ಬಗ್ಗಿದ ನಾನಾಜಾತಿಯ ವೃಕ್ಷಗಳಿಂದ ತುಂಬಿ, ಸರ್ವೇಂದ್ರಿಯಗಳಿಗೂ ಉಲ್ಲಾಸವನ್ನು ಕೊಡುತ್ತಿರುವುದು. ಈ ಉದ್ಯಾನವನಗಳ ನಡುನಡುವೆ, ರಾಜಸ್ತ್ರೀಯರ ಸಂಚಾರದಿಂದಲೂ, ಹಂಸಸಾರಸಗಳೇ ಮೊದಲಾದ ಜಲಪಕ್ಷಿಗಳ ಕೋಲಾಹಲಧ್ವನಿಯಿಂದಲೂ, ಮೀನುಗಳ ಸಂಚಾರವೇಗದಿಂದ ಅಲುಗುತ್ತಿರುವ ತಾವರೆ ನೈದಿಲೆ ಮೊದಲಾದ ನೀರು ಹೂಗಳಿಂದಲೂ, ಆ ಕಮಲಗಂಧಕ್ಕಾಗಿ ಸುತ್ತಿಸುತ್ತಿಬರುವ ಭ್ರಮರಗಳ ಮಧುರಝೇಂಕಾರದಿಂದಲೂ ಒಪ್ಪುತ್ತಿರುವ ಕಮಲಸರೋವರಗಳುಂಟು. ಈ ಸನ್ನಿವೇಶಗಳಿಂದ ಆಲೋಕಗಳು ಸ್ವರ್ಗದ ಸೊಬಗನ್ನೂ ಮೀರುತ್ತಿರುವುವು.ಅಲ್ಲಿನವರೆಲ್ಲರೂ ಚಿರಾಯುಗವಾದುದರಿಂದ, ಅಹೋರಾತ್ರ ವಿಭಾಗಗಳಿಂದ ಕಳೆದುಹೋಗುವ ಕಾಲಕ್ಕಾಗಿ ಅವರು ಸ್ವಲ್ಪ

ವೂ ಭಯಪಡುವುದಿಲ್ಲ. ಸರ್ಪಶ್ರೇಷ್ಠಗಳ ಫಣಾರತ್ನಕಾಂತಿಯಿಂದ ಅಲ್ಲಿ ಕತ್ತಲೆಯೆಂಬ ಪ್ರಸಕ್ತಿಯೇ ಇರುವುದಿಲ್ಲ. ಆ ಲೋಕವಾಸಿಗಳು, ಯಾವಾಗಲೂ ದಿವ್ಯೌಷಧಿಗಳನ್ನೂ, ದಿವ್ಯರಸಾಯನಗಳನ್ನೂ, ದಿವ್ಯಾನ್ನಗಳನ್ನೂ, ದಿವ್ಯಪಾನಗಳನ್ನೂ ಉಪಯೋಗಿಸುತ್ತಿರುವುದರಿಂದಲೂ, ದಿವ್ಯಜಲದಲ್ಲಿ ಸ್ನಾನಮಾಡುವುದರಿಂದಲೂ, ಅವರಿಗೆ ಆಧಿವ್ಯಾಧಿಗಳಾಗಲಿ, ನರೆ, ಸುಕ್ಕು, ಮೊದಲಾದ ಮುಪ್ಪಿನ ಚಿಹ್ನಗಳಾಗಲಿ, ದೇಹದಲ್ಲಿ ದುರ್ಗಂಧ, ಬೆವರು, ಬಳಲಿಕೆ, ಬಣ್ಣಗೆಡುವುದು, ಅನುತ್ಸಾಹ, ಮುಂತಾದ ದುರವಸ್ಥೆಗಳಾಗಲಿ, ಎಂದಿಗೂ ಸಂಭವಿಸುವುದಿಲ್ಲ. ಸುದರ್ಶನಚಕ್ರವೆಂಬ ಶ್ರೀಮಹಾವಿಷ್ಣುವಿನ ತೇಜಸ್ಸಿನಿಂದ ಹೊರತು, ಅವರಿಗೆ ಬೇರೆ ಯಾತರಿಂದಲೂ ಮರಣಭಯವಿಲ್ಲ! ಸುದರ್ಶನವೆಂಬ ವಿಷ್ಣುತೇಜಸ್ಸು, ಆ ಲೋಕದಲ್ಲಿ ಪ್ರವೇಶಿಸಿದೊಡನೆ, ಪ್ರಾಯಕವಾಗಿ ಅಲ್ಲಿನ ಅಸುರಸ್ತ್ರೀಯರಿಗೆ ಭಯದಿಂದ ಗರ್ಭವು ಕಲಗಿಬೀಳುವುದು.

ರಾಜೇಂದ್ರಾ! ಈ ಪಾತಾಳರಂಧ್ರಗಳಲ್ಲಿ ಮೊದಲನೆಯದಾದ ಅತಲವೆಂಬ ಬಿಲದಲ್ಲಿ ಮಯಪುತ್ರನಾದ ಬಲನೆಂಬ ದಾನವನು ವಾಸಮಾಡುತ್ತಿರುವನು. ಮೊದಲು ಈ ಮಯನಿಂದಲೇ ತೊಂಬತ್ತಾರುಬಗೆಯ ಮಾಯೆಗಳು ಸೃಷ್ಟಿಸಲ್ಪಟ್ಟುವು. ಈಗಲೂ ಅವುಗಳಲ್ಲಿ ಕೆಲವನ್ನು ಕೆಲವು ಮಾಯಾವಿಗಳು ಪ್ರಯೋಗಿಸುತ್ತಿರುವರು. ಈ ಬಲನೆಂಬ ದಾನವನು, ಒಮ್ಮೆ ಆಕಳಿಸುವಾಗ ಅವನ ಮುಖದಿಂದ ಮೂರುಬಗೆಯ ಸ್ತ್ರೀಗಣಗಳು ಹುಟ್ಟಿದುವು. ಈ ಮೂರು ಗುಂಪಿಗೆ ಕ್ರಮವಾಗಿ, ಸ್ವೈರಿಣಿ, ಕಾಮಿನಿ, ಪುಂಶ್ಚಲಿಗಳೆಂದು ಹೆಸರು. (ತಮ್ಮ ಸಜಾತೀಯಪುರುಷರಲ್ಲಿಮಾತ್ರ ವ್ಯಭಿಚರಿಸತಕ್ಕವರು ಸ್ವೈರಿಣಿಗಳು. ಇತರ ವರ್ಣದವರಲ್ಲಿಯೂ ರಮಿಸತಕ್ಕವರು ಕಾಮಿನಿಗಳು. ಈ ನಿಯಮದಲ್ಲಿಯೂ ನೆಲೆಯಾಗಿ ನಿಲ್ಲದವರು ಪುಂಶ್ಚಲಿಗಳು.)ಈ ಮೂರು ಜಾತಿಯ ಸ್ತ್ರೀಯರೂ, ಆ ಸ್ಥಳಕ್ಕೆ ಯಾವನಾದರೂ ಪುರುಷನು ತಲೆಯಿಕ್ಕಿದುದನ್ನು ಕಂಡರೆ, ಅವನನ್ನು ಹಾಟಕವೆಂಬ ಒಂದಾನೊಂದು ರಸಾಯನದಿಂದ ತಮ್ಮ ವಶಪಡಿಸಿಕೊಂಡು, ಅವನಿಗೆ ಪೂರ್ಣವಾದ ಭೋಗಶಕ್ತಿಯನ್ನುಂಟುಮಾಡಿ, ತಮ್ಮ ವಿಲಾಸಗಳಿಂದಲೂ, ಅನುರಾಗಸೂಚಕವಾದ

ಮಂದಹಾಸದಿಂದಲೂ, ಮೋಹಕರವಾದ ಕಟಾಕ್ಷವೀಕ್ಷಣದಿಂದಲೂ, ರಹಸ್ಯವಾದ ಮಾತುಗಳಿಂದಲೂ, ಆಲಿಂನಾದಿವಿನೋದಗಳಿಂದಲೂ ಮರುಳುಗೊಳಿಸಿ, ಅವರೊಡನೆ ಯಥೇಷ್ಟವಾಗಿ ರಮಿಸುವರು. ರಾಜೇಂದ್ರಾ! ಆ ಸ್ತ್ರೀಯರು ಕೊಡತಕ್ಕ ಹಾಟಕವೆಂಬ ರಸಾಯನವು ಪುರುಷನ ಮೈಗೆ ಸೇರಿದೊಡನೆ, ಅವನು ಮೈತಿಳಿಯದಷ್ಟು ಮದಾಂಧನಾಗಿ, ತನ್ನನ್ನು ಸಾವಿರಾನೆಗಳ ಬಲವುಳ್ಳವನೆಂದು ತಿಳಿದುಕೊಳ್ಳುವುದಲ್ಲದೆ, ತಾನೇ ಈಶ್ವರನೆಂದೂ, ತಾನೇ ಸಿದ್ಧನೆಂದೂ ತಿಳಿದು ಹೆಮ್ಮೆಯಿಂದ ಬೀಗಿ ಬೆರೆಯುವನು.

ಈ ಅತಲವೆಂಬ ಬಿಲದಕೆಳಗೆ ವಿತಲವೆಂಬ ಎರಡನೆಯ ಬಿಲವುಂಟು. ಇದರಲ್ಲಿ ಪೂಜ್ಯನಾದ ರುದ್ರನು ಹಾಟಕೇಶ್ವರನೆಂಬ ಹೆಸರಿನಿಂದ ಪಾರ್ವತೀಸಮೇತನಾಗಿ ನೆಲೆಗೊಂಡಿರುವನು. ಈತನು ಬ್ರಹ್ಮದೇವನಿಂದ ಪ್ರಜಾವೃದ್ಧಿಗಾಗಿ ನಿಯಮಿಸಲ್ಪಟ್ಟವನು ಆ ಲೋಕದಲ್ಲಿ ಪಾರ್ವತೀಪರಮೇಶ್ವರರ ವೀರ್ಯದಿಂದ ಹಾಟಕಿನಿಯೆಂಬ ಒಂದಾನೊಂದು ನದಿಯು ಹುಟ್ಟಿ ಪ್ರವಹಿಸುತ್ತಿರುವುದು. ಹಾಟಕವೆಂದು ಕರೆಯಲ್ಪಡುವ ಸುವರ್ಣಕ್ಕೆ ಇದು ಉತ್ಪತ್ತಿಸ್ಥಾನವಾದುದರಿಂದ, ಇದಕ್ಕೆ ಕಾರಣನಾದ ರುದ್ರನಿಗೂ ಹಾಟಕೇಶ್ವರನೆಂದೇ ಹೆಸರಾಯಿತು. ಇಲ್ಲಿ ಅಗ್ನಿಯು ಗಾಳಿಯ ಸಹಾಯದಿಂದ ಪ್ರಬಲಿಸಿ, ತನ್ನ ತೇಜಸ್ಸಿನಿಂದ ಆ ಹಾಟಕಿನೀನದಿಯನ್ನು ಆಗಾಗ ಪಾನಮಾಡಿ ಕಕ್ಕುತ್ತಿರುವನು. ಆ ಅಗ್ನಿಯು ಬಾಯಿಂದ ಕಕ್ಕಿದುದೆಲ್ಲವೂ ಹಾಟಕವೆಂಬ ಸುವರ್ಣರೂಪವಾಗಿ ಹೊರಗೆ ಬೀಳುವುದು. ಈ ಸುವರ್ಣದಿಂದಲೇ ಅಲ್ಲಿನ ನಿವಾಸಿಗಳಾದ ದಾನವಶ್ರೇಷ್ಠರೆಲ್ಲರೂ, ತಮಗೂ, ತಮ್ಮ ಸ್ತ್ರೀಯರಿಗೂ ಬೇಕಾದ ಆಭರಣಗಳನ್ನು ಮಾಡಿ ಧರಿಸುತ್ತಿರುವರು.

ಇದರಿಂದಾಚೆಗೆ ಸುತಲವೆಂಬ ಮೂರನೆಯ ಬಿಲದಲ್ಲಿ ಪರಮಭಾಗವತೋತ್ತಮನಾಗಿಯೂ, ಪುಣ್ಯಶ್ಲೋಕನಾಗಿಯೂ ಇರುವ ಬಲಿಚಕ್ರವರ್ತಿಯು ಈಗಲೂ ಆಳುತ್ತಿರುವನು. ಈತನು ವಿರೋಚನನೆಂಬ ದಾನವನ ಮಗನು. ಹಿಂದೊಮ್ಮೆ ಈ ಬಲಿಯು, ತನ್ನ ವೀರ್ಯದಿಂದ ಇಂದ್ರಾದಿದೇವತೆಗಳೆಲ್ಲರನ್ನೂ ಜಯಿಸಿ, ತ್ರೈಲೋಕ್ಯವನ್ನೂ ತನ್ನ ವಶಮಾಡಿಕೊಂಡನು. ಇದರಿಂದ ದೇವತೆಗಳಿಗೆ ಪ್ರಾಪ್ತವಾದ ಕಷ್ಟವನ್ನು

ನೀಗಿಸುವುದಕ್ಕಾಗಿ, ಭಗವಂತನು ವಾಮನರೂಪದಿಂದ ಅದಿತಿದೇವಿಗೆ ಮಗನಾಗಿ ಹುಟ್ಟಿ, ಉಪಾಯದಿಂದ ಆ ಬಲಿಯನ್ನು ನಿಗ್ರಹಿಸಿ, ತಿರುಗಿ ರಾಜ್ಯವನ್ನು ಇಂದ್ರನ ವಶಮಾಡಿದನು. ಈ ಸಂದರ್ಭದಲ್ಲಿ ಬಲಿಯು ತನ್ನ ಸ್ವರ್ಗರಾಜ್ಯಸಂಪತ್ತನ್ನು ಕಳೆದುಕೊಂಡರೂ, ತಿರುಗಿ ಆ ಭಗವದ ನುಗ್ರಹದಿಂದಲೇ, ಇಂದ್ರಾದಿದೇವತೆಗಳಿಗೂ ದುರ್ಲಭವಾದ ಈ ಬಿಲಾಧಿ ಪತ್ಯವನ್ನು ಪಡೆದು, ನಿರ್ಭಯನಾಗಿ, ಸ್ವಧರ್ಮದಿಂದ ಈಗಲೂ ಆ ಭಗ ವಂತನನ್ನಾರಾಧಿಸುತ್ತಿರುವನು. ರಾಜೇಂದ್ರಾ ! ಬಲಿಯು ಈ ಲೋಕಾಧಿ ಪತ್ಯವನ್ನು ಪಡೆದುದು ಹಿಂದೆ ಯಜ್ಞಕಾಲದಲ್ಲಿ ವಾಮನರೂಪಿಯಾದ ಭಗವಂತನಿಗೆ ತಾನು ಮಾಡಿದ ಭೂದಾನದ ಫಲವೆಂದು ತಿಳಿಯ ಬೇಡ ! ಇವನು ಸಂಪೂರ್ಣವಾಗಿ ಆ ಭಗವದನುಗ್ರಹಕ್ಕೆ ಪಾತ್ರನಾಗಿದ್ದ ಪಕ್ಷದಲ್ಲಿ, ಆಕ್ಷಣವೇ ಪರಮಪುರುಷಾರ್ಥವಾದ ಮುಕ್ತಿಯನ್ನೇ ಪಡೆಯ ಬೇಕಾಗಿದ್ದಿತು. ಆದುದರಿಂದ ಆಗ ಭಗವಂತನು ಇವನಲ್ಲಿ ಪೂರ್ಣಾನುಗ್ರಹ ವನ್ನು ತೋರಿಸಲಿಲ್ಲವೆಂದು ತಿಳಿ! ಷಾಡ್ಗುಣ್ಯಪರಿಪೂರ್ಣನಾಗಿಯೂ, ಸರ್ವಜೀವಾಂತರ್ಯಾಮಿಯಾಗಿಯೂ, ಉತ್ತಮೋತ್ತಮನಾಗಿಯೂ ಇರುವ ಪರಮಾತ್ಮನಾದ ವಾಸುದೇವನು, ತಾನೇ ಸಾಕ್ಷಾತ್ತಾಗಿ ಬಂದು ಕೈನೀಡಿ ಮೂರಡಿಯ ನೆಲವನ್ನು ಯಾಚಿಸಿದಾಗ, ಬಲಿಯು ಅಂತಹ ಸತ್ಪಾ ತ್ರದಲ್ಲಿ ಶ್ರದ್ಧೆಯಿಂದ ಮಾಡಿದ ಭೂದಾನಕ್ಕೆ ತಕ್ಕ ಪ್ರತಿಫಲವು ಮೋಕ್ಷ ವೇಹೊರತು, ಬೇರೆಯಲ್ಲ. ಅಂತಹ ಸತ್ಕಾರ್ಯಕ್ಕೆ ಈ ಬಿಲಾಧಿಪತ್ಯವನ್ನು ಪ್ರತಿಫಲವೆಂದು ಎಂದಿಗೂ ಎಣಿಸಬಾರದು. ಕೆಮ್ಮುವುದು, ಸೀನುವುದು, ಆಕಳಿಸುವುದು, ಎಡವಿಬಿಳುವುದು, ಮುಂತಾದ ಸಂದರ್ಭಗಳಲ್ಲಿ ಆ-ಭಗ ವಂತನ ನಾಮವನ್ನು ಒಂದಾವರ್ತಿ ಮೈಮರೆತು ಬಾಯಿಂದ ಹೇಳಿದಮಾ ತ್ರಕ್ಕೆ, ಮನುಷ್ಯನಿಗೆ, ಮೋಕ್ಷಾಪೇಕ್ಷೆಯುಳ್ಳ ಮಹಾಯೋಗಿಗಳೂ ಕರ್ಮ ಜ್ಞಾನಭಕ್ತಿಯೋಗಾದಿಗಳಿಂದ ಎಷ್ಟೋ ಶ್ರಮಪಟ್ಟು ಸಾಧಿಸಬೇಕಾದ ಕರ್ಮವಿಮೋಚನವು ಅನಾಯಾಸವಾಗಿ ಕೈಗೂಡಿಬರುವುದು. ಅಂತಹ ಭಗವಂತನಲ್ಲಿ ಸಾಕ್ಷಾತ್ತಾಗಿ ಮಾಡಿದ ಭೂದಾನಕ್ಕೆ ಈ ಬಿಲಾಧಿಪತ್ಯವನ್ನು ಪ್ರತಿಫಲವೆಂದು ಹೇಳಬಹುದೆ! ಇವೆರಡಕ್ಕೂ ಏನೇನೂ ಸಂಬಂಧವಿಲ್ಲ,

ಇಲ್ಲಿ ಭಗವಂತನು ಬಲಿಚಕ್ರವರ್ತಿಗೆ, ಭೋಗೈಶ್ವರ್ಯಗಳನ್ನು ಕೊಡುವ ನೆವದಿಂದ,ಸ್ವಸ್ವರೂಪವನ್ನು ಮರೆಸತಕ್ಕ ತನ್ನಮಾಯೆಯಲ್ಲಿಯೇ ಸಿಕ್ಕಿಸಿಟ್ಟ ನೇಹೊರತು,ಪೂರ್ಣಾನುಗ್ರಹವನ್ನು ತೋರಿಸಲಿಲ್ಲ.ಆಭಗವಂತನು ಪೂರ್ಣಾ ನುಗ್ರಹವನ್ನು ತೋರಿಸಿದ್ದಸಂದರ್ಭದಲ್ಲಿ, ಮುಕ್ತಿಯನ್ನೇ ಕೊಡುತಿದ್ದನು. ಭಗವಂತನು ವಾಮನರೂಪಿಯಾಗಿ ಬಂದು ಬಲಿಯಲ್ಲಿ ಯಾಚಿಸಿದುದೂ,ಇಂ ದ್ರನ ಕೋರಿಕೆಯನ್ನೀಡೇರಿಸುವುದಕ್ಕಾಗಿಯೇಹೊರತು, ಬಲಿಚಕ್ರವರ್ತಿಯ ನ್ನು ಅನುಗ್ರಹಿಸುವುದಕ್ಕಲ್ಲ. ಏಕೆಂದರೆ,ಬಲಿಚಕ್ರವರ್ತಿಯು ಭಕ್ತೋತ್ತಮ ನಾದುದರಿಂದಲೂ, ಇವನು ಇಂದ್ರನನ್ನು ಜಯಿಸಿ ತ್ರೈಲೋಕ್ಯವನ್ನೂ ತಾನೇ ವಶಮಾಡಿಕೊಂಡುದರಿಂದಲೂ, ಭಕ್ತನಾದ ಆವನನ್ನು ದಂಡಿಸು ವುದಕ್ಕೆ ಭಗವಂತನಿಗೆ ಮನಸ್ಸು ಬಾರದುದರಿಂದಲೂ, ಅವನು ವಶ ಪಡಿಸಿಕೊಂಡಿದ್ದ ಸ್ವರ್ಗಾಧಿಪತ್ಯವನ್ನು ಕಿತ್ತುಕೊಳ್ಳುವುದಕ್ಕೆ ಬೇರೆ ಉ ಪಾಯವಿಲ್ಲದುದರಿಂದಲೂ, ತ್ರಿವಿಕ್ರಮಮೂರ್ತಿಯು ಅವನಲ್ಲಿ ಯಾಚಿ ಸಿ ತೆಗೆಯಬೇಕಾಯಿತು. ಓ ಪರೀಕ್ಷಿದ್ರಾಜೇಂದ್ರಾ ! ಬಲಿಚಕ್ರವರ್ತಿಯು ಜಾತಿಯಲ್ಲಿ ದಾನವನಾಗಿದ್ದರೂ, ಎಂತಹ ವಿಷ್ಣುಭಕ್ತನೆಂಬುದಕ್ಕೆ ಒಂ ದು ನಿದರ್ಶನವನ್ನು ಹೇಳುವೆನು ಕೇಳು! ವಾಮನಮೂರ್ತಿಯು ತನ್ನಲ್ಲಿ ಬಂದು ಮೂರಡಿಯ ನೆಲವನ್ನು ಯಾಚಿಸಿದಾಗ, ಬಲಿಚಕ್ರವರ್ತಿಯು ಆ ವನ ಮಾಯೆಯನ್ನು ತಿಳಿಯದೆ, ಅವನು ಕೇಳಿದಷ್ಟು ಸ್ಥಳವನ್ನು ಕೊಡು ವುದಾಗಿ ವಾಗ್ದಾನಮಾಡಿದನು. ವಾಮನಮೂರ್ತಿಯು ತನ್ನ ಎರಡ ಡಿಗಳಿಂದಲೇ ತ್ರೈಲೋಕ್ಯವನ್ನೂ ಅಳೆದು'ಬಿಟ್ಟುದರಿಂದ, ಮೂರನೆಯ ಹಜ್ಜೆಗೆ ಸ್ಥಳವಿಲ್ಲದಂತಾಯಿತು. ಆಗ ಬಲಿಗೆ ಅವನ ಶರೀರವೊಂದು ಹೊ ರತು ಬೇರೊಂದೂ ಸ್ವಾಧೀನವಿರಲಿಲ್ಲ. ಇದರಿಂದ ಅವನು ವಾಗ್ದಾನ ಮಾಡಿದ ಮೂರನೆಯ ಹಜ್ಜೆಗೆ ತಕ್ಕಷ್ಟು ನೆಲವನ್ನು ಕೊಡುವುದಕ್ಕೆ ಸ್ಥಳವಿಲ್ಲದಂತಾಯಿತು. ಇದನ್ನೇ ನೆವವಾಗಿಟ್ಟುಕೊಂಡು ಭಗವಂತ ನು, ಅವನನ್ನು ವರುಣಪಾಶಗಳಿಂದ ಬಿಗಿದು, ಬಂದಾನೊಂದು ಪರ್ವತ ಗುಹೆಗೆ ಬಿಸುಟನು. ಆಗಲೂ ಬಲಿಚಕ್ರವರ್ತಿಯು ಆಭಗವಂತನಲ್ಲಿ ತನ ಗಿದ್ದ ಭಕ್ತಿಯನ್ನು ಬಿಡದೆ ಹೀಗೆಂದು ಹೇಳುವನು. “ಆಹಾ ! ಏನು ಕಷ್ಟ

ವು! ಇಂದ್ರನು ಅನೇಕವಿಷಯಗಳನ್ನು ತಿಳಿದು ಮಹಾತ್ಮನೆನಿಸಿಕೊಂಡಿ
ದ್ದರೂ, ಈ ಪುರುಷಾರ್ಥಗಳಲ್ಲಿ ಯಾವುದು ಮೇಲೆಂಬ ತಾರತಮ್ಯವನ್ನು ತಿಳಿ
ಯದೆಹೋದನು. ಮಹಾಬುದ್ಧಿಶಾಲಿಯೆನಿಸಿಕೊಂಡು, ಇವನಿಗೆ ಮಂತ್ರಾ
ಲೋಚನೆಗಳಲ್ಲಿ ಸಹಾಯಮಾಡತಕ್ಕ ಬೃಹಸ್ಪತಿಯೂಕೂಡ, ಪುರು
ಷಾರ್ಥಗಳ ತಾರತಮ್ಯವನ್ನು ಚೆನ್ನಾಗಿ ತಿಳಿದವನಲ್ಲವೆಂಬುದು ನಿಶ್ಚಯವು!
ಭಗವಂತನು ತನ್ನಲ್ಲಿ ಅಷ್ಟೊಂದು ಪ್ರೀತಿಯನ್ನಿಟ್ಟಿರುವಾಗಲೂ,ಇಂದ್ರನು,
ವಾಮನರೂಪದಿಂದ ತನಗೆ ತಮ್ಮನಾಗಿ ಅವತರಿಸಿದ ಆ ಭಗವಂತನ ಮೂ
ಲಕವಾಗಿ ನನ್ನಲ್ಲಿ ತ್ರೈಲೋಕ್ಯಾಧಿಪತ್ಯವನ್ನು ಯಾಚಿಸಿದನೇಹೊರತು,ಆ ಭ
ಗವಂತನಲ್ಲಿ ದಾಸ್ಯವನ್ನು ಯಾಚಿಸದೆ ಹೋದನು. ಆಹಾ! ಮೂರುಲೋಕ
ವನ್ನೂ ತನ್ನ ವಶಮಾಡಿಕೊಂಡು, ಯಾರಿಗೂ ತಿಳಿಯದಷ್ಟಾಗಿ ಗಂಭೀರ
ವೇಗದಿಂದ ನಡೆದು ಹೋಗುತ್ತಿರುವ ಕಾಲದ ಗತಿಯನ್ನು ಯಾರು ತಾನೇ
ತಿಳಿಯಬಲ್ಲರು! ಈ ತ್ರೈಲೋಕ್ಯವೂ ಕಾಲಕ್ಕೆ ವಶವಾಗಿ ಒಂದೊಂದು
ಮನ್ವಂತರದವರೆಗಿದ್ದು ನಾಶಹೊಂದತಕ್ಕವುಗಳೇಹೊರತು, ಅದರಮೇಲೆ
ಕ್ಷಣಕಾಲವೂ ನಿಲ್ಲುವುವಲ್ಲ. ಇದನ್ನಾಳತಕ್ಕ ಐಶ್ವರ್ಯವೂ ಒಂದೈಶ್ವರ್ಯ
ವಲ್ಲ! ಈ ಅಲ್ಪೈಶ್ವರ್ಯಕ್ಕಾಗಿ ಅಷ್ಟೊಂದು ಶ್ರಮಪಟ್ಟ ಇಂದ್ರ
ನನ್ನು, ಎಂದಿಗೂ ವಿವೇಕಿಯೆಂದು ಹೇಳುವುದಕ್ಕಿಲ್ಲ. ಇದನ್ನು ತಿಳಿದೇ
ನನ್ನ ಅಜ್ಜನಾದ ಪ್ರಹ್ಲಾದನು, ಪಿತೃರಾಜ್ಯಕ್ಕೆ ಆಸೆಪಡದೆ ಭಗವಂ
ತನಲ್ಲಿ ದಾಸ್ಯವನ್ನೇ ಯಾಚಿಸಿದನು. ಭಗವಂತನು ನೃಸಿಂಹನಾಗಿ ಬಂದು
ತನ್ನ ತಂದೆಯಾದ ಹಿರಣ್ಯಕಶಿಪುವನ್ನು ಕೊಂದು, ಆ ರಾಜ್ಯವನ್ನು ತನಗೆ
ಕೊಟ್ಟಾಗಲೂ, ಅದನ್ನು ಅಲ್ಪವೆಂದೇ ತಿಳಿದು ನಿರಾಕರಿಸಿ, ಸರ್ವವಿಧದಿಂದ
ಲೂ ನಿರ್ಭಯವಾದ ಮೋಕ್ಷವನ್ನೇ ಅಪೇಕ್ಷಿಸಿದನು. ಕರ್ಮಬಂಧವನ್ನು ನೀ
ಗಲಾರದೆ, ಭಗವದನುಗ್ರಹಕ್ಕೂ ಪಾತ್ರನಾಗದೆ ಇರುವ ನನ್ನಂತವನು,
ಮಹಾತ್ಮನಾದ ಆ ಪ್ರಹ್ಲಾದನ ಮಾರ್ಗವನ್ನು ಹಿಡಿಯಬೇಕೆಂದರೆ ಹೇಗೆ
ತಾನೇ ಸಾಧ್ಯವು ?" ಎಂದು ಪಶ್ಚಾತ್ತಾಪದಿಂದ ಮರುಗುತ್ತಿದ್ದನು. ರಾ
ಜೇಂದ್ರಾ! ಈ ಬಲಿಚಕ್ರವರ್ತಿಯ ಚರಿತ್ರವನ್ನು ಮುಂದೆ ನಿನಗೆ ವಿವರ
ವಾಗಿ ತಿಳಿಸುವೆನು. ಸಕಲಲೋಕಗುರುವಾಗಿಯೂ, ಸಮಸ್ತ ಜೀವಗಳಿ

ಗೂ ಪ್ರಭುವಾಗಿಯೂ ಇರುವ ಶ್ರೀಮನ್ನಾರಾಯಣನು ಭಕ್ತವತ್ಸಲನಾ ದುದರಿಂದ, ಈಗಲೂ ಆ ಬಲಿಚಕ್ರವರ್ತಿಯ ಮನೆಬಾಗಿಲಲ್ಲಿ, ಗದಾಪಾ ಣಿಯಾಗಿ ಕಾಯುತ್ತಿರುವನು. ಹಿಂದೊಮ್ಮೆ ರಾವಣನು ದಿಗ್ವಿಜಯಕ್ಕಾಗಿ ಹೊರಟು, ಲೋಕವೆಲ್ಲವನ್ನೂ ಜಯಿಸಿ,ಕೊನೆಗೆ ಬಲಿಚಕ್ರವರ್ತಿಯ ಮನೆಯ ನ್ನು ಪ್ರವೇಶಿಸುವುದಕ್ಕೆ ಬಂದಾಗ, ಅಲ್ಲಿ ದ್ವಾರಪಾಲಕನಾಗಿ ನಿಂತಿದ್ದಭ ಗವಂತನು, ಅವನನ್ನು ತನ್ನ ಕಾಲಿನ ಹೆಬ್ಬೆರಳಿನಿಂದ ಚಿಮ್ಮಿ, ಲಕ್ಷಯೋಜ ನದೂರದಲ್ಲಿ ತೂರಿಬೀಳುವಂತೆ ಮಾಡಿದನು. ಈ ಚರಿತ್ರಗಳೆಲ್ಲವನ್ನೂ ಮುಂದೆ ಚೆನ್ನಾಗಿ ವಿವರಿಸುವೆನು.

ರಾಜಾ! ಸುತಲಲೋಕದ ಕೆಳಗೆ ತಲಾತಲವೆಂಬ ವಿವರವಿರುವು ದು. ಮಯನೆಂಬ ದಾನವನು ಅದನ್ನಾಳುತ್ತಿರುವನು. ಇವನೇ ಮೊದ ಲು ತ್ರಿಪುರಗಳಿಗೆ ಅಧಿಪತಿಯಾಗಿದ್ದವನು. ಬಹಳ ಮಾಯಾವಿಯು! ಲೋಕ ಕ್ಷೇಮಾರ್ಥವಾಗಿ ರುದ್ರನು ಆ ತ್ರಿಪುರಗಳನ್ನು ದಹಿಸಿದಮೇಲೆ, ಈ ಮಯನು ಬಹಳವಾಗಿ ಬೇಡಿಕೊಂಡುದರಿಂದ, ರುದ್ರನು ಅವನಲ್ಲಿ ಅನುಗ್ರಹವನ್ನು ತೋರಿಸಿ,ಅವನಿಗೆ ಈ ತಲಾತಲದ ಅಧಿಕಾರವನ್ನು ಕೊಟ್ಟು ಇಲ್ಲಿರಿಸಿರುವನು. ಮತ್ತು ಶ್ರೀಮಹಾವಿಷ್ಣುವಿನ ಸುದರ್ಶನಚಕ್ರಕ್ಕೆ ತಾನು ಭಕ್ತನಾದುದರಿಂ ದ, ಮಯನಿಗೆ ಅದರ ಭಯವಿಲ್ಲದಂತೆ ತಪ್ಪಿಸುತ್ತಿರುವನು.

ಈ ತಲಾತಲದಿಂದ ಕೆಳಗೆ ಮಹಾತಲವೆಂಬ ಬಿಲವುಂಟು. ಇಲ್ಲಿ ಕ ದ್ರುವಿನ ಮಕ್ಕಳಾಗಿಯೂ, ಅನೇಕಫಣೆಗಳುಳ್ಳವುಗಳಾಗಿಯೂ ಇರುವ ಸರ್ಪಸಮೂಹಗಳು ವಾಸಿಸುತ್ತಿರುವುವು. ಕೋಪಸ್ವಭಾವವುಳ್ಳ ಈ ಸ ರ್ಪಗಣಗಳಲ್ಲಿ, ಕುಹಕ, ತಕ್ಷಕ, ಕಾಳಿಯ, ಸುಷೇಣರೇ ಮೊದಲಾದವರು ಪ್ರಮುಖರೆನಿಸಿಕೊಂಡಿರುವರು. ಇವರು ಬಹಳ ಉದ್ದವಾದ ಮೈಯುಳ್ಳ ವರು. ಈ ಸರ್ಪಗಳಿಗೆ ವಿಷ್ಣುವಾಹನವಾದ ಗರುತ್ಮಂತನಿಂದ ಯಾವಾ ಗಲೂ ಭಯವು ತಪ್ಪಿದುದಲ್ಲ. ಹಾಗಿದ್ದರೂ ಇಲ್ಲಿ ತಮ್ಮ ಹೆಂಡಿರುಮಕ್ಕಳು, ನಂಟರಿಷ್ಟರು, ಮೊದಲಾದ ಕುಟುಂಬದವರಲ್ಲಿ ಅತ್ಯಾಸಕ್ತಿಯುಳ್ಳವರಾಗಿ, ಅದರಿಂದ ಮೈಮರೆತು ವಿಹರಿಸುತ್ತಿರುವರು.

ಮಹಾತಲದ ಕೆಳಗೆ ರಸಾತಲವೆಂಬ ಬಿಲವುಂಟು. ಅದರಲ್ಲಿ ದನುಪುತ್ರರೆಂದೂ, ದಿತಿಪುತ್ರರೆಂದೂ, ಪಣಿಗಳೆಂದೂ ಕರೆಯಲ್ಪಡುವ ಬೇರೆಬೇರೆ ಪಂಗಡದವರು ವಾಸಿಸುತ್ತಿರುವರು. ಇವರೆಲ್ಲರೂ ದೇವಶತ್ರುಗಳು. ಪಣಿಗಳೆಂಬ ಪಂಗಡದವರಲ್ಲಿ ನಿವಾತಕವಚರೆಂದೂ, ಕಾಲಕೇಯರೆಂದೂ, ಹಿರಣ್ಯಪುರನಿವಾಸಿಗಳೆಂದೂ ಮೂರು ಜಾತಿಯವರುಂಟು ಇವರು ಹುಟ್ಟುವಾಗಲೇ ಮಹಾಬಲಾಢ್ಯರು. ಸಾಹಸಕಾರ್ಯಗಳಲ್ಲಿ ಎಣೆಯಿಲ್ಲದವರು! ಇವರ ವೀರ್ಯಕ್ಕೆ ಯಾವ ಲೋಕದಲ್ಲಿಯೂ ತಡೆಯಿಲ್ಲ! ಭಗವಂತನ ತೇಜೋಮಯವಾದ ಸುದರ್ಶನಚಕ್ರಕ್ಕೂ ಹೆದರದಷ್ಟು ಹೆಮ್ಮೆಯುಳ್ಳವರು. ಇವರೆಲ್ಲರೂ ಬಿಲದಲ್ಲಿ ಅಡಗಿರುವ ಮಹಾಸರ್ಪಗಳಂತೆ, ಆ ಲೋಕದಲ್ಲಿ ವಾಸಿಸುತ್ತಿರುವರು.ಆದರೆ ಇಂದ್ರನ ಕಡೆಯಿಂದ ದೂತ್ಯಕ್ಕಾಗಿ ಬಂದ ಒಂದಾನೊಂದು ಹೆಣ್ಣುನಾಯಿಯು, ಆಗಾಗ ಹೇಳುತ್ತಿರುವ ಮಂತ್ರರೂಪವಾದ ವಾಕ್ಯವನ್ನು ಕೇಳಿ, ಇವರು ಇಂದ್ರನ ವಿಷಯದಲ್ಲಿ ಭಯಪಡುತ್ತಿರುವರು.

ರಾಜೇಂದ್ರಾ! ಆ ರಸಾತಲದ ಕೆಳಗೆ ಪಾತಾಳವೆಂಬ ಬಿಲವಿರುವುದು. ಇದರಲ್ಲಿ ಸರ್ಪಲೋಕಕ್ಕೆ ಪ್ರಭುಗಳೆನಿಸಿಕೊಂಡ, ಶಂಖ, ಕುಳಿಕ, ಮಹಾಶಂಖ, ಶ್ವೇತ, ಧನಂಜಯ, ಧೃತರಾಷ್ಟ್ರ, ಶಂಖಚೂಡ, ಕಂಬಳ, ಅಶ್ವತರ, ದೇವದತ್ತರೇ ಮೊದಲಾದ ಸರ್ಪಶ್ರೇಷ್ಠಗಳುಂಟು. ಇವರೆಲ್ಲರಿಗೂ ವಾಸುಕಿಯು ಪ್ರಧಾನನಾಗಿರುವನು. ಇವೆಲ್ಲವೂ ಮಹಾಕೋಪಸ್ವಭಾವವುಳ್ಳವುಗಳು. ಇವುಗಳಲ್ಲಿ ಐದು ಹೆಡೆಯುಳ್ಳವು ಕೆಲವು! ಆರು ಹೆಡೆಗಳುಳ್ಳವು ಕೆಲವು! ಏಳು ಹೆಡೆಗಳುಳ್ಳವು ಕೆಲವು!ಹತ್ತು ಹೆಡೆಗಳುಳ್ಳವು ಕೆಲವು! ನೂರು ಹೆಡೆಗಳುಳ್ಳವು ಕೆಲವು! ಸಾವಿರ ಹೆಡೆಗಳುಳ್ಳವು ಕೆಲವು! ಇವುಗಳ ಫಣಾಮಣಿಗಳ ಕಾಂತಿಯು, ಆ ಪಾತಾಳವಿವರದೊಳಗಣ ಅಂಧಕಾರವೆಲ್ಲವನ್ನೂ ಧ್ವಂಸಮಾಡಿ, ಅನವರತವೂ ಆ ಸ್ಥಳವನ್ನು ಬೆಳಗುತ್ತಿರುವುದು. ಇಲ್ಲಿಗೆ ಇಪ್ಪತ್ತು ನಾಲ್ಕನೆಯ ಅಧ್ಯಾಯವು.

---

## ಪಾತಾಳದ ಕೆಳಗೆ ಭೂಮಂಡಲವನ್ನು ಹೊತ್ತಿರುವ ಆದಿಶೇಷನಸ್ವರೂಪವು.

ರಾಜೇಂದ್ರಾ ಕೇಳು ! ಈ ಪಾತಾಳದ ಕೆಳಗೆ ಮೂವತ್ತುಸಾವಿರ ಯೋಜನಗಳಿಂದಾಚೆಗೆ, ತಾಮಸಾಹಂಕಾರಕ್ಕೆ ಅಧಿಷ್ಠಾನದೇವತೆಯಾಗಿಯೂ, ಅನಂತನೆಂಬ ಹೆಸರುಳ್ಳುದಾಗಿಯೂ ಇರುವ ಭಗವಂತನ ಅಂಶವೊಂದುಂಟು ! ಸಂಕರ್ಷಣರೂಪಿಯಾದ ಭಗವಂತನಿಂದುಪದೇಶಿಸಲ್ಪಟ್ಟ ಸಾತ್ವತವೆಂಬ ಪಾಂಚರಾತ್ರಸಂಹಿತೆಯನ್ನು ತಿಳಿದವರಾಗಿಯೂ,ಭಗವದಂಶದ ಮಹಿಮೆಯನ್ನು ಬಲ್ಲವರಾಗಿಯೂ ಇರುವ ಮಹಾತ್ಮರು, ಆತನನ್ನೇ ಸಂಕರ್ಷಣಾಂಶವೆಂದು ಹೇಳುವರು. ಜೀವಾತ್ಮರಿಗೆ ಇಂದ್ರಿಯಗೋಚರವಲ್ಲದ ವಸ್ತುಗಳ ಜ್ಞಾನವನ್ನು ಉಂಟುಮಾಡುವುದರಿಂದಲೂ, ಜೀವವರ್ಗಗಳೆಲ್ಲಕ್ಕೂ ಅಭಿಮಾನದೇವತೆಯಾಗಿ, ಅವಕ್ಕೆ "ನಾನು" (ಅಹಂ) ಎಂಬ ಬುದ್ಧಿ ಹುಟ್ಟುವುದಕ್ಕೆ ಕಾರಣನಾಗಿರುವುದರಿಂದಲೂ, ಅವನನ್ನು ಸಂಕರ್ಷಣನೆಂದು ಹೇಳುವರು. ಇವನಿಗೆ ಅನಂತನೆಂದೂ ಹೆಸರು. ಏಕೆಂದರೆ, ಅವನ ಸ್ವರೂಪವನ್ನೂ, ಆಕಾರವನ್ನೂ ಇಷ್ಟೆಂದು ಅಳತೆಯಿಡುವುದಕ್ಕೂ ಸಾಧ್ಯವಿಲ್ಲ. ಸಹಸ್ರಶಿರಸ್ಸುಳ್ಳ ಆ ಅನಂತನ ಯಾವುದೋ ಒಂದು ತಲೆಯ ಮೂಲೆಯಲ್ಲಿ, ಈ ಭೂಮಂಡಲವೆಲ್ಲವೂ ಒಂದು ಸಾಸಿವೆಯ ಕಾಳಿನಂತೆ ಅಂಟಿಕೊಂಡಿರುವುದು. ಇಂತಹ ಅದ್ಭುತರೂಪವುಳ್ಳವನಾದುದರಿಂದಲೇ ಅವನನ್ನು ಅನಂತನೆಂದು ಕರೆಯುವರು. ಎರಡು ಪರಾರ್ಧದಳ ಕಾಲವು ಕಳೆದಮೇಲೆ, ಮಹಾಪ್ರಳಯವು ನಡೆಯಬೇಕಾದಸಂದರ್ಭದಲ್ಲಿ, ಈ ಸಂಕರ್ಷಣಮೂರ್ತಿಯು ಸಮಸ್ತಲೋಕವನ್ನೂ ತನ್ನಲ್ಲಿ ಉಪಸಂಹಾರ ಮಾಡಿಕೊಳ್ಳಬೇಕೆಂದು ಸಂಕಲ್ಪಿಸಿ, ಕೋಪದಿಂದ ಹುಬ್ಬುಗಳನ್ನು ಗಂಟಿಕ್ಕುವನು. ಆ ಹುಬ್ಬುಗಳ ಮಧ್ಯದಿಂದ ಸಾಂಕರ್ಷಣರೆಂದು ಕರೆಯಲ್ಪಡುವ ಏಕಾದಶರುದ್ರಸಮೂಹವು, ಮೂರುಕಣ್ಣುಗಳೊಡನೆ, ತ್ರಿಶೂಲವನ್ನು ಕೈಯಲ್ಲಿ ಹಿಡಿದು, ಹೊರಕ್ಕೆಬಂದು ಪ್ರಪಂಚವನ್ನು ಸಂಹರಿಸುವುದು. ಮತ್ತು ಸಾತ್ವತಶ್ರೇಷ್ಠರೊಡಗೂಡಿ ಅಲ್ಲಿನ ಸರ್ಪಶ್ರೇಷ್ಠರೆಲ್ಲರೂ ಈಸಂಕರ್ಷಣಮೂರ್ತಿಗೆ ಅವಿಚ್ಛಿನ್ನವಾದ ಭಕ್ತಿಯೋಗದಿಂದ ನಮಸ್ಕರಿಸು

ವಾಗ, ಕುಂಡಲಕಾಂತಿಯಿಂದಲಂಕೃತವಾದತಮ್ಮ ಗಂಡಸ್ಥಳವು ಆ ನಖ ರತ್ನಗಳಲ್ಲಿ ಅತಿಮನೋಹರವಾಗಿಪ್ರತಿಬಿಂಬಿಸುವುದನ್ನು ಕಂಡು, ಆನಂದ ಭರಿತರಾಗಿ, ಎಡೆಬಿಡದೆ ಅದನ್ನೇ ನೋಡುತ್ತಿರುವರು. ಮತ್ತು ಅಲ್ಲಿನ ನಾಗ ಕನ್ಯೆಯರೆಲ್ಲರೂ, ತಮ್ಮತಮ್ಮ ಇಷ್ಟಸಿದ್ಧಿಗಾಗಿ ಬಂದು, ಭೂಷಣಗಳಿಂದಲಂ ಕೃತವಾಗಿಯೂ, ದೀರ್ಘವಾಗಿಯೂ, ಕೋಮಲವಾಗಿಯೂ, ಬೆಳ್ಳಿಯ ಕಂಬಗಳಂತೆ ಸ್ವಚ್ಛವಾಗಿಯೂ ಇರುವ ಆ ಭಗವಂತನ ಭುಜಗಳಿಗೆ,ಕುಂ ಕುಮಚಂದನಗಳೇ ಮೊದಲಾದ ಸುಗಂಧದ್ರವ್ಯಗಳನ್ನು ಲೇಪಿಸುವರು. ಆಗ ಆತನ ಭುಜಸ್ಪರ್ಶದಿಂದ ಮನಸ್ಸು ಕಲಗಿ, ಮನ್ಮಥಾವೇಶದಿಂದ ಮೈ ಮರೆತು ನಿಲ್ಲುವರು. ಭಕ್ತರಲ್ಲಿರುವ ಪ್ರೇಮದಿಂದಲೂ, ಆತ್ಮಾನುಭವದಿಂ ದುಂಟಾದ ಸಂತೋಷದಿಂದಲೂ ವಿಕಸಿತವಾಗಿ, ಮದದಿಂದ ತೊಳಲುತ್ತಿ ರುವ ಸ್ವಲ್ಪಕೆಂಪಾಗಿಯೂ, ದಯಾಪೂರ್ಣವಾಗಿಯೂ ಇರುವ ಕಟಾ ಕ್ಷಗಳಿಂದ ಮನೋಹರವಾದ ಆತನ ಮುಖಕಮಲವನ್ನು ಲಜ್ಜೆಯಿಂದ ನೋಡುತ್ತಿರುವರು. ಜಗತ್ಕಾರಣನಾದ ಇಂತಹ ಸಂಕರ್ಷಣಮೂರ್ತಿಯು ಕೊನೆಮೊದಲಿಲ್ಲದ ಕಲ್ಯಾಣಗುಣಗಳಿಂದ ಪೂರ್ಣನಾಗಿ, ತನ್ನ ದಿವ್ಯತೇಜ ಸ್ಸಿನಿಂದ ಪ್ರಕಾಶಿಸುತ್ತ, ತಡೆಯಬಾರದ ತನ್ನ ಕೋಪಾವೇಶವನ್ನೂ ತಡೆ ದುಕೊಂಡು, ಲೋಕಕ್ಷೇಮಕ್ಕಾಗಿ ಅಲ್ಲಿ ನೆಲೆಗೊಂಡಿರುವನು. ದೇವತೆಗಳು ಅಸುರರು, ಉರಗರು, ಸಿದ್ಧರು, ಗಂಧರ್ವರು, ವಿದ್ಯಾಧರರು, ಮಹರ್ಷಿಗಳು ಮೊದಲಾದವರೆಲ್ಲರೂ, ಗುಂಪುಗುಂಪಾಗಿ ಸೇರಿ ಆ ಮಹಾತ್ಮನನ್ನು ಧ್ಯಾನಿ ಸುತ್ತಿರುವರು. ಆ ಭಗವಂತನು ಆತ್ಮಾನುಭವದಿಂದುಂಟಾದ ಆನಂದ ದಿಂದ ಅರಳಿದ ಕಣ್ಣುಗಳುಳ್ಳವನಾಗಿ, ಭಾವಗರ್ಭಿತಗಳಾಗಿಯೂ, ಮಂದ ಹಾಸ ಪೂರ್ವಕಗಳಾಗಿಯೂ ಇರುವ ತನ್ನ ವಚನಾಮೃತಗಳಿಂದ, ತನ್ನ ಭಕ್ತರನ್ನೂ, ದೇವಶ್ರೇಷ್ಠರನ್ನೂ ಸಂತೋಷಗೊಳಿಸುತ್ತಿರುವನು. ಹೊಸ ದಾದ ಕೃಷ್ಣತುಲಸೀದಳಗಳ ಸುವಾಸನೆಯಿಂದಲೂ, ಮಕರಂದಪಾನ ದಿಂದ ಮದಿಸಿದ ಭ್ರಮರಗಳ ಝೇಂಕಾರದಿಂದಲೂ, ಕೂಡಿದ ವೈಜ ಯಂತಿಯೆಂಬ ವನಮಾಲಿಕೆಯಿಂದ ಶೋಭಿಸುತ್ತಿರುವನು. ನೀಲವಸ್ತ್ರ ವನ್ನು ನಡುವಿಗೆ ಕಟ್ಟಿ, ಒಂದೇ ಕಿವಿಯಲ್ಲಿ ಮಕರಕುಂಡಲವನ್ನು ತೊಟ್ಟು,

ಐರಾವತದಂತೆ ಶುಭ್ರವರ್ಣವುಳ್ಳವನಾಗಿ, ಸುಕುಮಾರವಾದ ತನ್ನ ಕೈಯಿಂದ ನೇಗಿಲನ್ನೂರಿ ಹಿಡಿದು, ಸುವರ್ಣಮಯವಾದ ಹಲಗೆಯೆಂಬ ಆಯುಧವನ್ನು ಹಿಡಿದು ಠೀವಿಯಿಂದ ನೆಲೆಗೊಂಡಿರುವನು. ಮತ್ತು ಆ ಭಗವಂತನು, ತನ್ನ ಚರಿತ್ರವನ್ನು ಕೇಳಿ ತನ್ನನ್ನು ಧ್ಯಾನಿಸತಕ್ಕ ಮುಮುಕ್ಷುಗಳಲ್ಲಿ ಎಣೆಯಿಲ್ಲದ ಪ್ರೀತಿಯುಳ್ಳವನಾಗಿ, ಅವರ ಹೃದಯ ದಲ್ಲಿ ಪ್ರವೇಶಿಸಿ, ಅವರಿಗೆ ಅನಾದಿಯಾದ ಕರ್ಮವಾಸನೆಯಿಂದ ಬಿಗಿಯ ಲ್ಪಟ್ಟುದಾಗಿಯೂ, ಅವಿದ್ಯಾಮಯವಾಗಿಯೂ, ಸತ್ವರಜಸ್ತಮೋ ಗುಣಗ ಳಿಂದ ತುಂಬಿದುದಾಗಿಯೂ, ಇರುವ ಅವರ ಹೃದಯ ಗ್ರಂಥಿಯನ್ನು ಬಿಡಿಸುವನು. ರಾಜೇಂದ್ರಾ! ಆ ಸಂಕರ್ಷಣಮೂರ್ತಿಯ ಪ್ರಭಾವವನ್ನು ತುಂಬುರು ನಾರದರಿಬ್ಬರೂ ಬ್ರಹ್ಮಸಭೆಯಲ್ಲಿ ಹೀಗೆಂದು ಗಾನಮಾಡು ವರು. "ಪ್ರಪಂಚದ ಸೃಷ್ಟಿಸ್ಥಿತಿಲಯಗಳಿಗೆ ಕಾರಣಗಳೆನಿಸಿಕೊಂಡ ಸತ್ವ ರಜಸ್ತಮಸ್ಸುಗಳೆಂಬ ಪ್ರಕೃತಿಗುಣಗಳು, ಯಾವ ಮಹಾತ್ಮನ ಸಂಕಲ್ಪ ದಿಂದಲೇ ಆಯಾಕಾರ್ಯಗಳಲ್ಲಿ ಸಾಮರ್ಥ್ಯವನ್ನು ಹೊಂದುವುವೋ, ಈ ಗುಣತ್ರಯವನ್ನೊಳಕೊಂಡ ಪ್ರಕೃತಿಯೂಕೂಡ, ಮಹದಾದಿಕಾರ್ಯಗ ಳನ್ನು ಸೃಷ್ಟಿಸುವುದಕ್ಕೆ ತಕ್ಕ ಸಾಮರ್ಥ್ಯವನ್ನು ಯಾವನ ಸಂಕಲ್ಪದಿಂದಲೇ ಪಡೆದಿರುವುದೋ, ಮತ್ತು ಯಾವನು ತನ್ನಲ್ಲಿ ದೇವಮನುಷ್ಯಾದಿರೂಪ ಭೇದಗಳಿಲ್ಲದೆ ತಾನೊಬ್ಬನಾಗಿಯೇ ಇರುವನೋ, ಯಾವನ ರೂಪವೇ ಪ್ರ ಕೃತಿಪುರುಷಾತ್ಮಕವಾಗಿ ಕಾರ್ಯಾವಸ್ಥೆಯಲ್ಲಿ ನಾನಾರೂಪವನ್ನು ಹೊಂದು ವುದೋ, ಅಂತಹ ಭಗವಂತನ ಸ್ವರೂಪವನ್ನು ನಾವು ಹೇಗೆತಾನೇ ತಿಳಿ ಯಬಲ್ಲೆವು! ಮತ್ತು ಯಾವ ಮಹಾತ್ಮನಲ್ಲಿಯೇ ಚಿದಚಿದಾತ್ಮಕವಾದ ಈ ಪ್ರಪಂಚವೆಲ್ಲವೂ ಕಾಣಬರುವುದೋ, ಯಾವನು ಭಕ್ತಾನುಗ್ರಹಾರ್ಥ ವಾಗಿ ಶುದ್ಧ ಸತ್ವಮಯವಾದ ದಿವ್ಯಮಂಗಳವಿಗ್ರಹವನ್ನು ಧರಿಸಿರು ವನೋ, ಯಾವನು ಬ್ರಹ್ಮರುದ್ರಾದಿದೇವತೆಗಳಿಗೂ ಪ್ರಭುವಾಗಿ ಪರ ಮೇಶ್ವರನೆನಿಸಿ ಕೊಂಡಿರುವನೋ, ಯಾವನು ಜಗತ್ಸೃಷ್ಟಿಮೊದಲಾದ ಮಹಾವೀರ್ಯವುಳ್ಳವನೋ ಅಂತಹ ಸರ್ವೇಶ್ವರನು, ಭಕ್ತರಾದ ನಮ್ಮ ಮನಸ್ಸನ್ನು ವಶಪಡಿಸಿಕೊಳ್ಳುವುದಕ್ಕಾಗಿ ತನ್ನ ಸ್ವೇಚ್ಛೆಯಿಂದಲೇ

ಈ ರೂಪವನ್ನು ಕೈಕೊಂಡಿರುವನು. ಮತ್ತು ನಾಗಕನ್ನಿಕೆಯರಿಂದ ಆರಾಧಿಸಲ್ಪಡುವುದೂ, ಸಾತ್ವತ ಶಾಸ್ತ್ರವನ್ನುಪದೇಶಿಸುವುದೂ, ಭೂಮಂಡಲವನ್ನು ಹೊತ್ತಿರುವುದೂ, ಇವೆಲ್ಲವೂ ಇವನ ಲೀಲೆಗಳು. ಈ ವ್ಯಾಪಾರಗಳೆಲ್ಲವೂ, ಅವನು ತಾನಾಗಿ ಸ್ವೇಚ್ಛೆಯಿಂದ ಕೈಕೊಂಡುದೇ ಹೊರತು ಅವು ಕರ್ಮಸಂಬಂಧದಿಂದ ಬಂದುದಲ್ಲ. ಆತನ ಸ್ವರೂಪ ಸ್ವಭಾವಗಳು ಬೇರೊಬ್ಬರಿಗೆ ತಿಳಿಯಲಾರದಂತಿದ್ದರೂ, ನಮ್ಮಂತವರನ್ನನುಗ್ರಹಿಸುವುದಕ್ಕಾಗಿಯೇ ಈ ಲೀಲೆಗಳನ್ನು ನಡೆಸುತ್ತಿರುವನು. ಇದಲ್ಲದೆ ಆ ಭಗವಂತನ ನಾಮಾವಳಿಯ ಪ್ರಭಾವವು ನಿರುಪಮಾನವಾಗಿರುವುದು. ರೋಗಪೀಡಿತನಾಗಲಿ, ಮಹಾಪಾತಕಿಯಾಗಲಿ, ಒಂದಾವರ್ತಿ ಪರಿಹಾಸಕ್ಕಾಗಿಯಾದರೂ, ಆ ಭಗವಂತನ ನಾಮವನ್ನು ಕೀರ್ತಿಸಿದರೂ, ಅಥವಾದೈವಾಧೀನವಾಗಿ ಮತ್ತೊಬ್ಬರು ಹೇಳುವಾಗ ಅದನ್ನು ಕಿವಿಯಿಂದ ಕೇಳಿದರೂ ಅವನ ಸಮಸ್ತಪಾಪಗಳೂ ರೋಗಗಳೂ ಆಕ್ಷಣವೇ ನಿವೃತ್ತಿ ಹೊಂದುವುವು ಆದುದರಿಂದ ಮೋಕ್ಷಾಪೇಕ್ಷೆಯುಳ್ಳವರು, ಈ ಸಂಕರ್ಷಣ ಮೂರ್ತಿಯನ್ನು ಬಿಟ್ಟು, ಬೇರೆ ಯಾವನನ್ನು ತಾನೇ ಆಶ್ರಯಿಸುವರು! ಅನೇಕನದಿಗಳಿಂದಲೂ, ಪರ್ವತಗಳಿಂದಲೂ, ಸಮುದ್ರಗಳಿಂದಲೂ, ವಿವಿಧ ಜೀವರಾಶಿಗಳಿಂದಲೂ ಕೂಡಿದ ಈ ಸಮಸ್ತಭೂಮಂಡಲವೂ, ಸಹಸ್ರ ಶಿರಸ್ಸುಳ್ಳ ಯಾವನತಲೆಯಲ್ಲಿ ಅಣುಮಾತ್ರವಾಗಿತಗುಲಿಕೊಂಡಿರುವುದೋ, ಅಂತಹ ಅಪ್ರಮೇಯಮಹಿಮೆಯುಳ್ಳ ಆ ಭಗವಂತನ ಅನಂತಕಲ್ಯಾಣ ಗುಣಗಳನ್ನು, ಸಾವಿರ ನಾಲಗೆಯುಳ್ಳವನಾದರೂ ವರ್ಣಿಸಿ ಮುಗಿಸಲಾರನು. ಇಂತಹ ಮಹಾಪ್ರಭಾವದಿಂದಲೂ, ಅಪಾರವೀರ್ಯದಿಂದಲೂ, ಅಪ್ರಮೇಯಗುಣಗಳಿಂದಲೂ ಕೂಡಿದ ಸರ್ವಸ್ವತಂತ್ರನಾದ ಆ ಆದಿಶೇಷನು, ರಸಾತಲದಕೆಳಗೆ ಅಸಹಾಯನಾಗಿದ್ದು, ಲೋಕಕ್ಷೇಮಾರ್ಥವಾಗಿ ಈ ಭೂಮಂಡಲವನ್ನು ಹೊತ್ತಿರುವನು" ಎಂಬುದೇ ಆ ತುಂಬುರುನಾರದರ ಸ್ತುತಿವಾಕ್ಯಗಳು.

ಓ ರಾಜೇಂದ್ರಾ! ಬೇರೆಬೇರೆ ಕಾಮಾಪೇಕ್ಷೆಯುಳ್ಳ ಮನುಷ್ಯರು ಹೊಂದತಕ್ಕ ಲೋಕಗಳೆಲ್ಲವೂ ಇಷ್ಟೇ! ಮನುಷ್ಯರು ಅವರವರ ಕರ್ಮಾ

ನುಸಾರವಾಗಿ ಭೋಗಗಳನ್ನನುಭವಿಸುವುದಕ್ಕೆ ಭಗವಂತನಿಂದಲೇ ಈ ಲೋಕಗಳೆಲ್ಲವೂ ಸೃಷ್ಟಿಸಲ್ಪಟ್ಟಿರುವುವು. ಅವೆಲ್ಲವನ್ನೂ ನಾನು ಹಿರಿಯರಿಂದ ಕೇಳಿದ ರೀತಿಯಲ್ಲಿ ನಿನಗೂ ವರ್ಣಿಸಿ ಹೇಳಿರುವೆನು. ರಾಜೇಂದ್ರಾ! ಸಂಸಾರಿಗಳಿಗೆ ಫಲಾಪೇಕ್ಷೆಯಿಂದ ನಡೆಸಿದ ಪ್ರವೃತ್ತಿಧರ್ಮಗಳಿಗೆ ಫಲರೂಪವಾಗಿ ಲಭಿಸತಕ್ಕ ಈ ಗತಿಗಳು, ಸುಖದುಃಖಗಳ ತಾರತಮ್ಯದಿಂದ ನಾನಾವಿಧಗಳಾಗಿರುವುವು. ಅವೆಲ್ಲವನ್ನೂ ನಿನಗೆ ತಿಳಿಸಿದುದಾಯಿತು. ಇನ್ನು ಮುಂದೆ ಯಾವ ವಿಷಯವನ್ನು ತಿಳಿಯಬೇಕೆಂದಿರುವೆಯೋ ಅದನ್ನು ಕೇಳು" ಎಂದನು. ಇಲ್ಲಿಗೆ ಇಪ್ಪತ್ತೈದನೆಯ ಅಧ್ಯಾಯವು.

---

## { ಶುಕಮುನಿಯು ಪರೀಕ್ಷಿದ್ರಾಜನಿಗೆ ನರಕಯಾತನೆಗಳನ್ನು ತಿಳಿಸಿದುದು. }

ಆಗ ಪರೀಕ್ಷಿದ್ರಾಜನು ಶುಕಮುನಿಯನ್ನು ಕುರಿತು "ಓ ಮಹರ್ಷೀ! ಹಿಂದೆ ಹೇಳಿದ ಲೋಕಗಳೆಲ್ಲವೂ, ಸುಖದುಃಖಗಳ ತಾರತಮ್ಯದಿಂದ ಒಂದಕ್ಕೊಂದು ವಿಲಕ್ಷಣವಾಗಿರುವುದೆಂದು ಹೇಳಿದೆಯಲ್ಲವೆ? ಅದು ಹೇಗೆ? ಜೀವಾತ್ಮರು ಫಲಾಪೇಕ್ಷೆಯಿಂದ ನಡೆಸತಕ್ಕ ಒಂದೇವಿಧವಾದ ಪ್ರವೃತ್ತಿಧರ್ಮದಿಂದ ಈ ಲೋಕಗಳನ್ನು ಹೊಂದುವಾಗ, ಕೆಲವರಿಗೆ ಸುಖವೂ, ಕೆಲವರಿಗೆ ದುಃಖವೂ, ಬೇರೆ ಕೆಲವರಿಗೆ ಸುಖದುಃಖಗಳು ಮಿಶ್ರವಾಗಿಯೂ, ಬರುವುದು ಹೇಗೆ? ಆ ವಿಷಯವನ್ನು ನನಗೆ ವಿವರಿಸಿ ತಿಳಿಸಬೇಕು" ಎಂದನು. ಅದಕ್ಕಾ ಶುಕನು "ರಾಜೇಂದ್ರಾ ಕೇಳು! ಸತ್ವರಜಸ್ತಮೋಗುಣಗಳ ತಾರತಮ್ಯದಿಂದ, ಜೀವಾತ್ಮರಲ್ಲಿ ಸಾತ್ವಿಕರೆಂದೂ, ರಾಜಸರೆಂದೂ, ತಾಮಸರೆಂದೂ ಮೂರು ಭೇದಗಳುಂಟು. ಅದರಂತೆಯೇ ಅವರ ಶ್ರದ್ಧೆಯೂ, ಈ ಸತ್ವಾದಿಗುಣಗಳಿಂದ ಮೂರುಬಗೆಯಾಗಿ ಬೇರ್ಪಡುವುವು. ಆಯಾಜೀವಾತ್ಮರಲ್ಲಿರುವ ಗುಣಗಳಿಗೆ ತಕ್ಕಂತೆ ಅವರ ಬುದ್ಧಿಯೂ,ಅವರವರು ನಡೆಸತಕ್ಕ ಕಾರ್ಯಗಳೂ ಮೂರುವಿಧವಾಗಿರುವುವು. ಇವುಗಳ ತಾರತಮ್ಯವನ್ನನುಸರಿಸಿಯೇ,ಅವರವರಿಗೆ ಬೇರೆಬೇರೆ ಲೋಕಪ್ರಾಪ್ತಿಯುಂಟಾಗಿ, ಅಲ್ಲಲ್ಲಿ ಅನುಭವಿಸತಕ್ಕ ಕರ್ಮಫಲಗಳೂ ಬೇರ್ಪಡುವುವು. ಧರ್ಮಕಾರ್ಯಗಳಾ

ರೂಕೂಡ, ಆಯಾಕಾರ್ಯಗಳನ್ನು ನಡೆಸತಕ್ಕವರ ಗುಣಸ್ವಭಾವಗಳ ಮತ್ತು ಅವರ ಶ್ರದ್ಧಾಭಕ್ತಿಗಳ ತಾರತಮ್ಯವನ್ನನುಸರಿಸಿ, ಸುಖಾನುಭವದಲ್ಲಿ ಹೇಗೆ ತಾರತಮ್ಯವನ್ನುಂಟುಮಾಡುವುವೋ, ಹಾಗೆಯೇ ನಿಷಿದ್ಧಕಾರ್ಯಗಳಿಗೂ ಕೂಡ, ತಮೋಗುಣ ಪ್ರಚುರವಾದ ಶ್ರದ್ಧಾಬುದ್ಧಿಗಳಿಂದ ನಡೆಸಿದ ಕಾರ್ಯಗಳಿಗೆ ತಕ್ಕಂತೆ ದುಃಖದಲ್ಲಿಯೂ ತಾರತಮ್ಯವನ್ನುಂಟುಮಾಡುವುದು. ರಾಜೇಂದ್ರಾ! ಅಜ್ಞಾನವೆಂಬುದು ಅನಾದಿಯಾಗಿ ಅನುಸರಿಸಿಬರುವುದು. ಇದು ತಮೋಗುಣಮೂಲಕವಾದುದು. ಈ ಅಜ್ಞಾನದಿಂದ ಮಾಡತಕ್ಕ ಕರ್ಮಗಳು ಹಲವು ಬಗೆಯಾಗಿರುವುದರಿಂದ, ಆ ಕರ್ಮಫಲಗಳಾದ ದುರ್ಗತಿಗಳೂ ಅಸಂಖ್ಯಾತವಾಗಿರುವುವು. ಅವೆಲ್ಲವನ್ನೂ ಪೂರ್ತಿಯಾಗಿ ಹೇಳುವುದು ಸಾಧ್ಯವಲ್ಲ. ಅವುಗಳಲ್ಲಿ ವಿಶೇಷದುಃಖಕರವಾದ ಕೆಲವು ಗತಿಗಳನ್ನುಮಾತ್ರ ವರ್ಣಿಸುವೆನು ಕೇಳು” ಎಂದನು. ಅದಕ್ಕಾ ರಾಜನು “ಮುನೀಂದ್ರಾ! ಹಾಗಿದ್ದರೆ, ನರಕಗತಿಗಳೆಲ್ಲವೂ ಕೇವಲ ದುಃಖಪ್ರಚುರವಾಗಿರುವುದೆಂದು ಹೇಳುವರಷ್ಟೆ? ಆ ನರಕವೆಂಬುದು ಈ ಭೂಮಿಯಲ್ಲಿಯೇ ಅಡಗಿರುವ ಬೇರೆ ಪ್ರದೇಶಗಳೆ? ಅಥವಾ ಈ ಮೂರು ಲೋಕಗಳಿಗಿಂತಲೂ ಹೊರಗಿರುವುವೆ? ಅಥವಾ ಈ ಮೂರುಲೋಕದ ಅಂತರಾಳದಲ್ಲಿರುವುವೇ? ಆ ಸಂಗತಿಯನ್ನು ವಿಸ್ತರಿಸಿ ಹೇಳಬೇಕು” ಎಂದನು. ಅದಕ್ಕಾ ಶುಕಮುನಿಯು “ರಾಜೇಂದ್ರಾ! ಆ ನರಕವೆಂಬುದೂ ಈ ಬ್ರಹ್ಮಾಂಡದಲ್ಲಿಯೇ ಅಂತರ್ಗತವಾಗಿರುವುದು. ಅದು ಈ ಭೂಮಂಡಲದ ಕೆಳಗೆ ಅಂಡಜಲಕ್ಕೆ ಮೇಲಾಗಿರುವುದು. ಈ ಭೂಮಂಡಲಕ್ಕೆ ದಕ್ಷಿಣದಿಕ್ಕಿನಲ್ಲಿ,ಅಗ್ನಿಷ್ವಾತ್ತರೇ ಮೊದಲಾದ ಪಿತೃಗಣಗಳುಂಟು. ಇವರು ತಮ್ಮ ತಮ್ಮ ಕುಲದವರ ಶ್ರೇಯಸ್ಸಿಗಾಗಿ ಆಶೀರ್ವಾದಗಳನ್ನು ಮಾಡುತ್ತ ಉತ್ತಮವಾದ ಸಮಾಧಿಯೋಗದಲ್ಲಿರುವರು.ಈ ಪಿತೃದೇವತೆಗಳಿಗೆ ಪತಿಯಾದ ಸೂರ್ಯಪುತ್ರನಾದ ಯಮನೂ ಭಗವದಾಜ್ಞೆಯನ್ನನುಸರಿಸಿ, ತನ್ನ ಪರಿವಾರಗಳೊಡನೆ ಅಲ್ಲಿರುವನು. ಭೂಲೋಕದಲ್ಲಿ ಮರಣಹೊಂದಿದವರನ್ನು ತನ್ನ ಭಟರ ಮೂಲಕವಾಗಿ ತನ್ನಲ್ಲಿಗೆ ಕರೆತರಿಸಿಕೊಂಡು, ಅವರವರು ಮಾಡಿದ ಪಾಪಕಾರ್ಯಗಳಿಗೆ ತಕ್ಕ ದಂಡನೆಯನ್ನು ವಿಧಿಸುತ್ತಿರುವನು. ಅದನ್ನೇ ನರ

ಕವೆನ್ನುವರು. ಕೆಲವರು ಈ ನರಕಗಳನ್ನು ಇಪ್ಪತ್ತೊಂದುವಿಧವಾಗಿ ಹೇ
ಳುವರು. ಅವುಗಳ ಹೆಸರು, ಆಕಾರ, ಲಕ್ಷಣ, ಮುಂತಾದುವುಗಳನ್ನು
ಕ್ರಮವಾಗಿ ಹೇಳುವೆನು ಕೇಳು. ಇವಕ್ಕೆ ತಾಮಿಸ್ರ, ಅಂಧತಾಮಿಸ್ರ, ರೌ
ರವ, ಮಹಾರೌರವ, ಕುಂಭೀಪಾಕ, ಕಾಲಸೂತ್ರ, ಅಸಿಪತ್ರವನ, ಸೂಕ
ರಮುಖ, ಅಂಧಕೂಪ, ಕ್ರಿಮಿಭೋಜನ, ಸಂದಂಶ, ತಪ್ತೋರ್ಮಿ, ವಜ್ರ
ಕಂಟಕಶಾಲ್ಮಲಿ,ವೈತರಣಿ, ಪೂಯೋದ, ಪ್ರಾಣರೋಧ, ವಿಶಸನ, ಲಾಲಾ
ಭಕ್ಷ, ಸಾರಮೇಯಾದನ, ಅವೀಚಿ, ಅಯಃಪಾನಗಳೆಂದು ಹೆಸರು. ಇವಲ್ಲದೆ,
ಕ್ಷಾರಕರ್ದಮ, ರಕ್ಷೋಗಣಭೋಜನ, ಶೂಲಪ್ರೋತ, ದಂದಶೂಕ, ಅವಟ
ನಿರೋಧನ, ಪರ್ಯಾವರ್ತನ, ಸೂಚೀಮುಖಗಳೆಂಬ ಇವೇಳೂ ಸೇರಿ ಇಪ್ಪ
ತ್ತೆಂಟು ನರಕಗಳಿರುವುವು. ಇವುಗಳಲ್ಲಿ ಅನುಭವಿಸತಕ್ಕ ನಾನಾವಿಧದುಃಖ
ಗಳಿಗೂ, ಯಾತನೆಗಳಿಗೂ ಪಾರವೇ ಇಲ್ಲ. ಆದುದರಿಂದ ಇವೆಲ್ಲವೂ ಯಾ
ತನಾಭೂಮಿಗಳೆನಿಸುವುವು ಯಾವನು ಈ ಲೋಕದಲ್ಲಿ ಮತ್ತೊಬ್ಬರ ಹ
ಣವನ್ನಾಗಲಿ, ಮಕ್ಕಳನ್ನಾಗಲಿ, ಸ್ತ್ರೀಯರನ್ನಾಗಲಿ, ಅಪಹರಿಸುವನೋ,
ಅಂತವನು ಮಹಾಭಯಂಕರರಾದ ಯಮದೂತರಿಂದ ಯಮಪಾಶದಲ್ಲಿ ಬಿಗಿ
ಯಲ್ಪಟ್ಟು ತಾಮಿಸ್ರವೆಂಬ ನರಕದಲ್ಲಿ ನೂಕಲ್ಪಡುವನು. ಇದರಲ್ಲಿ ಬಿದ್ದ
ಜೀವನು, ತಿನ್ನುವುದಕ್ಕೆ ಅನ್ನವಿಲ್ಲದೆ,ಕುಡಿಯುವುದಕ್ಕೆ ನೀರಿಲ್ಲದೆ,ಹಸಿವು ಬಾ
ಯಾರಿಕೆಗಳಿಂದ ಪೀಡಿತನಾಗಿ, ಭಯಂಕರವಾದ ಯಾತನೆಗಳನ್ನನುಭವಿಸುವ
ನು. ಆಗಾಗ ಯಮಭಟರು ದಂಡಪ್ರಹಾರಗಳಿಂದ ಹೊಡೆಯುವರು ! ಆ
ಗಾಗ ಹೆದರಿಸುವರು ! ದೊಡ್ಡದೊಡ್ಡಬಂಡೆಗಳನ್ನು ತಂದು ಮೇಲೆ ಹಾ
ಕುವರು. ಅಂಧಕಾರಮಯವಾದ ಆ ನರಕದಲ್ಲಿ ಈ ವಿಧವಾದ ಹಿಂಸೆ
ಗಳೆಲ್ಲವನ್ನೂ ಅನುಭವಿಸುತ್ತ, ಆಗಾಗ ಮೂರ್ಛೆಬೀಳುತ್ತಿರುವನು.
ಯಾವನು ಮತ್ತೊಬ್ಬ ಪುರುಷನನ್ನು ವಂಚಿಸಿ, ಆತನ ಹೆಂಡಿರುಮಕ್ಕ
ಳನ್ನಾಗಲಿ, ಧನವನ್ನಾಗಲಿ, ಅನುಭವಿಸುವನೋ, ಅವನು ಅಂಧತಾಮಿಸ್ರ
ವೆಂಬ ನರಕದಲ್ಲಿ ತಳ್ಳಲ್ಪಡುವನು. ಇದರಲ್ಲಿ ಬಿದ್ದವನೂಕೂಡ ಅನೇಕ
ಯಾತನೆಗಳನ್ನನುಭವಿಸುತ್ತ, ಆ ಹಿಂಸೆಯನ್ನು ತಡೆಯಲಾರದೆ ಮೂರ್ಛಿತ
ನಾಗಿ,ಕಣ್ಣುಕಾಣದೆ,ಬುಡವನ್ನು ಕಡಿದ ಮರದಂತೆ ಕೆಳಗೆ ಬಿದ್ದುಬಿಡುವನು.

ಇದರಿಂದಲೇ ಈ ನರಕವನ್ನು ಅಂಧತಾಮಿಸ್ರವೆಂದು ಹೇಳುವರು. ಯಾವನು "ನಾನು ನನ್ನದು" ಎಂಬ ಅಹಂಕಾರಮಮಕಾರಗಳಿಂದ, ಕೇವಲಕುಟುಂಬ ಪೋಷಣೆಯಲ್ಲಿದ್ದು, ಇತರಭೂತಗಳಿಗೆ ದ್ರೋಹಮಾಡುವನೋ, ಅವನು ಶೀಘ್ರಕಾಲದಲ್ಲಿಯೇ ಆ ಕುಟುಂಬಾದಿಗಳೆಲ್ಲವನ್ನೂ ಅಗಲಿ, ತನ್ನ ಪಾಪಕ್ಕೆ ಫಲವಾಗಿ ತಾನೊಬ್ಬನೇ ರೌರವವೆಂಬ ನರಕದಲ್ಲಿ ಬಿದ್ದು, ಯಮಭಟರಿಂದ ಅನೇಕ ಯಾತನೆಗಳನ್ನನುಭವಿಸುವನು. ಮತ್ತು ಅವನು ಈ ಮೊದಲು ಯಾವಯಾವ ಪ್ರಾಣಿಗಳನ್ನು ಯಾವಯಾವವಿಧದಿಂದ ಹಿಂಸಿಸಿದ್ದನೋ, ಅವೆಲ್ಲವೂ, ರುರುಗಳೆಂಬ ಒಂದುಬಗೆಯ ಕ್ರೂರಜಂತುಗಳಾಗಿ ಬಂದು, ಮೊದಲೇ ಯಮಯಾತನೆಗಳಲ್ಲಿ ಸಿಕ್ಕಿ ಸಂಕಟಪಡುತ್ತಿರುವ ಆತನನ್ನು ಅದೇ ವಿಧದಿಂದ ಹಿಂಸಿಸುವುವು. ರಾಜಾ ! ರುರುಗಳೆಂದರೆ ಮಹಾಸರ್ಪಗಳಿಗಿಂತಲೂ ಕ್ರೂರಸ್ವಭಾವವುಳ್ಳ ಒಂದುಬಗೆಯ ಜಂತುಗಳು. ಇವುಗಳಿಂದ ತುಂಬಿರುವುದರಿಂದಲೇ ಆ ನರಕವನ್ನು ರೌರವವೆಂದು ಹೇಳುವರು. ಮಹಾರೌರವವೆಂಬ ನರಕದಲ್ಲಿಯೂ ಇದೇವಿಧವಾದ ಯಾತನೆಗಳುಂಟು. ಇದರಲ್ಲಿ ಮತ್ತೊಂದು ವಿಶೇಷವೇನೆಂದರೆ; ಇದರಲ್ಲಿರತಕ್ಕ ರುರುಗಳು ಹಿಂಸಿಸುವುದು ಮಾತ್ರವಲ್ಲದೆ, ಆ ನರಕದಲ್ಲಿ ಬಿದ್ದವನ ಮಾಂಸವನ್ನು ಕಿತ್ತು ತಿನ್ನುವುವು. ಯಾವನು ಈ ಲೋಕದಲ್ಲಿ ತನ್ನ ಹೊಟ್ಟೆ ಹೊರೆಯುವುದರಲ್ಲಿಯೇ ಆತುರವುಳ್ಳವನಾಗಿ, ಇತರಪ್ರಾಣಿಗಳಲ್ಲಿ ಸ್ವಲ್ಪಮಾತ್ರವೂ ಮರುಕವಿಲ್ಲದೆ, ಪಶುಪಕ್ಷಿ ಮೃಗಾದಿಗಳ ಮಾಂಸವನ್ನು ಪರ್ವ್ವಮಾಡಿ ತಿನ್ನುವನೋ, ಅಂತಹ ಕ್ರೂರನು, ರಾಕ್ಷಸಜಾತಿಗಿಂತಲೂ ಹೀನನಾಗಿ, ಯಮದೂತರಿಂದ ಕುಂಭೀಪಾಕವೆಂಬ ನರಕದಲ್ಲಿ ತಳ್ಳಲ್ಪಡುವನು. ಅಲ್ಲಿ ಅವನನ್ನು ಯಮಭಟರು ಕಾದೆಣ್ಣೆಯ ಕೊಪ್ಪರಿಗೆಯಲ್ಲಿ ಹಾಕಿ ಪಚನಮಾಡುವುದರಿಂದ ಅದಕ್ಕೆ ಕುಂಭೀಪಾಕವೆಂದು ಹೆಸರು. ಯಾವನು ಈ ಲೋಕದಲ್ಲಿ, ತಾಯ್ತಂದೆಗಳ ವಿಷಯದಲ್ಲಿಯಾಗಲಿ, ಬ್ರಾಹ್ಮಣರ ವಿಷಯದಲ್ಲಿಯಾಗಲಿ ದ್ರೋಹವನ್ನೆಣಿಸುವನೋ, ಅವನು ಕಾಲಸೂತ್ರವೆಂಬ ನರಕದಲ್ಲಿ ತಳ್ಳಲ್ಪಡುವನು. ಇದು ಹತ್ತು ಸಾವಿರಯೋಜನಗಳ ಸುತ್ತಳತೆಯುಳ್ಳ ಒಂದು ತಾಮ್ರದ ತೊಟ್ಟಿಯಂತಿದ್ದು, ಕೆಳಗೆ ಅಗ್ನಿಜ್ವಾಲೆಯಿಂದಲೂ, ಮೇಲೆ ಸೂರ್ಯತಾಪದಿಂ

ಪಲೂ ಯಾವಾಗಲೂ ತಪ್ತವಾಗುತ್ತಿರುವುದು. ಇದರಲ್ಲಿ ಬಿದ್ದವನ ಶ
ರೀರವು, ಕೆಳಗೆ ಬೆಂಕಿಯ ಕಾವಿನಿಂದಲೂ, ಮೇಲೆ ಸೂರ್ಯನ ಬಿಸಿಲಿನಿಂದ
ಲೂ, ಒಳಗೆ ಹಸಿವು ಬಾಯಾರಿಕೆಗಳಿಂದಲೂ ಬೆಂದು ಬೆಂಡಾಗುತ್ತಿರುವುದ
ರಿಂದ, ಈ ಸಂಕಟವನ್ನು ತಡೆಯಲಾರದೆ ಆ ಮನುಷ್ಯನು, ಒಂದುಸ್ಥಿತಿಯಲ್ಲಿ
ರದೆ, ಒಮ್ಮೆ ಮಲಗುವನು! ಒಮ್ಮೆ ನಿಲ್ಲುವನು! ನಾನಾಕಡೆಗಳಿಗೂ ಓಡು
ವನು! “ಅಯ್ಯೋ! ನನ್ನನ್ನು ಬಿಡಿರಿ!” ಎಂದು ಮೊರೆಯಿಡುವನು. ಈ ರೀ
ತಿಯಾಗಿ, ಒಂದು ಹಸುವಿನ ಮೈಯಲ್ಲಿ ಎಷ್ಟುಕೂದಲುಗಳುಂಟೋ,
ಅಷ್ಟುಸಂವತ್ಸರಗಳವರೆಗೆ ಈ ಸಂಕಟಗಳನ್ನೆಲ್ಲಾ ಅನುಭವಿಸುತ್ತಿರುವನು.
ಹೀಗೆ ಬಹುಕಾಲದವರೆಗೆ ಕಷ್ಟದಲ್ಲಿರಬೇಕಾದುದರಿಂದಲೇ,ಇದಕ್ಕೆ ಕಾಲಸೂ
ತ್ರವೆಂದು ಹೆಸರು.ಯಾವನು ತನಗೆರೋಗಾದಿಬಾಧೆಗಳೊಂದೂ ಇಲ್ಲದಿದ್ದಾ
ಗಲೂ, ವೇದೋಕ್ತಗಳಾದ ತನ್ನ ವರ್ಣಾಶ್ರಮಧರ್ಮಗಳನ್ನು ನಡೆಸದೆ,ಪಾ
ಷಂಡಿಗಳ ಮತವನ್ನು ಹಿಡಿದು,ತನ್ನ ಮನಸ್ಸಿಗೆ ತೋರಿದಂತೆ ನಡೆಯುವನೋ,
ಅವನು ಅಸಿಪತ್ರವನವೆಂಬ ನರಕದಲ್ಲಿ ಬೀಳುವನು. ಅಲ್ಲಿ ಯಮಭಟರು ಅವನ
ನ್ನು ಕೊರಡೆಗಳಿಂದ ಹೊಡೆಯುವರು. ಆ ಬಾಧೆಯನ್ನು ತಡೆಯಲಾರದೆ ನಾ
ನಾದಿಕ್ಕುಗಳಿಗೆ ಓಡುವನು. ಹೀಗೆ ಓಡುವಾಗ,ಕತ್ತಿಯಲಗಿನಂತೆ ಎರಡುಪಾ
ರ್ಶ್ವಗಳಲ್ಲಿಯೂ ತೀಕ್ಷ್ಣವಾದ ಅಲಗುಳ್ಳ ತಾಳೆಯ ಪೊದರುಗಳಲ್ಲಿ ಬಿದ್ದು,
ಮೈಯ್ಯೆಲ್ಲವೂ ಹರಿದು.“ಅಯ್ಯೋ ಕೆಟ್ಟೆನು ಕೆಟ್ಟೆ”ನೆಂದು ಕೂಗುತ್ತ ಅಲ್ಲಲ್ಲಿ
ಮೂರ್ಛೆಬೀಳುವನು. ಹೀಗೆ ತನ್ನ ಸ್ವಧರ್ಮವನ್ನು ಬಿಟ್ಟವನು ಪಾಷಂಡಿ
ಗಳ ಧರ್ಮಕ್ಕೆ ಯೋಗ್ಯವಾದ ಫಲವನ್ನೇ ಅನುಭವಿಸುವನು. ಈ ಲೋಕ
ದಲ್ಲಿ ಯಾವರಾಜನು ಅಥವಾ ರಾಜಪುರುಷನು, ನಿರಪರಾಧಿಗಳಿಗೆ ಶಿಕ್ಷೆ
ಯನ್ನು ಮಾಡುವನೋ, ಅಥವಾ ಬ್ರಾಹ್ಮಣರಿಗೆ ಶರೀರದಂಡನೆಯನ್ನು
ಮಾಡುವನೋ, ಅಂತಹ ಪಾಪಿಯು ಸೂಕರಮುಖವೆಂಬ ನರಕದಲ್ಲಿ ಬೀ
ಳುವನು. ಅಲ್ಲಿ ಯಮಭಟರು, ಅವನ ದೇಹವನ್ನು ಕಬ್ಬಿನ ಗಾಣದಲ್ಲಿ ಕಬ್ಬ
ನ್ನು ಹಿಂಡುವಂತೆ ಹಿಂಡುವರು. ಈ ಬಾಧೆಯನ್ನು ತಡೆಯಲಾರದೆ ಆ ಪಾಪಿ
ಜೀವನು, ದೀನಧ್ವನಿಯಿಂದ ಕೂಗುವನು. ಮೊದಲು ತನ್ನಿಂದ ಪೀಡಿತರಾದ
ವರು ಹೇಗೆ ಮೂರ್ಛಿತರಾದರೋ, ಹಾಗೆಯೇ ತಾನೂ ಮೂರ್ಛೆ

ಹೊಂದುವನು. ಈ ನರಕದಲ್ಲಿ ಹಂದಿಯ ಮೂತಿಯುಳ್ಳ ಕೆಳವು ಕ್ರೂರ ಜಂತುಗಳು ಈ ಹಿಂಸೆಯನ್ನು ಮಾಡುವುದರಿಂದ,ಇದಕ್ಕೆ ಸೂಕರಮುಖವೆಂದು ಹೆಸರು. ಯಾವನು, ಇತರಭೂತಗಳಿಗೆ ಹಿಂಸೆಯಾಗುವುದೆಂಬ ತಿಳುವಳಿಕೆಯಿದ್ದಾಗಲೂ, ಪರರಿಗೆ ತಮ್ಮಿಂದಾಗುವ ಬಾಧೆಯನ್ನು ತಿಳಿಯಲಾರದೆ, ರಕ್ತಪಾನಾದಿಗಳಿಂದಲೇ ಬದುಕತಕ್ಕ ಸೊಳ್ಳೆ, ತಿಗುಣೆ, ಮುಂತಾದುವುಗಳಮೇಲೆ ಕೋಪಿಸಿ, ಹಿಂಸೆಯನ್ನು ಮಾಡುವನೋ, ಅವನು ಆ ಭೂತದ್ರೋಹಕ್ಕೆ ಫಲವಾಗಿ ಅಂಧಕೂಪವೆಂಬ ನರಕದಲ್ಲಿ ಬೀಳುವನು. ಆ ನರಕದಲ್ಲಿ ಬಿದ್ದ ಮನುಷ್ಯನು, ಪೂರ್ವದಲ್ಲಿ ತನ್ನಿಂದ ಹಿಂಸಿಸಲ್ಪಟ್ಟ ಆಯಾ ಜಂತುಗಳಿಂದಲೇ ಹಿಂಸಿಸಲ್ಪಡುತ್ತ, ಕ್ಷಣಕಾಲವೂ ನೆಮ್ಮದಿಯಿಂದ ಮಲಗಲಾರದೆ, ನಿಂತಲ್ಲಿ ನಿಲ್ಲದೆ, ರೋಗಪೀಡಿತವಾದ ಶರೀರದಲ್ಲಿ ಬಿದ್ದು ತೊಳಲುವ ಜೀವನಂತೆ, ಅಂಧಕಾರದಲ್ಲಿ ಬಿದ್ದು ಸಂಕಟಪಡುವನು. ಈ ನರಕವು ಗಾಢಾಂಧಕಾರದಿಂದ ತುಂಬಿದ ಹಾಳು ಬಾವಿಯಂತಿರುವುದರಿಂದ ಇದಕ್ಕೆ ಅಂಧಕೂಪವೆಂದು ಹೆಸರು. ರಾಜೇಂದ್ರಾ ! ಈ ಲೋಕದಲ್ಲಿ ಯಾವನು ಭಿಕ್ಷೆಯಿಂದಾಗಲಿ, ದೈವಾಧೀನವಾಗಿಯಾಗಲಿ ತನಗೆ ಸಿಕ್ಕಿದ ಅನ್ನವನ್ನು, ಅಥಿತಿಗಳಿಗೆ ಕೊಡದೆ, ತಾನೊಬ್ಬನೇ ಭುಜಿಸುವನೋ, ಯಾವನು, ಪಂಚಮಹಾಯಜ್ಞಾದಿಗಳನ್ನು ನಡೆಸದೆ ಆಹಾರವನ್ನು ತಿನ್ನುವನೋ, ಅವನು ಪರಲೋಕದಲ್ಲಿ ಅನೇಕಕ್ರಿಮಿಗಳಿಂದ ತುಂಬಿ ಲಕ್ಷಯೋಜನವಿಸ್ತಾರವುಳ್ಳ ಕ್ರಿಮಿಭೋಜನವೆಂಬ ಕುಂಡದಲ್ಲಿ ಬೀಳುವನು. ಇದರಲ್ಲಿ ಬಿದ್ದವನು ಅಲ್ಲಿನ ಹುಳಗಳ ಗುಂಪಿನಲ್ಲಿ ತಾನೂ ಒಂದು ಹುಳುವಿನಂತೆ ಒದ್ದಾಡುವನು. ಆ ಕ್ರಿಮಿಗಳನ್ನೇ ಭಕ್ಷಿಸುವವನು. ಆ ಕ್ರಿಮಿಗಳಿಂದಲೇ ತಾನೂ ಆಗಾಗ ಕಚ್ಚಿ ತಿನ್ನಲ್ಪಡುವನು. ಆ ಕುಂಡವು ಎಷ್ಟುಯೋಜನಗಳ ವಿಸ್ತಾರವುಂಟೋ ಅಷ್ಟುವರುಷಗಳವರೆಗೆ ದುಃಖವನ್ನನುಭವಿಸುತ್ತಿರುವನು, ಅಯ್ಯೋ! ಆಗ ಅವನ ಕಷ್ಟವನ್ನು ಕೇಳಬೇಕೆ? ತಾನು ಹಿಂದೆ ಅತಿಥಿಗಳನ್ನಾದರಿಸದೆ ಹೋದುದಕ್ಕಾಗಿಯೂ, ಪಂಚಮಹಾಯಜ್ಞಗಳನ್ನು ನಡೆಸದೆ ಹೋದುದಕ್ಕಾಗಿಯೂ, ಬಹಳ ಪಶ್ಚಾತ್ತಾಪಪಟ್ಟು ಕೊರಗುತ್ತಿರುವನು. ಯಾವನು ಈ ಲೋಕದಲ್ಲಿ ತನಗೆ ಯಾವವಿಧವಾದ ವಿಪತ್ತೂ ಇಲ್ಲದಿ

ರುವಾಗಲೂ, ಕಳ್ಳತನದಿಂದಾಗಲಿ, ಬಲಾತ್ಕಾರದಿಂದಾಗಲಿ ಬ್ರಾಹ್ಮಣರ ಅಥವಾ ಇತರರ ಹಿರಣ್ಯರತ್ನಾದಿಗಳನ್ನು ಕೈಸೇರಿಸಿಕೊಳ್ಳುವನೋ, ಅವನನ್ನು ಯಮಭಟರು ಸಂದಂಶವೆಂಬ ನರಕದಲ್ಲಿ ನೂಕಿ, ಕೆಂಪಗೆ ಕಾಯಿಸಿದ ಕಬ್ಬಿಣದ ಇಕ್ಕುಳದಿಂದ ಅವನ ದೇಹವನ್ನು ಕೀಳುವರು. ಇದರಿಂದಲೇ ಈ ನರಕಕ್ಕೆ ಸಂದಂಶವೆಂದು ಹೆಸರು. ಲೋಕದಲ್ಲಿ ಪುರುಷನು, ತನಗೆ ಯೋಗ್ಯೆಳಲ್ಲದ ಸ್ತ್ರೀಯನ್ನಾಗಲಿಹೆಂಗಸುತನಗೆ ಯೋಗ್ಯನಲ್ಲದ ಪುರುಷನ್ನಾಗಲಿಭೋಗಿಸಿದರೆ, ಅವರನ್ನು ಯಮಭಟರು ತಪ್ತಸೂರ್ಮಿಯೆಂಬ ನರಕದಲ್ಲಿ ನೂಕೀ ಉರಿಯುತ್ತಿರುವ ಲೋಹದ ಕಂಬವನ್ನು ಆಲಿಂಗನಮಾಡಿಸಿ,ಕೊರಡೆಗಳಿಂದ ಹೊಡೆಯುವರು. ಇಲ್ಲಿ ಯಾವನು ಲೋಭಬುದ್ಧಿಯಿಂದ ಯೋಗ್ಯತಾಯೋಗ್ಯತೆಗಳನ್ನು ವಿಚಾರಿಸದೆ,ಸೇವಿಸಬಾರದವರನ್ನು ಸೇವಿಸುವನೋ, ಅವನನ್ನು ಯಮಭಟರು, ವಜ್ರಕಂಟಕಶಾಲ್ಮಲಿಯೆಂಬ ನರಕಕ್ಕೆ ತಳ್ಳಿ, ಅಲ್ಲಿ ವಜ್ರದಂತೆ ದೃಢವಾದ ಮುಳ್ಳುಗಳುಳ್ಳ ಶಾಲ್ಮಲೀವೃಕ್ಷದಮೇಲೇರಿಸಿ, ಅವನ ಸರ್ವಾವಯವಗಳೂ ಹರಿದುಹೋಗುವಂತೆ ಹಿಂಸಿಸುವರು. ಇಲ್ಲಿ ಯಾವ ರಾಜರು, ಅಥವಾ ರಾಜಭಟರು, ತಾವು ವೈದಿಕಧರ್ಮಮಾರ್ಗವನ್ನು ಮೀರುವುದಲ್ಲದೆ, ತಮ್ಮ ಪ್ರಜೆಗಳನ್ನೂ ಅದೇವಿಧವಾಗಿ ಬಲಾತ್ಕರಿಸುವರೋ, ಅ ವ ರು ವೈತರಣಿಯೆಂಬ ನರಕದಲ್ಲಿ ಬೀಳುವರು. ನರಕಕ್ಕೆ ಸುತ್ತಿನ ಕಂದಕದಂತಿರುವ ಆ ನದಿಯಲ್ಲಿ, ಮೊಸಳೆ ಮೀನು, ಮುಂತಾದ ಜಲಜಂತುಗಳೆಲ್ಲವೂ ಸುತ್ತಿಮುತ್ತಿ ಅವನ ದೇಹವನ್ನು ಕಿತ್ತು ತಿನ್ನುವುವು. ಹೀಗೆ ನಾನಾಕಡೆಗಳಲ್ಲಿ ಕ್ರೂರಜಂತುಗಳು ಕಿತ್ತು ತಿನ್ನುತಿದ್ದರೂ, ಆ ಪಾಪಿಜೀವನು, ತನ್ನ ಪಾಪಶೇಷದಿಂದ ಪ್ರಾಣವಿಯೋಗವನ್ನು ಹೊಂದದೆ, ಬಹುಕಾಲದವರೆಗೆ ಆ ಚಿತ್ರಹಿಂಸೆಯನ್ನೇ ಅನುಭವಿಸುತ್ತಿರುವನು. ಆಗ ತಾನು ಹಿಂದೆ ಮಾಡಿದ ಪಾಪಗಳನ್ನು ನೆನೆಸಿಕೊಂಡು ಪಶ್ಚಾತ್ತಾಪದಿಂದ ಕೊರಗುವನು. ಮತ್ತು ಮಲಮೂತ್ರಗಳು, ಕೀವು, ಕೊಬ್ಬು, ಕೆನ್ನೀರು, ರಕ್ತ, ಕೂದಲು, ಉಗುರು, ಎಲುಬು, ಮುಂತಾದ ಕಶ್ಮಲಗಳಿಂದ ತುಂಬಿದ ಆ ನದಿಯ ಹಳ್ಳದಲ್ಲಿ ಹೊರಳುತ್ತಿರುವನು. ಈ ಲೋಕದಲ್ಲಿ ತಾನು ಉತ್ತಮಜಾತಿಯಲ್ಲಿ ಹುಟ್ಟಿರುವಾಗ

ಲೂ ಯಾವನು, ನೀಚಜಾತಿಯ ಹೆಂಗಸನ್ನು ಪರಿಗ್ರಹಿಸಿ, ಶೌಚಾಚಾರಗ ಳನ್ನು ಬಿಟ್ಟು, ನಾಚಿಕೆಯಿಲ್ಲದೆ, ಮೃಗಜಾತಿಯಂತೆ ಸ್ವೇಛ್ಛಾಚಾರಿಯಾಗಿ ಪ್ರವರ್ತಿಸುವನೋ, ಅವನು ಪರಲೋಕದಲ್ಲಿ ಕೀವಿನಿಂದಲೂ, ಮಲ ಮೂತ್ರಗಳಿಂದಲೂ, ಶ್ಲೇಷ್ಮದಿಂದಲೂ, ಜೊಲ್ಲಿನಿಂದಲೂ ತುಂಬಿದ ಮ ಡುವಿನಲ್ಲಿ ಬಿದ್ದು,ಒದ್ದಾಡುತ್ತ ಆ ಕಶ್ಮಲಗಳನ್ನೇ ಭಕ್ಷಿಸುತ್ತಿರುವನು. ಹೀಗೆ ಕೇವಲ ಕಶ್ಮಲಗಳಿಂದ ತುಂಬಿರುವುದರಿಂದ ಈ ನರಕಕ್ಕೆ ಪುಯೋದವೆಂ ದು ಹೆಸರು. ಈ ಲೋಕದಲ್ಲಿ ಯಾವನು ಬ್ರಾಹ್ಮಣಾದಿವರ್ಣದಲ್ಲಿ ಹು ಟ್ಟಿದ್ದಾಗಲೂ, ಕತ್ತೆ,ನಾಯಿ, ಮುಂತಾದುವುಗಳನ್ನು ಸಾಕುತ್ತ, ಜನಗಳು ಯಾತ್ರಾರ್ಥವಾಗಿ ಹೋಗಿಬರತಕ್ಕ ಪುಣ್ಯತೀರ್ಥಗಳಿಲ್ಲದ ಕಡೆಗಳಲ್ಲಿಯೂ ನಿಷ್ಕಾರಣವಾಗಿ ಬೇಟೆಯಾಡಿ ಮೃಗಗಳನ್ನು ಕೊಲ್ಲುವನೋ, ಅವನು ಸತ್ತ ಮೇಲೆ ಪ್ರಾಣನಿರೋಧವೆಂಬ ನರಕದಲ್ಲಿ ತಳ್ಳಲ್ಪಡುವನು. ಅವನನ್ನು ಅಲ್ಲಿ ಯಮಭಟರು ಬಾಣಗಳಿಂದ ಹೊಡೆದು ಪ್ರಾಣವಿಯೋಗವಾಗುವಂತೆ ಪೀಡಿಸುವರು. ಈ ಲೋಕದಲ್ಲಿ ಯಾವನು ಜನಗಳನ್ನು ವಂಚಿಸುವುದಕ್ಕಾ ಗಿಯೂ, ದಂಭಕ್ಕಾಗಿಯೂ ಯಜ್ಞಗಳನ್ನಾರಂಭಿಸಿ, ಆ ನೆವದಿಂದ ಪಶುಗ ಳನ್ನು ಕೊಲ್ಲುವನೋ, ಅವನು ಸತ್ತಮೇಲೆ, ವೈಶಸನವೆಂಬ ನರಕದಲ್ಲಿ ಬೀಳು ವನು. ಅಲ್ಲಿ ಅವನನ್ನು ಯಮಭಟರು ಯಜ್ಞಪಶುಗಳನ್ನು ಗುದ್ದಿ ಕೊಲ್ಲು ವಂತೆ ಪೀಡಿಸುತ್ತಿರುವರು. ಈ ಲೋಕದಲ್ಲಿ ಯಾವನು ಕಾಮಾತುರನಾಗಿ, ತನ್ನ ಕೈಹಿಡಿದ ಹೆಂಡತಿಗೆ ತನ್ನ ರೇತಸ್ಸನ್ನು ಕುಡಿಸುವನೋ, ಅವನು ಪರ ಲೋಕದಲ್ಲಿ ಲಾಲಾಭಕ್ಷವೆಂಬ ನರಕದಲ್ಲಿ ತಳ್ಳಲ್ಪಡುವನು. ಅಲ್ಲಿ ಯಮ ದೂತರು ಇವನನ್ನು ರೇತಸ್ಸಿನಿಂದ ತುಂಬಿದ ಕಾಲುವೆಯಲ್ಲಿ ನೂಕಿ, ಆ ರೇತಸ್ಸನ್ನೇ ಕುಡಿಸುವರು. ಈ ಲೋಕದಲ್ಲಿ ಯಾವನು ಇತರರ ಮನೆಗೆ ಬೆಂಕಿಯನ್ನಿಡುವನೋ, ಯಾವನು ವಿಷಪ್ರಯೋಗದಿಂದ ಮತ್ತೊಬ್ಬರನ್ನು ಕೊಲ್ಲುವನೋ, ಯಾವನು ತಾನು ರಾಜನ ಕಡೆಯವನೆಂಬ ಅಧಿಕಾರಮದ ದಿಂದ, ದಯಾಶೂನ್ಯನಾಗಿ, ಪಟ್ಟಣಗಳಲ್ಲಿಯೂ, ಹಳ್ಳಿ ಗಾಡುಗಳಲ್ಲಿಯೂ ವಾಸಮಾಡುವ ಪ್ರಜೆಗಳನ್ನೂ ಇತರಪ್ರಾಣಿಗಳನ್ನೂ ಪೀಡಿಸುವನೋ, ಇಂತವರೆಲ್ಲರೂ ಸತ್ತಮೇಲೆ, ಸಾರಮೇಯಾದನವೆಂಬನರಕದಲ್ಲಿ ಬೀಳುವರು.

ಅಲ್ಲಿ ಅವರನ್ನು ವಜ್ರದಂತೆ ದೃಢವಾದ ಕೋರೆಗಳುಳ್ಳ ಏಳುನೂರಿಪ್ಪತ್ತು ನಾಯಿಗಳು, ಆತುರದಿಂದ ಮೇಲೆಬಿದ್ದು ಕಚ್ಚಿ ತಿನ್ನುವುವು ಈ ಲೋಕದಲ್ಲಿ ಯಾವನು ಸುಳ್ಳು ಸಾಕ್ಷ್ಯವನ್ನು ಹೇಳುವನೋ, ವರ್ತಕವ್ಯವಹಾರಗಳಲ್ಲಿ ಯಾವನು ಸುಳ್ಳಾಡುವನೋ, ಅವನು ಸತ್ತಮೇಲೆ ಅವೀಚಯೆಂಬ ನರಕಕ್ಕೆ ತಳ್ಳಲ್ಪಡುವನು. ಇದರಲ್ಲಿ ಯಮದೂತರು ಅವನನ್ನು ನೂರುಯೋಜನಗಳ ಎತ್ತರದಿಂದ ಪರ್ವತಶಿಖರದಮೇಲೆ ತಲೆಕೆಳಗಾಗಿ ಬೀಳುವಂತೆ ಎತ್ತಿ ಹಾಕುವರು. ಇಲ್ಲಿನ ನೆಲವೆಲ್ಲವೂ ಕೇವಲಶಿಲಾಮಯವಾಗಿಯೂ, ನಿರ್ಜಲಪ್ರದೇಶವಾಗಿಯೂ ಇರುವುದು. ಇದಕ್ಕಾಗಿಯೇ ಇದನ್ನು ಅವೀಚಿಯೆಂದು ಹೇಳುವರು ಹೀಗೆ ಮೇಲಿಂದ ಕೆಳಕ್ಕೆ ಬೀಳುವ ಪಾಪಿಯ ಶರೀರವು, ಎಳ್ಳುಕಾಳಷ್ಟು ತುಂಡುತುಂಡಾಗಿ ಹರಿಯುತ್ತಬಂದ ರೂ, ಅವನು ಸಾಯದೆ, ಆಗಾಗ ಇದೇವಿಧವಾದ ಚಿತ್ರಹಿಂಸೆಯನ್ನೇ ಅನುಭವಿಸುತ್ತಿರುವನು. ಈ ಲೋಕದಲ್ಲಿ ಬ್ರಾಹ್ಮಣನಾಗಲಿ, ಬ್ರಾಹ್ಮಣಸ್ತ್ರೀಯಾಗಲಿ, ವ್ರತನಿಷ್ಠರಾದ ಇತರ ವರ್ಣದವರಾಗಲಿ, ಮದ್ಯಪಾನವನ್ನು ಮಾಡಿದರೂ, ಕ್ಷತ್ರಿಯನಾಗಲಿ, ವೈಶ್ಯನಾಗಲಿ, ತಮಗೆ ನಿಷಿದ್ಧವಾದ ಸೋಮಪಾನವನ್ನು ಮಾಡಿದರೂ, ಅವರೆಲ್ಲರೂ ಅಯಃಪಾನವೆಂಬ ನರಕದಲ್ಲಿ ಬೀಳುವರು. ಇವರನ್ನು ಯಮಭಟರು, ಕೆಳಕ್ಕೆ ಕೆಡಹಿ, ಅವರ ಎದೆಯಮೇಲೆ ಕಾಲೂರಿನಿಂತು,ಕಾಯಿಸಿ ಕರಗಿಸಿದ ಕಬ್ಬಿಣವನ್ನು ಬಾಯಿಗೆ ಹುಯ್ಯುವರು. ಇಲ್ಲಿ ಯಾವನು, ವಿದ್ಯೆಯಲ್ಲಿಯೂ, ಆಚಾರದಲ್ಲಿಯೂ, ವರ್ಣಾಶ್ರಮಗಳಲ್ಲಿಯೂ ತನಗಿಂತಲೂಉತ್ತಮರಾದವರನ್ನು ಅವಮಾನಿಸುವನೋ,ಅವನು ಕ್ಷಾರಕರ್ದಮವೆಂಬ ನರಕದಲ್ಲಿ ತಲೆಕೆಳಗಾಗಿಬಿದ್ದು, ಕೊನೆಮೊದಲಿಲ್ಲದ ಯಾತನೆಗಳನ್ನನುಭವಿಸುವನು. ಈ ಲೋಕದಲ್ಲಿ ಯಾವ ಪುರುಷನಾಗಲಿ, ಇಲ್ಲವೇ ಸ್ತ್ರೀಯಾಗಲಿ,ದುರ್ಗಿ, ಕಾಳಿ, ಮುಂತಾದ ದೇವತೆಗಳಪೂಜೆಗಾಗಿ, ನರಬಲಿಯನ್ನು ಕೊಡುವರೋ, ಅವರು ರಕ್ಷೋಗಣಭೋಜನವೆಂಬ ನರಕದಲ್ಲಿ ನೂಕಲ್ಪಡುವರು. ಇಲ್ಲಿ ಮೊದಲು ಆ ಪಾಪಿಗಳಿಂದ ಕೊಲ್ಲಲ್ಪಟ್ಟ ನರಪಶುಗಳೇ, ಅಲ್ಲಿ ರಾಕ್ಷಸರಾಗಿ ಬಂದು, ಕೊಲೆಗಾರರಂತೆ ಅವರನ್ನು ಶಸ್ತ್ರಗಳಿಂದ ಕಡಿದು, ಅವರ ರಕ್ತವನ್ನು ಹೀರುತ್ತ, ಹಿಂದೆ ತಮ್ಮನ್ನು ಬಲಿ

ಕೊಡುವಾಗ ಅವರು ಹೇಗೆ ಸಂತೋಷದಿಂದ ಆ ಕಾಳಿಯ ಮುಂದೆ ಕುಣಿದಾಡಿದರೋ, ಅದರಂತೆಯೇ ಅಟ್ಟಹಾಸದಿಂದ ನಗುತ್ತ ಹಾಡಿಹಾಡಿ ಕುಣಿಯುವರು. ಈ ಲೋಕದಲ್ಲಿ ಯಾವನು ಕಾಡುಗಳಲ್ಲಿ ನಿರಪರಾಧಿಗಳಾಗಿ ಜೀವಿಸುತ್ತಿರುವ ಪ್ರಾಣಿಗಳಿಗೆ ಆಸೆತೋರಿಸಿ ಹಿಡಿದು, ಅವುಗಳನ್ನು ವಿನೋದಕ್ಕಾಗಿ, ಸೂಜಿ ಮೊದಲಾದುವುಗಳಿಂದ ಚುಚ್ಚುವುದು, ದಾರದಲ್ಲಿ ಕಟ್ಟುವುದು, ಇವೇ ಮೊದಲಾದ ಚೇಷ್ಟೆಗಳಿಂದ ಹಿಂಸಿಸುವರೋ, ಅವರು ಸತ್ತಮೇಲೆ ಶೂಲಪ್ರೋತವೆಂಬ ನರಕದಲ್ಲಿ ಬಿದ್ದು, ಹಿಂದೆ ತಾವು ಇತರಪ್ರಾಣಿಗಳನ್ನು ಹಿಂಸಿಸಿದ ರೀತಿಯಲ್ಲಿಯೇ, ಶೂಲಾದಿಗಳಲ್ಲಿ ಸಿಕ್ಕಿಸಲ್ಪಟ್ಟು ಅನೇಕಯಾತನೆಗಳನ್ನನುಭವಿಸುತ್ತ, ಹಸಿವು ಬಾಯಾರಿಕೆಗಳಿಂದ ತತ್ತಳಿಸುವರು. ಮತ್ತು ಅಲ್ಲಿ ಸೂಜಿಯಂತೆ ತೀಕ್ಷ್ಣವಾದ ಕೊಕ್ಕುಳ್ಳ ಹದ್ದು, ಕಾಗೆ, ಕೊಕ್ಕರೆ ಮುಂತಾದ ಜಂತುಗಳಿಂದ ಕುಕ್ಕಲ್ಪಡುತ್ತ, ಮೈಯ್ಯೆಲ್ಲವೂ ಹರಿದು, ಆಗ ತಮ್ಮ ಪೂರ್ವದ ಪಾಪಕಾರ್ಯವನ್ನು ನೆನೆಸಿಕೊಂಡು ಕೊರಗುವರು. ಈ ಲೋಕದಲ್ಲಿ ಯಾರು ಸರ್ಪಗಳಂತೆ ಕ್ರೂರಸ್ವಭಾವವುಳ್ಳವರಾಗಿ, ಇತರಪ್ರಾಣಿಗಳಿಗೆ ಭಯವನ್ನುಂಟುಮಾಡುವರೋ, ಅವರು ದಂದಶೂಕವೆಂಬ ನರಕದಲ್ಲಿ ಬೀಳುವರು. ಅಲ್ಲಿ ಐದು ಹೆಡೆಯುಳ್ಳ ಸರ್ಪಗಳೂ, ಏಳುಹೆಡೆಯುಳ್ಳ ಸರ್ಪಗಳೂ, ಇಲಿಗಳನ್ನು ಹಿಡಿಯುವಂತೆ ಮೇಲೆ ಬಿದ್ದು ಬಂದು ಅವರನ್ನು ಕಚ್ಚುವುವು. ಈ ಲೋಕದಲ್ಲಿ ಯಾರು, ಕುಂಟರು, ಕುರುಡರು, ಎಳಮಕ್ಕಳು ಮುಂತಾದ ಬಲಹೀನಪ್ರಾಣಿಗಳನ್ನು, ಹಳ್ಳ, ಪೊದೆ, ಗೂಡು, ಮುಂತಾದುವುಗಳಲ್ಲಿ ನಿರ್ಬಂಧಿಸಿಡುವರೋ, ಅವರನ್ನು ಯಮಭಟರು, ಅವಟನಿರೋಧವೆಂಬ ನರಕದ ಹಳ್ಳದಲ್ಲಿ ನೂಕಿ, ವಿಷಾಗ್ನಿಯಿಂದಲೂ, ವಿಷದ ಹೊಗೆಯಿಂದಲೂ ಅದರ ಬಾಗಿಲನ್ನು ತಡೆದು, ಹೊರಕ್ಕೆ ಬಾರದಂತೆ ಮಾಡುವರು. ಇಲ್ಲಿ ಯಾವನು ಪರಿಚಿತರಾಗಿ ಮನೆಗೆ ಬಂದ ಅತಿಥಿಗಳನ್ನಾಗಲಿ, ಅಪರಿಚಿತರಾಗಿ ಬಂದ ಅಭ್ಯಾಗತರನ್ನಾಗಲಿ, ಸಂತೋಷದಿಂದಾದರಿಸದೆ, ಕೋಪದಿಂದುರಿಯುವ ಕಣ್ಣುಗಳಿಂದ ದುರದುರನೆ ನೋಡುವನೋ, ಅವನು ಸತ್ತಮೇಲೆ ಪರಲೋಕದಲ್ಲಿ ಅಕ್ಷಿಪರ್ಯಾವರ್ತನವೆಂಬ ನರಕದಲ್ಲಿ ಬೀಳುವನು. ಅಲ್ಲಿ ಕಾಗೆ,

ಹದ್ದು, ಮೊದಲಾದ ಬಲಿಜಂತುಗಳು, ತಮ್ಮ ತೀಕ್ಷ್ಣವಾದ ಕೊಕ್ಕುಗ ಳಿಂದ ಅವನ ಕಣ್ಣುಗಳನ್ನು ಕಿತ್ತುವುವು. ಈ ಲೋಕದಲ್ಲಿ ಯಾವನು ತನ್ನ ಲ್ಲಿರುವ ಅಲ್ಪಸ್ವಲ್ಪಹಣದ ಹೆಮ್ಮೆಯಿಂದ ತಾನೇ ಮೇಲೆಂದು ತಿಳಿದು, ಗುರುಹಿರಿಯರನ್ನೂ ಲಕ್ಷ್ಯಮಾಡದೆ, ಎಲ್ಲರಲ್ಲಿಯೂ ಸಂದೇಹಬುದ್ಧಿಯುಳ್ಳ ವನಾಗಿ, ಅನವರತವೂ ಆ ಹಣದ ಚಿಂತೆಯಿಂದಲೇ. ಕೊರಗಿ ಕೃಶನಾಗು ತ್ತ, ಪಿಶಾಚದಂತೆ ಆಹಣವನ್ನು ಕಾಯುತ್ತಿರುವನೋ, ಅವನು ಹಿಂದೆ ತಾನು ಆ ಹಣವನ್ನು ಸಂಪಾದಿಸುವುದಕ್ಕಾಗಿಯೂ, ಅದನ್ನು ವೃದ್ಧಿಪಡಿ ಸುವುದಕ್ಕಾಗಿಯೂ, ಆಗಾಗ ಮಾಡಿದ ಪಾಪಗಳೆಲ್ಲವನ್ನೂ ಮೂಟೆಕ ಟ್ಟಿ ಹೊತ್ತುಕೊಂಡು, ಪರಲೋಕದಲ್ಲಿ ಸೂಚೀಮುಖವೆಂಬ ನರಕದಲ್ಲಿ ಬೀಳುವನು. ಅಲ್ಲಿ ಯಮಭಟರು ಬಟ್ಟೆಯನ್ನು ಹೊಲಿಯುವಂತೆ ಪಾಪಸ್ವ ರೂಪನಾದ ಇವನ ದೇಹವನ್ನು ಸೂಜಿಯಿಂದ ಚುಚ್ಚಿ, ದಾರವನ್ನೆ ಳೆಯುವರು. ಈವಿಧವಾದ ಅನೇಕಯಾತನಾಸ್ಥಳಗಳು ಆ ಯಮ ಪಟ್ಟಣದಲ್ಲಿ ಲಕ್ಷೋಪಲಕ್ಷವಾಗಿರುವುವು. ಈ ನರಕಗಳಲ್ಲಿ, ಮೇಲೆ ಹೇ ಳಿದ ಪಾಪಿಷ್ಠರಂತೆ ಇನ್ನೂ ಬೇರೆಬೇರೆ ಪಾಪಮಾಡಿದವರಿಗೆ, ಅವರ ವರ ಪಾಪಕ್ಕೆ ತಕ್ಕ ಶಿಕ್ಷೆಗಳನ್ನು ಹೊಂದುವುದಕ್ಕಾಗಿ ಬೇರೆಬೇರೆ ಯಾತ ನಾಸ್ಥಳಗಳುಂಟು. ಇದರಂತೆಯೇ ಪುಣ್ಯಕರ್ಮಗಳನ್ನು ನಡೆಸಿದವರು ಸ್ವ ರ್ಗಾದಿಲೋಕಗಳಲ್ಲಿ ಪ್ರವೇಶಿಸಿ ಪುಣ್ಯಫಲಗಳಾದ ಸುಖಗಳನ್ನನುಭವಿಸು ವರು. ಈ ಮೇಲೆಹೇಳಿದ ಎರಡು ಬಗೆಯವರೂ, ಆಯಾ ಲೋಕಗಳಲ್ಲಿ ಅನುಭವಿಸಿ ಮಿಕ್ಕ ಪುಣ್ಯಪಾಪಶೇಷವನ್ನು ಕಳೆಯುವುದಕ್ಕಾಗಿ, ಈ ಭೂ ಲೋಕದಲ್ಲಿ ತಿರುಗಿ ಜನ್ಮವನ್ನೆತ್ತುವರು. ಇದೇ ಪ್ರವೃತ್ತಿಧರ್ಮಗಳನ್ನು ನಡೆಸಿದವರು ಸುತ್ತತಕ್ಕ ಗತಿಗಳು. ನಿವೃತ್ತಿಧರ್ಮವನ್ನು ಹಿಡಿದವರಿಗೆ ಪುನರ್ಜನ್ಮವಿಲ್ಲದ ಮುಕ್ತಿಯು ಲಭಿಸುವುದು. ಇದನ್ನು ಮೊದಲೇ ತಿಳಿಸಿ ರುವೆನಷ್ಟೆ? ರಾಜೇಂದ್ರಾ! ಬಹ್ಮಾಂಡಕೋಶವೆಲ್ಲವೂ ಇಷ್ಟೇ! ಮೂರು ಲೋಕಗಳನ್ನಡಗಿಸಿಕೊಂಡಿರುವ ಈ ಬ್ರಹ್ಮಾಂಡಕೋಶವನ್ನೇ ಪುರಾಣಗ ಳಲ್ಲಿ ಹದಿನಾಲ್ಕುಲೋಕಗಳಾಗಿ ವಿಭಾಗಿಸಿ ಹೇಳುವುದುಂಟು. ಆದರೆ ಈ ಭೂಮಿಯನ್ನೂ, ಇದರ ಕೆಳಗಿರುವ ಅತಲಾದಿಲೋಕಗಳನ್ನೂ ಸೇರಿಸಿ ಭೂ

ಲೋಕವೆಂದೂ, ಮೇಲಿರುವ ಮಹರ್ಲೋಕಾದಿಗಳೆಲ್ಲವನ್ನೂ ಸೇರಿಸಿ ದ್ಯು ಲೋಕವೆಂದೂ, ಇವರನಡುವೆ ಇರುವುದನ್ನು ಅಂತರಿಕ್ಷಲೋಕವೆಂದೂ ವಿ ಭಾಗಿಸಿ, ಈ ಅಂಡಕೋಶವು ಮೂರುಲೋಕಗಳಿಂದಅಡಗಿರುವುದಾಗಿಇಲ್ಲಿ ನಾನು ವಿವರಿಸಿರುವೆನು.ಇದರಲ್ಲಿರುವ ಒಳಭೇದಗಳನ್ನು ತೋರಿಸುವುದಕ್ಕಾ ಗಿಯೇ ಪುರಾಣಾಂತರಗಳಲ್ಲಿ ಅಂಡಕೋಶವು ಹದಿನಾಲ್ಕುಲೋಕಗಳುಳ್ಳ ದಾಗಿ ನಿರೂಪಿಸಲ್ಪಟ್ಟಿರುವುದು. ಪರಮಪುರುಷನಾದ ಶ್ರೀಮನ್ನಾರಾಯ ಣನಿಗೆ, ಸ್ಥೂಲಸೂಕ್ಷ್ಮಗಳೆಂಬ ಎರಡುರೂಪಗಳುಂಟೆಂದು ಹೇಳಿದ್ದೆನಲ್ಲವೆ! ಈ ಬ್ರಹ್ಮಾಂಡವೇ ಭಗವಂತನ ಸ್ಥೂಲರೂಪವೆಂದು ತಿಳಿ! ಏಕೆಂದರೆ, ಆ ಭಗವಂತನು ತನಗೆ ಶರೀರವಾದ ಪ್ರಕೃತಿಯಲ್ಲಿರುವ ಸತ್ವಾದಿಗುಣಗಳನ್ನು ಹೆಚ್ಚಿಸಿ ತೋರಿಸಿದಾಗ, ಈಪ್ರಪಂಚಸ್ವರೂಪದಿಂದ ಕಾಣಿಸಿಕೊಳ್ಳುವ ನು. ಆದುದರಿಂದ ಆ ಭಗವಂತನ ಸ್ಥೂಲರೂಪವನ್ನೇ ಈಗ ನಿನಗೆ ವಿವರಿ ಸಿದಂತಾಯಿತು! ಭಗವಂತನ ಸ್ಥೂಲರೂಪವನ್ನು ತಿಳಿಸತಕ್ಕ ಈ ಗ್ರಂಥ ವನ್ನು ಯಾವನು ಆದರಿಸಿ ಕೇಳುವನೋ, ಯಾವನು ಮತ್ತೊಬ್ಬ ರಿಗೆ ಹೇಳುವನೋ, ಯಾವನು ಇದನ್ನು ಪಠಿಸುವನೋ ಅವನು, ವೇದಾಂತ ಗಳಿಂದ ಪ್ರತಿಪಾದಿತವಾಗಿಯೂ, ಸರ್ವವ್ಯಾಪಿಯಾಗಿಯೂ, ದಿವ್ಯಮಂಗಳ ವಿಗ್ರಹವಿಶಿಷ್ಟವಾಗಿಯೂ, ಅತ್ಯಂತಸೂಕ್ಷ್ಮವಾಗಿಯೂ ಇರುವ ಆಭಗವಂ ತನ ದಿವ್ಯಾತ್ಮಸ್ವರೂಪವೆಂಬಸೂಕ್ಷ್ಮರೂಪವನ್ನೂ ತಿಳಿಯಬಲ್ಲನು ಏಕೆಂದರೆ ಮೊದಲು ಸ್ಥೂಲರೂಪವನ್ನು ಚೆನ್ನಾಗಿ ತಿಳಿದುಕೊಂಡರೆ, ಅದುಸೂಕ್ಷ್ಮ ರೂಪವನ್ನು ತಿಳಿಯುವುದಕ್ಕೆ ಸಾಧನವಾಗುವುದು. ಆದುದರಿಂದ ಭಗವಂ ತನ ಸ್ಥೂಲಸೂಕ್ಷ್ಮರೂಪಗಳೆರಡನ್ನೂ ಗುರುಮುಖವಾಗಿ ಕೇಳಿ,ಮೊದಲು ಸ್ಥೂಲರೂಪವನ್ನು ಮನಸ್ಸಿನಲ್ಲಿ ಧಾರಣಮಾಡಿಕೊಂಡು, ಅದರಿಂದಾಚೆಗೆ ಮೆಲ್ಲಮೆಲ್ಲಗೆ ಆ ಮನಸ್ಸನ್ನು ದಿವ್ಯಾತ್ಮಸ್ವರೂಪವೆಂಬ ಸೂಕ್ಷ್ಮರೂಪದಲ್ಲಿ ನೆಲೆಗೊಳಿಸಬಹುದು ರಾಜೇಂದ್ರಾ! ಇದುವರೆಗೆ ಹೇಳಿದ ವಿಷ ಯಗಳಿಂದ, ಭೂಮಿ, ಅದರೊಳಗಿನ ದ್ವೀಪಗಳು, ಅದರಲ್ಲಿರುವ ವರ್ಷವಿ ಭಾಗಗಳು, ಪರ್ವತನದೀನದಗಳು, ಅಂತರಿಕ್ಷ, ಸಮುದ್ರಗಳು, ಪಾತಾ ಳಾದಿವಿವರಗಳು, ದಿಕ್ಕುಗಳು, ನರಕಗಳು, ನಕ್ಷತ್ರಗಳು, ಮೊದಲಾದ ವಿ

ಭಾಗಗಳಿಂದ ಸಮಸ್ತಜೀವರಾತಿಗಳಿಗೂ ನೆಲೆಯಾದ, ಮತ್ತು ಆಶ್ಚರ್ಯಕರವಾದ ಆ ಭಗವಂತನ ಸ್ಥೂಲರೂಪವನ್ನು ವಿವರಿಸಿದಂತಾಯಿತು.” ಎಂದು ಶುಕಮುನಿಯು ಪರೀಕ್ಷಿತ್ತಿಗೆ ಹೇಳಿದುದಾಗಿ, ಸೂತಪೌರಾಣಿಕನು ಶೌನಕಾದಿಗಳಿಗೆ ತಿಳಿಸಿದನು. ಇದು ಇಪ್ಪತ್ತಾರನೆಯ ಅಧ್ಯಾಯವು.

ಪಂಚಮಸ್ಕಂಧವು ಸಮಾಪ್ತವು.

ಶುಭಮಸ್ತು.

ಶ್ರೀ ಕೃಷ್ಣಾರ್ಪಣಮಸ್ತು.





ಶ್ರೀಕೃಷ್ಣಾಯ ಪರಬ್ರಹ್ಮಣೇ ನಮಃ.

# ಶ್ರೀಮದ್ಭಾಗವತವು

## ಷಷ್ಠಸ್ಕಂಧಃ

### ಅ ಜಾ ಮಿ ಳ ನ ಕ ಥೆ.

{ ವಿಷ್ಣುದೂತರಿಗೂ, ಯಮದೂತರಿಗೂ ನಡೆದ ಸಂವಾದಗಳು. }

ತಿರುಗಿ ಪರೀಕ್ಷಿದ್ರಾಜನು ಶುಕಮುನಿಯನ್ನು ಪ್ರಶ್ನೆಮಾಡುವನು "ಓ ಮಹಾತ್ಮಾ! ನಿನ್ನಿಂದ ನಾನು ಇದುವರೆಗೆ ಅನೇಕವಿಷಯಗಳನ್ನು ತಿಳಿದಂತಾಯಿತು ವರ್ಣಾಶ್ರಮಧರ್ಮಗಳನ್ನು ಕ್ರಮವಾಗಿ ನಡೆಸತಕ್ಕ ಕರ್ಮಯೋಗದಿಂದಲೂ, ಆತ್ಮಸ್ವರೂಪವನ್ನು ತಿಳಿಯತಕ್ಕ ಜ್ಞಾನಯೋಗದಿಂದಲೂ ಭಕ್ತಿಯೋಗವನ್ನು ಹೆಚ್ಚಿಸಿಕೊಂಡು, ಅದರಿಂದ ಪರಮಾತ್ಮನ ಅನುಗ್ರಹವನ್ನು ಸಂಪಾದಿಸಿ, ಸಂಸಾರಬಂಧವನ್ನು ನೀಗಿ ಮೋಕ್ಷ ಹೊಂದತಕ್ಕ ನಿವೃತ್ತಿಮಾರ್ಗವು ನಿನ್ನಿಂದ ಮೊದಲೇ ನಿರೂಪಿಸಲ್ಪಟ್ಟಿತು. ಸತ್ವರಜಸ್ತಮೋಗುಣಗಳಿಂದ ಮೇಲೆಮೇಲೆ ಸುಖದುಃಖಗಳಿಗೆ ಕಾರಣವಾದ ಪ್ರಕೃತಿಸಂಬಂಧವನ್ನು ತಪ್ಪಿಸದೆ, ಆಗಾಗ ದೇಹವನ್ನು ತಗುಲುಕಟ್ಟುವ ಪ್ರವೃತ್ತಿಮಾರ್ಗವೂ ನಿನ್ನಿಂದ ತಿಳಿಸಲ್ಪಟ್ಟಿತು. ಮತ್ತು ಅಧರ್ಮದಿಂದ ಪ್ರಾಪ್ತವಾಗತಕ್ಕ ನಾನಾವಿಧನರಕಗಳೂ ನಿನ್ನಿಂದ ವಿವರಿಸಲ್ಪಟ್ಟಿತು. ಆದಿಯಲ್ಲಿ ನಡೆದ ಸ್ವಾಯಂಭುವಮನ್ವಂತರವನ್ನೂ, ಆ ಮನುವಿನ ಮಕ್ಕಳಾದ ಪ್ರಿಯವ್ರತೋತ್ತಾನಪಾದರ ವಂಶವನ್ನೂ, ಅ

ವರ ಚರಿತ್ರೆಗಳನ್ನೂ ನಿನ್ನಿಂದ ನಾನು ತಿಳಿದುದಾಯಿತು. ಮತ್ತು ಈ ಭೂ ಮಿಯಲ್ಲಿರುವ ದ್ವೀಪಗಳು, ಅವುಗಳಲ್ಲಿರುವ ವರ್ಷವಿಭಾಗಗಳು, ಸಮುದ್ರ ಗಳು, ಪರ್ವತಗಳು, ನದೀನದಗಳು, ಉದ್ಯಾನವನಗಳು, ಆಯಾದ್ವೀಪಗಳಲ್ಲಿ ಪ್ರಸಿದ್ಧವಾದ ವೃಕ್ಷಗಳು, ಈ ಭೂಮಂಡಲದ ಸ್ಥಿತಿ, ಅಳತೆ, ವಿಭಾಗ ಮುಂತಾದುವು, ಗ್ರಹನಕ್ಷತ್ರಗಳಿಂದ ತುಂಬಿದ ದ್ಯುಲೋಕದ ಸ್ಥಿತಿ, ಅತಲ ದಿಂದ ಪಾತಾಲದವರೆಗೆ ಭೂಮಿಯಲ್ಲಿರುವ ವಿವರಗಳು, ಇವೆಲ್ಲವೂ ಬ್ರಹ್ಮ ನಿಂದ ಸೃಷ್ಟಿಸಲ್ಪಟ್ಟ ಕ್ರಮದಿಂದಲೇ ನಿನ್ನಿಂದ ಸ್ಪಷ್ಟವಾಗಿ ವಿವರಿಸಲ್ಪ ಟ್ಟಿತು. ಆದರೆ ಇದರಮೇಲೆ ನಾನು ನಿನ್ನಲ್ಲಿ ಕೇಳಿ ತಿಳಿಯಬೇಕಾದ ಮತ್ತೊಂ ದಂಶವುಂಟು ಪಾಪಮಾಡಿದವರಿಗೆ ಸಂಭವಿಸತಕ್ಕ ಅನೇಕ ನರ ಕಯಾತನೆಗಳನ್ನು ತಿಳಿಸಿದೆಯಲ್ಲವೆ? ಅನೇಕಪಾಪಗಳನ್ನು ಮಾಡಿದ ಮನು ಷ್ಯನು, ನರಕಯಾತನೆಗಳನ್ನು ತಪ್ಪಿಸಿಕೊಳ್ಳುವುದಕ್ಕೆ ಈಜನ್ಮದಲ್ಲಿಯೇ ಮಾಡಬಹುದಾದ ಉಪಾಯಗಳೇನಾದರೂ ಇದ್ದರೆ, ಅದನ್ನೂ ನನಗೆ ತಿಳಿ ಸಬೇಕು" ಎಂದನು. ಅದಕ್ಕಾ ಶುಕಮುನಿಯು, "ರಾಜೇಂದ್ರಾ ಕೇಳು ! ಮನುಷ್ಯನು, ಮನೋವಾಕ್ಕಾಯಗಳೆಂಬ ತ್ರಿಕರಣಗಳಿಂದ ಮಾಡಿದ ಪಾಪವನ್ನೂ,ಈ ಲೋಕದಲ್ಲಿಯೇ ಪ್ರಾಯಶ್ಚಿತ್ತಾದಿಗಳಿಂದಕಳೆದುಕೊಳ್ಳ ಬಹುದು. ಹಾಗಿಲ್ಲವಪಕ್ಷದಲ್ಲಿ ಅವನು ಮರಣಹೊಂದಿದಮೇಲೆ ನರ ಕದಲ್ಲಿ ಬಿದ್ದು, ಆಯಾಪಾಪಕ್ಕೆ ತಕ್ಕ ಯಾತನೆಗಳನ್ನು ಅನುಭವಿಸದೆ ತೀರದು! ಇದು ನಿಶ್ಚಯವು! ಆದುದರಿಂದ ಮನುಷ್ಯನು, ತನಗೆ ತಕ್ಕಷ್ಟು ದೇಹಬಲವಿರುವಾಗಲೇ ಪ್ರಾಯಶ್ಚಿತ್ತಾದಿಗಳಿಂದ ತನ್ನ ಪಾಪವನ್ನು ನೀ ಗಿಸುವುದಕ್ಕೆ ಯತ್ನಿಸಬೇಕು. ರೋಗಗಳ ಮರ್ಮವನ್ನು ತಿಳಿದವೈದ್ಯನು. ಆ ವ್ಯಾಧಿಯ ಬಲಾಬಲವನ್ನನುಸರಿಸಿ ಚಿಕಿತ್ಸೆಮಾಡುವಂತೆ, ಪಾಪಗಳ ಗುರುಲಾಘುವಗಳನ್ನು ನೋಡಿ, ತಕ್ಕ ಪ್ರಾಯಶ್ಚಿತ್ತದಿಂದ ಪರಿಹರಿಸಿಕೊಳ್ಳ ಬೇಕು" ಎಂದನು. ಇದನ್ನು ಕೇಳಿ ಪರೀಕ್ಷಿದ್ರಾಜನು. "ಓ ಮಹರ್ಷೀ!ಲೋ ಕದಲ್ಲಿ ಮನುಷ್ಯನು,ಪ್ರತ್ಯಕ್ಷದಲ್ಲಿ ನೋಡಿಯಾಗಲಿ, ಹಿರಿಯರಿಂದ ಕೇಳಿಯಾ ಗಲಿ ಪಾಪವೆಂದು ತನ್ನ ಮನಸ್ಸಿಗೆ ತಿಳಿದಿದ್ದರೂ,ವಿಷಯಾಸಕ್ತನಾಗಿ ಪಾಪ ವನ್ನು ನಡೆಸಿದರೆ, ಅವನಿಗೆ ಪ್ರಾಯಶ್ಚಿತ್ತವೇನು? ಇದಲ್ಲದೆ,ಒಬ್ಬನು,ಒಂದು

ಪಾಪಕಾರ್ಯವನ್ನು ಮಾಡಿ, ಅದಕ್ಕಾಗಿ ಪ್ರಾಯಶ್ಚಿತ್ತವನ್ನು ಮಾಡಿಕೊಂಡ ಮೇಲೆಯೂ ಇಂದ್ರಿಯಚಾಪಲ್ಯದಿಂದ ತಿರುಗಿ ಪಾಪವನ್ನು ನಡೆಸಬಹುದು. ಆಗಾಗ ಹೊಳೆಯಲ್ಲಿ ಮುಳುಗಿ ಬಂದು ತಿರುಗಿ ತನ್ನ ಮೈಮೇಲೆ ಮಣ್ಣನ್ನೆರಚಿಕೊಳ್ಳುವ ಆನೆಯ ಸ್ನಾನದಂತೆ, ಆ ಪ್ರಾಯಶ್ಚಿತ್ತವು ನಿಷ್ಪ್ರಯೋಜನವಾಗುವುದಲ್ಲವೆ? ಆದುದರಿಂದ ಸಂಪೂರ್ಣವಾದ ಪಾಪನಿವೃತ್ತಿಗೆ ಉಪಾಯವೇನೆಂಬುದನ್ನೂ ತಿಳಿಸಬೇಕು" ಎಂದನು. ಅದಕ್ಕಾ ಶುಕಮುನಿಯು "ರಾಜೇಂದ್ರಾ ಕೇಳು! ಪ್ರಾಯಶ್ಚಿತ್ತವನ್ನು ಮಾಡಿದ ಮಾತ್ರಕ್ಕೆ ಪಾಪವೆಲ್ಲವೂ ನಿಶ್ಶೇಷವಾಗಿ ನೀಗಲಾರದು ಮುಖ್ಯವಾಗಿ ಕರ್ಮದಿಂದ ಕರ್ಮಕ್ಕೆ ಎಂದಿಗೂ ಪರಿಹಾರವಿಲ್ಲ! ಆಪ್ರಾಯಶ್ಚಿತ್ತವೆಂಬುದು ಆಯಾಕಾಲದ ಪಾಪವನ್ನು ನೀಗಿಸುವುದೇ ಹೊರತು, ಹಿಂದುಮುಂದಿನ ಪಾಪಗಳನ್ನು ನಿಶ್ಶೇಷವಾಗಿ ನೀಗಿಸಲಾರದು. ಆದರೆ ಪ್ರಾಯಶ್ಚಿತ್ತವನ್ನು ವ್ಯರ್ಥವೆಂದೂ ಹೇಳುವುದಕ್ಕಿಲ್ಲ! ರೋಗಗಳಿಗೆ ತಾತ್ಕಾಲಿಕವಾದ ಉಪಶಮನಕ್ಕಾಗಿ ತೆಗೆದುಕೊಳ್ಳುವ ಔಷಧಿಯಂತೆ, ಇದು ತಾತ್ಕಾಲಿಕವಾದ ಪಾಪವನ್ನುಮಾತ್ರ ನಿವೃತ್ತಿಮಾಡುವುದು. ಪರಮಾತ್ಮೋಪಾಸನವನ್ನು ತಿಳಿಯದವನಿಗೆ ತಾತ್ಕಾಲಿಕಪಾಪಗಳನ್ನು ನಿವಾರಿಸುವುದಕ್ಕಾಗಿಮಾತ್ರವೇ ಈ ಪ್ರಾಯಶ್ಚಿತ್ತಗಳು ಏರ್ಪಟ್ಟಿರುವುವು ಪಥ್ಯಾನ್ನವನ್ನು ಭುಜಿಸತಕ್ಕವನು ರೋಗಗಳಿಗೇ ಅವಕಾಶವಿಲ್ಲದೆ ಸುಖವಾಗಿ ಜೀವಿಸುವಂತೆ, ಮುಂದೆ ಹೇಳುವ ನಿಯಮಗಳಲ್ಲಿರತಕ್ಕವರು, ಪಾಪಸಂಬಂಧವೇ ಇಲ್ಲದೆ ನಿರತಿಶಯವಾದ ಸುಖವನ್ನು ಹೊಂದಬಹುದು ಆ ನಿಯಮಗಳನ್ನು ತಿಳಿಸುವೆನು ಕೇಳು. ದೇಹಧಾರಣೆಗೆ ತಕ್ಕಷ್ಟೇ ಅನ್ನವನ್ನು ಉಚಿತಕಾಲದಲ್ಲಿ ತೆಗೆದುಕೊಳ್ಳುವುದು, ಋತುಕಾಲದಲ್ಲಿಹೊರತು ಇತರಕಾಲದಲ್ಲಿ ಸ್ತ್ರೀಯರೊಡನೆ ಸಂಭೋಗಿಸದಿರುವುದು, ಇಂದ್ರಿಯಗಳನ್ನಡಗಿಸಿಡುವುದು, ತನ್ನಲ್ಲಿರುವ ಧನಾದಿಗಳನ್ನು ಸತ್ಪಾತ್ರದಲ್ಲಿ ವಿನಿಯೋಗಿಸುವುದು, ಮನಸ್ಸನ್ನು ನಿಗ್ರಹಿಸುವುದು, ಸಮಸ್ತಪ್ರಾಣಿಗಳಿಗೂ ಹಿತವನ್ನು ಕೋರುವುದು, ಆಚಾರಪರನಾಗಿರುವುದು, ಸುಳ್ಳಾಡದಿರುವುದು, ಕಾಮವನ್ನಡಗಿಸುವುದು, ಪಂಚಮಹಾಯಜ್ಞಗಳೇ ಮೊದಲಾದ ತಮ್ಮತಮ್ಮ ನಿ

ರ್ಣಾಶ್ರಮಧರ್ಮಗಳನ್ನು ತಪ್ಪದೆ ನಡೆಸುವುದು, ಇವೇ ಮೊದಲಾದ ನಿಯಮಗಳಿಂದ ನಡೆಯುತಿದ್ದರೆ, ಮೆಲ್ಲಮೆಲ್ಲಗೆ ಮಹಾನಂದರೂಪವಾದ ಮೋಕ್ಷವನ್ನು ಸೇರಬಹುದು. ಸುಖದುಃಖಾದಿದ್ವಂದ್ವಗಳನ್ನು ಸಹಿಸಬಲ್ಲವರಾಗಿಯೂ, ಧರ್ಮಜ್ಞರಾಗಿಯೂ ಇರುವ ಪಂಡಿತರು, ಶ್ರದ್ಧೆಯಿಂದ ಈ ನಿಯಮಗಳನ್ನೇ ಅನುಸರಿಸುತ್ತ, ಕಾಡುಗಿಚ್ಚು ಬಿದಿರುಮೆಳೆಯನ್ನು ದಹಿಸುವಂತೆ, ತಮ್ಮ ಮನೋವಾಕ್ಕಾಯಗಳಿಂದುಂಟಾದ ಪಾಪಗಳೆಲ್ಲವನ್ನೂ ದಹಿಸಿಕೊಳ್ಳುವುದುಂಟು! ಬೇರೆ ಕೆಲವು ಮಹಾತ್ಮರು, ತಮ ಮನಸ್ಸನ್ನು ವಾಸುದೇವನಲ್ಲಿ ನೆಲೆಗೊಳಿಸಿ, ತಪಸ್ಸು ಮೊದಲಾದ ನಿಯಮಗಳಿಂದ ಭಕ್ತಿಯನ್ನು ಹೆಚ್ಚಿಸಿಕೊಂಡು, ಸೂರ್ಯನು ಹಿಮವನ್ನು ನಿಗ್ರಹಿಸುವಂತೆ, ಭಕ್ತಿಮಾರ್ಗದಿಂದಲೇ ಮೋಕ್ಷವಿರೋಧಿಗಳಾದ ಪಾಪಗಳೆಲ್ಲವನ್ನೂ ಸಂಪೂರ್ಣವಾಗಿ ತೊಲಗಿಸಿಕೊಳ್ಳುವರು. ಆದರೆ ಇವುಗಳಲ್ಲಿ ಒಂದು ವಿಶೇಷವುಂಟು. ಭಗವಂತನಲ್ಲಿಯೇ ಮನಸ್ಸಿಟ್ಟ ಭಗವದ್ಭಕ್ತರನ್ನು ಸೇವಿಸುವುದರಿಂದ, ಮನುಷ್ಯನು ಹೇಗೆ ಪಾಪವಿಮುಕ್ತನಾಗುವನೋ, ಅಷ್ಟು ಸುಲಭವಾಗಿ ಹಿಂದೆ ಹೇಳಿದ ನಿಯಮಗಳಿಂದ ಪಾಪವಿಮೋಚನವನ್ನು ಹೊಂದಲಾರನು. ಆದುದರಿಂದ ಪಾಪವಿಮೋಚನೆಯನ್ನು ಹೊಂದಿ ಪವಿತ್ರನಾಗುವುದಕ್ಕೆ, ಭಕ್ತಿಯೋಗಕ್ಕಿಂತಲೂ ಮೇಲಾದ ಉಪಾಯವಿಲ್ಲ. ಶ್ರೇಯಸ್ಸಾಧನಗಳಲ್ಲಿ ಭಕ್ತಿಯೇ ಮೇಲೆನಿಸಿರುವುದು! ಬಹಳ ಸುಲಭಸಾಧ್ಯವಾಗಿಯೂ ಇರುವುದು. ಇದರಿಂದ ಎಂದೆಂದಿಗೂ ನಿರ್ಭಯವಾದಮೋಕ್ಷವನ್ನು ಅನಾಯಾಸವಾಗಿ ಸಾಧಿಸಬಹುದು. ಇದನ್ನು ತಿಳಿದ ಮಹಾತ್ಮರು, ಈ ಭಕ್ತಿಯೋಗವನ್ನೇ ಹಿಡಿದು ನಿತ್ಯಾನಂದರೂಪವಾದ ಮೋಕ್ಷವನ್ನು ಹೊಂದುವರು. ಈಭಕ್ತಿಯೋಗವೊಂದೇ ಅನೇಕನರಕಯಾತನೆಗಳಿಗೆ ಕಾರಣವಾದಪಾಪಗಳನ್ನೆಲ್ಲಾ ನೀಗಿಸುವುದು. ರಾಜೇಂದ್ರಾ! ಒಮ್ಮೆ ಯಾದರೂಶ್ರೀಮನ್ನಾರಾಯಣನನ್ನು ಮನಸ್ಸಿನಲ್ಲಿ ಸ್ಮರಿಸದಪಾಪಿಷ್ಠರು, ಎಷ್ಟೆಷ್ಟೋಪ್ರಾಯಶ್ಚಿತ್ತಗಳನ್ನು ಮಾಡಿಸಿಕೊಂಡರೂ, ಹೆಂಡದ ಗಡಿಗೆಯನ್ನು ಗಂಗೆಯಲ್ಲಿ ಮುಳುಗಿಸಿ ತಂದಂತಾಗುವುದೇಹೊರತು, ಅದರಿಂದ ಅವರಿಗೆ ಆತ್ಮಶುದ್ಧಿಯುಂಟಾಗಲಾರದು. ಈ ಲೋಕದಲ್ಲಿ ಎಷ್ಟೋಪಾಪಗಳನ್ನು ಮಾಡಿದವನಾ

ಗಿದ್ದರೂ ತಮ್ಮ ಮನಸ್ಸನ್ನು ಶ್ರೀಕೃಷ್ಣನಪಾದಾರವಿಂದದಲ್ಲಿ ಒಂದಾವರ್ತಿ ಯಾದರೂ ನೆಲೆಗೊಳಿಸಿದರೆ, ಅವರ ಸಮಸ್ತಪಾಪಗಳಿಗೂ ಅದೇ ಪ್ರಾಯಶ್ಚಿತ್ತವಾಗುವುದು. ಅಂತವರು ಯಮನನ್ನಾಗಲಿ,ದಂಡಧಾರಿಗಳಾದಯ ಮಭಟರನ್ನಾಗಲಿ ಎಂದಿಗೂ ಕಣ್ಣಿಂದ ನೋಡಲಾರರು. ರಾಜೇಂದ್ರಾ ! ಒಂದಾವರ್ತಿ ಭಗವಂತನನ್ನು ಸ್ಮರಿಸಿದಮಾತ್ರಕ್ಕೆ ಇಂತಹ ಫಲವನ್ನು ಹೊಂದುವಾಗ, ದೃಢವಾದ ಭಕ್ತಿಯಿಂದ ಆ ಭಗವಂತನ ಪಾದವನ್ನುನಂಬಿದವರು ತಮ್ಮ ಪಾಪಗಳನ್ನು ನೀಗಿ ಮುಕ್ತಿಯನ್ನು ಹೊಂದುವರೆಂಬುದಕ್ಕೆ ಸಂದೇಹವೇನಿದೆ? ಈ ವಿಷಯದಲ್ಲಿ ವಿಷ್ಣುದೂತರಿಗೂ, ಯಮದೂತರಿಗೂ ನಡೆದ ಸಂವಾದರೂಪವಾದ ಒಂದು ಹಳೆಯ ಇತಿಹಾಸವುಂಟು. ಅದನ್ನು ವಿವರಿಸುವೆನು ಕೇಳು.

ಕನ್ಯಾಕುಬ್ಜವೆಂಬ ದೇಶದಲ್ಲಿ, ಅಜಾಮಿಳನೆಂಬ ಬ್ರಾಹ್ಮಣನಿದ್ದನು. ಅವನು ತನ್ನ ವರ್ಣಾಶ್ರಮಧರ್ಮಗಳೆಲ್ಲವನ್ನೂ ತೊರೆದು, ಆಚಾರಹೀನನಾಗಿ, ಶೂದ್ರಸ್ತ್ರೀಯನ್ನು ವಿವಾಹಮಾಡಿಕೊಂಡು, ಆಕೆಯ ಸಂಬಂಧದಿಂದ ಕೇವಲಪತಿತನಾಗಿದ್ದನು. ಜೂಜು, ವಂಚನೆ, ಕಳವು, ಮುಂತಾದ ದುರ್ವ್ಯಾಪಾರಗಳಿಂದಲೇ ಕುಟುಂಬಭರಣವನ್ನು ಮಾಡುತ್ತ, ಸಜ್ಜನನಿಂದಿತವಾದ ವೃತ್ತಿಯಲ್ಲಿಯೇ ಇರುತಿದ್ದನು ಜೀವನಕ್ಕೆ ಸಾಲದಿದ್ದಾಗ ಪಶುಪಕ್ಷಿ ಮೃಗಾದಿಗಳನ್ನು ಕೊಂದು ತಿನ್ನುತಿದ್ದನು, ಆ ಬ್ರಾಹ್ಮಣನು ತನಗೆ ಶೂದ್ರಸ್ತ್ರೀಯಲ್ಲಿ ಹುಟ್ಟಿದ ಮಕ್ಕಳನ್ನೇ ಮುದ್ದಿಸಿ ಪೋಷಿಸುತ್ತ, ತನ್ನ ಆಯುಃಕಾಲದಲ್ಲಿ ಎಂಬತ್ತೆಂಟುವರ್ಷಗಳನ್ನೂ ಹೀಗೆ ಅಶುಚಿಯಾಗಿ ಕಳೆದುಬಿಟ್ಟನು. ಇಷ್ಟರಲ್ಲಿ ಇವನಿಗೆ ಹತ್ತುಮಂದಿ ಮಕ್ಕಳಾದರು. ಇವರಲ್ಲಿ ಕೊನೆಯ ಮಗನಿಗೆ ನಾರಾಯಣನೆಂದು ಹೆಸರು. ಇವನು ಇನ್ನೂ ಬಾಲನಾಗಿದ್ದುದರಿಂದ, ತಂದೆತಾಯಿಗಳಿಗೆ ಬಹಳ ಪ್ರೇಮಪಾತ್ರನಾಗಿದ್ದನು. ವೃದ್ಧನಾದ ಆ ಅಜಾಮಿಳನು, ಮುದ್ದುನುಡಿಗಳಿಂದ ಮಾತಾಡುತ್ತಿರುವ ಆ ಮಗುವಿನಲ್ಲಿಯೇ ನಟ್ಟಮನಸ್ಸುಳ್ಳವನಾಗಿ, ಆ ಮಗುವಿನ ಬಾಲಕ್ರೀಡೆಗಳನ್ನು ನೋಡಿನೋಡಿ ಸಂತೋಷಿಸುತಿದ್ದನು. ಈ ಪುತ್ರಪ್ರೇಮದಿಂದ, ತಾನು ಭುಜಿಸುವಾಗಲೆಲ್ಲಾ ಆ ಬಾಲಕನಿಗೂ ಭೋಜನವನ್ನು ಮಾಡಿಸುವನು.

ತಾನು ಕುಡಿಯುವುದನ್ನೆಲ್ಲಾ ಅದಕ್ಕೂ ಕುಡಿಸುವನು ತಾನು ತಿನ್ನುವುದನ್ನೆಲ್ಲಾ ಅದಕ್ಕೂ ತಿನ್ನಿಸುವನು. ಹೀಗೆ ಪುತ್ರಸ್ನೇಹದಿಂದ ಬುದ್ಧಿಹೀನನಾಗಿ, ತನ್ನ ಬೆನ್ನಹಿಂದೆ ಕಾದಿರುವ ಮೃತ್ಯುದೇವತೆಯನ್ನೂ ಕಾಣದೆ ಮೈಮರೆತಿದ್ದನು ಕೊನೆಗೆ ಮೃತ್ಯುಕಾಲವು ಸಮೀಪಿಸಿದಾಗಲೂ ಆ ತನ್ನ ಮುದ್ದುಮಗನನ್ನೇ ಚಿಂತಿಸುತಿದ್ದನು. ಇಷ್ಟರಲ್ಲಿ ಇವನನ್ನು ಯಮಲೋಕಕ್ಕೆ ಸಾಗಿಸುವುದಕ್ಕಾಗಿ, ಭಯಂಕರಸ್ವರೂಪವುಳ್ಳ ಮೂರುಮಂದಿ ಯಮಭಟರು, ಕೈಯಲ್ಲಿ ಪಾಶವನ್ನು ಹಿಡಿದು ಬಂದು, ಇವನ ಮುಂದೆ ನಿಂತರು. ಗಂಟುಮುಖದಿಂದಲೂ, ಊರ್ಧ್ವಮುಖವಾದ ರೋಮಗಳಿಂದಲೂ ಮಹಾಭಯಂಕರಸ್ವರೂಪವುಳ್ಳ ಆ ಯಮದೂತರನ್ನು ಕಂಡೊಡನೆ,ಅಜಾಮಿಳನು ಭಯದಿಂದ ತತ್ತಳಿಸುತ್ತ, ದೂರದಲ್ಲಿ ಆಡುತ್ತನಿಂತಿದ್ದ ತನ್ನ ಮಗನನ್ನು ಸಮೀಪಕ್ಕೆ ಕರೆಯುವುದಕ್ಕಾಗಿ. "ನಾರಾಯಣಾ!" ಎಂದು ಉಚ್ಚಸ್ವರದಿಂದ ಕೂಗಿಕೊಂಡನು. ಓ ಪರೀಕ್ಷಿದ್ರಾಜಾ! ಆಗಿನ ಆಶ್ಚರ್ಯವನ್ನು ಕೇಳಬೇಕೆ!ಮರಣೋನ್ಮುಖನಾಗಿದ್ದ ಆ ಬ್ರಾಹ್ಮಣನಬಾಯಿಂದ,ಈ ಭಗವನ್ನಾಮವು ಹೊರಕ್ಕೆ ಬಂದೊಡನೆ, ಮಹಾತೇಜಸ್ವಿಗಳಾದ ಮೂರು ಮಂದಿ ವಿಷ್ಣುದೂತರು, ತಟ್ಟನೆ ಅಂತರಿಕ್ಷದಿಂದಿಳಿದು ಬಂದು, ಇವನಮುಂದೆ ನಿಂತರು. ಮತ್ತು ಅಲ್ಲಿ ದಾಸೀಪತಿಯಾದ ಆ ಅಜಾಮಿಳನೆಂಬ ಪಾಪಿಜೀವನನ್ನು, ಹೃದಯದಿಂದ ಬಲಾತ್ಕಾರಪೂರ್ವಕವಾಗಿ ಎಳೆಯುತ್ತಿರುವ ಯಮದೂತರನ್ನು "ಬೇಡ ಬೇಡ" ವೆಂದು ತಡೆದು ನಿಲ್ಲಿಸಿದರು ಆಗ ಆ ಯಮದೂತರು, ತಮ್ಮ ಕಾರ್ಯಕ್ಕೆ ಅಡ್ಡಿಯಾಗಿ ಬಂದ ಆ ವಿಷ್ಣುದೂತರನ್ನು ನೋಡಿ, ಆಶ್ಚರ್ಯದಿಂದ ಸ್ತಬ್ಧರಾಗಿ, ಹೀಗೆಂದುಪ್ರಶ್ನೆಮಾಡುವರು "ಎಲೈ ನೀವು ಯಾರು? ಆಹಾ! ನಿಮಗೆ ಧರ್ಮರಾಜಾಜ್ಞೆಯನ್ನೂ ತಡೆಯುವಷ್ಟು ಧೈರ್ಯವೆ? ನೀವು ಯಾರ ಕಡೆಯವರು? ಎಲ್ಲಿಂದ ಬಂದಿರುವಿರಿ? ನೀವು ಇವನನ್ನು ಬಿಡಿಸುವುದಕ್ಕೆ ಕಾರಣವೇನು?ನೀವೇನು ದೇವತೆಗಳೇ? ಉಪದೇವತೆಗಳೇ? ಅಥವಾ ಸಿದ್ಧರೆ? ನಿಮ್ಮ ಕಣ್ಣುಗಳೋ ಕಮಲದಳಗಳಂತೆ ಶೋಭಿಸುತ್ತಿರುವುವು ! ನಿಮ್ಮ ನಡುವಿನಲ್ಲಿ ಪೀತಾಂಬರವೆಂಬ ಪಟ್ಟೆಮಡಿಯೂ,ತಲೆಯಲ್ಲಿ ದಿವ್ಯಕಿರೀಟವೂ,ಕಿವಿಯಲ್ಲಿ ಕರ್ಣಕುಂಡಲ



1116. ಯಮದೂತರು ಅಜಾಮಿಳನನ್ನು ಪಾಶಗಳಿಂದ ಬಿಗಿದು ಎಳೆಯುತ್ತಿ
ರುವಾಗ, ವಿಷ್ಣುದೂತರು ಬಂದು ತಡೆದುದು.

ಗಳೂ ಒಪ್ಪುತ್ತಿರುವುವು! ಕಂಠದಲ್ಲಿ ತುಲಸೀಮಿಶ್ರವಾದ ಪದ್ಮಮಾಲಿಕೆಯು ಪ್ರಕಾಶಿಸುತ್ತಿರುವುದು! ನವಯೌವನದಿಂದ ಸುಂದರರಾದ ನಿಮಗೆ ಈ ನಾಲ್ಕು ಭುಜಗಳೇನು? ಆ ಭುಜಗಳಲ್ಲಿ ಬಾಣಬತ್ತಳಿಕೆಗಳನ್ನೂ, ಶಂಖಚಕ್ರಗದಾಪದ್ಮಗಳನ್ನೂ, ಖಡ್ಗವನ್ನೂ, ಧರಿಸಿ ದೇಹಕಾಂತಿಯಿಂದ ದಿಕ್ಕುಗಳೆಲ್ಲವನ್ನೂ ಬೆಳಗುತ್ತಿರುವಿರಲ್ಲಾ? ಇಂತಹ ಮಹಾಪುರುಷಲಕ್ಷಣವುಳ್ಳವರಾಗಿದ್ದೂ ನೀವು, ಪಾಪಿಗಳನ್ನು ಶಿಕ್ಷಿಸುವುದಕ್ಕಾಗಿ ಬಂದ ಯಮಕಿಂಕರರಾದ ನಮ್ಮನ್ನು ನಿಷೇಧಿಸುವುದು ನ್ಯಾಯವೆ? ಇದರ ಕಾರಣವನ್ನು ತಿಳಿಸಬೇಕು" ಎಂದರು. ಆಗ ವಿಷ್ಣುದೂತರು, ಮಂದಹಾಸದಿಂದ ನಗುತ್ತ, ಮೇಘಧ್ವನಿಯಂತೆ ಗಂಭೀರವಾದ ಸ್ವರದಿಂದ ಪ್ರಶ್ನೆಮಾಡುವರು. "ಓಹೋ ನೀವು ಯಮಧರ್ಮರಾಜನ ಕಿಂಕರರಷ್ಟೆ? ಹಾಗಿದ್ದರೆ ನೀವು ಧರ್ಮಾಧರ್ಮನಿರ್ಣಯವನ್ನು ಚೆನ್ನಾಗಿ ಬಲ್ಲವರಾಗಿರಬೇಕು! ಹಾಗಿದ್ದರೆ ನಿಮಗೆ ತಿಳಿದ ಧರ್ಮಾಧರ್ಮಗಳನ್ನು ನಮಗೂ ತಿಳಿಸಬಹುದಲ್ಲವೆ? ನೀವು ಪ್ರಾಣಿಗಳನ್ನು ದಂಡಿಸತಕ್ಕವರಾಗಿದ್ದರೆ, ನಿಮ್ಮ ದಂಡನನಿಯಮಗಳೇನು? ಇವನನ್ನು ಏತಕ್ಕೋಸ್ಕರ ದಂಡಿಸಬೇಕಾಗಿರುವುದು? ಇವನ ತಪ್ಪೇನು? ಲೋಕದಲ್ಲಿ ಕರ್ಮವನ್ನು ಮಾಡಿದವರೆಲ್ಲರೂ ದಂಡನಾರ್ಹರೇ? ಅಥವಾ ಅವರಲ್ಲಿ ಕೆಲವರು ಮಾತ್ರವೇ ನಿಮ್ಮ ಶಿಕ್ಷೆಗೆ ಗುರಿಯಾಗುವರೆ? ಈ ರಹಸ್ಯವನ್ನು ತಿಳಿಸಬೇಕು" ಎಂದರು. ಅದಕ್ಕಾ ಯಮದೂತರು "ಎಲೈ! ಇದಕ್ಕಾಗಿ ಇಷ್ಟು ವಿಚಾರವೇಕೆ? ವೇದವಿಹಿತವಾದುದು ಧರ್ಮವು! ಅದಕ್ಕೆ ವಿರುದ್ಧವಾದುದೆಲ್ಲವೂ ಅಧರ್ಮವು. ಈ ಧರ್ಮಗಳನ್ನು ವಿಧಿಸತಕ್ಕ ವೇದವೆಂಬುದು, ಶ್ರೀಮನ್ನಾರಾಯಣನ ನಿಶ್ವಾಸರೂಪವಾಗಿಹೊರಟಿರುವುದು. ಹೀಗೆ ಸಾಕ್ಷಾನ್ನಾರಾಯಣನಿಂದಲೇ ಆವಿರ್ಭವಿಸಿ, ಭಗವತ್ಸ್ವರೂಪದಿಂದಲೇ ಲೋಕದಲ್ಲಿವ್ಯಾಪಿಸಿರುವುದು. ಅದು ಅನಾದಿಯೆಂದೂ, ಎಂದೆಂದಿಗೂ ನಾಶವಿಲ್ಲದುದೆಂದೂ, ಇದರಲ್ಲಿಯಾವ ದೋಷಗಳನ್ನು ಶಂಕಿಸುವುದಕ್ಕೂ ಅವಕಾಶವಿಲ್ಲವೆಂದೂ ಕೇಳಿರುವೆವು. ಸರ್ವಾತ್ಮಕನಾದ ನಾರಾಯಣನು, ತನ್ನ ಸ್ವರೂಪದಲ್ಲಿಯೇಹೀಗೆ ವೇದವೆಂದೂ, ದೇವಮನುಷ್ಯಾದಿಗಳೆಂದೂ, ಕರೆಯಲ್ಪಡುವಸತ್ವರಜಸ್ತಮೋಗುಣಮಯಗಳಾದ ಪದಾರ್ಥಗಳೆಲ್ಲವನ್ನೂ, ಆಯಾಗುಣಗಳೊಡನೆಯೂ,

ಆಯಾ ನಾಮಗಳೊಡನೆಯೂ, ಆಯಾಕ್ರಿಯೆಗಳೊಡನೆಯೂ, ಆಯಾ ರೂಪಗಳೊಡನೆಯೂ ಹೊರಕ್ಕೆ ಕಾಣಿಸುತ್ತಿರುವನು. ಆದುದರಿಂದ ಸಾಕ್ಷಾನ್ನಾರಾಯಣನೇ ವೇದಸ್ವರೂಪದಿಂದ ಧರ್ಮಾಧರ್ಮಗಳನ್ನು ನಿರ್ಣಯಿಸುವನು ಆದರೆ ಲೋಕದಲ್ಲಿ ಸಂಸಾರಿಗಳು ನಡೆಸತಕ್ಕ ಧರ್ಮಾಧರ್ಮಗಳು, ಅನೇಕವಾಗಿರುವಾಗ, ಅವೊಂದೊಂದನ್ನೂ ಕಂಡು ಹಿಡಿಯುವುದಕ್ಕೆ ನಿಮ್ಮಿಂದ ಸಾಧ್ಯವೆ" ಎಂದು ನೀವು ಕೇಳಬಹುದು. ಮನುಷ್ಯರು ಆಗಾಗ ನಡೆಸತಕ್ಕ ಧರ್ಮಾಧರ್ಮಗಳಿಗೆ ಸೂರ್ಯನೂ, ಅಗ್ನಿಯೂ, ಆಕಾಶವೂ, ದೇವತೆಗಳೂ ಗೋವುಗಳೂ, ಚಂದ್ರನೂ, ಸಂಧ್ಯಾಕಾಲಗಳೂ, ಜಲವೂ, ಭೂಮಿಯೂ, ಕಾಲವೂ, ನಮ್ಮ ಪ್ರಭುವಾದ ಧರ್ಮರಾಜನೂ, ಸಾಕ್ಷೀಭೂತರಾಗಿ, ಯಾವಾಗಲೂ ಕಣ್ಣಿಟ್ಟು ಕಾದು ನೋಡುತ್ತಿರುವರು ಇವರಿಂದ ಅವರವರು ಆಗಾಗನಡೆಸಿದಪಾಪಗಳೆಲ್ಲವೂ ತಿಳಿಯುವುದರಿಂದ ಆಯಾ ಪಾಪಕ್ಕೆ ತಕ್ಕಂತೆ ಅವರವರು ಶಿಕ್ಷೆಗೆ ಪಾತ್ರರಾಗುವರು. ಪಾಪಕ್ಕನುಸಾರವಾಗಿ ಶಿಕ್ಷೆಯೇ ಹೊರತು ಪಾಪವಿಲ್ಲದವರಿಗೆ ಶಿಕ್ಷೆಯೂ ಇರದು ಆದರೆ ಮನುಷ್ಯನಾಗಿ ಹುಟ್ಟಿದಮೇಲೆ ಪಾಪಪುಣ್ಯಗಳೆರಡನ್ನೂ ನಡೆಸಿಯೇ ನಡೆಸುವನು. ಆದುದರಿಂದ ಆಯಾ ಪಾಪಕ್ಕೆ ತಕ್ಕಂತೆ ಎಲ್ಲರೂ ದಂಡಿಸಲ್ಪಡುವರು. ದೇಹವನ್ನು ಹೊತ್ತು ಹುಟ್ಟಿದವನಾವನೂ ಕರ್ಮಗಳನ್ನು ನಡೆಸದೆ ಸುಮ್ಮನಿರಲಾರನು. ಈ ದೇಹಸಂಬಂಧವಿದ್ದಾಗ, ಸತ್ವಾದಿಗುಣಗಳ ತಾರತಮ್ಯವನ್ನನುಸರಿಸಿ, ಆಗಾಗ ಸತ್ಕರ್ಮಗಳನ್ನೂ, ದುಷ್ಕರ್ಮಗಳನ್ನೂ ನಡೆಸುತ್ತಿರುವನು. ಆಯಾ ಕರ್ಮಗಳಿಗೆ ತಕ್ಕಂತೆ ಫಲವನ್ನೂ ಅನುಭವಿಸುವನು. ಧರ್ಮವನ್ನಾಗಲಿ, ಅಧರ್ಮವನ್ನಾಗಲಿ ಯಾವನು ಎಷ್ಟು ಮಟ್ಟಿಗೆ ನಡೆಸುವನೋ, ಅದಕ್ಕೆ ತಕ್ಕಂತೆಯೇ ಸುಖದುಃಖಗಳಿಗೆ ಗುರಿಯಾಗುವನೇ ಹೊರತು, ಧರ್ಮದಿಂದ ನರಕವನ್ನಾಗಲಿ, ಅಧರ್ಮದಿಂದ ಸ್ವರ್ಗವನ್ನಾಗಲಿ, ಅಲ್ಪ ಪಾಪಕ್ಕೆ ಅಪಾರ ದುಃಖವನ್ನಾಗಲಿ, ಅಲ್ಪಪುಣ್ಯಕ್ಕೆ ಉತ್ತಮಸುಖವನ್ನಾಗಲಿ ಪಡೆಯಲಾರನು. ಎಲೈ ದೇವಶ್ರೇಷ್ಠರೆ! ಅವರವರು ಜನ್ಮಾಂತರದಲ್ಲಿ ನಡೆಸಿದ ಸಾತ್ವಿಕ ತಾಮಸ ರಾಜಸಗಳೆಂಬ ಕರ್ಮಭೇದಗಳನ್ನನುಸರಿಸಿ, ಇಲ್ಲಿ ಪ್ರಾಣಿಗಳು ಸುಖದುಃಖ

ಮೋಹಗಳನ್ನನುಭವಿಸುವಂತೆ ಲೋಕಾಂತರದಲ್ಲಿಯೂ ಉಂಟೆಂದು ನಾವು ಊಹಿಸಬಹುದು. ಮನುಷ್ಯನು ಈ ಜನ್ಮದಲ್ಲಿ ಅನುಭವಿಸುವ ಸುಖದುಃಖ ಮೋಹಾದಿಗಳು, ಅವನ ಹಿಂದುಮುಂದಿನ ಜನ್ಮಗಳ ಧರ್ಮಾ ಧರ್ಮಗಳನ್ನೂ, ಆ ಕರ್ಮಾಚರಣೆಗೆ ಕಾರಣಗಳಾದ ಸತ್ವಾದಿಗುಣಗಳ ಹೆಚ್ಚುಕಡಿಮೆಯನ್ನೂ ಸೂಚಿಸುವಂತೆ, ಈ ಜನ್ಮದಲ್ಲಿ ನಡೆಸತಕ್ಕ ಧರ್ಮಾಧರ್ಮಗಳೂ, ಅವಕ್ಕೆ ಕಾರಣಗಳಾದ ಸತ್ವಾದಿಗುಣಗಳ ಹೆಚ್ಚುಕಡಿಮೆಯೂ, ಅವನ ಹಿಂದುಮುಂದಿನ ಜನ್ಮಗಳ ಸುಖದುಃಖಾದಿಗಳಿಗೆ ಸೂಚಕ ವಾಗುವುವು. ಇದಲ್ಲದೆ ಸರ್ವಜ್ಞನೂ ಸರ್ವಹೃದಯಾಂತರ್ಯಾಮಿಯಾಗಿಯೂ, ಸ್ವಯಂಪ್ರಕಾಶವುಳ್ಳವನಾಗಿಯೂ ಇರುವ ಸರ್ವೇಶ್ವರನು, ಯಾವಾಗಲೂ ಸಂಕೋಚಹೊಂದದ ತನ್ನ ಜ್ಞಾನವಿಕಾಸದಿಂದ, ಆಯಾ ಜೀವರಾಶಿಗಳು ಪೂರ್ವಜನ್ಮದಲ್ಲಿ ಮಾಡಿದ ಧರ್ಮಾಧರ್ಮಗಳೆಲ್ಲವನ್ನೂ ತಿಳಿದಿರುವನು. ಆವರವರ ಪಾಪಪುಣ್ಯಗಳಿಗೆ ತಕ್ಕಂತೆ ಅವರವರಿಗೆ ನಿಗ್ರಹಾನುಗ್ರಹಗಳನ್ನು ತೋರಿಸುತ್ತಿರುವನು. ಜೀವನು ಆಗಾಗ ನಡೆಸತಕ್ಕ ಪುಣ್ಯಪಾಪಕರ್ಮಗಳು ಉತ್ತರಕ್ಷಣದಲ್ಲಿ ನಿಲ್ಲದೆ, ಆಗಾಗಲೇ ತೀರಿ ಹೋದರೂ, ಆಯಾ ಕರ್ಮಗಳ ವಿಷಯದಲ್ಲಿ ಭಗವಂತನ ನಿಗ್ರಹಾನುಗ್ರಹರೂಪವಾದ ಸಂಕಲ್ಪವೆಂಬುದು, ಬೆನ್ನಟ್ಟಿ ಬರುವುದರಿಂದ, ಜೀವನು ಅದನ್ನನುಸರಿಸಿ ಕಾಲಾಂತರದಲ್ಲಿಯೂ ಸುಖದುಃಖಗಳನ್ನನುಭವಿಸುವನು. "ಹಾಗಿದ್ದರೆ ಮನುಷ್ಯನು ಶುಭಕರ್ಮಗಳನ್ನೇ ಆಚರಿಸಿ, ಭಗವದನುಗ್ರಹವನ್ನು ಸಂಪಾದಿಸಿ, ಯಾವಾಗಲೂ ಸುಖದಲ್ಲಿಯೇ ಇರಬಾರದೆ?" ಎಂದರೆ, ಅದೇನೋ ಯುಕ್ತಕಾರ್ಯವೇ! ಆದರೆ ಕತ್ತಲೆಯಲ್ಲಿರುವವನು ತನ್ನ ಹಿಂದೆಮುಂದೆ ಇರುವ ವಸ್ತುಗಳೊಂದನ್ನೂ ಕಾಣಲಾರದೆ, ತನ್ನ ಶರೀರವೊಂದನ್ನುಮಾತ್ರ ತಿಳಿಯಬಲ್ಲನು. ಕನಸನ್ನು ಕಾಣುವವನು ಆ ತನ್ನ ನಿಜವಾದ ಶರೀರವನ್ನೂ ಮರೆತು, ಸ್ವಪ್ನದೇಹವನ್ನೂ, ಸ್ವಪ್ನಪದಾರ್ಥಗಳನ್ನೂ ತಿಳಿಯುತ್ತಿರುವನೇ ಹೊರತು ಬೇರೊಂದನ್ನೂ ಕಾಣಲಾರನು. ಹಾಗೆಯೇ ಜೀವನು ದೇಹಾಭಿಮಾನವೇ ಮೊದಲಾದ ಅಜ್ಞಾನಕ್ಕೆ ವಶನಾಗಿ, ಕರ್ಮದಲ್ಲಿ ಬಿದ್ದು, ಅದರಿಂದ ಜ್ಞಾನಸಂಕೋಚವನ್ನು ಹೊಂದಿದಾಗ, ಆಗ ತನಗೆ ಪ್ರತ್ಯಕ್ಷವಾಗಿ

ಕಾಣುವ ತನ್ನ ದೇಹಾದಿಗಳನ್ನುಮಾತ್ರವೇ ಚಿಂತಿಸುತ್ತಿರುವನೇ ಹೊರತು. ತನ್ನ ಹಿಂದುಮುಂದಿನ ದೇಹಗಳನ್ನು ತಿಳಿಯಲಾರನು. ಆಗ ಜೀವನಿಗೆ ಹಿಂದುಮುಂದಿನ ಜನ್ಮಗಳ ಸ್ಮರಣೆಯೇ ತಪ್ಪಿಹೋಗುವುದು ಆದುದರಿಂದ ಆಗಿನ ದೇಹದ ಪೋಷಣೆಗೆ ಬೇಕಾದ ಕರ್ಮಗಳನ್ನುಮಾತ್ರವೇನಡೆಸುವನೇ ಹೊರತು, ಪರಮಪುರುಷನ ಅನುಗ್ರಹವನ್ನು ಸಂಪಾದಿಸುವುದಕ್ಕೆ ತಕ್ಕ ಕರ್ಮಗಳನ್ನು ನಡೆಸಲಾರನು.

ಹೀಗೆ ಜೀವರಾಶಿಗಳು ಅನಾದಿಯಾದ ಅವಿದ್ಯೆಯಿಂದ ಸ್ವಸ್ವರೂಪವನ್ನು ಮರೆತು, ಸತ್ವಾದಿಗುಣಗಳಿಂದ ಹುಟ್ಟಿದವುಗಳಾಗಿಯೂ, ಮೇಲೆ ಮೇಲೆ ಆಯಾ ಗುಣಗಳನ್ನೇ ಹೆಚ್ಚಿಸತಕ್ಕವುಗಳಾಗಿಯೂ ಇರುವ ಕರ್ಮಗಳಿಂದ ತಿರುಗಿತಿರುಗಿ ಜನ್ಮಗಳನ್ನೆತ್ತುತ್ತಿರುವುವು. ಶರೀರವನ್ನೆತ್ತಿದ ಜೀವನು ಐದು ಕರ್ಮೇಂದ್ರಿಯಗಳಿಂದ ಕರ್ಮಗಳನ್ನು ಮಾಡುವನು. ಐದು ಜ್ಞಾನೇಂದ್ರಿಯಗಳಿಂದ ಶಬ್ದಾದಿವಿಷಯಗಳನ್ನು ತಿಳಿಯುತ್ತಿರುವನು ಪಂಚಭೂತಗಳಿಂದೇರ್ಪಟ್ಟ ದೇಹದಲ್ಲಿ ಒಳಹೊಕ್ಕಿರುವನು. ಮೇಲೆಹೇಳಿದ ಐದು ಕರ್ಮೇಂದ್ರಿಯಗಳಿಗಿಂತಲೂ, ಐದು ಜ್ಞಾನೇಂದ್ರಿಯಗಳಿಗಿಂತಲೂ, ಪಂಚಮಹಾಭೂತಗಳಿಗಿಂತಲೂ ಬೇರೆಯಾಗಿ, ಹದಿನಾರನೆಯದೆನಿಸಿಕೊಂಡ ಮನಸ್ಸೆಂಬುದು, ಕರ್ಮೇಂದ್ರಿಯಗಳ ಕಾರ್ಯಕ್ಕೂ ಜ್ಞಾನೇಂದ್ರಿಯಗಳ ತಿಳುವಳಿಕೆಗೂ ಪ್ರೇರಕವಾಗಿರುವುದು. ಮೇಲೆ ಹೇಳಿದ ಈ ಹದಿನಾರು ತತ್ವಗಳಿಗಿಂತಲೂ ಬೇರೆಯಾಗಿ, ಹದಿನೇಳನೆಯದೆನಿಸಿಕೊಂಡಜೀವವು, ತಾನು ಏಕಾಕಿಯಾಗಿದ್ದರೂ, ಆ ಮನಸ್ಸಂಬಂಧದಿಂದ ಇಂದ್ರಿಯವ್ಯಾಪಾರಗಳಲ್ಲಿ ಬಿದ್ದು, ತಾನು ಸುಖದುಃಖಮೋಹಾದಿಗಳಿಗೆ ಗುರಿಯಾಗುವುದು. ಮೇಲೆಹೇಳಿದ ಹತ್ತು ಇಂದ್ರಿಯಗಳು, ಪಂಚಭೂತಗಳು, ಮನಸ್ಸು, ಎಂಬೀ ಹದಿನಾರು ಅವಯವಗಳಿಂದಲೂ, ಅವಿದ್ಯೆ, ಕರ್ಮ, ವಾಸನೆಯೆಂಬ ಮೂರುಬಗೆಯ ಶಕ್ತಿಗಳಿಂದಲೂ ಕೂಡಿದ ಲಿಂಗಶರೀರವೆಂಬುದು, ಜೀವನನ್ನು ಜನ್ಮಜನ್ಮಕ್ಕೂಅಂಟಿಬರುತ್ತ, ಕಾರ್ಯದಶೆಯಲ್ಲಿ ಸ್ಥೂಲಾಕಾರವನ್ನು ಹೊಂದಿ ಕಾಣುವುದು. ಈಸೂಕ್ಷ್ಮಶರೀರವೇ ಆಗಾಗ ಜೀವನಿಗೆಹರ್ಷಶೋಕಭಯಾದಿಗಳಿಗೆ ಕಾರಣವಾಗಿಯೂ, ಗರ್ಭವಾಸ ಜರಾಮರಣಾ

ದಿಗಳಲ್ಲಿ ಸುತ್ತಿಸತಕ್ಕುದಾಗಿಯೂ ಇರುವ ಸಂಸಾರವನ್ನು ತಗುಲುಕಟ್ಟು ವುದು. ಈವಿಧವಾಗಿ ದೇಹಸಂಬಂಧವನ್ನು ಹೊಂದಿದ ಜೀವನು, ಆದೇಹವನ್ನೇ ಆತ್ಮವೆಂದು ಭ್ರಮಿಸಿ, ಇಂದ್ರಿಯಗಳನ್ನೂ ಮನಸ್ಸನ್ನೂ ಜಯಿಸಲಾರದೆ, ತಾನೇ ಅವುಗಳಿಗೆ ವಶನಾಗಿ ಅವು ಎಳೆದಹಾಗೆ ಹೋಗುವನು. ಇವುಗಳ ಸಂಬಂಧದಿಂದ ಬಲಾತ್ಕಾರಪೂರ್ವಕವಾಗಿ, ಪುಣ್ಯಾಕರ್ಮಗಳನ್ನೂ ಮಾಡುವನು. ಪಟ್ಟೆಯ ಹುಳುವಿನಂತೆ ತಾನಾಗಿ ಮಾಡಿದ ಕರ್ಮಗಳಿಂದ, ತನ್ನ ಸ್ವರೂಪವನ್ನು ತಾನೇ ಮರೆಸಿಕೊಂಡು, ದೇಹವನ್ನೇ ಆತ್ಮವೆಂದು ಭ್ರಮಿಸುವನು. ದೇಹವನ್ನು ಹೊತ್ತ ಯಾವ ಜೀವನೂ ಕೆಲಸಮಾಡದೆ ಸುಮ್ಮನಿರಲಾರನು. ಯಾವುದೂ ಇಲ್ಲದಿದ್ದರೆ ಕೊನೆಗೆ ಕೂದಲನ್ನಾದರೂ ಕಿಳ್ಳುತ್ತಿರುವನು. ಅನಾದಿಯಾಗಿ ಹಬ್ಬಿನಟ್ಟಿರುವ ಸತ್ವಾದಿಗುಣಗಳಿಂದ, ಬಲಾತ್ಕಾರಪೂರ್ವಕವಾಗಿ ಯಾವುದಾದರೂ ಒಂದು ಕಾರ್ಯದಲ್ಲಿ ಪ್ರೇರಿಸಲ್ಪಡುವನು. ಜನನಮರಣಗಳಿಗೆ ಹೇತುವಾದ ಆಯಾ ಕರ್ಮಾನುಸಾರವಾಗಿಯೇ ಪ್ರಕೃತಿಯೆಂಬುದು, ಒಮ್ಮೊಮ್ಮೆ ಮೇಲೆ ಹೇಳಿದ ಹದಿನಾರುತತ್ವಗಳೊಡನೆ ಅವ್ಯಕ್ತವಾಗಿದ್ದು, ಮತ್ತೊಮ್ಮೆ ದೇವಮನುಷ್ಯಾದಿದೇಹರೂಪದಿಂದ ಸ್ಥೂಲಾಕಾರವನ್ನು ಹೊಂದಿ ವ್ಯಕ್ತವಾಗಿ ಕಾಣಿಸುವುದು. ಇರುವೆ ಮೊದಲಾದ ಸೂಕ್ಷ್ಮಶರೀರಗಳಾಗಲಿ, ಆನೆ ಮೊದಲಾದ ಸ್ಥೂಲಶರೀರಗಳಾಗಲಿ,ಕರ್ಮತಾರತಮ್ಯದಿಂದಲೇ ಉಂಟಾಗುವುವು. ಈ ದೇಹಗಳು ಹುಟ್ಟುವಾಗ,ತಮ್ಮ ಉತ್ಪತ್ತಿಗೆ ಕಾರಣಗಳಾದ ತಾಯ್ತಂದೆಗಳ ಆಕಾರವನ್ನನುಸರಿಸಿ ಹುಟ್ಟುವುವು. ಜೀವಾತ್ಮಗಳು, ಸಾತ್ವಿಕ ರಾಜಸ ತಾಮಸಗಳೆಂಬ ಮೂರುಬಗೆಯ ಕರ್ಮವಾಸನೆಯನ್ನು ಬಿಡಲಾರದೆ, ಆಯಾ ಸ್ವಭಾವಕ್ಕೆ ತಕ್ಕ ಕರ್ಮಗಳನ್ನು ನಡೆಸಿ, ಆಯಾ ಕರ್ಮಗಳಿಗೆ ತಕ್ಕ ಶರೀರವನ್ನೂ ಹೊಂದುವುವು. ಎಲೈ ವಿಷ್ಣುದೂತನೆ! ಜೀವನಿಗೆ ಪ್ರಕೃತಿಸಂಬಂಧದಿಂದುಂಟಾಗತಕ್ಕ ಸಂಸಾರವೆಂಬುದು ಈವಿಧವಾಗಿರುವುದು. ಹೀಗೆ ಜೀವನಿಗೆ ಸಹಜವಲ್ಲದೆ, ಆಗಂತುಕವಾಗಿ ಬಂದು ತಗುಲುಕಟ್ಟಿದ ಈ ಸಂಸಾರವೆಂಬುದು, ಭಗವದ್ಭಕ್ತಿಯೊಂದರಿಂದ ನಿರ್ಮಲವಾಗಿ ನಾಶಹೊಂದಬಹುದು. ನಾವು ಈ ಬ್ರಾಹ್ಮಣನನ್ನು ಹಿ

ಡದು ಸಾಗಿಸುವುದಕ್ಕೆ ಕಾರಣವೇನೆಂದು ಕೇಳಿದಿರಲ್ಲವೆ? ಆ ಕಾರಣವನ್ನು ತಿಳಿಸುವೆನು ಕೇಳಿರಿ! ಈ ಅಜಾಮಿಳನು ವೇದಶಾಸ್ತ್ರಗಳನ್ನು ಚೆನ್ನಾಗಿಬಲ್ಲವನು. ಸೌಶೀಲ್ಯದಲ್ಲಿಯೂ, ಸದಾಚಾರದಲ್ಲಿಯೂ, ಶಮದಮಾದಿಗುಣಗಳಲ್ಲಿಯೂ ಹೆಸರುಗೊಂಡವನು. ಸ್ತ್ರೀಯರ ಮುಖವನ್ನು ಕಣ್ಣೆತ್ತಿಯೂ ನೋಡದೆ, ದೃಢವಾದ ಬ್ರಹ್ಮಚರ್ಯೆಯಲ್ಲಿಯೇ ಇದ್ದವನು. ದಯಾದ್ರ್ರಹೃದಯನಾಗಿ ಸಮಸ್ತಭೂತಗಳಿಗೂ ಹಿತವನ್ನೇ ಕೋರುತಿದ್ದವನು. ಜಿತೇಂದ್ರಿಯನಾಗಿಯೂ, ಸದಾ ಶುಚಿಯಾಗಿಯೂ ಇದ್ದವನು. ಯಾವಾಗಲೂ ಪ್ರಿಯವನ್ನೇ ನುಡಿಯುತಿದ್ದವನು. ಎಂತಹ ಸಂದರ್ಭಗಳಲ್ಲಿಯೂ ಸುಳ್ಳಾಡುತಿದ್ದವನಲ್ಲ. ಸಾವಿತ್ರಿ ಮೊದಲಾದ ಮಂತ್ರಗಳೆಲ್ಲವನ್ನೂ ಬಲ್ಲವನು ಗುರುಹಿರಿಯರನ್ನೂ, ಅತಿಥಿಗಳನ್ನೂ, ಅಗ್ನಿಯನ್ನೂ ಆರಾಧಿಸುತಿದ್ದವನು. ಇಷ್ಟು ಗುಣಾಢ್ಯನಾಗಿದ್ದರೂ ಗರ್ವಹೀನನಾಗಿ ಪರೋಪಕಾರಿಯಾಗಿದ್ದನು, ಹೆಚ್ಚು ಮಾತಿಗೆ ಹೋಗುತಿದ್ದವನಲ್ಲ! ಅಸೂಯೆಯಿಲ್ಲದವನು. ಇಷ್ಟು ಗುಣಾಢ್ಯನಾಗಿದ್ದ ಈ ಬ್ರಾಹ್ಮಣನು, ಒಮ್ಮೆ ತನ್ನ ತಂದೆಯ ನಿಯಮಾನುಸಾರವಾಗಿ ಫಲಪುಷ್ಪಗಳನ್ನೂ, ಸಮಿತ್ತುಗಳನ್ನೂ, ದರ್ಭೆಗಳನ್ನೂ ತರುವುದಕ್ಕಾಗಿ ಕಾಡಿಗೆ ಹೋದನು. ಇವೆಲ್ಲವನ್ನೂ, ಸಂಗ್ರಹಿಸಿಕೊಂಡು ಅಲ್ಲಿಂದ ಹಿಂತಿರುಗಿ ಬರುವಷ್ಟರಲ್ಲಿ, ಆ ಕಾಡಿನಲ್ಲಿ ಶೂದ್ರನೊಬ್ಬನು ತನ್ನ ಪತ್ನಿಯೊಡನೆ ಕಾಮಾಂಧನಾಗಿ ತಿರುಗುತಿದ್ದುದನ್ನು ಕಂಡನು. ಆ ಹೆಂಗಸೂ ಕೂಡ ಮದ್ಯಪಾನದಿಂದ ಮತ್ತೇರಿ, ತೊಳಲುವ ಕಣ್ಣುಗಳುಳ್ಳವಳಾಗಿ, ಮೈಮೇಲೆ ಪ್ರಜ್ಞೆಯಿಲ್ಲದೆ, ಮೈಮೇಲಿನ ಬಟ್ಟೆಯು ಜಾರಿಹೋದುದನ್ನೂ ಕಾಣದೆ, ಮಾನದಮೇಲೆಯೂ ದೃಷ್ಟಿಯಿಲ್ಲದೆ, ಲಜ್ಜಾಹೀನಳಾಗಿ, ಹಾಡುತ್ತಲೂ, ಕುಣಿಯುತ್ತಲೂ, ನಗುತ್ತಲೂ ಬಂದು, ಆಗಾಗ ಆ ಶೂದ್ರನ ಮೇಲೆ ಬೀಳುತಿದ್ದಳು. ಇವರಿಬ್ಬರೂ ಹೀಗೆ ಆಗಾಗ ಒಬ್ಬರನ್ನೊಬ್ಬರು ಆಲಿಂಗಿಸಿಕೊಳ್ಳುವುದು, ಆಗಾಗ ಮುಖವನ್ನೆತ್ತಿ ಮುತ್ತಿಕ್ಕುವುದು, ಇವೇ ಮೊದಲಾದ ಆಟಗಳಿಂದ ಗ್ರಾಮ್ಯಪಶುಗಳಂತೆ ಕ್ರೀಡಿಸುತ್ತಿದ್ದರು. ಈ ಲೀಲೆಗಳನ್ನು ಕಂಡೊಡನೆ ಅಜಾಮಿಳನ ಮನಸ್ಸು ಕದಲಿತು. ದುರದೃಷ್ಟವಶದಿಂದ ಅವನೂ ಕಾಮಪೀಡಿತನಾಗಿ, ಆ ಶೂದ್ರಸ್ತ್ರೀಯಲ್ಲಿ

ಕಣ್ಣಿಟ್ಟನು,ಆಗಲೂ, ಆ ಬ್ರಾಹ್ಮಣಕುಮಾರನು,ಹಿಂದೆ ತಾನು ಗುರುಮುಖ ವಾಗಿ ಉಪದೇಶಹೊಂದಿದ ಕ್ರಮದಿಂದ ತನ್ನ ಮನಸ್ಸನ್ನು ನಿಗ್ರಹಿಸುವು ದಕ್ಕಾಗಿ,ತನ್ನಿಂದಾದಮಟ್ಟಿಗೆ ವಿವೇಕದಿಂದ ಮನಸ್ಸನ್ನು ಸ್ಥಿರಪಡಿಸುವುದ ಕ್ಕೆ ಯತ್ನಿಸಿದರೂ, ಕಾಮಪೀಡಿತವಾದ ಆ ಮನಸ್ಸನ್ನು ತಡೆದಿಡಲಾರದೆ ಹೋದನು. ಇವನಿಗೆ ಆ ದಾಸಿಯ ನಿಮಿತ್ತವಾದ ಮನ್ಮಥಪಿಶಾಚದಿಂದ ತನ್ನ ಪೂರ್ವಸ್ಥಿತಿಯೇ ಮರೆತುಹೋಗುವಂತಾಗಿ, ಅನವರತವೂ ಅವ ಳನ್ನೇ ಧ್ಯಾನಿಸುತಿದ್ದನು ಸಂಧ್ಯಾವಂದನಾದಿ ಕರ್ಮಗಳೆಲ್ಲವನ್ನೂ ಬಿಟ್ಟುಬಿಟ್ಟನು. ತನ್ನ ತಂದೆಯು ಸಂಪಾದಿಸಿ ತಂದ ಹಣದಿಂದ, ಅ ಲ್ಲಲ್ಲಿ ಮನೋಹರಗಳಾದ ವಸ್ತುಗಳನ್ನು ಕೊಂಡುಕೊಂಡು, ಆ ದಾ ಸಿಗೆ ತಂದುಕೊಟ್ಟು, ಅವಳನ್ನು ನಾನಾವಿಧದಿಂದ ಸಂತೋಷಗೊಳಿಸು ತಿದ್ದನು. ಅವಳು ತನ್ನನ್ನು ಒಂದಾವರ್ತಿ ಕಡೆಗಣ್ಣಿನಿಂದ ನೋಡಿದಮಾ ತ್ರಕ್ಕೆ ಹಿಗ್ಗುತ್ತಿದ್ದನು. ಇವನ ವಿವೇಕವೆಲ್ಲವೂ ಕೆಟ್ಟಿತು. ಕೇವಲ ಪಾಪಾ ಚಾರಪರನಾಗಿ, ಸತ್ಕುಲಪ್ರಸೂತೆಯಾಗಿಯೂ ಪರಮಸೌಂದರ್ಯವತಿ ಯಾಗಿಯೂ ಇದ್ದ ತನ್ನ ಕೈಹಿಡಿದ ಹೆಂಡತಿಯನ್ನು, ಅವಳು ರಜಸ್ವಲೆ ಯಾಗುವುದಕ್ಕೆ ಮೊದಲೇ ಪರಿತ್ಯಜಿಸಿಬಿಟ್ಟನು. ಕೇವಲಮೂಢಬುದ್ಧಿ ಯುಳ್ಳವನಾಗಿ, ಇದೇರೀತಿಯಲ್ಲಿ ತನ್ನ ಪಿತ್ರಾರ್ಜಿತವಾದ ಹಣವೆಲ್ಲವ ನ್ನೂ ಕಳೆದುಕೊಂಡಮೇಲೆ, ದುರ್ವ್ಯಾಪಾರಗಳಿಂದಅಲ್ಲಲ್ಲಿ ಹಣವನ್ನು ಸಂ ಪಾದಿಸಿ ತಂದು,ಆ ದಾಸಿಯನ್ನೂ, ಅವಳಲ್ಲಿ ಹುಟ್ಟಿದ ಮಕ್ಕಳನ್ನೂ ಪೋ ಷಿಸುತ್ತಬಂದನು. ಹೀಗೆ ಅಜಾಮಿಳನು, ಶಾಸ್ತ್ರಮರ್ಯಾದೆಯನ್ನು ಮೀರಿ, ಸ್ವೇಚ್ಛಾಚಾರಿಯಾಗಿ ನಡೆಯುತ್ತ, ಸಜ್ಜನನಿಂದ್ಯವಾದ ದಾರಿಯಲ್ಲಿಯೇ ನಡೆಯುತಿದ್ದನು. ಈ ಪಾಪಕಾರ್ಯಗಳಿಂದಲೇ ತನ್ನ ಆಯುಃಕಾಲವೆಲ್ಲವ ನ್ನೂ ಕಳೆದು ಬಿಟ್ಟನೇ ಹೊರತು, ಈ ಪಾಪಕ್ಕಾಗಿ ಪ್ರಾಯಶ್ಚಿತ್ತವನ್ನೂ ಮಾಡಿಕೊಂಡವನಲ್ಲ. ಆದುದರಿಂದ ಪಾಪಿಯಾದ ಇವನನ್ನು ನಮ್ಮ ಪ್ರಭು ವಾದ ಯಮನ ಬಳಿಗೆ ಸಾಗಿಸುವುದಕ್ಕಾಗಿಯೇ ನಾವು ಇಲ್ಲಿಗೆಬಂದೆವು. ಅ ಲ್ಲಿನ ನರಕಯಾತನೆಗಳನ್ನು ಅನುಭವಿಸಿದಹೊರತು ಇವನಿಗೆಶುದ್ಧಿಯಿಲ್ಲ. ಆ ನರಕಶಿಕ್ಷೆಯೇ ಇವನಿಗೆ ಪ್ರಾಯಶ್ಚಿತ್ತವು" ಎಂದರು. ಇದು ಮೊದಲನೆಯ ಅಧ್ಯಾಯವು.

## ವಿಷ್ಣುದೂತರು ವಿಷ್ಣುನಾಮದ ಮಹಿಮೆಯನ್ನು ಹೇಳಿ ಅಜಾಮಿಳನನ್ನು ಬಿಡಿಸಿದುದು, ಅಜಾಮಿಳನು ತನ್ನ ಪಾಪಕ್ಕಾಗಿ ಪಶ್ಚಾತ್ತಾಪಪಟ್ಟುದು.

ರಾಜೇಂದ್ರಾ! ಕೇಳು! ವಿಷ್ಣುದೂತರು ಧರ್ಮಜ್ಞರಾದುದರಿಂದ, ಈ ಮಾತನ್ನು ಕೇಳಿ ಆಶ್ಚರ್ಯವನ್ನು ತೋರಿಸುತ್ತ, ಆ ಯಮಭಟರನ್ನು ಕುರಿತು. "ಅಹಾ! ಏನಿದು! ಧರ್ಮರಾಜನ ಸಭೆಯಲ್ಲಿಯೂ ಅಧರ್ಮವು ಕಾಲಿಟ್ಟಿರುವಂತಿದೆ! ಶಿಕ್ಷಾರ್ಹರಲ್ಲದ ನಿರಪರಾಧಿಗಳನ್ನು ಶಿಕ್ಷಿಸುವುದು ನಿಮಗೆ ಧರ್ಮವೆ? ಆಹಾ! ಇದಕ್ಕಿಂತಲೂ ಅನ್ಯಾಯವೇನುಂಟು! ಪ್ರಜೆಗಳನ್ನು ದಂಡಿಸುವ ಅಧಿಕಾರವು ನಿಮ್ಮಲ್ಲಿರುವುದು! ನೀವು ಪಕ್ಷಪಾತವಿಲ್ಲದವರೆಂದು ಹೆಸರುಗೊಂಡವರು! ಮತ್ತು ಪಾಪಿಗಳನ್ನು ಶಿಕ್ಷಿಸಿ ಆ ಮೂಲಕವಾದ ಪ್ರಾಯಶ್ಚಿತ್ತದಿಂದ ಅವರಿಗೆ ಶ್ರೇಯಸ್ಸನ್ನುಂಟುಮಾಡತಕ್ಕವರು! ಸಕಲ ಜೀವಗಳನ್ನೂ ಸಮದೃಷ್ಟಿಯಿಂದ ನೋಡತಕ್ಕ ನೀವೇ ಹೀಗೆ, ಪೂರ್ವೋತ್ತರಗಳನ್ನು ವಿಚಾರಮಾಡದೆ, ನಿರಪರಾಧಿಗಳನ್ನು ದಂಡಿಸಿ, ವೈಷಮ್ಯವನ್ನು ತೋರಿಸುವಪಕ್ಷದಲ್ಲಿ, ಪ್ರಾಣಿಗಳು ಬೇರೆ ಯಾರನ್ನು ಶರಣುಹೊಂದುವರು? ಇದಲ್ಲದೆ ನೀವು ಎಲ್ಲವನ್ನೂ ಬಲ್ಲವರು! ಮತ್ತು ಪೂಜ್ಯರು! ಲೋಕದಲ್ಲಿ ವಿವೇಕಿಗಳಾದ ನಿಮ್ಮಂತಹ ಹಿರಿಯರು ಯಾವರೀತಿಯಾಗಿ ನಡೆಯುವರೋ, ಇತರರೂ ಆ ಮಾರ್ಗವನ್ನೇ ಅನುವರ್ತಿಸುವರು. ದೊಡ್ಡವರ ನಡತೆಯೇ ಲೋಕಕ್ಕೆ ಪ್ರಮಾಣವಾಗುವುದು. ಹೀಗೆ ತಮ್ಮ ನಡತೆಯಿಂದಲೇ ಲೋಕಕ್ಕೆ ಧರ್ಮಾಧರ್ಮಗಳನ್ನು ಬೋಧಿಸತಕ್ಕವರಾಗಿಯೂ, ವೇದವಿಧಿಗಳನ್ನು ಮೀರದೆ ನಡೆಯತಕ್ಕವರಾಗಿಯೂ ಇರುವ ನಿಮ್ಮಂತವರು, ನಿರಪರಾಧಿಗಳನ್ನು ದಂಡಿಸುವುದು ಯುಕ್ತವೆ? ನಂಬಿ ಬಂದು ತೊಡೆಯಮೇಲೆ ಮಲಗಿ ನಿದ್ರೆಹೋಗುವವರನ್ನು ಕತ್ತಿಯಿಂದಿರಿದು ಕೊಲ್ಲುವುದು ಯುಕ್ತವೆ? ದಯಾಳುಗಳಾದವರು ನಂಬಿದವರಿಗೆ ಎಂದಿಗೂ ದ್ರೋಹವನ್ನೆಣಿಸಲಾರರು. ನಿಮ್ಮ ಪ್ರಭುವಾದ ಧರ್ಮರಾಜನು, ಸಮವರ್ತಿಯೆನಿಸಿಕೊಂಡಿರುವುದರಿಂದ, ನಿರಪರಾಧಿಗಳನ್ನು ದಂಡಿಸಲಾರನೆಂದು ಲೋಕವೆಲ್ಲವೂ ಅವನಲ್ಲಿ ನಂಬಿಕೆಯನ್ನಿಟ್ಟಿರು

ವುದು. ಇಂತಹ ಸ್ಥಿತಿಯಲ್ಲಿ ಅವನು ನಿರಪರಾಧಿಗಳನ್ನು ದಂಡಿಸಿದರೆ ವಿಶ್ವಾಸಘಾತುಕನೆನಿಸುವುದಿಲ್ಲವೆ? “ಪರಮಪಾಪಿಷ್ಠನಾದ ಈ ಅಜಾಮಿಳನನ್ನು ದಂಡಿಸುವುದರಿಂದ ತಪ್ಪೇನು?” ಎಂದು ನೀವು ಕೇಳಬಹುದು. ಹಾಗಲ್ಲ! ಇವನು ಎಷ್ಟೋ ಪಾಪಗಳನ್ನು ನಡೆಸಿದ್ದರೂ ಪೊತ್ತಕ್ಕೆ ಅವುಗಳಿಗೆಲ್ಲಾ ಪ್ರಾಯಶ್ಚಿತ್ತವನ್ನೂ ಮಾಡಿಕೊಂಡಿರುವನು. ಇವನು ಕೋಟಿಜನ್ಮಗಳಲ್ಲಿ ಮಾಡಿದ ಪಾಪಗಳೂ ಅದರಿಂದ ಕಳೆದುಹೋಗಿರುವುವು. ಇವನು ಮರಣಕಾಲದಲ್ಲಿ “ನಾರಾಯಣಾ” ಎಂಬ ನಾಲ್ಕಕ್ಷರಗಳನ್ನು ಬಾಯಿಂದುಚ್ಚರಿಸಿದನಲ್ಲವೆ? ಆ ವಿಷ್ಣುನಾಮೋಚ್ಚಾರಣವೇ ಇವನ ಸಮಸ್ತಪಾಪಗಳಿಗೂ ಪ್ರಾಯಶ್ಚಿತ್ತವೆಂದೆಣಿಸಿರಿ! ಸ್ವರ್ಣಸ್ತೇಯ, ಸುರಾಪಾನ, ಮಿತ್ರದ್ರೋಹ, ಬ್ರಹ್ಮಹತ್ಯೆ, ಗುರುದಾರಪರಿಗ್ರಹ, ಸ್ತ್ರೀಹತ್ಯೆ, ಶಿಶುಹತ್ಯೆ, ರಾಜಹತ್ಯೆ, ತಂದೆತಾಯಿಗಳನ್ನು ಕೊಲ್ಲುವುದು, ಇವೇಮೊದಲಾಗಿ ಇನ್ನೂ ಅನೇಕ ಮಹಾಪಾಪಗಳನ್ನು ಮಾಡಿದವರೂಕೂಡ, ಒಂದಾವರ್ತಿ ಆ ಶ್ರೀಹರಿಯ ನಾಮಾಕ್ಷರಗಳನ್ನುಚ್ಚರಿಸಿದಮಾತ್ರಕ್ಕೆ ಪಾಪವಿಮುಕ್ತರಾಗುವರು. ಅವರ ಸಮಸ್ತಪಾಪಗಳಿಗೂ ಅದೊಂದೇ ಪ್ರಾಯಶ್ಚಿತ್ತವು. ಯಾವವಿಧದಿಂದಲಾದರೂ ಆ ಹರಿನಾಮವು ಬಾಯಿಂದ ಹೊರಟರೆ, ಅವರಿಗೆ ಆ ಶ್ರೀಹರಿಯನ್ನು ಮನಸ್ಸಿನಲ್ಲಿ ಧ್ಯಾನಿಸಬೇಕೆಂಬ ಬುದ್ಧಿಯೂ ಹುಟ್ಟುವುದು. ಕ್ರಮಕ್ರಮವಾಗಿ ಆ ಹರಿಸ್ಮರಣವೇಮೋಕ್ಷಕ್ಕೂ ದಾರಿಯಾಗುವುದು. ಈ ಭಗವನ್ನಾಮೋಚ್ಚಾರಣದಿಂದ ಪಾಪಶುದ್ಧಿಯುಂಟಾಗುವಂತೆ, ವೇದಾಧ್ಯಯನದಿಂದಾಗಲಿ, ಚಾಂದ್ರಾಯಣಾದಿವ್ರತಗಳಿಂದಾಗಲಿ, ತಪಸ್ಸಿನಿಂದಾಗಲಿ ಶುದ್ಧಿಯುಂಟಾಗಲಾರದು. ಬ್ರಹ್ಮವಾದಿಗಳು ಹೇಳಿರುವ ಬೇರೆ ಯಾವವಿಧವಾದ ಪ್ರಾಯಶ್ಚಿತ್ತಗಳೂ, ವಿಷ್ಣುನಾಮೋಚ್ಚಾರಣವೆಂಬ ಪ್ರಾಯಶ್ಚಿತ್ತಕ್ಕೆ ಈಡಾಗಲಾರವು. ಇತರಪ್ರಾಯಶ್ಚಿತ್ತಗಳೆಲ್ಲವೂ ಪಾಪಗಳನ್ನು ನಿರ್ಮೂಲವಾಗಿ ನಾಶಮಾಡಲಾರವು. ಏಕೆಂದರೆ, ಒಂದು ಪಾಪಕ್ಕಾಗಿ ಪ್ರಾಯಶ್ಚಿತ್ತವನ್ನು ಮಾಡಿಕೊಂಡಮೇಲೆಯೂ, ಮನಸ್ಸು ಬೇರೊಂದು ಪಾಪಮಾರ್ಗದಲ್ಲಿ ಪ್ರವರ್ತಿಸದೆ ಬಿಡದು! ಆದುದರಿಂದ ಮನಶ್ಶುದ್ಧಿಯನ್ನು ಹೊಂದಿ, ಪಾಪವನ್ನು ನಿರ್ಮೂ

ಲವಾಗಿ ನಾಶಮಾಡಿಕೊಳ್ಳಬೇಕೆಂಬ ಅಪೇಕ್ಷೆಯುಳ್ಳವರಿಗೆ, ಭಗವಂತನ ಕಲ್ಯಾಣಗುಣಗಳನ್ನು ಪ್ರಕಾಶಗೊಳಿಸತಕ್ಕ ಆತನ ನಾಮಗಳನ್ನುಚ್ಚರಿಸುವುದೇ ಮೇಲಾದ ಪ್ರಾಯಶ್ಚಿತ್ತವು ಅದು ಸುಜ್ಞಾನಕ್ಕೆ ಮೂಲವಾದ ಸತ್ವಗುಣವನ್ನು ಹೆಚ್ಚಿಸುವುದು. ಆದುದರಿಂದ ಓ ಯಮಭಟರೆ! ಈ ಅಜಾಮಿಳನು ಸಾಯುವ ಸ್ಥಿತಿಯಲ್ಲಿ ಭಗವನ್ನಾಮವನ್ನುಚ್ಚರಿಸಿದುದನ್ನು ನೀವೂ ಕೇಳಿರುವಿರಲ್ಲವೆ? ಇದರಿಂದ ಅವನ ಸಮಸ್ತಪಾಪಗಳಿಗೂ ಪ್ರಾಯಶ್ಚಿತ್ತವು ನಡೆದು ಹೋಯಿತು! ನೀವು ಇವನನ್ನು ಯಮಲೋಕಕ್ಕೆಳೆಯುವುದು ಯುಕ್ತವಲ್ಲ. "ಆದರೆ ಈ ಅಜಾಮಿಳನು ಸಾಯುವಾಗಲೂ ಪುತ್ರಮೋಹದಿಂದ, ತನ್ನ ಮಗನ ಹೆಸರನ್ನು ಹಿಡಿದು ಕೂಗಿ ಕರೆದಮಾತ್ರಕ್ಕೆ ಭಗವಂತನ ನಾಮೋಚ್ಚಾರಣವನ್ನು ಮಾಡಿದಹಾಗಾಯಿತೆ"? ಎಂದು ನೀವು ಸಂದೇಹಿಸಬಹುದು. ಅದು ಹಾಗಲ್ಲ! ಸಂಕೇತದಿಂದಾಗಲಿ, (ಮತ್ತೊಬ್ಬರ ಹೆಸರನ್ನು ಹಿಡಿದು ಕರೆಯುವುದು) ಪರಿಹಾಸದಿಂದಾಗಲಿ, ನಾಲಗೆ ತೊದಲುವುದರಿಂದಾಗಲಿ, ಕ್ರೋಧಾವೇಶದಿಂದಾಗಲಿ, ತಿರಸ್ಕಾರಭಾವದಿಂದಾಗಲಿ, ಭಗವನ್ನಾಮವು ಒಂದಾವರ್ತಿ ಬಾಯಿಂದ ಹೊರಟಮಾತ್ರಕ್ಕೆ ಅದುಸಮಸ್ತಪಾಪಗಳನ್ನೂ ನೀಗಿಸುವುದೆಂದು ಹಿರಿಯರು ಹೇಳುವರು ಹಾಗೆಯೇ ಈ ಅಜಾಮಿಳನು, ತನ್ನ ಮಗನ ಹೆಸರನ್ನು ಹಿಡಿದು ಕರೆಯುವನೆವದಿಂದ,ಆ ಹರಿನಾಮವನ್ನುಚ್ಚರಿಸಿದ್ದರೂ, ಅದರಿಂದಲೇ ಇವನ ಪಾಪಗಳೆಲ್ಲವೂ ನೀಗಿರುವುವು. ಮತ್ತು, ಮೇಲಿಂದ ಬೀಳುವುದು, ಎಡವುವುದು, ಮೈಮುರಿಯುವುದು, ಸರ್ಪಾದಿಗಳಿಂದ ಕಚ್ಚಲ್ಪಡುವುದು, ಜ್ವರಾದಿಗಳಿಂದ ಸಂಕಟಪಡುವುದು, ಇವೇ ಮೊದಲಾದ ಆಪತ್ಕಾಲಗಳಲ್ಲಿ, ಯಾವನು ಮೈಮರೆತಾದರೂ ಒಂದಾವರ್ತಿ "ಹರಿ" ಎಂಬ ಎರಡಕ್ಷರಗಳನ್ನು ಬಾಯಿಂದ ನುಡಿಯುವನೋ, ಅವನಿಗೆ ಆಕ್ಷಣವೇ ಸಮಸ್ತಪಾಪಗೂ ಬಿಟ್ಟುಹೋಗುವುವು. ಅವನು ಹಿಂದೆ ಎಷ್ಟೋ ಪಾಪಮಾಡಿದ್ದರೂ, ಯಮಯಾತನೆಗಳಿಗೆ ಗುರಿಯಾಗತಕ್ಕವನಲ್ಲ! ಪುರಾತನಮಹರ್ಷಿಗಳು ಆಯಾ ಪಾಪಗಳ ಹೆಚ್ಚು ಕಡಿಮೆಗೆ ತಕ್ಕಂತೆ, ಪ್ರಾಯಶ್ಚಿತ್ತಗಳನ್ನು ಸ್ವಲ್ಪವಾಗಿಯೂ ದೊಡ್ಡದಾಗಿಯೂ ವಿಧಿಸಿರುವರು. ತಪಸ್ಸು, ದಾನ, ಜಪ ಮೊದಲಾದುವುಗಳಿಂ

ದ ಅನೇಕ ಪಾಪಗಳು ನೀಗುವುವು. ಆದರೆ ಆ ಪ್ರಾಯಶ್ಚಿತ್ತಗಳು ಆಯಾ ಕಾಲದ ಪಾಪಗಳನ್ನುಮಾತ್ರ ನೀಗಿಸುವುವೇಹೊರತು, ಆಪಾಪಕ್ಕೆ ಉತ್ಪತ್ತಿಸ್ಥಾನವಾದ ಮನಸ್ಸನ್ನು ಶುದ್ಧಿಗೊಳಿಸಲಾರದು. ಭಗವಂತನ ಪಾದಸೇವೆಯಿಂದಲೇ ಮನಶ್ಶುದ್ಧಿಯುಂಟಾಗಬೇಕಾಗಿರುವುದು. ಬುದ್ಧಿಪೂರ್ವಕವಾಗಿಯಾಗಲಿ, ಅಬುದ್ಧಿಪೂರ್ವಕವಾಗಿಯಾಗಲಿ, ಭಗನ್ನಾಮವನ್ನು ಬಾಯಿಂದನುಡಿದಪಕ್ಷದಲ್ಲಿ, ಅದು ಅವನ ಸಮಸ್ತಪಾಪಗಳನ್ನೂ ಭಸ್ಮ ಮಾಡುವುದು. ಉರಿಯುತ್ತಿರುವ ಬೆಂಕಿಯನ್ನು ಬುದ್ಧಿಪೂರ್ವಕವಾಗಿ ಮುಟ್ಟಿದರೂ, ಅಜ್ಞಾನದಿಂದ ಮುಟ್ಟಿದರೂ ಅದು ತನ್ನ ಶಕ್ತಿಯನ್ನು ತೋರಿಸದೆ ಬಿಡದು! ಔಷಧವನ್ನು ಕುಡಿಯುವ ರೋಗಿಯು ಅದರ ಶಕ್ತಿಯನ್ನು ತಿಳಿದಿದ್ದರೂ, ತಿಳಿಯದಿದ್ದರೂ, ಅದರಿಂದ ಗುಣಹೊಂದುವನು. ತಿಳಿದಾಗಲಿ, ತಿಳಿಯದೆಯಾಗಲಿ, ಮಾಡಿದ ಭಗವನ್ನಾಮಸ್ಮರಣವೂ, ಹಾಗೆಯೇ ಪಾಪನಿವಾರಣಪೂರ್ವಕವಾಗಿ ಮನಶ್ಶುದ್ಧಿಯನ್ನುಂಟು ಮಾಡುವುದರಲ್ಲಿ ಸಂದೇಹವಿಲ್ಲ. ಆದುದರಿಂದ ಎಲೈ ಯಮಭಟರೆ! ಈ ಅಜಾಮಿಳನು ಭಗವನ್ನಾಮವೆಂಬ ಮಂತ್ರದ ಪ್ರಭಾವವನ್ನು ತಿಳಿದಿದ್ದರೂ, ಅಥವಾ ತಿಳಿಯದಿದ್ದರೂ, ಆ ನಾಮಾಕ್ಷರಗಳು ಅವನ ಬಾಯಿಂದ ಹೊರಟುದರಿಂದ ಪಾಪವಿಮುಕ್ತನಾಗಿರುವನು. ಇವನಿಗೆ ಇನ್ನುಮೇಲೆ ವೈಕುಂಠವೇ ಹೊರತು,ಯಮಲೋಕವಿಲ್ಲ! ಈ ಧರ್ಮಸೂಕ್ಷ್ಮದಲ್ಲಿ ನಿಮಗೇನಾದರೂ ಸಂದೇಹವಿದ್ದರೆ, ನಿಮ್ಮ ಪ್ರಭುವಾದ ಧರ್ಮರಾಜನಲ್ಲಿಯೇ ಕೇಳಿ ತಿಳಿಯಬಹುದು. ಭಗವದಂಶಭೂತನಾದ ಆ ಯಮನು ಧರ್ಮರಹಸ್ಯಗಳೆಲ್ಲವನ್ನೂ ಚೆನ್ನಾಗಿ ಬಲ್ಲವನು" ಎಂದರು, ಹೀಗೆ ವಿಷ್ಣುದೂತರು ಭಾಗವತಧರ್ಮವನ್ನು ನಿರ್ಣಯಿಸಿ ಹೇಳಿದಮೇಲೆ, ಯಮದೂತರು, ಆ ಅಜಾಮಿಳನಿಗೆ ಕಟ್ಟಿದ್ದ ಯಮಪಾಶವನ್ನು ಕಳೆದು ಬಿಟ್ಟರು. ಆತನಿಗೆ ಪಾಪಾಧಿಕ್ಯದಿಂದ ಅಕಾಲದಲ್ಲಿ ಸಮೀಪಿಸಿದ್ದ ಮೃತ್ಯುವೂ ತಪ್ಪಿಹೋಯಿತು. ಆಮೇಲೆ ಯಮದೂತರು ತಮ್ಮ ಪ್ರಭುವಾದ ಯಮನ ಬಳಿಗೆ ಹೋಗಿ, ಇಲ್ಲಿ ನಡೆದ ವೃತ್ತಾಂತಗಳೆಲ್ಲವನ್ನೂ ತಿಳಿಸಿದರು. ಇತ್ತಲಾಗಿಯಮಪಾಶವನ್ನು ತಪ್ಪಿಸಿಕೊಂಡ ಅಜಾಮಿಳನು, ಪುನರ್ಜೀವವನ್ನು ಹೊಂದಿ

ನಿರ್ಭಯನಾಗಿ, ಮುಂದೆ ನಿಂತಿದ್ದ ವಿಷ್ಣುದೂತರನ್ನು ನೋಡಿ, ಪರಮಾ ನಂದದಿಂದ ಅವರಿಗೆ ಸಾಷ್ಟಾಂಗ ಪ್ರಣಾಮವನ್ನು ಮಾಡಿದನು. ಅವರ ಮುಂದೆ ಬದ್ಧಾಂಜಲಿಯಾಗಿ ನಿಂತು ಒಂದೆರಡುಮಾತುಗಳನ್ನು ಹೇಳುವುದ ಕ್ಕಾಗಿ ಬಾಯೆತ್ತುವಷ್ಟರಲ್ಲಿ, ಅವರು ಥಟ್ಟನೆ ಕಣ್ಮರೆಯಾದರು.

ಆದರೆ ಹಿಂದೆ ವಿಷ್ಣುದೂತರಿಗೂ, ಯಮದೂತರಿಗೂ ನಡೆದ ಸಂ ವಾದವೆಲ್ಲವೂ ಅಜಾಮಿಳನ ಕಿವಿಗೂ ಬಿದ್ದಿತ್ತು. ಅದರಲ್ಲಿ ಹೇಳಿದಭಾಗವತ ಧರ್ಮಗಳನ್ನೂ, ಸತ್ವರಜಸ್ತಮೋಗುಣಗಳಿಗೆ ವಶರಾದ ಜನಗಳು ಮಾಡ ತಕ್ಕಕರ್ಮಯೋಗಗಳನ್ನೂ ಅವನು ಚೆನ್ನಾಗಿ ಕೇಳಿದುದರಿಂದ, ಅದು ಮೊದಲು ಭಗವಂತನಲ್ಲಿ ವಿಶೇಷಭಕ್ತಿಯುಳ್ಳವನಾದನು. ಆಗ ಅವನಿಗೆ ಹಿಂ ದೆ ತಾನು ನಡೆಸಿದ ಪಾಪಕೃತ್ಯಗಳೆಲ್ಲವೂ ಸ್ಮರಣೆಗೆ ಬಂದುವು. ಅದಕ್ಕಾಗಿ ಪಶ್ಚಾತ್ತಾಪಪಡುತ್ತ “ಅಯ್ಯೋ! ನಾನು ನನ್ನ ಮನಸ್ಸನ್ನು ನಿಗ್ರಹಿ ಸಲಾರದೆ ಹೋದುದಕ್ಕಾಗಿ ಎಷ್ಟು ಕಷ್ಟಕ್ಕೆ ಗುರಿಯಾದೆನು! ಈ ಶೂ ದ್ರಸ್ತ್ರೀಯೊಡನೆ ಸಹವಾಸಮಾಡಿ, ನನ್ನ ಬ್ರಾಹ್ಮಣ್ಯವನ್ನೂ ಕಳೆದುಕೊಂ ಡೆನು! ಛೀ! ಸಮಸ್ತಸಜ್ಜನರಿಗೂ ಹಾಸ್ಯಾಸ್ಪದವಾದ ನನ್ನ ಜನ್ಮವನ್ನು ಸುಡಬೇಕಲ್ಲವೆ? ಪಾಪಿಯಾದ ನನ್ನಿಂದ ಪವಿತ್ರವಾದ ನನ್ನ ಕುಲಕ್ಕೇ ಒಂ ದು ಕಳಂಕವುಂಟಾಯಿತು ಉತ್ತಮಕುಲದಲ್ಲಿ ಹುಟ್ಟಿ ಪರಮಪತಿವ್ರತೆಯೆನಿ ಸಿಕೊಂಡ ಭಾರ್ಯೆಯನ್ನು ಬಿಟ್ಟು, ಮದ್ಯಮಾಂಸಸೇವನೆಯಿಂದ ಪತಿತೆ ಯಾದ ಈ ಶೂದ್ರಸ್ತ್ರೀಯಲ್ಲಿ ಮನಸ್ಸಿಟ್ಟೆನು ನಾನು ವಿವೇಕಹೀನನಾಗಿ, ವೃದ್ಧರಾಗಿಯೂ, ಅನಾಥರಾಗಿಯೂ, ದೀನರಾಗಿಯೂ, ಬೇರೆ ಬಂಧುಗ ಳಿಲ್ಲದೆ ನನ್ನನ್ನೇ ನಂಬಿದವರಾಗಿಯೂ ಇದ್ದ ನನ್ನ ತಂದೆತಾಯಿಗಳನ್ನೂ ತೊರೆದೆನು. ನನ್ನಂತೆ ಕೃತಘ್ನನು ಬೇರೊಬ್ಬನುಂಟೆ? ಆಹಾ! ಎಷ್ಟು ನೀ ಚಕಾರ್ಯವನ್ನು ಮಾಡಿದೆನು! ಎಂದಿದ್ದರೂ ನನಗೆ ನರಕಪ್ರಾಪ್ತಿಯು ತ ಪ್ಪದು ಅಲ್ಲಿ ನಾನು ಅಧಾರ್ಮಿಕರಾಗಿಯೂ, ಕಾಮುಕರಾಗಿಯೂ ಇರುವ ಪಾಪಿಗಳೊಡನೆ ಅನೇಕ ಘೋರಯಾತನೆಗಳನ್ನೂ ಅನುಭವಿಸದೆ ತೀರ ದು! ಆಹಾ! ಇದೇನು ಸ್ವಪ್ನವೋ! ಅಥವಾ ನಿಜವಾಗಿ ನಡೆದ ಸಂಗ ತಿಯೋ! ಈಗಲೇ ನನ್ನನ್ನು ಪಾಶಗಳಿಂದ ಕಟ್ಟಿ ಎಳೆಯುತಿದ್ದ ಆ ಯಮ

ದೂತರೆಲ್ಲಿ ಹೋದರು ? ನನ್ನನ್ನು ಆ ದೂತರು ಯಮಪಾಶದಿಂದೆಳೆಯು ತ್ತಿರುವಾಗ, ಸ್ಫುರದ್ರೂಪಿಗಳಾದ ನಾಲ್ವರು ಸಿದ್ಧರು ಬಂದು,ನನ್ನನ್ನು ಬಿ ಡಿಸಿದರಲ್ಲವೆ? ಅವರೆಲ್ಲಿ ಹೋದರು? ಆಹಾ! ಕೇವಲ ಮಂದಭಾಗ್ಯನಾ ದ ನನಗೆ ಆ ಮಹಾತ್ಮರ ದರ್ಶನವು ಹೇಗೆ ಲಭಿಸಿತು! ಇದನ್ನು ನೋಡಿ ದರೆ, ನನ್ನಲ್ಲಿ ಯಾವುದೋ ಅಲ್ಪಸ್ವಲ್ಪ ಸುಕೃತವಿರಬೇಕು! ಅವರ ದರ್ಶನ ದಿಂದನನ್ನ ಆತ್ಮವು ಯಾವುದೋ ಒಂದುವಿಧದಿಂದ ಪ್ರಸನ್ನವಾಗಿರುವುದು! ಪರಮಪುರುಷನು ನಿಷ್ಕಾರಣವಾಗಿ ನನ್ನಲ್ಲಿಅನುಗ್ರಹವನ್ನು ತೋರಿಸಿದಂತಿ ವೆ! ಹಾಗಿಲ್ಲದಿದ್ದರೆ, ಶೂದ್ರಸ್ತ್ರೀಸಂಗಮದಿಂದ ಪತಿತನಾಗಿ,ಮರಣಾವಸ್ಥೆ ಯಲ್ಲಿದ್ದನನ್ನ ನಾಲಗೆಯಲ್ಲಿ, ಆ ನಾರಾಯಣನಾಮೋಚ್ಚಾರಣವು ಹೇಗೆ ತಾನೇ ಹೊರಡುತಿತ್ತು? ಛೀ! ನಾನು ಪತಿತನು! ನಾಚಿಕೆಯಿಲ್ಲದವನು! ದು ಷ್ಟನು! ಮೂರ್ಖನು! ಜಾತಿಭ್ರಷ್ಟನಾದ ನಾನೆಲ್ಲಿ! ಸಮಸ್ತಶ್ರೇಯಸ್ಸು ಗಳಿಗೂ ಸಾಧನವಾದ ಆ ಭಗವನ್ನಾಮವೆಲ್ಲಿ! ಪಾಪಿಯಾದ ನನಗೆ ಮರಣ ಕಾಲದಲ್ಲಿ ಆ ಹರಿನಾಮೋಚ್ಚಾರಣವನ್ನು ಮಾಡಬೇಕೆಂಬ ಬುದ್ಧಿಯುಂ ಟಾದುದು ನನ್ನ ಪುಣ್ಯಶೇಷವಲ್ಲದೆ ಬೇರೆಯಲ್ಲ! ಭಗವನ್ನಾಮೋಚ್ಚಾರಣ ದಿಂದಲೂ, ಆ ಸಿದ್ಧರ ದರ್ಶನದಿಂದಲೂ ನಾನು ಮಹಾಭಾಗ್ಯಶಾಲಿಯೆಂ ದೇ ಊಹಿಸಬೇಕಾಗಿದೆ. ಇನ್ನುಮೇಲಾದರೂ ನಾನು, ಮನಸ್ಸನ್ನೂ, ಇಂದ್ರಿ ಯಗಳನ್ನೂ, ಪ್ರಾಣವಾಯುವನ್ನೂ ತಡೆದು, ತಿರುಗಿ ಪಾಪಿಷ್ಠವಾದ ನರ ಕದಲ್ಲಿ ಬೀಳದಂತೆ ಯತ್ನಿಸಬೇಕು. ದೇಹಾಭಿಮಾನಮೂಲಕವಾದ ಅ ಜ್ಞಾನದಿಂದಲೂ. ವಿಷಯಾಸಕ್ತಿಯಿಂದಲೂ, ಕರ್ಮಾಚರಣೆಯಿಂದ ಲೂ ಉಂಟಾದ ಈ ಸಂಸಾರಬಂಧವನ್ನು ತೊರೆದು, ಸಮಸ್ತಭೂ ತಗಳಿಗೂ ಹಿತವನ್ನು ಕೋರುತ್ತ, ಇಂದ್ರಿಯಗಳನ್ನು ನಿಗ್ರಹಿಸಿ, ಮ ನಶ್ಶುದ್ಧಿಯಿಂದ ಆ ಭಗವಂತನಲ್ಲಿ ಭಕ್ತಿಯನ್ನು ಸಂಪಾದಿಸುವೆನು. ಇದುವರೆಗೆ ನಾನು ಜ್ಞಾನಶೂನ್ಯನಾಗಿ, ಯಾವಳ ಕೈಯಲ್ಲಿಸಿಕ್ಕಿ, ಕೈಯಾಟದ ಬೊಂಬೆಯಂತೆ ಆಡುತಿದ್ದೆನೋ, ಆ ಸ್ತ್ರೀರೂಪದಿಂದಿ ರುವ ಭಗವನ್ಮಾಯೆಯನ್ನು ತಪ್ಪಿಸಿಕೊಳ್ಳುವೆನು. ದೇಹದಲ್ಲಿ ನಾನೆಂ ಬ ಬುದ್ಧಿಯನ್ನೂ, ಆ ದೇಹಾನುಬಂಧಿಗಳಲ್ಲಿ ನನ್ನದೆಂಬ ಬುದ್ಧಿಯನ್ನೂ

ವಿಶ್ರೇಷವಾಗಿ ತೊರೆದು, ಆಭಗವನ್ನಾಮವನ್ನೇ ಬಾರಿಬಾರಿಗೂ ಉಚ್ಚರಿ ಸುತ್ತ, ಆ ಭಗವಂತನಲ್ಲಿಯೇ ಮನಸ್ಸನ್ನು ನೆಲೆಗೊಳಿಸುವೆನು" ಎಂದು ಅಜಾಮಿಳನು ಮನಸ್ಸಿನಲ್ಲಿ ಪಶ್ಚಾತ್ತಾಪದಿಂದ ಕೊರಗುತ್ತ, ಆ ಸಜ್ಜನರೊಡನೆ ಕ್ಷಣಮಾತ್ರದ ಸಹವಾಸದಿಂದ ವಿರಕ್ತಿಯನ್ನು ಹೊಂದಿ, ಆ ಕ್ಷಣವೇ ಗಂಗಾದ್ವಾರಕ್ಕೆ ಹೊರಟನು. ಅಲ್ಲಿ ಭಕ್ತಿಯೋಗವನ್ನು ಹಿಡಿದು, ಮನಸ್ಸನ್ನೂ, ಇಂದ್ರಿಯಗಳನ್ನೂ ಜಯಿಸಿ, ಮೊದಲು ದೇಹಕ್ಕಿಂತಲೂ ಬೇರೆಯಾದ ಆತ್ಮಸ್ವರೂಪದಲ್ಲಿ ಮನಸ್ಸನ್ನು ಸೇರಿಸಿದನು ಆಮೇಲೆ ಆ ಜೀವಾತ್ಮಕ್ಕೂ ಅಂತರಾತ್ಮನಾದ ಪರಮಾತ್ಮಸ್ವರೂಪವನ್ನು ಧ್ಯಾನಿಸುವುದಕ್ಕೆ ತೊಡಗಿ, ಕೇವಲಜ್ಞಾನಮಯವಾದ ಭಗವಂತನ ತೇಜಸ್ಸಿನಲ್ಲಿ ಬುದ್ಧಿಯನ್ನು ನೆಲೆಗೊಳಿಸಿದನು. ಹೀಗೆ ಶಬ್ದಾದಿವಿಷಯಗಳಿಂದ ಬುದ್ಧಿಯನ್ನು ತಿರುಗಿಸಿ, ಭಗವತ್ಸ್ವರೂಪದಲ್ಲಿ ನೆಲೆಗೊಳಿಸುವಷ್ಟರಲ್ಲಿ, ಹಿಂದೆ ಬಂದಿದ್ದ ಆನಾಲ್ವರು ವಿಷ್ಣುದೂತರೂ ತಿರುಗಿ ಕಾಣಿಸಿಕೊಂಡರು. ಒಡನೆಯೇ ಅಜಾಮಿಳನು, ಅವರ ಪಾದಗಳನ್ನು ಹಿಡಿದು ತಲೆಬಗ್ಗಿ ನಮಸ್ಕರಿಸಿ, ಆ ಕ್ಷಣವೇ ಗಂಗಾದ್ವಾರದಲ್ಲಿ ಶರೀರತ್ಯಾಗವನ್ನೂ ಮಾಡಿದನು. ಒಡನೆಯೇ ಅವನಿಗೆ ವಿಷ್ಣುದೂತರಿಗೆ ಸಮಾನವಾದ ದಿವ್ಯರೂಪವುಂಟಾಯಿತು ಆ ನಾಲ್ವರೊಡನೆ ಗೂಡಿ ಸುವರ್ಣಮಯವಾದ ಒಂದಾನೊಂದು ದಿವ್ಯವಿಮಾನದಲ್ಲಿ ಕುಳಿತು, ಅರ್ಚಿರಾದಿಮಾರ್ಗದಿಂದ ಹೊರಟು, ವಿಷ್ಣುಸಾನ್ನಿಧ್ಯವನ್ನೂ ಸೇರಿದನು ಓ ಪರೀಕ್ಷಿದ್ರಾಜಾ! ಭಗವನ್ನಾಮದ ಮಹಿಮೆಯನ್ನು ನೋಡಿದೆಯಲ್ಲವೆ? ಅಜಾಮಿಳನು ಸಮಸ್ತಧರ್ಮಗಳನ್ನೂ ಬಿಟ್ಟು, ಶೂದ್ರಸ್ತ್ರೀಸಹವಾಸದಿಂದ ಪತಿತನಾಗಿದ್ದವನು! ವೇದಾಧ್ಯಯನಾದಿಕರ್ಮಗಳೆಲ್ಲವನ್ನೂ ಬಿಟ್ಟು ಪಾಪಕರ್ಮಗಳನ್ನೇ ನಡೆಸುತಿದ್ದವನು! ಇಂತವನು ಯಮಪಾಶದಿಂದ ಬಿಗಿಯಲ್ಪಟ್ಟು ನರಕದಲ್ಲಿ ಬೀಳುತಿದ್ದಾಗ, ಒಂದಾವರ್ತಿ "ನಾರಾಯಣಾ" ಎಂಬ ನಾಲ್ಕಕ್ಷರಗಳನ್ನು ಬಾಯಿಂದ ನುಡಿದಮಾತ್ರಕ್ಕೆ, ಮುಕ್ತಿಯನ್ನು ಹೊಂದಿದನಲ್ಲವೆ? ಆದುದರಿಂದ ಮೋಕ್ಷಾಪೇಕ್ಷೆಯುಳ್ಳವನು ಸಂಸಾರಕಾರಣವಾದ ಕರ್ಮಬಂಧವನ್ನು ತಪ್ಪಿಸಿಕೊಳ್ಳುವುದಕ್ಕೆ ಭಗವನ್ನಾಮಸ್ಮರಣಕ್ಕಿಂತಲೂ ಬೇರೆ ಉಪಾಯವಿಲ್ಲ. ರಜಸ್ತಮೋಗು

ಣಗಳಿಂದ ಕಲುಷಿತವಾದ ಮನಸ್ಸು, ಸಂಸಾರಕಾರಣಗಳಾದ ಕರ್ಮ ಗಳಲ್ಲಿ ಪ್ರವರ್ತಿಸದಂತೆ ಮಾಡಬೇಕಾದರೂ ಇದಕ್ಕಿಂತಲೂ ಉತ್ತಮವಾ ದ ಉಪಾಯವಿಲ್ಲ ರಾಜೇಂದ್ರಾ! ಗೋಪ್ಯವಾಗಿಯೂ, ಪಾಪನಿವಾರಕ ವಾಗಿಯೂ ಇರುವ ಈ ಇತಿಹಾಸವನ್ನು ಯಾವನು ಶ್ರದ್ಧೆಯಿಂದ ಕೇಳು ವನೋ, ಯಾವನು ಹೇಳುವನೋ ಅವನು ಯಮಭಟರ ಕೈಗೆ ಸಿಕ್ಕಲಾರ ನು. ನರಕದಲ್ಲಿಯೂ ಬೀಳಲಾರನು. ಮಹಾಪಾಪಿಯಾದರೂ ಇದನ್ನು ಕೇಳಿದ ಮೇಲೆ ವಿಷ್ಣುಲೋಕವನ್ನು ಹೊಂದುವನು. ಮರಣಾವಸ್ಥೆಯಲ್ಲಿದ್ದ ಅಜಾ ಮಿಳನು ತನ್ನ ಮಗನನ್ನು ಕರೆಯುವ ನೆವದಿಂದ, ಒಂದಾವೃತ್ತಿ ಹರಿನಾಮ ವನ್ನುಚ್ಚರಿಸಿದಮಾತ್ರಕ್ಕೆ ವಿಷ್ಣುಸಾನ್ನಿಧ್ಯವನ್ನು ಹೊಂದಿದಾಗ, ಯಾವಾ ಗಲೂ ಆ ಹರಿಗುಣಗಳನ್ನೇ ಶ್ರದ್ಧೆಯಿಂದ ಕೀರ್ತಿಸತಕ್ಕವರಿಗೆ ಮೋಕ್ಷವುಂ ಟಾಗುವುದನ್ನು ಕೇಳಬೇಕೆ?" ಎಂದನು ಇಲ್ಲಿಗೆ ಎರಡನೆಯ ಅಧ್ಯಾಯವು.

---

## ಯಮನು ತನ್ನ ದೂತರಿಗೆ ಶ್ರೀಮನ್ನಾರಾಯಣನ ಮಹಿಮೆಯನ್ನು ತಿಳಿಸಿದುದು.

ಪರೀಕ್ಷಿದ್ರಾಜನು ಶುಕಮುನಿಯನ್ನು ಕುರಿತು, "ಓ ಮುನೀಂದ್ರಾ! ಅತ್ತಲಾಗಿ ಯಮನು ತನ್ನ ಭಟರಿಂದ ಈ ವೃತ್ತಾಂತವನ್ನು ಕೇಳಿದ ಮೇಲೆ ಅವನು ಹೇಳಿದುದೇನು? ಅಜಾಮಿಳನಂತೂ ಮಹಾಪಾಪಿಯಾದುದ ರಿಂದ ಯಮನ ಕೈಗೆ ಸಿಕ್ಕಿಬಿದ್ದವನೇ! ಆತನನ್ನು ಯಮನು ತನ್ನ ಬಳಿಗೆ ಕರೆತರಿಸುವುದಕ್ಕಾಗಿ ದೂತರನ್ನು ಕಳುಹಿಸಿದುದೂ ಯುಕ್ತವು! ಈ ರಾಜಾಜ್ಞೆಯಂತೆ ದೂತರು ಅವನನ್ನು ಪಾಶದಿಂದ ಕಟ್ಟಿ ಸಾಗಿಸುತ್ತಿರು ವಾಗ, ವಿಷ್ಣುದೂತರು ಅವರನ್ನು ತಡೆದು ಆ ಅಜಾಮಿಳನನ್ನು ಬಿಡಿಸಿದ ಮೇಲೆ, ಯಮನ ಆಜ್ಞೆಗೆ ಭಂಗವನ್ನು ಮಾಡಿದಂತಾಗಲಿಲ್ಲವೆ? ಅದರ ಮೇಲೆ ಯಮನು ಮಾಡಿದುದೇನು? ಯಮಾಜ್ಞೆಗೆ ಭಂಗವಾದಂತೆ ಇದು ವರೆಗೆ ನಾನು ಎಲ್ಲಿಯೂ ಕಂಡು ಕೇಳಿದುದಿಲ್ಲ. ಆದುದರಿಂದ ಈ ವಿಷಯ ದಲ್ಲಿ ನನಗೆ ಬಹಳ ಆಶ್ಚರ್ಯವುಂಟಾಗಿರುವುದು. ನಮ್ಮಂತಹ ಸಾಮಾನ್ಯ ಜನಗಳ ಸಂದೇಹವನ್ನು ಪರಿಹರಿಸುವುದಕ್ಕೆ ನಿನಗಿಂತಲೂ ಬೇರೊಬ್ಬರು ಸ

ಮರ್ಥರಲ್ಲ. ಆದುದರಿಂದ ಆ ಯಮಪಟ್ಟಣದಲ್ಲಿ ನಡೆದ ವೃತ್ತಾಂತ ಗಳನ್ನೆಲ್ಲಾ ತಿಳಿಸಬೇಕು"ಎಂದನು. ಅದಕ್ಕಾ ಶುಕನು,"ಓ ರಾಜಾ! ವಿಷ್ಣುದೂ ತರು ಬಂದು ತಡೆದಮೇಲೆ, ತಮ್ಮ ಪ್ರಯತ್ನವು ಸಾಗದೆಹೋದುದಕ್ಕಾಗಿ ಯಮಭಟರು, ಸಂಯಮಿನೀಪುರಾಧಿಪತಿಯಾದ ಯಮನಬಳಿಗೆ ಹೋಗಿ ವಿಜ್ಞಾಪಿಸುವರು "ಓ ದೇವಾ! ಈ ಲೋಕದಲ್ಲಿ ಪುಣ್ಯಕರ್ಮಗಳನ್ನಾಗಲಿ, ಪಾಪಕರ್ಮಗಳನ್ನಾಗಲಿ, ಮಿಶ್ರಕರ್ಮಗಳನ್ನಾಗಲಿ ನಡೆಸಿದ ಪ್ರಾಣಿಗಳಿ ಗೆ, ಶಿಕ್ಷೆರಕ್ಷೆಗಳನ್ನು ವಿಧಿಸತಕ್ಕವರಾರು? ಎಷ್ಟುಮಂದಿಗೆ ಈ ಅಧಿಕಾರವುಂ ಟು? ಈಶಿಕ್ಷೆರಕ್ಷೆಗಳನ್ನು ವಿಧಿಸತಕ್ಕವರು ಬಹಳಮಂದಿಯಿದ್ದಪಕ್ಷದಲ್ಲಿ ಸುಖ ದುಃಖಗಳವ್ಯವಸ್ಥೆಯುಹೇಗೆ ನಿಲ್ಲುವುದು? ಶಾಸನಾಧಿಕಾರವನ್ನು ಹೊಂದಿದ ವರು ತಮಗಿಷ್ಟಬಂದಂತೆ ಪರಸ್ಪರವಿರುದ್ಧವಾಗಿ ತಲೆಗೊಂದುಶಾಸ್ತ್ರವ ನ್ನು ಕಲ್ಪಿಸಿಕೊಂಡು, ಸುಖದುಃಖಗಳನ್ನು ನಿಯಮಿಸುವುದಕ್ಕೆ ತೊಡಗಿದರೆ ಒಬ್ಬನು ವಿಧಿಸಿದುದನ್ನು ಮತ್ತೊಬ್ಬನು ತಪ್ಪಿಸಬಹುದಲ್ಲವೆ? ಈ ಅವ್ಯವಸ್ಥೆಗೆ ಅವಕಾಶಕೊಟ್ಟರೆ ಜೀವಲೋಕಕ್ಕೆ ಆಯಾ ಕರ್ಮಫಲಗಳನ್ನು ಅನುಭವಿಸಿ ತೀರಿಸುವುದಕ್ಕೇ ಅವಕಾಶವಿಲ್ಲದೆ ಹೋಗುವುದು ಸಾತ್ವಿಕ ರಾಜಸ ತಾಮ ಸಗಳೆಂಬ ನಾನಾಬಗೆಯ ಕರ್ಮಗಳನ್ನಾಚರಿಸತಕ್ಕ ಜೀವಿಗಳು ಅನೇಕರಿರು ವುದರಿಂದ, ಅವರನ್ನು ಶಿಕ್ಷಿಸತಕ್ಕವರೂ ಅನೇಕರಿರಬಹುದು. ಆದರೆ ಅವರಶಾ ಸನಗಳೆಲ್ಲವೂ ಪರಸ್ಪರವಿರುದ್ಧವಲ್ಲದೆ ಒಂದಕ್ಕೊಂದು ಹೊಂದಿರಬೇಕಲ್ಲವೆ? ಬೇರೆಬೇರೆ ಅಧಿಕಾರಿಗಳಿದ್ದರೂ,ಅವರೆಲ್ಲರಿಗೂ ನಿಯಾಮಕನಾದ ಚಕ್ರವರ್ತಿ ಯೊಬ್ಬನಿದ್ದು,ಅವರವರ ಅಧಿಕಾರಗಳಲ್ಲಿನಡೆಯತಕ್ಕಯುಕ್ತಾಯುಕ್ತಗಳನ್ನು ಪರಿಶೀಲಿಸಬೇಕು. ಪ್ರಾಣಿಗಳಿಗೆ ಶಿಕ್ಷೆರಕ್ಷೆಗಳನ್ನು ನಡೆಸತಕ್ಕ ಅಧಿಕಾರಿಗಳು ಬಹಳಮಂದಿಯಿದ್ದರೂ ಅವರೆಲ್ಲರಿಗೂ ಪ್ರಧಾನಾಧಿಕಾರಿಯೊಬ್ಬನು ಇದ್ದೇ ಇರಬೇಕು. ಆ ಮುಖ್ಯಾಧಿಕಾರಿಯ ನಿಯಮಕ್ಕೆ ಎಲ್ಲಿಯೂ ತಡೆಯಿರಕೂಡ ದು. ಹಾಗಿದ್ದರೆಮಾತ್ರವೇ ಜೀವಲೋಕಕ್ಕೆ ಕರ್ಮಾನುಸಾರವಾಗಿ ಫಲಗಳ ನ್ನು ಹೊಂದುವುದಕ್ಕೆ ಅವಕಾಶವುಂಟು. ಓ ಪ್ರಭೂ! ಲೋಕದಲ್ಲಿ ಆ ಸರ್ವಾ ಧಿಕಾರವೂ ನಿನ್ನಲ್ಲಿರುವುದು. ಸಮಸ್ತಭೂತಗಳಿಗೂ ನೀನೇ ಅಧಿಪತಿಯು! ಆ ಯಾಪ್ರಾಣಿಗಳ ಶುಭಾಶುಭಕರ್ಮಗಳನ್ನು ವಿಚಾರಿಸಿ, ಅವರಿಗೆ ಹಿತಾಹಿತ

ಗಳನ್ನು ತಿಳಿಸಿ,ಅಪರಾಧಿಗಳನ್ನು ಶಿಕ್ಷಿಸತಕ್ಕವನೇ ನೀನು. ಇದರಿಂದಲೇ ನಿನ್ನ ನ್ನು ದಂಡಧರನೆಂದು ಹೇಳುವರು.ಇದುವರೆಗೂ ನಿನ್ನ ಶಾಸನವುನಿರಂಕುಶವಾಗಿ ನಡೆಯುತಿದ್ದು, ಈಗಮನುಷ್ಯಲೋಕದಲ್ಲಿ ನಿನ್ನಾಜ್ಞೆಗೆ ಭಂಗವುಂಟಾಯಿತು ರಾಜೇಂದ್ರಾ!ನಾವುನಿನ್ನಾಜ್ಞೆಯನ್ನು ಶಿರಸಾವಹಿಸಿ,ಒಬ್ಬಪಾಪಿಯನ್ನು ಇಲ್ಲಿಗೆಕರೆತರುತ್ತಿರುವಾಗ,ನಾಲ್ಕುಮಂದಿಸಿದ್ಧರುಬಂದು,ನಮ್ಮನ್ನು ತಡೆದು,ಬಲಾತ್ಕಾರದಿಂದ ಪಾಶವನ್ನು ಹರಿದು,ಅವನನ್ನು ಬಿಡಿಸಿಬಿಟ್ಟರು. ಆಪಾಪಿಯು ಸಾಯುವಸ್ಥಿತಿಯಲ್ಲಿ ಒಮ್ಮೆ "ನಾರಾಯಣಾ" ಎಂದು ಅರಚಿಕೊಂಡನು ಈಶಬ್ದವನ್ನು ಕೇಳಿದೊಡನೆ ಆ ಸಿದ್ಧರು ಬಂದು ನಮ್ಮನ್ನು ತಡೆದುನಿಲ್ಲಿಸಿದರು. ನಾವು ಕೈಸಾಗದೆ ಹಿಂದೆ ಬರಬೇಕಾಯಿತು. ಇದಕ್ಕಾಗಿ ನಿನ್ನ ಮನ್ನಣೆಯನ್ನು ಬೇಡುವೆವು. ಓ ಮಹಾಪ್ರಭೂ! ನೀನು ಈ ತಪ್ಪನ್ನು ಮನ್ನಿಸದಪಕ್ಷದಲ್ಲಿ, ಆ ಸಿದ್ಧರು ಯಾರೆಂಬುದನ್ನೂ, ಅವರ ಅಧಿಪತಿ ಯಾರೆಂಬುದನ್ನೂ, ಅವರ ಪ್ರಭಾವವೆಂತದೆಂಬುದನ್ನೂ ವಿವರಿಸಿ ತಿಳಿಸಬೇಕೆಂದು ಪ್ರಾರ್ಥಿಸುವೆವು" ಎಂದರು ಈ ಮಾತುಗಳನ್ನು ಕೇಳಿ ಯಮನು, ಮನಸ್ಸಿನಲ್ಲಿ ಸಂತೋಷಗೊಂಡು, ಶ್ರೀಮನ್ನಾರಾಯಣನ ಪಾದಾರವಿಂದಗಳನ್ನು ಧ್ಯಾನಿಸಿ, ತನ್ನ ದೂತರನ್ನುಕುರಿತು ಹೀಗೆಂದು ಹೇಳುವನು. "ಎಲೈಭಟರೆ! ಕೇಳಿರಿ! ವಸ್ತ್ರದಲ್ಲಿರುವ ನೂಲುಗಳಂತೆ ಯಾವನಲ್ಲಿ ಈಪ್ರಪಂಚವೆಲ್ಲವೂ ಹಾಸುಹೊಕ್ಕಾಗಿ ವ್ಯಾಪಿಸಿರುವುದೋ, ಯಾವನ ಅಂಶದಿಂದಲೇ ಈಪ್ರಪಂಚದ ಸೃಷ್ಟಿಸ್ಥಿತಿಲಯಗಳೆಲ್ಲವೂ ನಡೆಯುವುವೋ, ಮೂಗುದಾರವನ್ನು ಬೀರಿದ ಎತ್ತುಗಳಂತೆ ಈ ಪ್ರಪಂಚವೆಲ್ಲವೂ ಯಾವನ ಅಧೀನವಾಗಿ ನಡೆಯುವುದೋ, ಅಂತಹ ಸರ್ವೇಶ್ವರನೊಬ್ಬನುಂಟು. ಅವನೇ ನಮ್ಮೆಲ್ಲರಿಗಿಂತಲೂ ಮೇಲೆನಿಸಿದವನು. ನಮಗೆ ಮಾತ್ರವೇನು? ಬ್ರಹ್ಮದೇವನು ಮೊದಲುಗೊಂಡು ಹುಲ್ಲುಕಡ್ಡಿಯವರೆಗಿನ ಚರಾಚರಾತ್ಮಕವಾದ ಸಮಸ್ತಪ್ರಪಂಚಕ್ಕೂ ಅವನೇ ಮುಖ್ಯಾಧಿಕಾರಿಯು. ಆ ಭಗವಂತನು ಹಗ್ಗದಿಂದ ಹಸುಗಳನ್ನು ಕಟ್ಟಿಡುವಂತೆ,ತನ್ನ ಮುಖದಿಂದ ಹೊರಟ ವೇದವೆಂಬ ಹಗ್ಗದಿಂದ, ಸಮಸ್ತಪ್ರಾಣಿಗಳನ್ನೂ, ಆಯಾವರ್ಣಾಶ್ರಮಧರ್ಮಗಳಲ್ಲಿ ಬಂಧಿಸಿ, ತನಗೆ ವಶಮಾಡಿಕೊಂಡಿರುವನು. ಈ ಪ್ರಪಂಚದ ಜೀವರಾಶಿಗಳೆಲ್ಲವೂ, ನಾ

ಮರೂಪಕರ್ಮಗಳಿಂದ ಬದ್ಧರಾಗಿ, ಭಯದಿಂದ ಅತನಿಗೆ ಪೂಜೆಗಳನ್ನೊಪ್ಪಿ ಸುತ್ತಿರುವರು. ನಾನು, ದೇವೇಂದ್ರನು, ನಿರುತಿ, ವರುಣನು, ಸೋಮ ನು, ಅಗ್ನಿ, ಶಂಕರನು, ವಾಯು, ಸೂರ್ಯನು, ಬ್ರಹ್ಮನು, ದ್ವಾದಶಾದಿತ್ಯರು, ವಿಶ್ವಾವಸು ಮೊದಲಾದ ಉಪದೇವತೆಗಳು, ಸಿದ್ಧರು, ಸಾಧ್ಯರು, ದೇವತೆಗಳು, ಏಕಾದಶರುದ್ರರು, ದಕ್ಷಾದಿನವಬ್ರಹ್ಮರು; ಈ ನಾವೆ ಲ್ಲರೂ ಕೇವಲಸತ್ವಗುಣಪ್ರಧಾನರಾಗಿದ್ದರೂ ಅವನ ಮಾಯೆಯಿಂ ದ ಮೋಹಿತರಾಗಿ, ಆವನ ಅಭಿಪ್ರಾಯವನ್ನು ತಿಳಿಯಲಾರದವರಾಗಿರುವೆ ವು. ಇನ್ನು ಸಾಮಾನ್ಯಜನರ ಸಂಗತಿಯನ್ನು ಕೇಳಬೇಕೆ? ಪ್ರಾಣಿಗಳು ಇಂದ್ರಿಯಗಳಿಂದಲೂ, ಮನಸ್ಸಿನಿಂದಲೂ, ಪ್ರಾಣಾಯಾಮಗಳಿಂದಲೂ, ಚಿತ್ತದಿಂದಲೂ, ವಾಕ್ಚಾತುರ್ಯದಿಂದಲೂ, ಎಷ್ಟೇಪ್ರಯತ್ನಪಟ್ಟರೂ ತಮ ಗಿಂತ ವಿಲಕ್ಷಣನಾಗಿಯೂ, ಸಕಲಜೀವಗಳ ಹೃದಯದಲ್ಲಿ ಅಂತರಾತ್ಮನಾ ಗಿಯೂ ಇರುವ ಆ ಪರಮಪುರುಷನನ್ನು ಕಾಣಲಾರವು.ರೂಪಾದಿಗಳು ತಮ ಗಿಂತಲೂ ವಿಲಕ್ಷಣವಾಗಿ ತಮ್ಮನ್ನು ಪ್ರಕಾಶಗೊಳಿಸತಕ್ಕ ಚಕ್ಷುರಿಂದ್ರಿಯ ವನ್ನು ಹೇಗೆ ಕಾಣಲಾರವೋ, ಹಾಗೆ ಆ ಪ್ರಾಣಿಗಳು ತಮಗೆ ಪ್ರೇರಕನಾ ದ ಭಗವಂತನನ್ನು ಕಾಣಲಾರವು.

ಎಲೈ ಭಟರೆ?ಆ ಭಗವಂತನು ಸರ್ವಜ್ಞತ್ವಾದಿಗುಣಗಳಿಂದ ಎಲ್ಲೆಯಿ ಲ್ಲದವನು! ಸರ್ವಸ್ವತಂತ್ರನು! ಚಿದಚಿದಾತ್ಮಕವಾದ ಈ ಪ್ರಪಂಚಕ್ಕಿಂತ ಲೂ ವಿಲಕ್ಷಣನು! ಮಾಯೆಯೆಂಬ ಪ್ರಕೃತಿಗೆ ಆತನೇ ನಿಯಾಮಕನು. ಎಲ್ಲಕ್ಕೂ ಅವನೇ ಮುಖ್ಯಾಧಿಪತಿಯು! ನಿರತಿಶಯವಾದ ಮಹಾಮಹಿಮೆಯು ಳ್ಳವನು. ಆ ಶ್ರೀಮನ್ನಾರಾಯಣನ ದೂತರೂಕೂಡ, ಗುಣಗಳಲ್ಲಿಯೂ ರೂಪದಲ್ಲಿಯೂ ಅವನನ್ನೇ ಹೋಲುತ್ತ, ಸುಂದರಾಕಾರವುಳ್ಳವರಾಗಿ ಲೋ ಕದಲ್ಲಿ ಸಂಚರಿಸುತ್ತಿರುವರು.ಇವರು ಬ್ರಹ್ಮಾದಿದೇವತೆಗಳಿಗೂ ಪೂಜ್ಯರಾಗಿ, ಅದ್ಭುತಾಕಾರದಿಂದಲೂ, ಅದ್ಭುತರೂಪದಿಂದಲೂ ಶೋಭಿಸುತ್ತ, ವಿಷ್ಣುಭಕ್ತರೆನಿಸಿದ ಜನರನ್ನು, ಇತರಭೂತಗಳಿಂದಲೂ, ಮೃತ್ಯುವಿನಿಂದ ಲೂ ರಕ್ಷಿಸುತ್ತಿರುವರು. “ಆದರೆ ಮಹಾಪಾತಕಿಯಾಗಿಯೂ ಭಗ ವದ್ಭಕ್ತಿಶೂನ್ಯನಾಗಿಯೂ ಇರುವ ಅಜಾಮಿಳನನ್ನು ರಕ್ಷಿಸಿದುದು ಯುಕ್ತ

ನೆ ?" ಎಂದು ನೀವು ಶಂಕಿಸಬಹುದು. ಎಲೈ ದೂತರೆ! ಭಗವಂತನಿಂದ ಸಾಕ್ಷಾತ್ತಾಗಿ ವಿಧಿಸಲ್ಪಟ್ಟಿರುವ ಭಾಗವತಧರ್ಮವೆಂಬುದು ಬಹಳಸೂಕ್ಷ್ಮವು! ಆ ಧರ್ಮರಹಸ್ಯವನ್ನು ಋಷಿಗಳೂ ಚೆನ್ನಾಗಿ ತಿಳಿಯಲಾರರು. ದೇವತೆಗಳಾಗಲಿ, ಅಸುರರಾಗಲಿ, ಸಿದ್ಧವಿದ್ಯಾಧರಚಾರಣರಾಗಲಿ ಅದನ್ನು ತಿಳಿಯಲಾರರು! ಅಂತಹ ಧರ್ಮರಹಸ್ಯವನ್ನು ಸಾಮಾನ್ಯಮನುಷ್ಯರುಹೇಗೆ ತಾನೇ ತಿಳಿಯಬಲ್ಲರು? ಆದುದರಿಂದ ಆ ಅಜಾಮಿಳನಲ್ಲಿ ಅತಿಸೂಕ್ಷ್ಮವಾದ ಯಾವುದೋ ಒಂದು ಧರ್ಮವಿದ್ದಿರಬೇಕಲ್ಲವೆ? ಆ ಕಾರಣದಿಂದಲೇ ವಿಷ್ಣುದೂತರು ಅವನನ್ನು ಒಂದು ರಕ್ಷಿಸಿರುವರು. ಬಹಳ ಗೋಪ್ಯವಾಗಿಯೂ, ಸತ್ವಗುಣಪ್ರಧಾನವಾಗಿಯೂ ಇರುವ ಆಭಾಗವತಧರ್ಮವು ಸುಲಭವಾಗಿ ತಿಳಿಯತಕ್ಕುದಲ್ಲ. ಅದನ್ನು ನಾನು, ಚತುರ್ಮುಖಬ್ರಹ್ಮನು, ನಾರದನು, ಶಂಕರನು, ಸನತ್ಕುಮಾರನು, ಕಪಿಲನು, ಸ್ವಾಯಂಭುವನು, ಪ್ರಹ್ಲಾದನು, ಜನಕರಾಜನು, ಭೀಷ್ಮನು, ಬಲಿಚಕ್ರವರ್ತಿ, ಶುಕಮುನಿ, ಈ ನಾವು ಹನ್ನೆರಡುಮಂದಿಮಾತ್ರವೇ ಬಲ್ಲೆವು. ಈ ಭಾಗವತಧರ್ಮವನ್ನು ತಿಳಿದವನು ತಪ್ಪದೆ ಮುಕ್ತಿಯನ್ನು ಹೊಂದುವನು. ಈ ಧರ್ಮರಹಸ್ಯವೇನೆಂದು ಕೇಳುವಿರಾ! ಶ್ರೀಮನ್ನಾರಾಯಣನ ನಾಮವನ್ನುಚ್ಚರಿಸುವುದರಮೂಲಕವಾಗಿ, ಆತನಲ್ಲಿ ಭಕ್ತಿಯೋಗವನ್ನು ಸಂಪಾದಿಸುವುದೇ ಈ ಧರ್ಮದ ಸಾರವೆಂದು ತಿಳಿಯಿರಿ! ಲೋಕದಲ್ಲಿ ಎಲ್ಲಕ್ಕಿಂತಲೂ ಇದೇ ಮೇಲಾದ ಧರ್ಮವು! ಮನುಷ್ಯನು ಇದನ್ನೇ ಮೊದಲುಸಾಧಿಸಬೇಕು ಭಕ್ತಿಯೋಗವನ್ನು ಸಾಧಿಸಬೇಕಾದ ಪ್ರಯತ್ನವೂ ಹಾಗಿರಲಿ! ಒಂದಾವರ್ತಿ ಆತನ ನಾಮೋಚ್ಚಾರಣವನ್ನು ಮಾಡುವುದರಲ್ಲಿಯೇ ಎಷ್ಟೋ ಫಲವುಂಟು! ಇದರಿಂದಲ್ಲವೇ ಅಜಾಮಿಳನಿಗೆ ಮೃತ್ಯುಪಾಶವು ಬಿಟ್ಟುಹೋಯಿತು! ಮನುಷ್ಯನು ತನ್ನ ಪಾಪದಿಂದ ಮುಕ್ತನಾಗಬೇಕೆಂದರೆ, ಭಗವಂತನ ಗುಣಗಳನ್ನೂ, ಚರಿತ್ರಗಳನ್ನೂ ಪ್ರಕಾಶಗೊಳಿಸತಕ್ಕ ನಾಮಾವಳಿಗಳಲ್ಲಿ ಯಾವುದಾದರೂ ಒಂದನ್ನು ಬಾಯಿಂದ ನುಡಿದಮಾತ್ರಕ್ಕೆ ಸಾಕು! ಪರಮಪಾಪಿಯಾದ ಅಜಾಮಿಳನೂಕೂಡ ಮರಣಕಾಲದಲ್ಲಿ ತನ್ನ ಮಗನ ಹೆಸರನ್ನು ಹಿಡಿದು "ನಾರಾಯಣಾ" ಎಂದು ಕೂಗಿದ

ಮಾತ್ರಕ್ಕೆ ಮುಕ್ತಿಯನ್ನು ಹೊಂದಿದನು. ಈ ಲೋಕದಲ್ಲಿ ಅನೇಕಶಾಸ್ತ್ರಗಳನ್ನೋದಿರುವವರೂಕೂಡ, ಭಗವಂತನ ಮಾಯೆಯಿಂದ ಮರುಳಾಗುವರು. ಸ್ವರ್ಗಾದಿತುಚ್ಛಸುಖಗಳಲ್ಲಿ ಆಸೆಯನ್ನು ತೋರಿಸಿ ವಂಚಿಸತಕ್ಕ ವೇದಗಳಲ್ಲಿ ಅಕ್ಕರೆಯಿಟ್ಟು, ಯಾಗಾದಿಕರ್ಮಗಳನ್ನು ನಡೆಸುವುದಕ್ಕೆ ಪ್ರಯತ್ನಿಸುವರು! ಅನೇಕರು ಭಗವನ್ನಾಮೋಚ್ಚಾರಣದ ಮಹಿಮೆಯನ್ನು ತಿಳಿಯದೆ ಮೋಸಹೋಗುವರು. ಯಾರು ವಿವೇಕಬುದ್ಧಿಯಿಂದ ಅದರ ಮಹಿಮೆಯನ್ನು ತಿಳಿದು, ಅನುಕೂಲಕವಾಗಿ ಭಕ್ತಿಯೋಗವನ್ನು ಸಾಧಿಸುವರೋ, ಅವರು ನನ್ನ ದಂಡನೆಗೆ ಗುರಿಯಾಗಲಾರರು. ಆ ನಾಮೋಚ್ಚಾರಣದಿಂದಲೇ ಅವರ ಪಾಪಗಳೆಲ್ಲವೂ ನೀಗುವುವು. ಎಲ್ಲವನ್ನೂ ಭಗವತ್ಸ್ವರೂಪವೆಂದೇ ತಿಳಿದು, ಸಮಬುದ್ಧಿಯಿಂದ ವರ್ತಿಸುತ್ತ, ಸರ್ವವಿಧದಿಂದಲೂ ಆ ಭಗವಂತನನ್ನೇ ಶರಣುಹೊಂದಿದ ಸಾಧುಗಳೇ ಲೋಕದಲ್ಲಿ ಮಹಾತ್ಮರು! ಇವರ ಪವಿತ್ರವಾದ ಕೀರ್ತಿಯನ್ನು ಸಿದ್ಧರೂ, ದೇವತೆಗಳೂ ಕೊಂಡಾಡುವರು. ಇಂತವರನ್ನು ಭಗವಂತನ ಗದಾಯುಧವು ಯಾವಾಗಲೂ ಎಚ್ಚರದಿಂದ ರಕ್ಷಿಸುತ್ತಿರುವುದು. ಆದುದರಿಂದ ನೀವು ಅಂತವರಸಮೀಪಕ್ಕೂ ಹೋಗಬಾರದು! ಅವರಿಗ ಸಂಸಾರಭಯವಿಲ್ಲ! ಅವರನ್ನು ದಂಡಿಸುವುದಕ್ಕೂ ನಾವು ಸಮರ್ಥರಲ್ಲ! ಕೇವಲ ವಿರಕ್ತರಾದ ಪರಮಹಂಸರಿಗೂ ಆಸೆಹುಟ್ಟಿಸತಕ್ಕ ಆ ಭಗವಂತನ ಪಾದಾರವಿಂದಗಳಲ್ಲಿ ವಿಮುಖರಾಗಿಯೂ, ನರಕಕ್ಕೆ ಬಾಗಿಲೆಲಿಸಿಕೊಂಡ ಸಂಸಾರದಲ್ಲಿ ಅಧಿಕಾಸಕ್ತರಾಗಿಯೂ ಇರುವ ಜನರನ್ನು ಮಾತ್ರವೇ ನೀವು ಇಲ್ಲಿಗೆ ಕರೆತರಬೇಕು! ಇದಲ್ಲದೆ ಎಲೈ ದೂತರೆ! ಯಾವನ ನಾಲಗೆಯು ಒಂದಾವರ್ತಿಯಾದರೂ ಭಗವನ್ನಾಮವನ್ನು ನುಡಿದಿಲ್ಲವೋ, ಯಾವನ ಮನಸ್ಸು ಕ್ಷಣಮಾತ್ರವಾದರೂ ಭಗವಂತನ ಪಾದಾರವಿಂದವನ್ನು ಧ್ಯಾನಿಸಿಲ್ಲವೋ, ಯಾವನ ಶಿರಸ್ಸು ಒಮ್ಮೆಯಾದರೂ ಶ್ರೀಕೃಷ್ಣನನ್ನು ನಮಿಸಲಿಲ್ಲವೋ, ಅಂತಹ ನೀಚರನ್ನು ಮಾತ್ರವೇ ನೀವು ಇಲ್ಲಿಗೆ ಕರೆತರಬಹುದು” ಎಂದನು. ಯಮನು ಹೀಗೆಂದು ತನ್ನ ದೂತರಿಗೆ ನಿಯಮಿಸಿ, ತನ್ನಲ್ಲಿ ತಾನು ಭಗವಂತನನ್ನು ಧ್ಯಾನಿಸುತ್ತ “ಪುರಾಣಪುರುಷನಾದ ಶ್ರೀಮನ್ನಾರಾಯಣನು, ಈ ನಮ್ಮ ಅಂಜಲಿ

ಯಿಂದ ಪ್ರಸನ್ನನಾಗಿ, ಈ ದೂತರು, ತನ್ನ ಭಕ್ತರಲ್ಲಿ ಅಜ್ಞತೆಯಿಂದ ನ ಡೆಸಿದ ಅಪರಾಧವನ್ನು ಕ್ಷಮಿಸಲಿ! ಆಶ್ರಿತಾಪರಾಧವನ್ನು ಕ್ಷಮಿಸತಕ್ಕ ಅಂ ತಹ ಪರಮಪುರುಷನಿಗೆ ನಮಸ್ಕಾರವು"ಎಂದು ಮನ್ನಣೆಯನ್ನು ಕೇಳಿಕೊಂ ಡನು. ಆದುದರಿಂದ ಓ ರಾಜೇಂದ್ರಾ! ಆ ಭಗವನ್ನಾಮೋಚ್ಚಾರಣವೊಂ ದೇ ಮಹಾಪಾತಕಗಳೆಲ್ಲಕ್ಕೂ ಮೇಲಾದ ಪ್ರಾಯಶ್ಚಿತ್ತವೆನಿಸಿರುವುದು. ಆ ಹರಿನಾಮಕೀರ್ತನವೇ ಸರ್ವವಿಧದಲ್ಲಿಯೂ ಲೋಕಕ್ಕೆ ಮಂಗಳಕರವಾದು ದು! ಆ ಭಗವಚ್ಚರಿತ್ರಗಳನ್ನು ಭಕ್ತಿಯಿಂದ ಕೇಳಿದರೂ, ಕೀರ್ತಿಸಿದರೂ ಆತ್ಮಶುದ್ಧಿಯುಂಟಾಗುವಂತೆ ಬೇರೆ ಯಾವ ವ್ರತೋಪವಾಸಗಳಿಂದಲೂ ಶುದ್ಧಿಯುಂಟಾಗದು. ಯಾವನ ಮನಸ್ಸು ಶ್ರೀಕೃಷ್ಣನ ಪಾದಾರವಿಂದ ದಲ್ಲಿ ನೆಲೆಗೊಳ್ಳುವುದೋ, ಅವನಿಗೆ ಪಾಪಹೇತುವಾದ ಸಂಸಾರವೆಂಬುದು ತಿರುಗಿ ತಗುಲುಕಟ್ಟಲಾರದು. ಹಾಗಿಲ್ಲದೆ ಇತರಕರ್ಮಗಳಿಂದ ಪಾಪವ ನ್ನು ಕಳೆದುಕೊಳ್ಳಬೇಕೆಂದು ಪ್ರಯತ್ನಿಸುವವನು, ಆಕರ್ಮಗಳ ಮೂಲ ಕವಾಗಿ ತಿರುಗಿ ಸಂಸಾರಬಂಧದಲ್ಲಿಯೇ ಸಿಕ್ಕಿ ಬೀಳಬೇಕಾಗುವುದು. ಇದು ಹಾಗಿರಲಿ! ಅತ್ತಲಾಗಿ ಯಮದೂತರು, ಹೇಗೆ ತಮ್ಮ ಪ್ರಭುವಾದ ಧರ್ಮ ರಾಜನಿಂದ ಭಗವನ್ಮಾಹಾತ್ಮ್ಯವನ್ನು ಕೇಳಿ, ಆಶ್ಚರ್ಯಗೊಂಡವರಾಗಿ, ಅ ದುಮೊದಲು ವಿಷ್ಣುಭಕ್ತರನ್ನು ಕಣ್ಣೆತ್ತಿ ನೋಡುವುದಕ್ಕೂ ಧೈರ್ಯವಿಲ್ಲ ದೆ, ಅವರಿದ್ದಕಡೆಗೆ ತಲೆಯಿಕ್ಕದೆ ಹಿಂಜರಿಯುವರು. ರಾಜಾ! ಹಿಂದೆ ಪೂ ಜ್ಯನಾದ ಅಗಸ್ತ್ಯಮುನಿಯು, ಮಲಯಪರ್ವತದಲ್ಲಿಭಗವದಾರಾಧನರೂಪ ವಾದ ತಪಸ್ಸನ್ನು ನಡೆಸುತಿದ್ದಾಗ, ನನಗೆ ಈ ಉಪಾಖ್ಯಾನವನ್ನು ತಿಳಿಸಿ ದನು ಅದನ್ನೇ ನಾನು ನಿನಗೂ ಹೇಳಿರುವೆನು" ಎಂದನು. ಇಲ್ಲಿಗೆ ಮೂ ರನೆಯ ಅಧ್ಯಾಯವು.

---

{ ಚಂದ್ರನು ಪ್ರಚೇತಸರಿಗೆ ಹಿತವನ್ನು ಬೋಧಿಸಿ, ಅವ ರಿಗೆ ಮಾರಿಷೆಯೆಂಬ ಕನ್ಯೆಯನ್ನುಮದುವೆಮಾಡಿಕೊ ಟ್ಟುದು. ದಕ್ಷನಿಗೆ ನಾರಾಯಣನು ಪ್ರತ್ಯಕ್ಷನಾದುದು }

ಪರೀಕ್ಷಿದ್ರಾಜನು ತಿರುಗಿ ಶುಕಮುನಿಯನ್ನು ಕುರಿತು, "ಓ ಮುನೀಂ ದ್ರಾ! ಸ್ವಾಯಂಭುವಮನ್ವಂತರದಲ್ಲಿ ನಡೆದ ದೇವಾಸುರಮನುಷ್ಯಾದಿ

ಜಾತಿಗಳ, ಮತ್ತು ಪಶುಪಕ್ಷಿ ಮೊದಲಾದ ತಿರ್ಯಗ್ಜಾತಿಗಳ ಸೃಷ್ಟಿಕ್ರಮವನ್ನು ಹಿಂದೆ ನೀನು ಸಂಗ್ರಹವಾಗಿ ತಿಳಿಸಿದೆಯಲ್ಲವೆ? ಪರಮಪುರುಷನು ಕೊನೆಮೊದಲಿಲ್ಲದ ಈ ವ್ಯಷ್ಟಿಸೃಷ್ಟಿಯನ್ನು ಯಾವ ಶಕ್ತಿಯಿಂದ, ಹೇಗೆ ಸೃಷ್ಟಿಸಿದನೆಂಬುದನ್ನು ನನಗೆ ವಿವರಿಸಿ ತಿಳಿಸಬೇಕು" ಎಂದನು. ಅದಕ್ಕಾಕ ಶುಕಮಹರ್ಷಿಯು "ರಾಜಾ! ಕೇಳು! ಹಿಂದೆ ಪ್ರಾಚೀನಬರ್ಹಿಯ ಮಕ್ಕಳಾದ ಪ್ರಚೇತಸರೆಂಬ ಹತ್ತುಮಂದಿ ರಾಜಕುಮಾರರು, ಸಮುದ್ರಮಧ್ಯದಲ್ಲಿ ಮುಳುಗಿ, ಬಹುಕಾಲದವರೆಗೆ ತಪಸ್ಸುಮಾಡುತಿದ್ದು, ಕೊನೆಗೆ ಮೇಲೆದ್ದುಬಂದಾಗ, ಸಮಸ್ತಭೂಭಾಗವೂ ಮರಗಿಡುಗಳಿಂದ ದಟ್ಟವಾಗಿ ತುಂಬಿ, ಅರಣ್ಯಪ್ರಾಯವಾಗಿದ್ದುದನ್ನು ಕಂಡರಷ್ಟೆ? ಆಗ ಅವರು, ಆ ವೃಕ್ಷಗಳನ್ನು ಕಂಡು ಕೋಪಿಸಿ, ಲೋಕದಲ್ಲಿ ಗಿಡಗಳ ಹುಟ್ಟೇ ಇಲ್ಲದಂತೆ ನಿರ್ಮೂಲಮಾಡುವುದಕ್ಕಾಗಿ, ತಮ್ಮ ಬಾಯಿಂದ ಅಗ್ನಿವಾಯುಗಳನ್ನು ಸೃಷ್ಟಿಸಿದರು. ಇವುಗಳಿಂದ ಭೂಮಿಯಮೇಲಿನ ಗಿಡಗಳೆಲ್ಲವೂ ನಿರ್ಮೂಲವಾಗಿ ದಗ್ಧವಾಗುತ್ತಿರುವುದನ್ನು ಕಂಡು, ಓಷಧೀಶನಾದ ಚಂದ್ರನು ಅವರ ಬಳಿಗೆ ಬಂದು, ಕೋಪಸಮಾಧಾನಮಾಡುವುದಕ್ಕಾಗಿ ಪ್ರಯತ್ನಿಸಿ, ಹೀಗೆಂದು ಹೇಳಿದನು "ಎಲೈ ಮಹಾತ್ಮರೆ! ಈ ಗಿಡಗಳನ್ನು ಕೆಡಿಸುವುದು ನಿಮಗೆ ಯುಕ್ತವಲ್ಲ! ಪ್ರಜೆಗಳಿಗೆ ಕ್ಷೇಮವನ್ನುಂಟುಮಾಡಿ, ಅವರನ್ನು ವೃದ್ಧಿಗೊಳಿಸುವುದಕ್ಕಾಗಿಯೇ ನೀವು ಹುಟ್ಟಿದವರು! ಇದರಿಂದಲೇ ನಿಮಗೆ ಪ್ರಜಾಧಿಪತಿಗಳೆಂದು ಹೆಸರು. ಸರ್ವದೇವಪ್ರಭುವಾಗಿಯೂ, ಸರ್ವಾಂತರಾತ್ಮನಾಗಿಯೂ ಇರುವ ಭಗವಂತನು ಆದಿಯಲ್ಲಿ ಪ್ರಪಂಚವನ್ನು ಸೃಷ್ಟಿಸುವಾಗ, ದೇವತೆಗಳಿಗೂ, ಪಿತೃದೇವತೆಗಳಿಗೂ ಹವ್ಯಕವ್ಯರೂಪಗಳಾದ ಅನ್ನವನ್ನೊದಗಿಸುವುದಕ್ಕಾಗಿಯೇ, ಈ ಸಸ್ಯವರ್ಗಗಳನ್ನು ಸೃಷ್ಟಿಸಿ, ತಾನೂ ಅವುಗಳಲ್ಲಿ ಅಂತರ್ಯಾಮಿಯಾಗಿ ನೆಲೆಗೊಂಡಿರುವನು ಪಾದಚಾರಿಗಳಾದ ಜಂಗಮಭೂತಗಳಿಗೆಲ್ಲಾ, ಕಾಲಿಲ್ಲದ ಈ ಸ್ಥಾವರಭೂತಗಳು ಆಹಾರವಾಗಿ ಏರ್ಪಟ್ಟಿರುವುವು. ಅದರಂತೆಯೇ ಕೈಯಿಂದ ಕೆಲಸಮಾಡುವ ಶಕ್ತಿಯುಳ್ಳ ಮನುಷ್ಯರಿಗೆ, ಕೈಯಿಲ್ಲದ ಚತುಷ್ಪಾತ್ತುಗಳು ಆಹಾರಕ್ಕಾಗಿ ಏರ್ಪ್ಪಟ್ಟಿರುವುವು.

ಹೀಗೆ ಎಲ್ಲಾ ಭೂತಗಳಿಗೂ ಅನ್ನರೂಪವಾಗಿ ಸೃಷ್ಟಿಸಲ್ಪಟ್ಟಿರುವ ಈಸಸ್ಯಗಳನ್ನು ನಾಶಮಾಡುವುದು ನಿಮಗೆ ನ್ಯಾಯ್ಯವಲ್ಲ. ಇದಲ್ಲದೆ ನಿಮ್ಮ ತಂದೆಯು ನಿಮ್ಮನ್ನು ಪ್ರಜಾವೃದ್ಧಿಗಾಗಿಯೇ ನಿಯಮಿಸಿರುವನು. ಹೀಗಿರು ವಾಗ ನೀವೇ ಪ್ರಜೆಗಳಿಗೆ ಅನ್ನರೂಪವಾದ ಈ ವೃಕ್ಷಗಳನ್ನು ದಹಿಸುವು ದುಂಟೆ! ಆದುದರಿಂದ ಎಲೈ ಕುಮಾರರೆ! ಈ ನಿಮ್ಮ ಕೋಪವನ್ನಡಗಿಸಿರಿ! ನಿಮ್ಮ ಪಿತೃಪಿತಾಮಹಪ್ರಪಿತಾಮಹರೇ ಮೊದಲಾದ ಹಿರಿಯರು ಯಾವ ದಾರಿಯಲ್ಲಿ ನಡೆಯುತಿದ್ದರೋ, ಅಂತಹ ಸನ್ಮಾರ್ಗವನ್ನೇ ಅನುಸರಿಸಿ ನಡೆ ಯಿರಿ! ಮಕ್ಕಳಿಗೆ ತಂದೆತಾಯಿಗಳೂ, ಕಣ್ಣುಗಳಿಗೆ ರೆಪ್ಪೆಯೂ, ಸ್ತ್ರೀಯ ರಿಗೆ ಪತಿಯೂ, ಪ್ರಜೆಗಳಿಗೆ ರಾಜನೂ, ಆತ್ಮ ಪರಮಾತ್ಮರಹಸ್ಯವನ್ನು ತಿಳಿಯಬೇಕೆಂದಿರುವ ಸನ್ಯಾಸಿಗಳಿಗೆ ಜ್ಞಾನಿಯೂ, ರಕ್ಷಕನಾಗಿರುವಂತೆ, ಜಂಗಮಸ್ಥಾವರರೂಪವಾದ ಭೂತವರ್ಗಕ್ಕೆ ಪ್ರಜಾಧಿಪತಿಯೇ ಕ್ಷೇಮ ವನ್ನುಂಟುಮಾಡಬೇಕು. ಆದುದರಿಂದ ನೀವು ನಿಮ್ಮ ಪೋಷಣೆಗೊಳಪಟ್ಟ ಈ ವೃಕ್ಷಗಳಿಗೆ ದ್ರೋಹವನ್ನೆಣಿಸಬಾರದು. ಇದಲ್ಲದೆ ಭಗವಂತನು ಸಮಸ್ತ ಭೂತಗಳ ಹೃದಯದಲ್ಲಿಯೂ ಅಂತರ್ಯಾಮಿಯಾಗಿದ್ದು, ಅವುಗಳಿಗೆ ನಿಯಾ ಮಕನಾಗಿರುವನು. ಆದುದರಿಂದ ನೀವು ಎಲ್ಲವನ್ನೂ ಅವನ ಸ್ವರೂಪವೆಂದೇ ಭಾವಿಸಬೇಕು! ಇದರಿಂದ ನೀವು ಭಗವದನುಗ್ರಹಕ್ಕೆ ಪಾತ್ರರಾಗುವಿರಿ! ಮನಸ್ಸಿನಲ್ಲಿ ಅಕಸ್ಮಾತ್ತಾಗಿ ಹುಟ್ಟಿದ ಕೋಪಾವೇಶವನ್ನು ಆತ್ಮವಿಚಾರ ದಿಂದ ಯಾವನು ಅಡಗಿಸಬಲ್ಲನೋ, ಅವನು ಸತ್ವಾದಿಗುಣಗಳ ಪ್ರಾಬಲ್ಯ ವನ್ನು ಮುರಿದು, ಶೀಘ್ರದಲ್ಲಿಯೇ ಸಂಸಾರಬಂಧದಿಂದ ಮುಕ್ತನಾಗುವನು. ನಿರಪರಾಧಿಗಳಾದ ಈ ವೃಕ್ಷಗಳಿಗೆ ನೀವು ದ್ರೋಹಮಾಡಬಾರದು. ಕೋಪ ತ್ಯಾಗದಿಂದ ನಿಮಗೆ ಶ್ರೇಯಸ್ಸುಂಟು. ಇದುವರೆಗೆ ನಿಮ್ಮಿಂದ ದಗ್ಧವಾದ ವೃಕ್ಷಗಳು ಹೋಗಲಿ! ಉಳಿದ ವೃಕ್ಷಗಳನ್ನಾದರೂ ಹಾಗೆಯೇ ನಿಲ್ಲಿಸಿಡಿರಿ! ನಿಮ್ಮ ಕೋಪವನ್ನಡಗಿಸಿ! ನಿಮಗೂ ಈ ವೃಕ್ಷವರ್ಗಗಳಿಗೂ ಶುಭವಾಗಲಿ! ಇದೋ! ಈಗ ನಾನು ಈನಿಮ್ಮ ಉಪಕಾರಕ್ಕೆ ಪ್ರತ್ಯುಪಕಾರವಾಗಿ, ಈ ವೃಕ್ಷಗಳಿಂದಲೇ ಇದುವರೆಗೆ ಪೋಷಿಸಲ್ಪಡುತಿದ್ದ ಮಾರಿಷೆಯೆಂಬ ಕನ್ಯಾ ರತ್ನವನ್ನು ನಿಮಗೆ ಕೊಡಿಸುವೆನು. ಇವಳನ್ನು ನಿಮ್ಮ ಭಾರ್ಯೆಯನ್ನಾಗಿ ಸ್ವೀಕ

ರಿಸಿ, ಮುಂದೆ ಪ್ರಜಾವೃದ್ಧಿಕಾರ್ಯವನ್ನು ನಡೆಸಿರಿ!” ಎಂದನು ಚಂದ್ರನು ಈಮಾತನ್ನು ಹೇಳಿ, ಅಪ್ಸರಸ್ತ್ರೀಯಗರ್ಭದಲ್ಲಿ ಋಷಿವೀರ್ಯದಿಂದ ಜನಿಸಿದವಳಾಗಿಯೂ, ವಿವಾಹಯೋಗ್ಯವಾದ ವಯಸ್ಸುಳ್ಳವಳಾಗಿಯೂ ಇದ್ದ ಮಾರಿಷೆಯೆಂಬ ಕನ್ಯೆಯನ್ನು ಅವರಿಗೆ ಕೊಟ್ಟು ಹೊರಟುಹೋದನು ಅವರು ಹತ್ತುಮಂದಿಯೂ ವಿಧ್ಯುಕ್ತವಾಗಿ ಅವಳನ್ನು ವಿವಾಹಮಾಡಿಕೊಂಡರು. ಪೂರ್ವದಲ್ಲಿ ಬ್ರಹ್ಮದೇವನ ಹೆಬ್ಬೆರಳಿನಿಂದ ಹುಟ್ಟಿ, ರುದ್ರನಲ್ಲಿ ತಾನು ಮಾಡಿದ ಅಪರಾಧದಿಂದ ದೇಹವನ್ನು ಪರಿತ್ಯಾಗಮಾಡಿದ ದಕ್ಷನು, ಈ ಮಾರಿಷೆಯಲ್ಲಿ ಹುಟ್ಟಿ ಪ್ರಾಚೇತಸನೆಂಬ ಹೆಸರಿನಿಂದ ಪ್ರಸಿದ್ಧನಾದನು. ಪ್ರಾಯಕವಾಗಿ ಇವನ ಸಂತತಿಯೇ ಮೂರುಲೋಕಗಳಲ್ಲಿಯೂ ಹರಡಿರುವುದು. ಈತನು ತನ್ನ ಹೆಣ್ಣುಮಕ್ಕಳಲ್ಲಿ ವಿಶೇಷಪ್ರೀತಿಯುಳ್ಳವನಾಗಿದ್ದನು. ಈತನು ತನ್ನ ವೀರ್ಯದಿಂದಲೂ, ಮನಸ್ಸಂಕಲ್ಪದಿಂದಲೂ, ಪ್ರಾಣಿಗಳನ್ನು ಸೃಷ್ಟಿಸಿದ ಕ್ರಮವನ್ನು ತಿಳಿಸುವೆನು ಕೇಳಿರಿ! ಈ ಪ್ರಾಚೇತಸನು, ದೇವಾಸುರಮನುಷ್ಯರೇ ಮೊದಲಾದ ಪ್ರಜೆಗಳನ್ನೆಲ್ಲಾ ಮೊದಲು ತನ್ನ ಮನಸ್ಸಂಕಲ್ಪದಿಂದಲೇ ಸೃಷ್ಟಿಸಿದನು. ಇವುಗಳಲ್ಲಿ ಅಂತರಿಕ್ಷಚಾರಿಗಳು ಕೆಲವು! ನೆಲದಲ್ಲಿ ಜೀವಿಸತಕ್ಕವು ಕೆಲವು! ಜಲಜಂತುಗಳು ಕೆಲವು! ಆದರೆ ಮನಸ್ಸಂಕಲ್ಪದಿಂದುಂಟಾದ ಈ ಸೃಷ್ಟಿಯು, ಅಷ್ಟಾಗಿ ಮೇಲೆಮೇಲೆ ವೃದ್ಧಿಹೊಂದಲಿಲ್ಲ ಇದಕ್ಕಾಗಿ ಆ ಪ್ರಾಚೇತಸನು, ವಿಂಧ್ಯಪರ್ವತಪ್ರಾಂತಕ್ಕೆ ಹೋಗಿ, ಅಲ್ಲಿ ದೊಡ್ಡ ತಪಸ್ಸನ್ನಾರಂಭಿಸಿದನು. ಆ ಪರ್ವತದ ಬುಡದಲ್ಲಿರುವ ಅಘಮರ್ಷಣವೆಂಬ ಪುಣ್ಯತೀರ್ಥದಲ್ಲಿ ತ್ರಿಕಾಲಸ್ನಾನಮಾಡುತ್ತ, ತಪಸ್ಸಿನಿಂದ ಭಗವಂತನನ್ನಾರಾಧಿಸುತ್ತ, ಹಂಸಗುಹ್ಯವೆಂಬ ಸ್ತೋತ್ರದಿಂದ ಶ್ರೀಹರಿಯನ್ನು ಹೀಗೆಂದು ಸ್ತುತಿಸಲಾರಂಭಿಸಿದನು.

ದಕ್ಷಕೃತವಾದ ಹಂಸಗುಹ್ಯವೆಂಬ ಸ್ತೋತ್ರವು.

“ಚೇತನಾಚೇತನಗಳಿಗಿಂತಲೂ ವಿಲಕ್ಷಣನಾಗಿಯೂ, ಸತ್ಯಸಂಕಲ್ಪನಾಗಿಯೂ, ತ್ರಿಗುಣಾತ್ಮಕವಾದ ಪ್ರಕೃತಿಯನ್ನು ಶರೀರವಾಗಿ ಹೊಂದಿದವನಾಗಿಯೂ ಇರುವ ಪರಮಾತ್ಮನಿಗೆ ನಮಸ್ಕಾರವು ! ಯಾವನ ಸ್ವರೂಪವು ಜೀವಾತ್ಮಸ್ವರೂಪದಂತೆ ಗೋಚರಿಸಲಾರದೋ, ಯಾ

ವನು ಸರ್ವಕಾರಣನೋ, ಅಂತಹ ಅಪ್ರಮೇಯನಾದ ಪರಮೇಶ್ವರನಿಗೆ ನಮಸ್ಕಾರವು! ಯಾವನು ಜೀವಾಂತರ್ಯಾಮಿಯಾಗಿ ಆಯಾದೇಹದಲ್ಲಿದ್ದು, ಆಜೀವಗಳಿಗೆ ಮಿತ್ರನಂತೆ ಹಿತವನ್ನೇ ಆಚರಿಸುತ್ತ, ರತ್ನವು ಕಾಂತಿಯನ್ನು ಹೇಗೋಹಾಗೆ, ತನ್ನಲ್ಲಿಯೇ ಅವರನ್ನು ಧರಿಸಿದ್ದರೂ, ಜೀವಾತ್ಮರು ದೇಹಾತ್ಮಭ್ರಮದಿಂದ ಆತನ ಸ್ವರೂಪವನ್ನು ತಿಳಿಯಲಾರರೋ ಅಂತಹ ವಿಚಿತ್ರವ್ಯಾಪಾರವುಳ್ಳ ಪರಮಾತ್ಮನಿಗೆ ನಮಸ್ಕಾರವು. ದೇಹ, ಪ್ರಾಣ, ಮನಸ್ಸು, ಇಂದ್ರಿಯಗಳು, ಭೂಮಿ ಮೊದಲಾದ ಪಂಚಭೂತಗಳೂ, ಗಂಧವೇ ಮೊದಲಾದ ಪಂಚತನ್ಮಾತ್ರಗಳೂ, ಇವೆಲ್ಲವೂ ಜೀವನೊಡನೆ ಸಂಬಂಧಿಸಿದ್ದರೂ, ತಮಗಿಂತಲೂ ವಿಲಕ್ಷಣನಾದ ಆ ಜೀವನನ್ನು ಕಾಣಲಾರವು. ಜೀವನಾದರೋ ಆ ದೇಹಾದಿಗಳೆಲ್ಲವನ್ನೂ ತಿಳಿಯಬಲ್ಲನು. ಹೀಗೆಯೇ ಜೀವನು, ಪರಮಾತ್ಮನಿಗೆ ತಾನು ಶರೀರಭೂತನಾಗಿದ್ದರೂ, ತನಗಿಂತಲೂ ವಿಲಕ್ಷಣನಾಗಿ ತನ್ನಲ್ಲಿದ್ದುಕೊಂಡು, ತನ್ನ ಮತ್ತು ತನ್ನ ದೇಹಾದಿಗಳ ಸ್ವರೂಪವನ್ನು ಬಲ್ಲವನಾದ ಪರಮಾತ್ಮನ ಸ್ವರೂಪವನ್ನು ತಾನು ತಿಳಿಯಲಾರನು. ಇಂತಹ ಅಗೋಚರಸ್ವರೂಪನಾದ ಆ ಪರಮಪುರುಷನಿಗೆ ನಮಸ್ಕಾರವು. ಯಾವಾಗ ಜೀವನ ಮನಸ್ಸಿಗೆ, ಹೊರಗಿನ ದೇವಮನುಷ್ಯಾದಿನಾಮರೂಪಗಳ ದರ್ಶನಸ್ಮರಣಾದಿಗಳೆಲ್ಲವೂ ಮರೆತು ಹೋಗಿ, ಆ ಮನಸ್ಸು ಸುಷುಪ್ತಿಯಲ್ಲಿರುವಂತೆ ಸ್ವರೂಪಜ್ಞಾನದಲ್ಲಿಮಾತ್ರವೇ ಏಕಾಗ್ರವಾಗಿ ನೆಲೆಗೊಳ್ಳುವುದೋ, ಅಂತಹಸ್ಥಿತಿಯಲ್ಲಿ, ರಾಗದ್ವೇಷಾದಿಗಳ ದೋಷಗಳೊಂದೂ ಇಲ್ಲದ ಉಪಾಸನಾರೂಪವಾದ ಜ್ಞಾನಕ್ಕೆ ಮಾತ್ರವೇ ಗೋಚರಿಸತಕ್ಕವನಾಗಿಯೂ, ಶುದ್ಧಸ್ವರೂಪನಾಗಿಯೂ, ಶುದ್ಧಹೃದಯದಲ್ಲಿ ಮಾತ್ರವೇ ನೆಲೆಗೊಂಡವನಾಗಿಯೂ ಇರುವ ಭಗವಂತನಿಗೆ ನಮಸ್ಕಾರವು. ಜ್ಞಾನಿಗಳು, ಒಂಬತ್ತುಬಗೆಯ*ಸಂಕಲ್ಪಶಕ್ತಿಗಳೊಡನೆ ತಮ್ಮ ಹೃದಯದಲ್ಲಿ ನೆಲೆಗೊಂಡಿರುವ ಯಾವನನ್ನು, ಅರಣಿಯನ್ನು ಜ್ಜಿ ಬೆಂಕಿಯನ್ನು ತೆಗೆಯುವಂತೆ,

---

* ಇಲ್ಲಿ ಒಂಬತ್ತುಶಕ್ತಿಗಳಾವುವೆಂದರೆ:—"ಶ್ರಿಯಾ ಪುಷ್ಟ್ಯಾ ಗಿರಾ ಕಾಂತ್ಯಾ ಕೀರ್ತ್ಯಾ ತುಷ್ಟ್ಯೇಳಯೋರ್ಜಯಾ | ವಿದ್ಯಯಾಽವಿದ್ಯಯಾ ಶಕ್ತ್ಯಾ ಮಾಯಯಾಚ ನಿಷೇವಿತಃ" ಎಂದು ಹೇಳಲ್ಪಟ್ಟ ನವವಿಧಶಕ್ತಿಗಳೆಂದು ಗ್ರಾಹ್ಯವು.

ಯೋಗಪರಿಶುದ್ಧವಾದ ತಮ್ಮ ಬುದ್ಧಿಯಿಂದ ಚೆನ್ನಾಗಿ ವಿಮರ್ಶಿಸಿ,ಪ್ರಕೃತಿ ಪುರುಷರಿಗಿಂತಲೂ ಬೇರೆಯಾದ ಆತನ ದಿವ್ಯಾತ್ಮಸ್ವರೂಪವನ್ನು ಕಂಡು ಕೊಳ್ಳುವರೋ, ಯಾವನ ಸ್ವರೂಪವು, ಕಣ್ಣು ಕಿವಿ, ಮೊದಲಾದ ಬಾಹ್ಯೇಂದ್ರಿಯಗಳಿಗೆ ಗೋಚರಿಸಲಾರದೋ ಅಂತಹ ಪರಮಾತ್ಮನಿಗೆ ನಮಸ್ಕಾರವು. ಮತ್ತು ಯಾವನು ಬಗೆಬಗೆಯ ವಿಕಾರಗಳನ್ನು ಹುಟ್ಟಿಸತಕ್ಕ ಪ್ರಕೃತಿಸಂಬಂಧವು ಬಿಟ್ಟು ಹೋದಮೇಲೆ, ಮಹಾನಂದರೂಪವಾದ ಮುಕ್ತಿಯಲ್ಲಿಯೇ ಅನುಭವಕ್ಕೆ ಬರುವನೋ, ಯಾವನು ಸತ್ಯಶಬ್ದವಾಚ್ಯ ನಾಗಿ ಸಮಸ್ತಜಗತ್ತನ್ನೂ ತನಗೆ ಶರೀರವಾಗಿ ಹೊಂದಿದ್ದರೂ, ಅವುಗಳ ದೋಷಕ್ಕೆ ಗುರಿಯಾಗುವುದಿಲ್ಲವೋ, ಅಂತಹ ಆಶ್ಚರ್ಯಶಕ್ತಿಯುಳ್ಳ ಭಗ ವಂತನು ನಮ್ಮನ್ನು ಅನುಗ್ರಹಿಸಲಿ! ನಾವು ಬಾಯಿಂದ ನುಡಿಯುವುದು, ಬುದ್ಧಿಯಿಂದ ನಿಶ್ಚಯಿಸುವುದು, ಇಂದ್ರಿಯಗಳಿಂದ ತಿಳಿಯುವುದು ಮನಸ್ಸಿನಿಂದ ಸಂಕಲ್ಪಿಸುವುದು, ಈ ವಸ್ತುಗಳೆಲ್ಲವೂ ಆತನ ಶರೀರವೇ ಹೊರತು ಸ್ವರೂಪವೆನಿಸುವುದಿಲ್ಲ. ಏಕೆಂದರೆ, ಅವೆಲ್ಲವೂ ಸತ್ವಾದಿಗುಣ ಗಳಿಂದುಂಟಾದ ಪರಿಣಾಮಗಳು, ಇವುಗಳ ಉತ್ಪತ್ತಿವಿನಾಶಕಾರ್ಯಗಳು ಮಾತ್ರವೇ ಯಾವನಿಗೆ ಅಸಾಧಾರಣಲಕ್ಷಣ ವೆನಿಸಿಕೊಂಡಿರುವುದೋ ಅಂತಹ ಪರಮಪುರುಷನಿಗೆ ನಮಸ್ಕಾರವು. ಮತ್ತು ಯಾತರಲ್ಲಿ ಈ ಜಗತ್ತು ನೆಲೆಗೊಂಡಿರುವುದೋ, ಯಾತರದೆಸೆಯಿಂದ ಈ ಜಗತ್ತು ಉತ್ಪನ್ನವಾ ಗಿರುವುದೋ, ಯಾತರಿಂದ ಜಗತ್ತು ನಿರ್ಮಿಸಲ್ಪಟ್ಟಿರುವುದೋ, ಈ ಜಗ ತ್ತಿಗೆ ಯಾವುದರ ಸಂಬಂಧವುಂಟೋ, ಯಾವುದಕ್ಕೋಸ್ಕರ ಈಜಗತ್ತು ಹುಟ್ಟಿರುವುದೋ, ಯಾವುದು ಈ ಜಗತ್ತನ್ನು ಉಂಟುಮಾಡಿರುವುದೋ, ಯಾವುದು ಈ ಜಗತ್ತನ್ನು ಮಾಡಿಸುವುದೋ, ಅವೆಲ್ಲವೂ (ಎಂದರೆ ಈ ಜಗ ತ್ತಿಗೆ ಕರ್ತೃ, ಕರ್ಮ, ಕರಣ, ಸಂಪ್ರದಾನ,ಅಪಾದಾನ, ಸಂಬಂಧ, ಅಧಿ ಕರಣಗಳೇ ಮೊದಲಾದ ಕಾರಕಶಕ್ತಿಯುಳ್ಳ ವಸ್ತುಗಳೆಲ್ಲವೂ), ಯಾವ ಭಗ ವಂತನಿಗೆ ಶರೀರಭೂತವಾಗಿರುವುವೋ, ಯಾವನು ಜಗತ್ಸೃಷ್ಟಿಗೆ! ಮೊದಲು ಮಹಾಪ್ರಳಯದಲ್ಲಿಯೂ ನಾಶವಿಲ್ಲದೆ, ಇವೆಲ್ಲಕ್ಕೂ ಕಾರಣವಸ್ತುವಾಗಿ ನೆಲೆಗೊಂಡಿದ್ದು, ಕಾರ್ಯಾವಸ್ಥೆಯಲ್ಲಿ ತಾನೇ ಈ ಪ್ರಪಂಚರೂಪವಾಗಿ ವಿಸ್ತರಿ

ಸಿರುವನೋ ಅಂತಹ ಪರಮಪುರುಷನಿಗೆ ನಮಸ್ಕಾರವು. ಯಾವನು ಸೃಷ್ಟಿ ಗೆಮೊದಲು ನಾಮರೂಪಗಳೊಂದೂ ಇಲ್ಲದ ಸೂಕ್ಷ್ಮಚಿದಚಿತ್ತುಗಳನ್ನು ಶರೀರವಾಗಿ ಹೊಂದಿ, ತಾನೊಬ್ಬನೇ ಇರುತಿದ್ದನೋ ಆ ಪರಮಪುರುಷನು ನನಗೆ ದಿಕ್ಕಾಗಿರಲಿ! ಲೋಕದಲ್ಲಿ ಅನೇಕಪಂಡಿತರು ಭಗವಂತನ ಶಕ್ತಿಗಳಾ ದ ಪೃಥಿವಿ ಮೊದಲಾದ ತತ್ವಗಳನ್ನುಕುರಿತು, ತಮ್ಮತಮ್ಮ ಬುದ್ಧಿಗೆ ತೋರಿದಂತೆ ಈ ಜಗತ್ತು ನಿತ್ಯವೆಂದೂ, ಅನಿತ್ಯವೆಂದೂ, ಪರಮಾಣುವಿ ನಿಂದ ಹುಟ್ಟಿದುದೆಂದೂ, ಪ್ರಧಾನದಿಂದ ಹುಟ್ಟಿದುದೆಂದೂ, ಸತ್ತೆಂದೂ, ಅಸತ್ತೆಂದೂ ಬೇರೆಬೇರೆ ಸಿದ್ಧಾಂತಗಳನ್ನು ನಿರ್ಣಯಿಸಿ, ಒಬ್ಬರಿಗೊ ಬ್ಬರಿಗೆ ವಿವಾದಮಾಡುತ್ತಲೂ, ಒಮ್ಮೊಮ್ಮೆ ಒಬ್ಬರಿಗೊಬ್ಬರು ಅನು ಮೋದಿಸುತ್ತಲೂ ಇರುವರು. ಹೀಗೆ ಪಂಡಿತರಿಗೂ ನಿಜಸ್ಥಿತಿಯು ತಿಳಿಯದಂತೆ! ಅವರನ್ನು ಮರುಳು ಮಾಡುತ್ತಿರುವ ವಿಚಿತ್ರಶಕ್ತಿ ಯುಳ್ಳವನಾಗಿ, ಕೊನೆಮೊದಲಿಲ್ಲದ ಕಲ್ಯಾಣಗುಣಗಳಿಂದ ಕೂಡಿದ ಭಗವಂತನಿಗೆ ನಮಸ್ಕಾರವು. ಇದಲ್ಲದೆ ವೇದಾಂತವಾಕ್ಯಗಳಲ್ಲಿ ಕೆ ಲವು, ಪರಮಪುರುಷನನ್ನು ಸಗುಣನೆಂದು ನಿರೂಪಿಸುವುವು. ಬೇರೆ ಕೆಲವು ನಿರ್ಗುಣನೆಂದು ಹೇಳುವುವು. ಒಂದು ವಸ್ತುವಿನಲ್ಲಿ ಈವಿರುದ್ಧ ಧರ್ಮಗಳು ಹೇಗೆ ಹೊಂದುವುದೆಂಬುದನ್ನು ಆ ವೇದಾಂತವಾಕ್ಯಗಳಿಂ ದಲೇ ನಿರ್ಣಯಿಸಬೇಕಾಗುವುದು. ಈ ವೇದಾಂತವಾಕ್ಯಗಳೇ ಆ ಪರ ಮಪುರುಷನನ್ನು ಸತ್ಯಜ್ಞಾನಾನಂದಮಯನೆಂದೂ, ಅಪರಿಚ್ಛಿನ್ನ ಸ್ವರೂಪ ನೆಂದೂ, ದುರ್ಗುಣರಹಿತನೆಂದೂ ಅಲ್ಲಲ್ಲಿ ನಿರೂಪಿಸುವುದರಿಂದ, ಸಗುಣ ನೆಂಬುದಕ್ಕೆ ಕಲ್ಯಾಣಗುಣಗಣಪರಿಪೂರ್ಣನೆಂದೂ, ನಿರ್ಗುಣನೆಂಬುದಕ್ಕೆ ದುರ್ಗುಣರಹಿತನೆಂದೂ ಅರ್ಥನಿರ್ಣಯವನ್ನು ಮಾಡಬೇಕು.

ಯೋಗಸಾಂಖ್ಯಮತಗಳಲ್ಲಿ ಈಶ್ವರನುಂಟೆಂದೂ, ಇಲ್ಲವೆಂದೂ, ವಿವಾದವುಂಟಾದಾಗ, ಆ ವೇದಾಂತವಾಕ್ಯಗಳಿಂದಲೇ ಈಶ್ವರನುಂ ಟೆಂಬುದನ್ನು ಸಾಧಿಸಿ ತೋರಿಸುವಹಾಗೆ, ಆ ಬ್ರಹ್ಮನಿಗೆ ಸಗುಣತ್ವ, ನಿ ರ್ಗುಣತ್ವಗಳನ್ನು ಹೇಳುವ ಆ ವೇದಾಂತವಾಕ್ಯಗಳೇ, ಅಲ್ಲಲ್ಲಿ ಅವನಕಲ್ಯಾ

ಣಗುಣಗಳನ್ನು ಹೇಳುವುದರಿಂದ ಅವನು ಕಲ್ಯಾಣಗುಣಗಳುಳ್ಳವನೆಂಬುದೇ ಸಿದ್ಧಾಂತವು. ಇದನ್ನು ತಿಳಿಯದೆ ಈಶ್ವರನಿಲ್ಲವೆಂದೂ, ಅವನಿಗೆ ಗುಣಗೆಳಿಲ್ಲವೆಂದೂ ಹೇಳುವುದು ಕೇವಲ ಭ್ರಮವು. ಹೀಗೆ ದುರ್ಜ್ಞೇಯಸ್ವರೂಪನಾದ ಭಗವಂತನಿಗೆ ನಮಸ್ಕಾರವು. ಯಾವ ಭಗವಂತನು ಜೀವಾತ್ಮರಂತೆ ಕರ್ಮಸಂಬಂಧವಾದ ನಾಮರೂಪಗಳಿಲ್ಲದವನಾಗಿದ್ದರೂ, ಭಕ್ತಾನುಗ್ರಹಾರ್ಥವಾಗಿ ರಾಮಕೃಷ್ಣಾದ್ಯವತಾರಗಳಲ್ಲಿ ತನ್ನ ಅಪ್ರಾಕೃತವಾದ ಶರೀರದಿಂದ, ಲೋಕಾದ್ಭುತಗಳಾದ ವ್ಯಾಪಾರಗಳನ್ನು ನಡೆಸುತ್ತಿರುವನೋ, ಯಾವನಿಗೆ ಮೇಲೆನಿಸಿದವರಾಗಲಿ,ಸಮಾನರಾಗಲಿ, ಬೇರೊಬ್ಬರಿಲ್ಲವೋ, ಅಂತಹ ಭಗವಂತನು ನನ್ನಲ್ಲಿ ಪ್ರಸನ್ನನಾಗಲಿ! ಭೂಮಿಗಿಂತಲೂ ವಿಲಕ್ಷಣವಾದ ವಾಯುವು, ಭೂಮಿಯಲ್ಲಿರುವ ಗಂಧಾದಿಗುಣಗಳನ್ನು ಹೊಂದಿ,ಗಂಧವಾಹನೆಂದು ಹೆಸರುಗೊಂಡಂತೆ, ಪರಮಪುರುಷನು ಈ ಜಗತ್ತಿಗಿಂತಲೂ ವಿಲಕ್ಷಣನಾಗಿದ್ದರೂ, ಅದನ್ನು ಶರೀರವಾಗಿಯೇ ಹೊಂದಿದವನಾದುದರಿಂದ, ತಾನೂ ಆಯಾ ನಾಮರೂಪಭೇದಗಳಿಂದ ಕಾಣುತ್ತಿರುವನು. ಜನಗಳು ತಮ್ಮತಮ್ಮ ಮನೋವ್ಯಾಪಾರವನ್ನನುಸರಿಸಿ ಪ್ರಾಕೃತವಸ್ತುಗಳನ್ನು ತಿಳಿಯತಕ್ಕಇಂದ್ರಿಯಗಳಿಂದ ಆಯಾವಸ್ತುಗಳನ್ನು ತಿಳಿಯುವಾಗ, ಆಯಾ ವಸ್ತುಗಳನ್ನು ಶರೀರವಾಗಿ ಹೊಂದಿದ ಭಗವಂತನೂ ಅವುಗಳಲ್ಲಿ ಅಂತರ್ಯಾಮಿಯಾಗಿಗೋಚರಿಸುತ್ತಿರುವುದರಿಂದ, ಯಾವ ವಸ್ತುಗಳನ್ನು ಕಂಡರೂ ಈಶ್ವರನನ್ನು ಕಂಡಂತೆಯೇ ಆಗುವುದು. ಆದರೆ ಸಮಸ್ತವೂ ಪರಮಾತ್ಮನಿಗೆ ಶರೀರವೆಂಬ ನಿಶ್ಚಯವುಳ್ಳ ಜ್ಞಾನಿಗಳಿಗೆಹೊರತು ಈ ತೋರಿಕೆಯು, ಮತ್ತೊಬ್ಬರಿಗೆ ಹುಟ್ಟದು ಹೀಗೆ ಒಂದೊಂದು ವಸ್ತುಗಳಲ್ಲಿಯೂಆಯಾಜನರಭಾವನೆಗೆ ತಕ್ಕಂತೆತೋರುತ್ತಿರುವ ಆಪರಮೇಶ್ವರನು, ನನ್ನ ಮನೋರಥವನ್ನು ಕೈಗೂಡಿಸಲಿ” ಎಂದನು. ಓ ಪರೀಕ್ಷಿದ್ರಾಜಾ! ಹೀಗೆ ಪ್ರಾಚೇತಸನು, ಅಘಮರ್ಷಣತೀರ್ಥದಲ್ಲಿ ಸ್ತೋತ್ರಮಾಡುತ್ತಿರುವಾಗ, ಭಕ್ತವತ್ಸಲನಾದ ಭಗವಂತನು ಗರುಡಾರೂಢನಾಗಿ ಬಂದು ಅಲ್ಲಿಯೇ ಅವನಿಗೆ ಪ್ರತ್ಯಕ್ಷನಾದನು. ಆ ಭಗವಂತನ ದಿವ್ಯಸ್ವರೂಪವನ್ನು ಕೇಳಬೇಕೆ? ಮೊಳಕಾಲಿನವರೆಗೆ ನೀಡಿದ ಅಷ್ಟಭುಜಗಳು! ಆ ಎಂಟು ಭುಜಗಳಲ್ಲಿಯೂ ಶಂ

ಖ, ಚಕ್ರ, ಗದೆ, ಖಡ್ಗ, ಬಿಲ್ಲು, ಬಾಣ, ಪಾಶ, ಖೇಟಕಗಳೆಂಬ ಎಂಟು ದಿ
ವ್ಯಾಯುಧಗಳು! ಮೇಘದಂತೆ ಶ್ಯಾಮಲವಾದ ದೇಹಕಾಂತಿ! ಮುಖದಲ್ಲಿ
ಯೂ, ಕಣ್ಣುಗಳಲ್ಲಿಯೂ ದಯಾಸೂಚಕವಾದ ಪ್ರಸನ್ನತೆ! ಕಂಠದಲ್ಲಿ
ವನಮಾಲಿಕೆ! ಎದೆಯಲ್ಲಿ ಕೌಸ್ತುಭಕಾಂತಿಯಿಂದ ವ್ಯಾಪ್ತವಾದ ಶ್ರೀವತ್ಸ
ವೆಂಬ ಮಚ್ಚೆ! ತಲೆಯಲ್ಲಿ ಮಹಾರ್ಘವಾದ ರತ್ನಕಿರೀಟಕಾಂತಿ! ಹಸ್ತಾಗ್ರ
ದಲ್ಲಿ ಕೈಬಳೆಗಳು! ಕಿವಿಯಲ್ಲಿ ಮಕರಕುಂಡಲಗಳು! ನಡುವಿನಲ್ಲಿಬಂಗಾರದ
ಉಡೆನೂಲು! ಬೆರಳುಗಳಲ್ಲಿ ರತ್ನಖಚಿತಗಳಾದ ಉಂಗುರಗಳು! ಕಾಲುಗ
ಳಲ್ಲಿ ಕಾಲಂದುಗೆ, ಕಡಗ, ಮುಂತಾದ ಆಭರಣಗಳು! ಮೂರುಲೋಕ
ವನ್ನೂ ಮೋಹಗೊಳಿಸತಕ್ಕ ಸುಂದರಾಕೃತಿ! ಇಂತಹ ದಿವ್ಯರೂಪದೊಡನೆ
ಭಗವಂತನು, ನಾರದ, ನಂದರೇ ಮೊದಲಾದ ಭಕ್ತೋತ್ತಮರಿಂದಲೂ,
ತನ್ನ ಗುಣಗಳನ್ನು ಗಾನಮಾಡುತ್ತಿರುವ ದೇವಶ್ರೇಷ್ಠರಿಂದಲೂ, ಸಿ
ದ್ಧಗಂಧರ್ವಚಾರಣರಿಂದಲೂ ಪರಿವೃತನಾಗಿ ಆ ಪ್ರಾಚೇತಸನಮುಂದೆ
ಕಾಣಿಸಿಕೊಂಡನು. ಆ ಭಗವಂತನ ಆಶ್ಚರ್ಯರೂಪವನ್ನುನೋಡಿದೊ
ಡನೆ ಪ್ರಾಚೇತಸನು ಭಯಭಕ್ತಿಗಳಿಂದ ಮೈಮರೆತು, ಕೊನೆಗೆ ಧೈರ್ಯವ
ನ್ನು ತಂದುಕೊಂಡು, ಮುಂದೆ ಬಂದು ಸಾಷ್ಟಾಂಗಪ್ರಣಾಮವನ್ನು ಮಾ
ಡಿದನು. ಆದರೆ ಆಗ ಅವನ ಇಂದ್ರಿಯಗಳೆಲ್ಲವೂ ಉಪನದಿಗಳಿಂದ ತುಂಬಿ
ದ ಮಹಾನದಿಗಳಂತೆ, ಆನಂದಾತಿಶಯದಿಂದ ತುಂಬಿತುಳುಕುತಿದ್ದುದರಿಂ
ದ, ತನ್ನ ಕೋರಿಕೆಯೇನೆಂಬುದನ್ನು ಭಗವಂತನಲ್ಲಿ ಪ್ರಾರ್ಥಿಸಿ ಕೇಳುವು
ದಕ್ಕೂ ಬಾಯಿಹೊರಡದೆ ಸುಮ್ಮನೆ ಸ್ತಬ್ಧನಾಗಿ ನಿಂತುಬಿಟ್ಟನು. ಸ
ರ್ವಜ್ಞನಾದ ಭಗವಂತನು ತಾನಾಗಿಯೇ ಅವನ ಉದ್ದೇಶವನ್ನು ತಿಳಿದು
ಹೀಗೆಂದು ಹೇಳುವನು. “ಓ ಪ್ರಾಚೇತಸಾ! ನೀನು ಮಹಾಭಾಗ್ಯವಂತ
ನು! ಬಹಳಧೀಮಂತನು! ನೀನು ನನ್ನಲ್ಲಿ ನಿರತಿಶಯವಾದ ಭಕ್ತಿಯ
ನ್ನು ತೋರಿಸಿದುದಕ್ಕಾಗಿ ನಾನು ಪ್ರಸನ್ನನಾದೆನು. ನಿನ್ನ ತಪಸ್ಸು
ಸಿದ್ಧಿಸಿತೆಂದು ತಿಳಿ! ನಿನ್ನ ಉದ್ದೇಶವು ಲೋಕಾಭಿವೃದ್ಧಿಗೆ ಕಾರಣವಾ
ದುದರಿಂದ ನಾನು ಸಂತೋಷಪಟ್ಟೆನು. ಈ ಪ್ರಪಂಚದಲ್ಲಿ ಪ್ರಾಣಿಗಳು ವೃ
ದ್ಧಿಹೊಂದಬೇಕೆಂಬುದೇ ನನಗೂ ಉದ್ದೇಶ್ಯವು. ನಮ್ಮಿಬ್ಬರ ಕೋರಿಕೆಯೂ

ಏಕೀಭವಿಸಿತು. ಬ್ರಹ್ಮರುದ್ರರೂ, ಪ್ರಜಾಧಿಪತಿಗಳಾದ ನೀವೂ, ಸ್ವಾಯಂ ಭುವಾದಿ ಮನುಗಳೂ, ಇಂದ್ರಾದಿದೇವತೆಗಳೂ, ನನ್ನ ಅಂಶವಲ್ಲದೆ ಬೇರೆ ಯಲ್ಲ! ಪ್ರಜಾವೃದ್ಧಿಗಾಗಿಯೇ ನೀವೆಲ್ಲರೂ ಏರ್ಪಟ್ಟಿರುವಿರಿ! ಓ ಬ್ರಾ ಹ್ಮಣೋತ್ತಮಾ! ತಪಸ್ಸೆಂಬುದು ನನ್ನ ಹೃದಯವು! ವಿದ್ಯೆಯು ನನ್ನ ಶರೀರವು! ಕ್ರಿಯೆಗಳೇ ನನ್ನ ಆಕಾರವು! ಸೋಮಸಹಿತಗಳಾದ ಯಜ್ಞಗ ಳೂ, ಸೋಮವಿಲ್ಲದ ಕ್ರತುಗಳೂ ನನ್ನ ಅಂಗಗಳು! ದಾನಾದಿಧರ್ಮಗಳೆಲ್ಲ ವೂ ನನ್ನಮನಸ್ಸು! ದೇವತೆಗಳೇ ನನ್ನಪ್ರಾಣವು! ಸೃಷ್ಟಿಗೆ ಮೊದಲು ನಾನೊಬ್ಬನೇ ಇದ್ದವನು! ಆಗ ಈ ಚೇತನಾಚೇತನಗಳೊಂದೂ ಕಾಣು ತ್ತಿರಲಿಲ್ಲ! ಜೀವಾತ್ಮಗಳೆಲ್ಲವೂ ನಾಮರೂಪಗಳೊಂದೂ ಇಲ್ಲದೆ ನನ್ನಲ್ಲಿ ಲೀನವಾಗಿದ್ದುವು. ಹಾಗೆಯೇ ಪ್ರಕೃತಿಯೂ ಸೂಕ್ಷ್ಮದಶೆಯನ್ನು ಹೊಂದಿ ನನ್ನಲ್ಲಿ ಮರೆಸಿಕೊಂಡಿದ್ದಿತು! ನಾನು ಕೊನೆಮೊದಲಿಲ್ಲದ ಕಲ್ಯಾಣಗುಣಗ ಳುಳ್ಳವನು! ಅಪರಿಚ್ಛಿನ್ನಸ್ವರೂಪನು! ಸತ್ವಾದಿಗುಣಮಯವಾದ ಪ್ರಕೃತಿ ಯೆಂಬ ನನ್ನಶರೀರವೇ ಈಬ್ರಹ್ಮಾಂಡರೂಪವಾಗಿ ಮಾರ್ಪಟ್ಟಿತು! ಅದ ಕ್ಕೂಗುಣಪರಿಣಾಮವೇ ಕಾರಣವು. ಆಗ ಆ ಅಂಡದಿಂದ ಸಮಷ್ಟಿಪುರು ಷನಾದ ಬ್ರಹ್ಮದೇವನು ಹುಟ್ಟಿದನು. ದೇವಶ್ರೇಷ್ಠನಾದ ಆ ಚತುರ್ಮುಖನಿ ಗೆನನ್ನ ಸಂಕಲ್ಪದಿಂದ ಸೃಷ್ಟಿಕಾರ್ಯವನ್ನಾರಂಭಿಸಬೇಕೆಂಬ ಉದ್ದೇಶವು ಹುಟ್ಟಿತು. ತನಗೆ ಆ ಸಾಮರ್ಥ್ಯವಿಲ್ಲದುದಕ್ಕಾಗಿ ಚಿಂತಾಕುಲನಾಗಿರುವಾ ಗ, ನನ್ನಿಂದಲೇ ಪ್ರೇರಿತನಾಗಿ ನನ್ನನ್ನುಕುರಿತು ಘೋರವಾದ ತಪಸ್ಸ ನ್ನುಮಾಡತೊಡಗಿದನು. ಆ ತಪಸ್ಸಿದ್ಧಿಯಿಂದ ಸೃಷ್ಟಿಸಾಮರ್ಥ್ಯವನ್ನುಪ ಡೆದು, ಮೊದಲು ಪ್ರಜಾಧಿಪತಿಗಳಾದ ನಿಮ್ಮನ್ನು ಸೃಷ್ಟಿಸಿದನು ಆದುದ ರಿಂದ ಲೋಕಾಭಿವೃದ್ಧಿಗೆ ತಪಸ್ಸೇ ತಕ್ಕ ಉಪಾಯವು. ಓ ದಕ್ಷಾ! ಪಂಚ ಜನನೆಂಬ ಪ್ರಜಾಧಿಪತಿಗೆ ಅಸಿಕ್ನಿಯೆಂಬ ಪುತ್ರಿಯೊಬ್ಬಳುಂಟು. ಅವಳ ನ್ನು ನೀನು ಪತ್ನಿಯನ್ನಾಗಿ ಪರಿಗ್ರಹಿಸು ಅವಳಲ್ಲಿ ನೀನು ಕುಟುಂಬಧರ್ಮ ದಿಂದ ಪ್ರಜಾವೃದ್ಧಿಯನ್ನುಂಟುಮಾಡುತ್ತ ಬರಬಹುದು. ನಿನ್ನಿಂದಾಚೆಗೆ ಹುಟ್ಟತಕ್ಕವರೂ ಹೀಗೆಯೇ ದಾಂಪತ್ಯಧರ್ಮದಿಂದ ಪ್ರಜೆಗಳನ್ನು ಪಡೆಯು ವಂತೆ ನಾನು ಸಂಕಲ್ಪಿಸುವೆನು ಅವರೆಲ್ಲರೂ ಯಜ್ಞಾದಿಕರ್ಮಗಳಿಂದ ನ

ನ್ನನ್ನು ಆರಾಧಿಸುತ್ತಿರಲಿ.” ಎಂದು ಹೇಳಿ ಭಗವಂತನು, ಆ ಪ್ರಾಚೇತಸನು ನೋಡುತ್ತಿದ್ದಹಾಗೆಯೇ ಕಣ್ಮರೆಯಾದನು. ಪ್ರಾಚೇತಸನಿಗೆ ಕನಸನ್ನು ನೋಡಿ ಕಣ್ಣುಬಿಟ್ಟಂತೆ, ಕ್ಷಣಕಾಲದೊಳಗಾಗಿ ಏನೂ ಕಾಣಿಸದೆಹೋಯಿತು. ಇದು ನಾಲ್ಕನೆಯ ಅಧ್ಯಾಯವು.

---

## ನಾರದನು ತನ್ನ ಮಕ್ಕಳನ್ನು ಕೆಡಿಸಿದುದಕ್ಕಾಗಿ, ದಕ್ಷನು ಅವನನ್ನು ಶಪಿಸಿದುದು.

ಓ ರಾಜೇಂದ್ರಾ! ಇತ್ತಲಾಗಿ ಪ್ರಾಚೇತಸನು, ಭಗವಂತನ ಸಂಕಲ್ಪದಂತೆ ಪುರಂಜನಪುತ್ರಿಯನ್ನು ಮದಿವೆಯಾಗಿ, ಅವಳಲ್ಲಿ ಹರ್ಯಶ್ವರೆಂದು ಕರೆಯಲ್ಪಡುವ ಹತ್ತುಸಾವಿರಮಂದಿ ಮಕ್ಕಳನ್ನು ಪಡೆದನು. ಇವರೆಲ್ಲರೂ ಒಂದಾಗಿಯೇ ಕಲೆತು, ಒಂದೇ ಧರ್ಮವನ್ನನುಸರಿಸುವವರಾಗಿದ್ದರು. ಇವರೆಲ್ಲರೂ ಪ್ರಜಾವೃದ್ಧಿಕಾರ್ಯಕ್ಕಾಗಿ ತಂದೆಯಿಂದ ನಿಯಮಿಸಲ್ಪಟ್ಟು ಪಶ್ಚಿಮದಿಕ್ಕಿಗೆ ಹೊರಟರು. ಅಲ್ಲಿ ಸಿಂಧುನದವು ಸಮುದ್ರದೊಡನೆ ಸೇರುವ ಸ್ಥಳದಲ್ಲಿ, ನಾರಾಯಣಸರಸ್ಸೆಂಬ ಒಂದು ಪುಣ್ಯತೀರ್ಥವುಂಟು. ಆ ಸರಸ್ಸು ಮಹಾಮಹಿಮೆಯುಳ್ಳುದಾಗಿ, ಅನೇಕ ಮಹರ್ಷಿಗಳಿಂದಲೂ, ಸಿದ್ಧರಿಂದಲೂ ಸೇವಿಸಲ್ಪಡುತ್ತಿರುವುದು. ಹರ್ಯಶ್ವರು ಆ ಪುಣ್ಯತೀರ್ಥವನ್ನು ಮುಟ್ಟಿದಮಾತ್ರದಿಂದಲೇ ಅವರ ಮನಸ್ಸಿನ ಕಲ್ಮಷಗಳೆಲ್ಲವೂ ಕಳೆದು, ಪರಮಹಂಸರು ನಡೆಸತಕ್ಕ ಸನ್ಯಾಸಧರ್ಮದಲ್ಲಿಯೇ ತಾವೂ ಇರಬೇಕೆಂಬ ಬುದ್ಧಿಯು ಹುಟ್ಟಿತು. ಹಾಗಿದ್ದರೂ ಅವರು ತಂದೆಯಾಜ್ಞೆಯನ್ನು ಮೀರಿ ನಡೆಯಲಾರದೆ, ಪ್ರಜಾವೃದ್ಧಿಗಾಗಿ ದೊಡ್ಡ ತಪಸ್ಸನ್ನು ಮಾಡತೊಡಗಿದರು. ಹೀಗೆ ಅವರು ಸಂತಾನಾಪೇಕ್ಷೆಯಿಂದ ತಪಸ್ಸುಮಾಡುತಿದ್ದಾಗ, ಆಸ್ಥಳಕ್ಕೆ ಆಕಸ್ಮಾತ್ತಾಗಿ ನಾರದಮಹರ್ಷಿಯು ಬಂದು, ಅವರನ್ನು ನೋಡಿ “ಅಯ್ಯೋ! ಇದೇನಿದು! ಎಲೈಕುಮಾರರೆ! ಅನ್ಯಾಯವಾಗಿ ಕೆಟ್ಟು ಹೋಗುತ್ತಿರುವಿರಲ್ಲಾ! ನೀವು ಇನ್ನೂ ಬಾಲರು! ಏನೂ ತಿಳಿಯದವರು! ಕೊನೆಗಾಲಕ್ಕೆ ಈ ಪ್ರಪಂಚದ ಪರಿಣಾಮವೇನೆಂಬುದನ್ನು ಯೋಚಿಸದೆ, ಸಂತಾನವನ್ನು ಪಡೆಯುವುದಕ್ಕಾಗಿ ಯತ್ನಿಸುವರಲ್ಲಾ!

ಅದನ್ನು ತಿಳಿದಿದ್ದರೆ ನೀವು ಈ ಕಾರ್ಯಕ್ಕೆ ಪ್ರಯತ್ನಿಸುತ್ತಿರಲಿಲ್ಲ. ಈ ಪ್ರಪಂಚಕ್ಕೆಲ್ಲಾ ಈಶ್ವರನೊಬ್ಬನೇ ಪುರುಷನೆಂಬುದನ್ನೂ, ಅವನನ್ನು ಬಿಟ್ಟು ನಾವು ಬಯಸತಕ್ಕ ವಸ್ತುವು ಬೇರೊಂದಿಲ್ಲವೆಂಬುದನ್ನೂ ತಿಳಿಯದೆ, ನೀವು ಸಂತಾನವನ್ನಪೇಕ್ಷಿಸಿ, ಹೀಗೆ ಕರ್ಮಮಾರ್ಗದಲ್ಲಿ ಪ್ರವರ್ತಿಸುವುದುಂಟೆ! ನಿಮ್ಮ ಬುದ್ಧಿಗೆ ನಾನೇನು ಹೇಳಲಿ! ಈ ಕರ್ಮಮಾರ್ಗದಲ್ಲಿ ಹೋಗತಕ್ಕ ಜೀವನು, ಅಲ್ಲಿನ ಗುಹೆಯಲ್ಲಿ ಪ್ರವೇಶಿಸಿದಮೇಲೆ, ಹೊರಗೆ ಬರುವುದಕ್ಕೆ ಉಪಾಯವಿಲ್ಲದೆ ಅಲ್ಲಿಯೇ ನರಳಬೇಕಾದ ಸಂಗತಿಯೂ ನಿಮಗೆ ತಿಳಿದಹಾಗಿಲ್ಲ! ಇದಲ್ಲದೆ ಈ ದಾರಿಯಲ್ಲಿ ಹೋಗತಕ್ಕವನನ್ನು ನಾನಾರೂಪಗಳಿಂದ ವಂಚಿಸತಕ್ಕ ವೇಶ್ಯೆಯೊಬ್ಬಳು ಕಾದಿರುವಳು. ಅವಳ ಕೈಗೆ ಸಿಕ್ಕಿಬಿದ್ದಮೇಲೆ ಮನುಷ್ಯನ ಅವಸ್ಥೆಯೇನಾಗುವುದೆಂಬುದನ್ನೂ ನೀವು ಯೋಚಿಸಿದಹಾಗಿಲ್ಲ! ಇದಲ್ಲದೆ ಈ ದಾರಿಯಲ್ಲಿ ಎರಡು ದಡಗಳನ್ನೂ ಮೀರಿ ಹರಿಯುತ್ತಿರುವ ಒಂದು ದೊಡ್ಡ ನದಿಯು, ಕಾಲುಜಾರಿ ಬಿದ್ದವರನ್ನು ಕೊಚ್ಚಿಸಿಕೊಂಡೇ ಹೋಗುವುದೆಂಬ ಸಂಗತಿಯೂ ನಿಮಗೆ ತಿಳಿದಹಾಗಿಲ್ಲ! ಮತ್ತು ಈದಾರಿಯಲ್ಲಿ ಇಪ್ಪತ್ತೈದು ತತ್ವಗಳಿಂದ ಆಶ್ಚರ್ಯಕರವಾಗಿ ನಿರ್ಮಿಸಲ್ಪಟ್ಟಿರುವ ಒಂದು ಸೆರೆಮನೆಯುಂಟು. ಅದನ್ನೂ ನೀವು ತಿಳಿದಹಾಗಿಲ್ಲ. ವಿಚಿತ್ರವಾದ ಎರಡು ರೆಕ್ಕೆಗಳೊಡನೆ ಒಂದು ಹಂಸವು ಕಣ್ಣಿಟ್ಟುಕಾದಿರುವುದು. ಸಣ್ಣ ಕತ್ತಿಗಳಿಂದಲೂ, ವಜ್ರದ ಮುಳ್ಳುಗಳಿಂದಲೂ ನಿರ್ಮಿತವಾಗಿ,ತನಗೆ ತಾನೇ ತಿರುಗುತ್ತಿರುವ ಭಯಂಕರವಾದ ಒಂದು ಚಕ್ರವುಂಟು ಜನ್ಮಜನ್ಮಕ್ಕೂ ನಿಮಗೆ ತಂದೆಯಂತೆ ಹಿತವನ್ನುಪದೇಶಿಸುತ್ತಬರುವ ಸರ್ವಜ್ಞನಾದ ಗುರುವಿನ ಹಿತವಾರ್ತೆಯನೂ ನೀವು ಗಮನಿಸಿದಹಾಗಿಲ್ಲ. ಇದೊಂದನ್ನೂ ತಿಳಿಯದೆ ನೀವು ಸೃಷ್ಟಿಕಾರ್ಯಕ್ಕಾಗಿ ಯತ್ನಿಸಿ, ಹೀಗೆ ತಪಸ್ಸೆಂಬ ಕರ್ಮಮಾರ್ಗದಲ್ಲಿ ಹೋಗುವುದು ಯುಕ್ತವೆ? ಆಹಾ! ಇದೇನು? ನಿಮಗೂ ಈ ಬುದ್ಧಿ ಹುಟ್ಟಿತು?" ಎಂದನು. ಆ ಹರ್ಯಶ್ವರು ಬಹಳ ಸೂಕ್ಷ್ಮಬುದ್ಧಿಯುಳ್ಳವರಾಗಿಯೂ, ಸಹಜವಾಗಿಯೇ ವಿಚಾರಪರರಾಗಿಯೂ ಇದ್ದುದರಿಂದ, ಆ ನಾರದನು ಹೇಳಿದ್ದ ಮಾತಿನ ಗೂಢಾರ್ಥವನ್ನು ಸ್ವಬುದ್ಧಿಯಿಂದಲೇ ಆಲೋಚಿಸಿ ತಿಳಿದುಕೊಂಡರು! ಅವರ ಬುದ್ಧಿಯು ಕದಲಿತು! ತ

ವ್ಮೊಳಗೆ ತಾವು ಹೀಗೆಂದು ಆಲೋಚಿಸುವರು. “ಆಹಾ! ನಾರದನ ಮಾತು ಸತ್ಯವು! ನಾವು ಮೊದಲೇ ಇದನ್ನಾಲೋಚಿಸದೆ ಮೋಸಹೋದೆವು! ಭೂಮಿ ಮೊದಲಾದ ಪಂಚಭೂತಗಳಿಂದ ಏರ್ಪಟ್ಟುದಾಗಿಯೂ, ಪ್ರಾಣಗಳಿರುವವರೆಗೆ ಹೆಸರಿಗೆಮಾತ್ರ ಜೀವನೆಂದು ಕರೆಯಲ್ಪಡತಕ್ಕುದಾಗಿಯೂ ಇರುವ ಈ ದೇಹದ ಪರಿಣಾಮವೇನೆಂಬುದನ್ನು ಯೋಚಿಸದೆ, ಈ ದೇಹಕ್ಕೆ ಕಾರಣವಾದ ಕರ್ಮಬಂಧವನ್ನು ನೀಗಿಸುವುದಕ್ಕೂ ಯತ್ನಿಸದೆ, ನಾವು, ಮೇಲೆಮೇಲೆ ಸಂಸಾರವನ್ನು ತಗಲುಕಟ್ಟುವ ಈ ಕರ್ಮಗಳಲ್ಲಿ ಬಿದ್ದು ಫಲವೇನು? ಮತ್ತು, ಎಚ್ಚರ, ಕನಸು, ನಿದ್ರೆಗಳೆಂಬ ಅವಸ್ಥಾತ್ರಯವನ್ನೂ ಮೀರಿ, ತನಗೆ ತಾನೇ ಆಧಾರನಾಗಿರುವ ಆ ಭಗವಂತನೊಬ್ಬನೇ ಸಮಸ್ತಜಗತ್ತನ್ನೂ ತನ್ನಲ್ಲಿ ಧರಿಸಿ ನಿಯಮಿಸುತ್ತಿರುವನು. ಆ ಪ್ರಧಾನಪುರುಷನೊಬ್ಬನನ್ನು ಪಡೆಯುವುದಕ್ಕೆ ಯತ್ನಿಸದೆ, ಪ್ರಜಾಸೃಷ್ಟಿಗಾಗಿ ಈ ಕರ್ಮಗಳನ್ನಾಚರಿಸಿ ನಮಗಾಗುವ ಪ್ರಯೋಜನವೇನು? ನಾರದನು ಹೇಳಿದಂತೆ ಕರ್ಮಮಾರ್ಗದಲ್ಲಿ ನಡೆಯುವ ಜೀವನು, ಬಿಲಸ್ವರ್ಗದಂತಿರುವ ಹೃದಯಬಿಲದಲ್ಲಿ ಸಿಕ್ಕಿಬಿದ್ದಮೇಲೆ, ಹೊರಗೆ ಬರುವುದಕ್ಕೆ ದಾರಿಯಿಲ್ಲದೆ ಅಲ್ಲಿಯೇ ನರಳಬೇಕಾಗುವುದು! ಈವಿಧವಾಗಿ ಆತ್ಮಸ್ವರೂಪವನ್ನು ಮರೆಸಿ, ಮೇಲೆಮೇಲೆ ಶರೀರಸಂಬಂಧವನ್ನೇ ಉಂಟುಮಾಡುತ್ತಿರುವ ಈ ಕರ್ಮಗಳಿಂದ ಫಲವೇನು? ಇದರಿಂದ ಯಾವ ಸುಖವೂ ಉಂಟಾಗಲಾರದು! ಜಾರಸ್ತ್ರೀಯು ಇತರಪುರುಷರನ್ನು ಮೋಹಗೊಳಿಸುವುದಕ್ಕಾಗಿ, ನಾನಾರೂಪಗಳಿಂದ ಮೆರೆಯುವಂತೆ, ಬುದ್ಧಿಯೆಂಬುದು ರಾಗದ್ವೇಷಾದಿವಿಕಾರಗಳಿಂದ ಜೀವನನ್ನು ಮರುಳುಗೊಳಿಸುವುದಕ್ಕಾಗಿ ಸಿಕ್ಕಿದಹಾಗೆ ತಿರುಗುತ್ತಿರುವುದು. ಹೀಗೆ ಚಪಲಬುದ್ಧಿಯಿಂದುಂಟಾಗತಕ್ಕ ಮೋಹಪಾಶವನ್ನು ತಪ್ಪಿಸಿಕೊಳ್ಳುವುದಕ್ಕೆ ಯತ್ನಿಸದೆ, ಅದಕ್ಕೆ ಮತ್ತಷ್ಟು ಅವಕಾಶವನ್ನುಂಟುಮಾಡತಕ್ಕ ಕರ್ಮಗಳಿಂದ ಪ್ರಯೋಜನವೇನು? ಕೆಟ್ಟ ಹೆಂಗಸನ್ನು ಕೈಹಿಡಿದವನು, ಅವಳ ಮೋಹಕ್ಕೆ ಮರುಳಾಗಿ, ಕೈಯಾಟದಬೊಂಬೆಯಂತೆ ಅವಳು ಹೇಳಿದಹಾಗೆ ನಡೆಯುತ್ತಿರುವನು. ಅವಳು ಕೇಳಿಕೇಳಿದ ವಸ್ತ್ರಾಭರಣಗಳನ್ನು ತಂದುಕೊಡುತ್ತ ತನ್ನ ಸರ್ವೈಶ್ವರ್ಯವನ್ನೂ ಕಳೆದು

ಕೊಳ್ಳುವನು. ಇದರಂತೆಯೇ ಬುದ್ಧಿಚಾಪಲ್ಯಕ್ಕೆ ವಶನಾದವನು, ತನ್ನ ನಿತ್ಯೈಶ್ವರ್ಯರೂಪವಾದ ಮೋಕ್ಷಮಾರ್ಗವನ್ನೂ, ತನ್ನ ಶುದ್ಧಾತ್ಮಸ್ವರೂಪವನ್ನೂ ಮರೆತು, ಆ ಬುದ್ಧಿಗೆ ವಶನಾಗಿ ಕರ್ಮದಲ್ಲಿ ಬಿದ್ದು ಅಲ್ಪವಾಗಿಯೂ, ಅಸ್ಥಿರಗಳಾಗಿಯೂ ಇರುವ ಸ್ವರ್ಗಾದಿಸುಖಗಳನ್ನೂ, ನರಕದುಃಖಗಳನ್ನೂ ಅನುಭವಿಸುವನು. ಇಂತಹ ಕರ್ಮಗಳಿಂದ ಫಲವೇನು ? ಮತ್ತು ಮಾಯೆಯೆಂಬ ನದಿಯು, ಸೃಷ್ಟಿಸಂಹಾರಗಳೆಂಬ ಎರಡು ಕಡೆಯ ಪ್ರವಾಹಗಳಿಂದ, ಇಹಲೋಕ ಪರಲೋಕಗಳೆಂಬ ಎರಡು ತೀರಗಳನ್ನೂ ಆಕ್ರಮಿಸಿ ವೇಗದಿಂದೋಡುತ್ತಿರುವುದು ಈ ನದಿಯಲ್ಲಿ ಕೊಚ್ಚಿಸಿಕೊಂಡು ಹೋಗತಕ್ಕ ಅಸತ್ಕರ್ಮಗಳಿಂದ ಫಲವೇನು? ಇಪ್ಪತ್ತೈದು ತತ್ವಗಳೆಂಬ ಆಶ್ಚರ್ಯಸಾಮಗ್ರಿಗಳಿಂದ ನಿರ್ಮಿತವಾದ ಈ ಶರೀರವೆಂಬ ಸೆರೆಮನೆಯಲ್ಲಿ ಸಿಕ್ಕಿಸುವುದಕ್ಕೆ ಕರ್ಮಗಳೇ ಮೂಲವು. ಅಂತಹ ಕರ್ಮಗಳಲ್ಲಿ ಬಿದ್ದು ಈ ಅನರ್ಥಗಳನ್ನು ತಂದುಕೊಳ್ಳುವುದೇಕೆ ? ಎರಡುರೆಕ್ಕೆಗಳನ್ನೂ ಬಿಚ್ಚಿಸಿಂತಿರುವ ಹಂಸದಂತೆ, ಈಶ್ವರನೇ ಸಂಸಾರಬಂಧಕ್ಕೂ, ಮೋಕ್ಷಕ್ಕೂ ಕಾರಣಗಳಾದ ನಿವೃತ್ತಿಮಾರ್ಗವನ್ನೂ ಪ್ರವೃತ್ತಿಮಾರ್ಗವನ್ನೂ ತೋರಿಸತಕ್ಕವನು. ಮತ್ತು ಅವನು ಸುಲಭವಾಗಿ ಗೋಚರಿಸದೆ ಏಕಾಂತವಾಗಿ ಹೃದಯಗುಹೆಯಲ್ಲಿ ನೆಲೆಗೊಂಡಿರತಕ್ಕವನು. ಇಂತಹ ಸರ್ವೇಶ್ವರನ ಸ್ವರೂಪವನ್ನು ತಿಳಿಯದೆ, ಸಂಸಾರಕಾರಣಗಳಾದ ಅಸತ್ಕರ್ಮಗಳನ್ನು ನಡೆಸಿ ಲಾಭವೇನು? ಕಾಲಚಕ್ರವೆಂಬುದು ಅನವರತವೂ ತಿರುಗುತ್ತ, ಬ್ರಹ್ಮದೇವನು ಮೊದಲುಗೊಂಡು ಸಣ್ಣಕ್ರಿಮಿಯವರೆಗೆ ಸಮಸ್ತಜಗತ್ತನ್ನೂ ಕತ್ತರಿಸಿಕೆಡಹುವುದು. ಇದರಲ್ಲಿ ತಲೆಯನ್ನೊಡ್ಡಿಸುವ ಅಸತ್ಕರ್ಮಗಳನ್ನಾಚರಿಸಿ ಫಲವೇನು ? ಜನ್ಮಜನ್ಮಕ್ಕೂ ತಂದೆಯಂತೆ ಹಿತವನ್ನು ಬೋಧಿಸುತ್ತಿರುವ ಶಾಸ್ತ್ರಗಳು, ಪ್ರವೃತ್ತಿಧರ್ಮವು ಸಂಸಾರಹೇತುವಾದುದರಿಂದ ಅದನ್ನು ಬಿಟ್ಟು ನಿವೃತ್ತಿಮಾರ್ಗವನ್ನೇ ಹಿಡಿಯಬೇಕೆಂದು ಹೇಳಿರುವಾಗ, ಅದನ್ನು ತಿಳಿಯದೆ, ಈಗಿನ ತಂದೆಯ ಮಾತನ್ನು ಕೇಳಿ, ಸೃಷ್ಟಿಕಾರ್ಯದಲ್ಲಿ ಪ್ರವರ್ತಿಸಿ, ಕರ್ಮಮಾರ್ಗದಲ್ಲಿ ಬೀಳುವುದರಿಂದ ಫಲವೇನು? ನಾರದನ ಮಾತಿನಂತೆ ಈ ಕರ್ಮಮಾರ್ಗವನ್ನು ಬಿಡುವುದೇ ಉತ್ತಮವು" ಎಂದು ಆ ದಕ್ಷಪುತ್ರರೆಲ್ಲರೂ ಏಕಮು

ಖವಾಗಿ ನಿಶ್ಚಯಿಸಿಕೊಂಡರು. ನಾರದನನ್ನು ಪ್ರದಕ್ಷಿಣನಮಸ್ಕಾರಗಳಿಂದ ಪೂಜಿಸಿ ಕಳುಹಿಸಿ, ತಾವು ಕರ್ಮಮಾರ್ಗವನ್ನು ಬಿಟ್ಟು ನಿವೃತ್ತಿಮಾರ್ಗ ವನ್ನೇ ಹಿಡಿದರು. ಫಲಾಪೇಕ್ಷೆಯಿಲ್ಲದೆ ಪರಮಪುರುಷನನ್ನು ಆರಾಧಿಸ ತೊಡಗಿ ದೇಹವನ್ನೂ ನೀಗಿದರು. ಅತ್ತಲಾಗಿ ನಾರದಮಹರ್ಷಿಯೂಕೂಡ, ಭಗವಂತನ ಪಾದಾರವಿಂದಗಳಲ್ಲಿ ನಟ್ಟ ಮನಸ್ಸುಳ್ಳವನಾಗಿ, ಭಗವನ್ನಾಮ ಗಳನ್ನು ನುಡಿಯುತ್ತಿರುವ ವೀಣಾಗಾನದೊಡನೆ ಲೋಕಸಂಚಾರಕ್ಕಾಗಿ ಹೊರಟನು. ಆಮೇಲೆ ದಕ್ಷಪ್ರಜಾತಿಯು, ಗುಣಾಢ್ಯರಾದ ತನ್ನ ಮಕ್ಕ ಳೆಲ್ಲರೂ ನಾರದನ ಪ್ರೇರಣೆಯಿಂದ, ತನ್ನ ಮಾತನ್ನೂ ಮೀರಿ, ಸೃಷ್ಟಿ ಕಾರ್ಯದಲ್ಲಿ ಪ್ರಯತ್ನಿಸದೆ, ದೇಹತ್ಯಾಗದಿಂದ ಮುಕ್ತಿಯನ್ನು ಹೊಂದಿದ ರೆಂಬ ವೃತ್ತಾಂತವನ್ನು ಕೇಳಿ ಬಹಳವಾಗಿ ದುಃಖಿಸಿದನು. ರಾಜೇಂದ್ರಾ! "ಸುಪುತ್ರರನ್ನು ಪಡೆಯುವುದು ಶೋಕಕ್ಕೆ ಕಾರಣ"ವೆಂಬ ಲೋಕೋಕ್ತಿಯು ಸತ್ಯವಾಯಿತು ನೋಡು! ದಕ್ಷನು ತನ್ನ ಮಕ್ಕಳ ಸ್ಥಿತಿಯನ್ನು ಕುರಿತು ಬಹಳ ದುಃಖಿತನಾಗಿದ್ದರೂ, ತನ್ನ ತಾತನಾದ ಬ್ರಹ್ಮನ ಉಪದೇಶದಿಂದ ಮನಸ್ಸಮಾಧಾನವನ್ನು ತಂದುಕೊಂಡು,ತಿರುಗಿ ತನ್ನ ಪತ್ನಿಯಾದ ಪಾಂಚ ಜನಿಯಲ್ಲಿ ಶಬಲಾಶ್ವರೆಂಬ ಸಾವಿರಮಂದಿಮಕ್ಕಳನ್ನು ಪಡೆದನು. ಈ ಮಕ್ಕ ಳೂಕೂಡ ತಂದೆಯಾದ ದಕ್ಷನಿಂದ ಪ್ರಜಾಸೃಷ್ಟಿಕಾರ್ಯಕ್ಕಾಗಿ ನಿಯಮಿಸ ಲ್ಪಟ್ಟು, ನಿಯಮನಿಷ್ಠರಾಗಿ, ಹಿಂದೆ ತಮ್ಮ ಅಣ್ಣಂದಿರಾದ ಹರ್ಯಶ್ವರು ತಪಸ್ಸಿದ್ಧಿಗಾಗಿ ಹೋಗಿದ್ದ ನಾರಾಯಣಸರೋವರಕ್ಕೇ ಬಂದು ಸೇರಿದರು. ಇವರೂ ಆ ತೀರ್ಥಸ್ಪರ್ಶದಿಂದ ಶುದ್ಧಮನಸ್ಕರಾಗಿ, ಪ್ರಣವಮಂತ್ರವನ್ನು ಜಪಿಸುತ್ತ ಉಗ್ರತಪಸ್ಸನ್ನು ಮಾಡತೊಡಗಿದರು. ಕೆಲವು ತಿಂಗಳುಗಳ ವರೆಗೆ ಕೇವಲಜಲಪಾನದಿಂದಲೂ, ಆಮೇಲೆ ಕೆಲವು ದಿನಗಳವರೆಗೆ ಕೇವಲ ವಾಯುಭಕ್ಷಣದಿಂದಲೂ, "ಓಂ ನಮೋ ನಾರಾಯಣಾಯ" ಎಂಬೀ ಮಂತ್ರ ದೊಡನೆ ಮಂತ್ರಾಧಿದೇವತೆಯಾದ ಶ್ರೀಹರಿಯನ್ನಾರಾಧಿಸುತ್ತ ಹೀಗೆಂದು ಸ್ತೋತ್ರಮಾಡುವರು. "ಓ ದೇವಾ! ಸಮಸ್ತಜೀವರಾಶಿಗಳಿಗೂ ನೀನೇ ಸ ದ್ಗತಿಯನ್ನು ಹೊಂದಿಸತಕ್ಕವನು. ಅವರು ಆ ನಿನ್ನ ಅನುಗ್ರಹದಿಂದ ಪಡೆಯ ಬೇಕಾದ ಸದ್ಗತಿಯೂ ನೀನೇ! ಅವೆಲ್ಲಕ್ಕೂ ನೀನೇ ಆಧಾರನು! ಜೀವಾತ್ಮರ

ಹೃದಯಕಮಲದಲ್ಲಿ ನೆಲೆಗೊಂಡು, ಅವರನ್ನು ಆ ಕಾರ್ಯದಲ್ಲಿ ನಿಯಮಿಸತಕ್ಕವನೂ ನೀನೇ! ರಜಸ್ತಮೋಗುಣಗಳ ಸಂಪರ್ಕವೇ ಇಲ್ಲದೆ, ಶುದ್ಧ ಸತ್ವಮಯವಾದ ಸ್ಥಾನದಲ್ಲಿ, ಸಮಸ್ತಕಲ್ಯಾಣಗುಣವಿಶಿಷ್ಟನಾಗಿ, ದೋಷರಹಿತನಾಗಿ ನೆಲೆಗೊಂಡಿರುವ ನಿನಗೆ ನಮಸ್ಕಾರವು. ಸರ್ವೇಶ್ವರನಾದ ನಿನ್ನನ್ನು ಧ್ಯಾನಿಸುವೆವು" ಎಂದು ಹೇಳಿ ಬಾರಿಬಾರಿಗೂ ನಾರಾಯಣಮಂತ್ರವನ್ನು ಜಪಿಸುತ್ತ, ಸಂತಾನಾಪೇಕ್ಷೆಯಿಂದ ಭಗವಂತನನ್ನು ಪ್ರಾರ್ಥಿಸುತಿದ್ದರು. ಇದನ್ನು ತಿಳಿದು ನಾರದಮಹರ್ಷಿಯು, ತಿರುಗಿ ಅಲ್ಲಿಗೆ ಬಂದು, ಮೊದಲಿನಂತೆಯೇ ಅವರಿಗೂ ನಿವೃತ್ತಿಮಾರ್ಗವನ್ನು ಬೋಧಿಸತೊಡಗಿ ಹೀಗೆಂದು ಹೇಳುವನು. "ಎಲೈ ಕುಮಾರರ! ಇದೇನಿದು! ನಾನು ಹೇಳತಕ್ಕ ಮಾತುಗಳನ್ನು ಸಾವಧಾನವಾಗಿ ಕೇಳಿರಿ! ನೀವು ನಿಮ್ಮ ಸಹೋದರರಲ್ಲಿ ವಿಶೇಷವಾತ್ಸಲ್ಯವುಳ್ಳವರಲ್ಲವೆ? ಆದುದರಿಂದ ನಿಮ್ಮ ಸಹೋದರರ ಮಾರ್ಗವನ್ನೇ ನೀವೂ ಅನುಸರಿಸಿ ಹೋಗಬೇಕಾದುದು ಯುಕ್ತವು! ಅದೇ ನಿಮಗೆ ಶ್ರೇಯಸ್ಕರವಾದ ದಾರಿಯು! ಲೋಕದಲ್ಲಿ ಯಾವನು ಧರ್ಮಸೂಕ್ಷ್ಮವನ್ನು ತಿಳಿದು ತನ್ನ ಜ್ಯೇಷ್ಠಸಹೋದರರು ನಡೆದ ಧರ್ಮಮಾರ್ಗವನ್ನೇ ಅನುವರ್ತಿಸುವನೋ ಅವನು ತನ್ನ ಪುಣ್ಯಬಲದಿಂದ ಉತ್ತಮಗತಿಯನ್ನು ಹೊಂದಿ ದೇವತೆಗಳೊಡನೆ ಸೇರಿ ಸುಖಿಸುವನು" ಮಹಾತ್ಮನಾದ ನಾರದನು ಇಷ್ಟುಮಾತ್ರವನ್ನು ಹೇಳಿ ಹೊರಟುಹೋದನು. ಶಬಲಾಶ್ವರಿಗೆ ನಾರದನ ಮಾತಿನಲ್ಲಿ ನಂಬಿಕೆಯು ಹುಟ್ಟಿ, ಅವರೂ ತಮ್ಮ ಅಣ್ಣಂದಿರಂತೆ ಪ್ರಜಾಭಿಲಾಷೆಯನ್ನು ಬಿಟ್ಟು, ವಿರಕ್ತಿಮಾರ್ಗದಿಂದ ನಿವೃತ್ತಿಧರ್ಮವನ್ನೇ ಹಿಡಿದರು. ಮೊದಲು ಅವರು ಬ್ರಹ್ಮಾತ್ಮಕವಾದ ಆತ್ಮಸ್ವರೂಪವನ್ನು ಜ್ಞಾನಯೋಗದಿಂದ ತಿಳಿದು, ದೇಹಸಂಬಂಧವನ್ನು ನೀಗಿದರು. ಸ್ವಯಂಪ್ರಕಾಶನಾದ ಜೀವನು ಆತಿವಾಹಿಕರೊಡನೆ ಪ್ರಯಾಣಮಾಡತಕ್ಕುದಾಗಿಯೂ, ಪರಮಪುರುಷನ ಸಾನ್ನಿಧ್ಯವನ್ನು ಸೇರಿಸತಕ್ಕುದಾಗಿಯೂ ಇರುವ ಅರ್ಚಿರಾದಿಮಾರ್ಗದಿಂದ ಹೊರಟು, ಕಳೆದುಹೋದರಾತ್ರಿಗಳಂತೆ ಪುನರಾವೃತ್ತಿಯಿಲ್ಲದ ಮೋಕ್ಷದಲ್ಲಿರುವರು.

ಇತ್ತಲಾಗಿ ದಕ್ಷನಿಗೆ ಅನೇಕದುಶ್ಶಕುನಗಳು ಕಂಡುಬಂದುವು. ಇದರ ಕಾರಣವನ್ನು ವಿಚಾರಿಸುವಾಗ, ತನ್ನ ಹಿಂದಿನ ಮಕ್ಕಳಂತೆಯೇ ಶಬಲಾಶ್ವ




1153. ದಕ್ಷನ ಮಕ್ಕಳಾದ ಶಬಲಾಶ್ವರು ತಪಸ್ಸು ಮಾಡುತಿದ್ದಾಗ, ನಾರದನು ಅವರಿಗೆ ನಿವೃತ್ತಿಮಾರ್ಗವನ್ನು ಬೋಧಿಸಿದುದು. ದಕ್ಷನು ಅದಕ್ಕಾಗಿ ಕೋಪಗೊಂಡು ನಾರದನನ್ನು ಶಪಿಸಿದುದು.

ರೂ ನಾರದನ. ಉಪದೇಶದಿಂದ ದೇಹತ್ಯಾಗವನ್ನು ಮಾಡಿದುದಾಗಿ ತಿಳಿಯ
ಬಂದಿತು. ಆ ದಕ್ಷನು ಪುತ್ರಶೋಕದಿಂದ ತಪಿಸುತ್ತಿದ್ದಾಗ, ದೈವಿಕವಾಗಿ
ನಾರದನೂ ಬಂದುಸೇರಿದನು. ಇವನನ್ನು ಕಂಡೊಡನೆ ದಕ್ಷನು, ಅತ್ಯಾಗ್ರ
ಹದಿಂದುರಿಯುತ್ತ, "ನಾರದಾ! ನೀನು ಹೊರಕ್ಕೆಮಾತ್ರ ಸಾಧುವೇಷದಿಂ
ದ ತಿರುಗುತ್ತಿರುವೆಯೇ ಹೊರತು, ನಿನ್ನಲ್ಲಿ ಸ್ವಲ್ಪಮಾತ್ರವೂ ಸಾಧುಗುಣವಿ
ಲ್ಲ. ನೀನು ಕೇವಲ ಕಪಟಿ! ನನ್ನ ಮಕ್ಕಳಿಗೆ ದುರ್ಬೋಧನೆಗಳನ್ನು ಮಾಡಿ ಅ
ನ್ಯಾಯವಾಗಿ ಅವರನ್ನು ಕೆಡಿಸಿದೆಯಲ್ಲಾ! ಸ್ವಧರ್ಮದಲ್ಲಿದ್ದವರಿಗೆ ದುರು
ಪದೇಶವನ್ನು ಮಾಡಿ ಸನ್ಯಾಸಿಗಳ ಮಾರ್ಗದಲ್ಲಿ ತಳ್ಳಿದೆಯಲ್ಲವೆ? ಅಯ್ಯೋ!
ನಿನ್ನಿಂದ ನನ್ನ ಮಕ್ಕಳು ಎಲ್ಲಾವಿಧದಿಂದಲೂ ಕೆಟ್ಟುಹೋದರು! ಅವರು
ಕರ್ಮಪ್ರತಿಪಾದಕಗಳಾದ ವೇದಶಾಸ್ತ್ರಾಭ್ಯಾಸಗಳಿಂದ ಋಷಿಗಳ ಸಾಲವ
ನ್ನೂ ತೀರಿಸಲಿಲ್ಲ! ಸಂತಾನವನ್ನು ಪಡೆದು ಪಿತೃಋಣವನ್ನೂ ತೀರಿಸಲಿಲ್ಲ! ಯ
ಜ್ಞಯಾಗಾದಿಗಳಿಂದ ದೇವತೆಗಳ ಋಣವನ್ನೂ ತೀರಿಸಲಿಲ್ಲ! ಲೋಕದಲ್ಲಿ
ಮನುಷ್ಯಜನ್ಮವನ್ನೆತ್ತಿದಮೇಲೆ, ಅವಶ್ಯವಾಗಿ ತೀರಿಸಬೇಕಾದ ದೇವರ್ಷಿಪಿ
ತೃಋಣಗಳೆಂಬ ಈ ಮೂರುಸಾಲಗಳನ್ನೂ ತೀರಿಸುವುದಕ್ಕೆ ಮೊದಲೇ ನನ್ನ
ಮಕ್ಕಳನ್ನು ನೀನು ಹಾಳುಮಾಡಿದೆ! ಎಲಪಾಪೀ! ಅವರಿಗೆ ಇಹಲೋಕ ಪ
ರಲೋಕಗಳೆರಡರಲ್ಲಿಯೂ ಕ್ಷೇಮವಿಲ್ಲದಂತೆ ಮಾಡಿದೆಯಲ್ಲಾ! ಲೋಕದ
ಲ್ಲಿನಿನ್ನಂತೆ ನಿರ್ಘೃಣರಾರುಂಟು! ಅರಿಯದ ಮಕ್ಕಳನ್ನು ಅನ್ಯಾಯವಾಗಿ ಕೆಡಿ
ಸಿದ ನೀನು, ಆ ಭಗವಂತನ ಕೀರ್ತಿಯನ್ನು ಕೆಡಿಸುವುದಕ್ಕಾಗಿಯೇ, ಭಗವ
ದ್ಭಕ್ತನೆಂಬ ವೇಷದಿಂದ ತಿರುಗುವಂತಿದೆ! ಅಯ್ಯೋ! ನೀನು ನಾಚಿಕೆಯಿಲ್ಲ
ದೆ ಭಗವದ್ಭಕ್ತರಾದ ಸಾಧುಗಳ ಗುಂಪಿನಲ್ಲಿ ಹೇಗೆ ನಿಲ್ಲುವೆ? ನಿನಗೆ ಕಲಹಪ್ರಿ
ಯನೆಂಬ ಹೆಸರು ಉಚಿತವಾಗಿಯೇ ಇರುವುದು! ಭಗವದ್ಭಕ್ತರಲ್ಲಿ ಬೇರೆಯಾ
ರೂನಿನ್ನಂತೆ ದಯಾಶೂನ್ಯರಾಗಿಲ್ಲ! ಅವರೆಲ್ಲರೂ ಯಾವಾಗಲೂ ಇತರಭೂ
ತಗಳಿಗೆ ಹಿತವನ್ನೇ ಕೋರತಕ್ಕವರು. ಪ್ರಾಣಿಗಳಿಗೆ ಕೇಡನ್ನೇ ಹುಡುಕು
ತ್ತಿರುವ ನೀನು, ಅಂತಹ ಮಹಾತ್ಮರ! ಗುಂಪಿನಲ್ಲಿ ನಾಚಿಕೆಯಿಲ್ಲದೆ ಹೇಗೆ
ತಾನೇ ತಿರುಗುವೆ? ಆದರೆ ಪ್ರಾಣಿಗಳಿಗೆ ಶಬ್ದಾದಿವಿಷಯಗಳಲ್ಲಿರತಕ್ಕದುಃಖ
ವನ್ನು ತಿಳಿಸಿ, ವೈರಾಗ್ಯವನ್ನು ಹುಟ್ಟಿಸುವುದಾಗಿ ನೀನು ತಿಳಿದಿರಬಹುದು.

ಸಾಧುಗಳಂತೆ ವೇಷಧಾರಿಯಾಗಿ ತಿರುಗುತ್ತ, ಅರಿಯದ ಮಕ್ಕಳ ಬುದ್ಧಿ ಯನ್ನು ಕೆಡಿಸಿದಮಾತ್ರಕ್ಕೆ ಅವರು ವಿರಕ್ತರಾಗುವರೆ? ಎಂದಿಗೂ ಇಲ್ಲ! ಇದರಿಂದ ಅವರಿಗೆ ಸರಿಯಾದ ಜ್ಞಾನೋದಯವೂ ಆಗಲಾರದು ತಾವಾ ಗಿಯೇ ಅನುಭವಿಸಿ ತಿಳಿಯುವುದರಿಂದ ಹುಟ್ಟುವಷ್ಟು ಜ್ಞಾನವು, ಬೇರೆಯ ವರ ಉಪದೇಶದಿಂದ ಹುಟ್ಟಲಾರದು. ಮನುಷ್ಯನು ವಿಷಯೋಪಭೋಗ ಗಳಲ್ಲಿ ಬಿದ್ದು, ಅದರಲ್ಲಿರುವ ದುಃಖಗಳನ್ನು ಚೆನ್ನಾಗಿ ತಿಳಿದು, ತಾನಾಗಿ ಯೇ ವಿರಕ್ತಿಹೊಂದಿದರೆ, ಆ ವೈರಾಗ್ಯವು ಸ್ಥಿರವಾಗಿ ನಿಲ್ಲುವಂತೆ, ಮತ್ತೊ ಬ್ಬರ ದುರ್ಬೋಧನೆಯಿಂದ ಬುದ್ಧಿಯು ಕದಲಿದಮಾತ್ರಕ್ಕೆ ಸ್ಥಿರವಾದ ವೈ ರಾಗ್ಯವು ಹುಟ್ಟಲಾರದು! ಆದುದರಿಂದ ನಾರದಾ! ಬೇರೊಬ್ಬರಿಗೆಕೇಡ ನ್ನು ಬಯಸದೆ, ಗೃಹಸ್ಥಧರ್ಮದಲ್ಲಿ ಕರ್ಮನಿರತರಾಗಿರುವ ನಮಗೆ ಅನ್ಯಾಯ ವಾಗಿ ಮಹಾಪಕಾರವನ್ನು ಮಾಡಿದೆಯಲ್ಲಾ! ನಾವು ಇದನ್ನು ಸಹಿಸಲಾ ರೆವು. ಎಲೆ ಮೂಢಾ! ಅನ್ಯಾಯವಾಗಿ ನಮ್ಮ ಸಂತತಿಯನ್ನು ಕೆಡಿಸಿದ ನೀನು, ಕ್ಷಣಮಾತ್ರವೂ ಒಂದು ಸ್ಥಳದಲ್ಲಿ ನೆಲೆಯಾಗಿ ನಿಲ್ಲದೆ ಪರದೇಶಿ ಯಂತೆ ಸುತ್ತುತ್ತಿರು" ಎಂದು ಶಪಿಸಿದನು. ಓ ಪರೀಕ್ಷಿದ್ರಾಜಾ! ದಕ್ಷ ನು ಹೀಗೆ ಕೋಪದಿಂದ ಶಪಿಸಿದರೂ, ಸಾಧುಸಮ್ಮತನಾದ ನಾರದನು, ಆಶಾಪವನ್ನು ಗೌರವಪೂರ್ವಕವಾಗಿ ಸ್ವೀಕರಿಸಿದನೇಹೊರತು ಕೋಪಿಸ ಲಿಲ್ಲ. ಆಗಲೇ ಅವನು ಪ್ರತಿಶಾಪವನ್ನು ಕೊಡುವುದಕ್ಕೆ ಸಮರ್ಥನಾಗಿದ್ದ ರೂ ಬಾಯೆತ್ತದೆ ತಾಳ್ಮೆಯಿಂದಿದ್ದನು. ಹೀಗೆ ಲೋಕದಲ್ಲಿ ಯಾವನು ತನ ಗೆ ಶಕ್ತಿಯಿದ್ದರೂ ತಾಳ್ಮೆಯನ್ನು ತಂದುಕೊಳ್ಳುವನೋ ಅವನೇ ಸಾಧು ವೆನಿಸುವನು! ನಾರದನ ಸಾಧುತ್ವವು ಇದರಿಂದ ವ್ಯಕ್ತವಾಗುವುದು. ಇಲ್ಲಿ ಗೆ ಐದನೆಯ ಅಧ್ಯಾಯವು.

---

{ಶುಕಮುನಿಯು ದಕ್ಷನ ಮತ್ತು ಕಶ್ಯಪನ ಸಂತತಿಕ್ರಮವನ್ನು ತಿಳಿಸಿದುದು.}

ರಾಜಾ! ಕೇಳು! ದಕ್ಷನು ಪುತ್ರಮರಣದಿಂದ ದುಃಖಿಸುತ್ತಿರುವುದ ನ್ನು ತಿಳಿದು, ಚತುರ್ಮುಖನು ಅವನ ಬಳಿಗೆ ಬಂದು, ಅವನಿಗೆ ದಃಖಿಸ

ಮಾಧಾನವನ್ನು ಮಾಡಿ, ಮುಂದೆ ಪ್ರಜಾಸೃಷ್ಟಿಗೆ ಉಪಾಯವನ್ನು ತಿಳಿಸಿದನು. ಅದರಂತೆ ದಕ್ಷನು ಮನಶ್ಶಾಂತಿಯನ್ನು ಹೊಂದಿ, ಅಸಿಕ್ನಿಯೆಂಬ ಪತ್ನಿಯಲ್ಲಿ ಪಿತೃವತ್ಸಲೆಯರಾದ ಅರುವತ್ತುಮಂದಿ ಕನ್ಯೆಯರನ್ನು ಪಡೆದನು. ಅವರಲ್ಲಿ ಹತ್ತುಮಂದಿಯನ್ನು ಧರ್ಮನಿಗೆ ವಿವಾಹಮಾಡಿಕೊಟ್ಟನು. ಬೇರೆ ಹದಿಮೂರುಮಂದಿ ಕನ್ಯೆಯರನ್ನು ಕಶ್ಯಪನಿಗೂ, ಇಪ್ಪತ್ತೇಳುಮಂದಿ ಕನ್ಯೆಯರನ್ನು ಚಂದ್ರನಿಗೂ ಕೊಟ್ಟು ವಿವಾಹಮಾಡಿದನು. ಉಳಿದ ಹತ್ತು ಕುಮಾರಿಯರಲ್ಲಿ ಭೂತನಿಗೆ ಇಬ್ಬರನ್ನೂ, ಅಂಗಿರಸ್ಸಿಗೆ ಇಬ್ಬರನ್ನೂ, ಕೃಶಾಶ್ವನಿಗೆ ಇಬ್ಬರನ್ನೂ ಕೊಟ್ಟನು. ಈ ದಕ್ಷಕನ್ಯೆಯರಿಂದ ಹುಟ್ಟಿದ ಸಂತಾನವೇ ಮೂರುಲೋಕವನ್ನೂ ವ್ಯಾಪಿಸಿರುವುದು. ಈ ದಕ್ಷಕನ್ಯೆಯರಲ್ಲಿ ಒಬ್ಬೊಬ್ಬರ ಹೆಸರನ್ನೂ, ಅವರಿಂದುಂಟಾದ ಸಂತತಿಯನ್ನೂ, ಆಯಾಸಂತತಿಯಲ್ಲಿ ಪ್ರಮುಖರಾದವರ ಹೆಸರನ್ನೂ ತಿಳಿಸುವೆನು ಕೇಳು! ಧರ್ಮನಿಗೆ ವಿವಾಹಮಾಡಿಕೊಟ್ಟ ಹತ್ತುಮಂದಿ ದಕ್ಷಕನ್ಯೆಯರಿಗೂ ಕ್ರಮವಾಗಿ, ಭಾನು, ಲಂಬೆ, ಕಕುಭೆ, ಜಾಮಿ, ವಿಶ್ವೆ, ಸಾಧ್ಯೆ, ಮರುತ್ವತಿ, ವಸು, ಮುಹೂರ್ತೆ, ಸಂಕಲ್ಪೆಯೆಂದು ಹೆಸರು. ಇವರಲ್ಲಿ ಭಾನುವೆಂಬವಳಿಂದ, ವೇದನೆಂದೂ, ಋಷಭನೆಂದೂ ಇಬ್ಬರು ಕುಮಾರರು ಹುಟ್ಟಿದರು. ಆ ಋಷಭನಿಗೆ ಇಂದ್ರಸೇನನೆಂಬ ಮಗನು ಹುಟ್ಟಿದನು. ಧರ್ಮನ ಎರಡನೆಯ ಪತ್ನಿಯಾದ ಲಂಬೆಯಲ್ಲಿ ವಿದ್ಯೋತನೆಂಬ ಪುತ್ರನು ಜನಿಸಿದನು. ಈ ವಿದ್ಯೋತನಿಗೆ ಸ್ತನಯಿತ್ನುಗಳೆಂಬ ಕೆಲವು ಪುತ್ರರು ಹುಟ್ಟಿದರು. ಮೂರನೆಯಪತ್ನಿಯಾದ ಕಕುಭೆಯೆಂಬವಳಲ್ಲಿ ಕೀಕಟನೆಂಬ ಪುತ್ರನು ಜನಿಸಿದನು. ಈ ಕೀಕಟನಿಗೆ ಸಂಕಟನೆಂಬ ಪುತ್ರನು ಹುಟ್ಟಿದನು. ನಾಲ್ಕನೆಯ ಪತ್ನಿಯಾದ ಜಾಮಿಯಲ್ಲಿ ದುರ್ಗಾಭಿಮಾನಿದೇವತೆಗಳೆಂಬ ಕೆಲವರು ಹುಟ್ಟಿದರು. ಇವರಿಂದ ಸ್ವರ್ಗನೆಂದೂ, ನಂದಿಯೆಂದೂ ಇಬ್ಬರು ಕುಮಾರರು ಜನಿಸಿದರು. ಐದನೆಯ ಭಾರ್ಯೆಯಾದ ವಿಶ್ವೆಯೆಂಬವಳಲ್ಲಿ ವಿಶ್ವೇದೇವತೆಗಳು ಹುಟ್ಟಿದರು. ಇವರಿಗೆ ಸಂತಾನವಿಲ್ಲವೆಂದು ಹೇಳುವರು. ಸಾಧ್ಯೆಯೆಂಬ ಐದನೆಯವಳಲ್ಲಿ ಸಾಧ್ಯರೆಂಬ ದೇವತೆಗಳು ಹುಟ್ಟಿ, ಅವರಿಂದ ಅರ್ಥಸಿದ್ಧನೆಂಬ ಮಗನು ಜನಿಸಿದನು. ಮರುತ್ವತಿಯೆಂಬ ಎಂಟನೆಯ ಭಾರ್ಯೆಯಲ್ಲಿ ಮ

ರುದ್ವಂತನೆಂದೂ, ಜಯಂತನೆಂದೂ ಇಬ್ಬರು ಮಕ್ಕಳು ಜನಿಸಿದರು. ಈ ಜಯಂತನು ಭಗವಂತನ ಅಂಶದಿಂದ ಹುಟ್ಟಿದವನು. ಇವನನ್ನು ಉಪೇಂದ್ರನೆಂದೂ ಹೇಳುವರು. ಮುಹೂರ್ತೆಯಲ್ಲಿ ಮೌಹೂರ್ತಿಕರೆಂಬ ಕೆಲವು ದೇವಗಣಗಳು ಹುಟ್ಟಿದುವು. ಇವರೇ ಮುಹೂರ್ತಾಭಿಮಾನಿ ದೇವತೆಗಳು. ಪ್ರಾಣಿಗಳಿಗೆ ಆಯಾ ಮುಹೂರ್ತಸಂಬಂಧದಿಂದುಂಟಾಗತಕ್ಕ ಸುಖದುಃಖಗಳನ್ನು ಇವರೇ ಕೊಡತಕ್ಕವರು. ಸಂಕಲ್ಪೆಯೆಂಬವಳ ಗರ್ಭದಲ್ಲಿ ಸಂಕಲ್ಪನೆಂಬವನು ಜನಿಸಿ, ಕಾಮನೆಂಬ ಕುಮಾರನನ್ನು ಪಡೆದನು. ವಸುವೆಂಬವಳ ಗರ್ಭದಲ್ಲಿ ಅಷ್ಟವಸುಗಳು ಜನಿಸಿದರು. ಇವರಿಗೆ ಕ್ರಮವಾಗಿ ದ್ರೋಣ, ಪ್ರಾಣ, ಧ್ರುವ, ಅರ್ಕ, ಅಗ್ನಿ, ದೋಷ, ವಸು, ವಿಭಾವಸುಗಳೆಂದು ಹೆಸರು. ಇವರಲ್ಲಿ ದ್ರೋಣಪತ್ನಿಯಾದ ಅಭಿಮತಿಯೆಂಬವಳಿಗೆ ಹರ್ಷ ಶೋಕ ಭಯ ಮೊದಲಾದ ಮಕ್ಕಳು ಹುಟ್ಟಿದರು. ಪ್ರಾಣನ ಪತ್ನಿಯಾದ ಊರ್ಜಸ್ವತಿಯಲ್ಲಿ ಸಹನೆಂದೂ, ಆಯುವೆಂದೂ, ಪುರೋಜವನೆಂದೂ ಮೂವರು ಮಕ್ಕಳಾದರು ಧ್ರುವಪತ್ನಿಯಾದ ಧರಣಿಯೆಂಬವಳು ಹಲವು ಮಂದಿ ಪುರಾಭಿಮಾನಿದೇವತೆಗಳನ್ನು ಪಡೆದಳು. ಅರ್ಕಭಾರ್ಯೆಯಾದ ಅಶನೆಯೆಂಬವಳು ದರ್ಪನೇ ಮೊದಲಾದ ಕೆಲವು ಮಕ್ಕಳನ್ನು ಹಡೆದಳು. ಅಗ್ನಿಪತ್ನಿಯಾದ ವಸುಧಾರೆಯೆಂಬವಳಿಗೆ ದ್ರವಿಣನೇ ಮೊದಲಾದ ಕೆಲವು ಮಕ್ಕಳು ಹುಟ್ಟಿದರು. ಈ ಅಗ್ನಿಗೆ ಕೃತ್ತಿಕೆಯೆಂಬ ಭಾರ್ಯೆಯಲ್ಲಿ ಸ್ಕಂದನು ಹುಟ್ಟಿದನು. ವಿಶಾಖ ಮೊದಲಾದವರು ಈ ಸ್ಕಂದನ ಮಕ್ಕಳು. ದೋಷನ ಪತ್ನಿಯಾದ ಶರ್ವರಿಯೆಂಬವಳಲ್ಲಿ ಶಿಂಶುಮಾರನು ಹುಟ್ಟಿದನು. ಇವನೂ ಭಗವಂತನ ಅಂಶಭೂತನು. ವಸುಪತ್ನಿಯಾದ ಆಂಗಿರಸಿಯಲ್ಲಿ ವಿಶ್ವಕರ್ಮನು ಹುಟ್ಟಿದನು. ಇವನೇ ದೇವತೆಗಳಿಗೆ ಶಿಲ್ಪಿ ಇವನ ಮಗನು ಚಾಕ್ಷುಷಮನುವು. ಈ ಮನುವಿನಿಂದ ವಿಶ್ವರೆಂದೂ, ಸಾಧ್ಯರೆಂದೂ ಕರೆಯಲ್ಪಡುವ ಕೆಲವು ಮಕ್ಕಳು ಹುಟ್ಟಿದರು. ವಿಭಾವಸುಪತ್ನಿಯಾದ ಉಷೆಯೆಂಬವಳಲ್ಲಿ ವ್ಯುಷ್ಟನೆಂದೂ, ರೋಚಿಷನೆಂದೂ, ಆತಪನೆಂದೂ ಮೂವರು ಮಕ್ಕಳು ಹುಟ್ಟಿದರು ಇವರಲ್ಲಿ ಆತಪನೆಂಬವನ ಮಗನು ಪಂಚಯಾಮನು. ಇವನು ಹಗಲಿಗೆ ಅಭಿಮಾನಿದೇವತೆಯೆನಿಸಿಕೊಂಡನು. ಇವ

ನಿಂದಲೇ ಪ್ರಜೆಗಳು ತಮ್ಮತಮ್ಮ ಕಾರ್ಯಗಳಲ್ಲಿ ಎಚ್ಚರಗೊಳ್ಳುತ್ತಿರುವರು ಓ ರಾಜೇಂದ್ರಾ ! ಧರ್ಮನಿಗೆ ಕೊಟ್ಟ ಹತ್ತುಮಂದಿ ದಕ್ಷಪುತ್ರಿಯರಿಂದ ಹುಟ್ಟಿದ ಸಂತಾನವನ್ನು ತಿಳಿದೆಯಷ್ಟೆ? ಕಶ್ಯಪನಿಗೂ, ಚಂದ್ರನಿಗೂ ವಿವಾಹಿತರಾದ ದಕ್ಷಕನ್ಯೆಯರ ಸಂತಾನವನ್ನು ಮುಂದೆ ವಿವರಿಸುವೆನು. ರುದ್ರನಿಗೆ ವಿವಾಹಿತರಾದ ಇಬ್ಬರು ದಕ್ಷಪುತ್ರಿಯರಲ್ಲಿ, ಒಬ್ಬಳಿಗೆ ಸರೂಪೆಯೆಂದು ಹೆಸರು. ಇವಳು ರುದ್ರಗಣಗಳೆಂಬ ಕೋಟಿಪುತ್ರರನ್ನು ಹಡೆದಳು. ಆ ರುದ್ರಗಣಗಳಲ್ಲಿ ಹನ್ನೊಂದುಮಂದಿ ಪ್ರಧಾನನಾಯಕರಾದರು. ಅವರಿಗೆ ಕ್ರಮವಾಗಿ, ರೈವತ, ಅಜ, ಭವ, ಭೀಮ, ವಾಮ, ಉಗ್ರ, ವೃಷಾಕಪಿ, ಅಜೈಕಪಾದ, ಅಹಿರ್ಬುಧ್ನ್ಯ, ಬಹುರೂಪ, ಮಹಾಂತರೆಂದು ಹೆಸರು. ಇವರೇ ಏಕಾದಶರುದ್ರರೆಂದು ಕರೆಯಲ್ಪಡುವರು. ಇವರಲ್ಲದೆ ರುದ್ರನ ಪಾರ್ಷದಗಣಗಳಲ್ಲಿ ಪ್ರೇತರೆಂದೂ, ವಿನಾಯಕರೆಂದೂ, ಕರೆಯಲ್ಪಡುವ ಭಯಂಕರರೂಪಿಗಳಾದ ಕೆಲವು ಗಣಗಳುಂಟು. ಇವರೆಲ್ಲರೂ ಆ ರುದ್ರನ ಮತ್ತೊಬ್ಬಪತ್ನಿಯಲ್ಲಿ ಹುಟ್ಟಿದವರು. ಅಂಗಿರಸ್ಸನ್ನು ಮದುವೆಯಾದ ದಕ್ಷಪುತ್ರಿಯರಿಬ್ಬರಿಗೆ ಸ್ವಧೆಯೆಂದೂ, ಸತಿಯೆಂದೂ ಹೆಸರು. ಸ್ವಧೆಯೆಂಬವಳಲ್ಲಿ ಪಿತೃದೇವತೆಗಳೂ, ಸತಿಯೆಂಬವಳಲ್ಲಿ ಅಥರ್ವಾಂಗಿರಸರೆಂಬ ವೇದಾಭಿಮಾನಿದೇವತೆಗಳೂ ಹುಟ್ಟಿದರು. ಕೃಶಾಶ್ವನಿಗೆ ಅರ್ಚಿಸ್ಸೆಂದೂ, ಭೀಷಣೆಯೆಂದೂ ಇಬ್ಬರು ಪತ್ನಿಯರು. ಇವರಲ್ಲಿ ಅರ್ಚಿಸ್ಸಿಗೆ ಧೂಮ್ರಕೇಶನೆಂಬ ಮಗನೂ, ಭೀಷಣೆಯೆಂಬವಳಿಗೆ ವೇದಶಿರಸ್ಸು, ದೇವಲ, ವೈನ, ಮನುವೆಂಬ ನಾಲ್ಕು ಮಕ್ಕಳೂ ಹುಟ್ಟಿದರು. ದಕ್ಷನು ತಾರ್ಕ್ಷ್ಯನಿಗೆ ಕೊಟ್ಟು ವಿವಾಹಮಾಡಿದ ನಾಲ್ವರು ಕುಮಾರಿಯರಿಗೆ, ಕ್ರಮವಾಗಿ ಪತಂಗಿಯೆಂದೂ, ಯಾಮಿನಿಯೆಂದೂ,. ಸುಪರ್ಣೆ (ಅಥವಾ ವಿನತೆ)ಯೆಂದೂ, ಕದ್ರುವೆಂದೂ ಹೆಸರು. ಈ ನಾಲ್ವರಲ್ಲಿ ಪತಂಗಿಯಿಂದ ಪಕ್ಷಿಜಾತಿಗಳೂ, ಯಾಮಿನಿಯಿಂದ ಶಲಭಗಳೂ, ವಿನತೆಯಿಂದ ವಿಷ್ಣುವಾಹನನಾದ ಗರುಡನೂ, ಮತ್ತು ಸೂರ್ಯಸಾರಥಿಯಾದ ಅರುಣನೂ, ಕದ್ರುವಿನಿಂದ ನಾನಾಜಾತಿಯ ಸರ್ಪಗಳೂ ಉದ್ಭವಿಸಿದುವು. ಓ ಪರೀಕ್ಷಿದ್ರಾಜಾ ! ಕೃತ್ತಿಕೆ ಮೊದಲಾದ ಇಪ್ಪತ್ತೇಳು ನಕ್ಷತ್ರಗಳೂ ಚಂದ್ರನ ಪತ್ನಿಯರು. ದಕ್ಷನು ಚಂದ್ರನಿಗೆ

ಈ ಮಕ್ಕಳನ್ನು ವಿವಾಹಮಾಡಿಕೊಡುವಾಗ, ಎಲ್ಲರಲ್ಲಿಯೂ ಸಮಾನ ಪ್ರೇಮವನ್ನು ತೋರಿಸಬೇಕೆಂದು ಚಂದ್ರನಿಂದ ವಾಗ್ದಾನವನ್ನು ಪಡೆದಿದ್ದನು ಹೀಗಿದ್ದರೂ ಚಂದ್ರನು ಆಡಿದ ಮಾತಿಗೆ ತಪ್ಪಿ, ರೋಹಿಣಿಯೆಂಬವಳಲ್ಲಿ ಹೆಚ್ಚು ಪಕ್ಷಪಾತವನ್ನು ತೋರಿಸುತಿದ್ದನು ಇದಕ್ಕಾಗಿ ದಕ್ಷನು ಕೋಪಿಸಿ, ಆ ಚಂದ್ರನಿಗೆ ಕ್ಷಯರೋಗವುಂಟಾಗುವಂತೆ ಶಪಿಸಿದನು. ಇದಕ್ಕಾಗಿಯೇ ಚಂದ್ರನು ಕೃಷ್ಣಪಕ್ಷದಲ್ಲಿ ಕಳೆಗುಂದುವುದಲ್ಲದೆ, ಕೃತ್ತಿಕೆ ಮೊದಲಾದವರಲ್ಲಿ ಸಂತಾನವನ್ನೂ ಪಡೆಯಲಾರದೆ ಹೋದನು ಆಮೇಲೆ ಚಂದ್ರನು ದಕ್ಷನಲ್ಲಿ ಮನ್ನಣೆಯನ್ನು ಬೇಡಿ, ಅವನನ್ನು ಪ್ರಸನ್ನನನ್ನಾಗಿ ಮಾಡಿಕೊಂಡು, ಕೃಷ್ಣಪಕ್ಷದಲ್ಲಿ ಕುಂದಿಹೋದ ಕಳೆಗಳನ್ನು ತಿರುಗಿ ಪಡೆಯುವಂತೆ ವರವನ್ನು ಪಡೆದನು. ರಾಜೇಂದ್ರಾ ! ಕಶ್ಯಪನ ಭಾರ್ಯೆಯರಿಂದ ಹುಟ್ಟಿದ ಸಂತಾನದಿಂದ, ಪ್ರಾಯಕವಾಗಿ ಈ ಜಗತ್ತೆಲ್ಲವೂ ತುಂಬಿ ಹೋಗಿರುವುದು. ಆ ಕಶ್ಯಪಪತ್ನಿಯರಿಗೆ ಕ್ರಮವಾಗಿ ಅದಿತಿ, ದಿತಿ, ದನು, ಕಾಷ್ಠೆ ಅರಿಷ್ಟೆ, ಸುರಸೆ, ಇಳೆ, ಮುನಿ ಕ್ರೋಧವಶೆ, ತಾಮ್ರೆ, ಸುರಭಿ, ಸರಮೆ, ತಿಮಿ, ಎಂದು ಹೆಸರು. ಇವರಲ್ಲಿ ತಿಮಿಯಿಂದ ಜಲಜಂತುಗಳೆಲ್ಲವೂ ಹುಟ್ಟಿದುವು. ಸರಮೆಯಿಂದ ನಾಯಿ,ಹುಲಿ,ಬೆಕ್ಕು ಮುಂತಾದುವು ಹುಟ್ಟಿದುವು. ಸುರಭಿಯಿಂದ, ಎಮ್ಮೆ ಹಸು ಮತ್ತು ಸೀಳಿದ ಗೊರಸಲುಳ್ಳ ಇನ್ನೂ ಅನೇಕ ಮೃಗಗಳೂ ಹುಟ್ಟಿದುವು. ತಾಮ್ರೆಯಿಂದ ಹದ್ದು, ಗಿಡುಗ, ಮುಂತಾದುವೂ, ಮುನಿಯಿಂದ ಅಪ್ಸರಸ್ಸುಗಳೂ, ಕ್ರೋಧವಶೆಯಿಂದ ಕಚ್ಚುವಸ್ವಭಾವವುಳ್ಳ ಸರ್ಪಾದಿಗಳೂ, ಇಳೆಯಿಂದ ವೃಕ್ಷಜಾತಿಗಳೂ, ಸುರಸೆಯಿಂದ ಯಾತುಧಾನರೂ, ಅರಿಷ್ಟೆಯಿಂದ ಗಂಧರ್ವರೂ, ಕಾಷ್ಠೆಯಿಂದ ಕುದುರೆ, ಕತ್ತೆ, ಮುಂತಾದುವೂ ಹುಟ್ಟಿದುವು. ದನುವಿಗೆ ಅರುವತ್ತೊಂದುಮಂದಿ ಕುಮಾರರು ಹುಟ್ಟಿ, ಅವರಲ್ಲಿ ಹದಿನೆಂಟುಮಂದಿ ಪ್ರಧಾನರೆನಿಸಿಕೊಂಡರು. ಅವರಿಗೆ ಕ್ರಮವಾಗಿ, ದ್ವಿಮೂರ್ಧ, ಶಂಬರ, ಅರಿಷ್ಟ. ಹಯಗ್ರೀವ, ವಿಭಾವಸು, ಅಯೋಮುಖ, ಶಂಕುಶಿರಸ್ಕ, ಸ್ವರ್ಭಾನು, ಕಪಿಲ, ಅರುಣ, ಪುಲೋಮ, ವೃಷಪರ್ವ, ಏಕಚಕ್ರ, ಸುತಾಪನ, ಧೂಮ್ರಕೇಶ, ವಿರೂಪಾಕ್ಷ ವಿಪ್ರಚಿತ್ತಿ, ದುರ್ಜಯರೆಂದು ಹೆಸರು. ಇವರಲ್ಲಿ ಸ್ವರ್ಭಾನುವಿನ ಮಗಳಾ

ದ ಸುಪ್ರಭೆಯನ್ನು ನಮುಚಿಯೆಂಬವನೂ, ವೃಷಪರ್ವನ ಮಗಳಾದ ಶರ್ಮಿ
ಷ್ಠೆಯನ್ನು ನಹುಷಪುತ್ರನಾದ ಯಯಾತಿಯೂ ವಿವಾಹಮಾಡಿಕೊಂಡರು.
ವಸುಪುತ್ರನಾದ ವೈಶ್ವಾನರನಿಗೆ, ಉಪದಾನವಿ, ಹಯಶಿರಸ್ಸು, ಪುಲೋಮೆ
ಕಾಲಕೆಯೆಂದು ನಾಲ್ವರು ಕುಮಾರಿಯರಾದರು. ಇವರೆಲ್ಲರೂ ಬಹಳ ರೂ
ಪವತಿಯರು. ಇವರಲ್ಲಿ ಉಪದಾನವಿಯನ್ನು ಹಿರಣ್ಯಾಕ್ಷನೂ, ಹಯಶಿರಸ್ಸೆ
ನ್ನು ಕ್ರತುವೂ, ಪುಲೋಮೆ, ಕಾಲಕೆಯೆಂಬಿಬ್ಬರನ್ನೂ ಬ್ರಹ್ಮಾಜ್ಞೆಯಿಂದ
ಕಶ್ಯಪನೂ ವಿವಾಹಮಾಡಿಕೊಂಡರು. ಈ ಇಬ್ಬರು ಕಶ್ಯಪಪತ್ನಿಯರಲ್ಲಿ
ಪೌಲೋಮ ಕಾಲಕೇಯರೆಂಬ ಅರುವತ್ತುಸಾವಿರಮಂದಿ ದಾನವರು ಹು
ಟ್ಟಿದರು. ಇವರೆಲ್ಲರೂ ಯುದ್ಧಪ್ರಿಯರಾಗಿ, ಎಲ್ಲೆಲ್ಲಿಯೂ ತಡೆಯಿಲ್ಲದೆ ತಿರು
ಗುತ್ತ, ಯಜ್ಞಯಾಗಾದಿಗಳನ್ನು ಕೆಡಿಸುತಿದ್ದರು. ಓ ಪರೀಕ್ಷಿದ್ರಾಜಾ !
ಹಿಂದೊಮ್ಮೆ ನಿನ್ನ ಅಜ್ಜನಾದ ಅರ್ಜುನನು, ಕಾರ್ಯವಶದಿಂದ ಸ್ವರ್ಗಕ್ಕೆ
ಹೋಗಿದ್ದಾಗ, ಇಂದ್ರನ ಅನುಮತಿಯಿಂದ ಅವರೆಲ್ಲರನ್ನೂ ನಿರ್ಮೂಲ
ಮಾಡಿದನು. ವಿಪ್ರಚಿತ್ತಿಯು ಸಿಂಹಿಕೆಯನ್ನು ಮದುವೆಯಾಗಿ ನೂರುಮಂ
ದಿರಾಕ್ಷಸರನ್ನು ಪಡೆದನು. ಅವರಲ್ಲಿ ರಾಹುವೆಂಬವನೇ ಜ್ಯೇಷ್ಠನು ಇವನು
ದಾನವನಾಗಿದ್ದರೂ ಭಗವದನುಗ್ರಹದಿಂದ ನವಗ್ರಹಗಳಲ್ಲಿ ಒಬ್ಬನಾದನು.
ರಾಜಾ! ಇನ್ನು ಮೇಲೆ ಲೋಕಪ್ರಸಿದ್ಧವಾದ ಅದಿತಿವಂಶವನ್ನು ವಿವರಿಸುವೆನು
ಕೇಳು. ಇದರಲ್ಲಿ ಸಾಕ್ಷಾನ್ನಾರಾಯಣನೇ ಅವತರಿಸಿದುದರಿಂದ ಇದು ಬಹಳ
ಪವಿತ್ರವೆನಿಸಿರುವುದು. ಈ ಅದಿತಿಗೆ, ವಿವಸ್ವಂತ, ಅರ್ಯಮ, ಪೂಷ, ತ್ವಷ್ಟೃ
ಸವಿತೃ, ಭಗ, ಧಾತೃ, ವಿಧಾತೃ, ವರುಣ, ಮಿತ್ರ, ಶುಕ್ರ, ಉರುಕ್ರಮ
ರೆಂಬ ಹನ್ನೆರಡುಮಕ್ಕಳು ಹುಟ್ಟಿದರು. ಇವರಲ್ಲಿ ವಿವಸ್ವಂತನ ಭಾರ್ಯೆ
ಯಾದ ಸಂಜ್ಞೆಯೆಂಬವಳು ಶ್ರಾದ್ಧದೇವನೆಂದೂ, ಮನುವೆಂದೂ ಇಬ್ಬರು
ಕುಮಾರರನ್ನೂ, ಯಮಯಮಿಗಳೆಂಬ (ಗಂಡುಹೆಣ್ಣು) ಅವಳಿಮಕ್ಕಳನ್ನೂ
ಹಡೆದಳು. ಈ ಸಂಜ್ಞೆಯೇ ಸಮುದ್ರದಲ್ಲಿ ಬಡಬೆಯೆಂಬ ಹೆಣ್ಣುಕುದುರೆ
ಯಾಗಿದ್ದು ಅಶ್ವಿನೀದೇವತೆಗಳನ್ನು ಹಡೆದಳು. ಇವಳೇ ಛಾಯೆಯಾಗಿ
ಹುಟ್ಟಿ, ಶನೈಶ್ಚರನೆಂದೂ, ಸಾವರ್ಣಿಮನುವೆಂದೂ ಇಬ್ಬರು ಕುಮಾರರ
ನ್ನೂ, ತಪತಿಯೆಂಬ ಕುಮಾರಿಯನ್ನೂ ಪಡೆದಳು. ಈ ತಪತಿಯೆಂಬವಳು

ಸಂವರಣನನ್ನು ವರಿಸಿದಳು. ಅರ್ಯಮನಿಗೆ ಮಾತೃಕೆಯೆಂಬವಳು ಪತ್ನಿಯು. ಈ ದಂಪತಿಗಳಮೂಲಕವಾಗಿಯೇ ಬ್ರಹ್ಮನಿಂದ ಭೂಲೋಕದಲ್ಲಿ ಮನುಷ್ಯ ಜಾತಿಯು ಹರಡಲ್ಪಟ್ಟಿತು. ಈ ಮನುಷ್ಯಜಾತಿಯು ಕೆಲಸಮಾಡತಕ್ಕ ಸ್ವಭಾವವುಳ್ಳುದು. ಪೂಷನಿಗೆ ಸಂತತಿಯೇ ಇಲ್ಲವು. ಪೂರ್ವದಲ್ಲಿ ದಕ್ಷನು ರುದ್ರನನ್ನು ಅವಮಾನಪಡಿಸಿದಾಗ, ಅದನ್ನು ನೋಡಿ ಇವನು ದೊಡ್ಡ ದಾಗಿ ಹಲ್ಲುಬಿಟ್ಟು ನಕ್ಕುದರಿಂದ ರುದ್ರಗಣಗಳು ಕೋಪದಿಂದ ಅವನ ಹಲ್ಲುಗಳನ್ನು ದುರಿಸಿಬಿಟ್ಟುವು. ಆದುದರಿಂದ ಅವನಿಗೆ ಹಲ್ಲುಗಳಿಲ್ಲವು. ಬೊಚ್ಚು ಬಾಯುಳ್ಳ ಈತನು ಹಿಟ್ಟನ್ನುಹೊರತು ಬೇರೊಂದನ್ನೂ ತಿನ್ನಲಾರನು. ತ್ವಷ್ಟನಿಗೆ ದೈತ್ಯಸಹೋದರಿಯಾದ ರಸನೆಯೆಂಬವಳು ಪತ್ನಿಯು. ಇವರಿಬ್ಬ ರಿಗೂ ವೀರ್ಯವಂತನಾದ ವಿಶ್ವರೂಪನು ಹುಟ್ಟಿದನು ಹಿಂದೊಮ್ಮೆ ಬೃಹ ಸ್ಪತಿಯು, ಇಂದ್ರನಿಂದ ಅವಮಾನಿತನಾಗಿ ಸ್ವರ್ಗಲೋಕವನ್ನು ಬಿಟ್ಟು ಹೋದಾಗ, ದೇವತೆಗಳೆಲ್ಲರೂ ಸೇರಿ ದಾನವರಿಗೆ ಸೋದರಳಿಯನಾಗಿದ್ದ ಈ ವಿಶ್ವರೂಪನನ್ನೇ ತಮಗೆ ಪುರೋಹಿತನನ್ನಾಗಿ ಮಾಡಿಕೊಂಡಿದ್ದರು. ಇಲ್ಲಿಗೆ ಆರನೆಯ ಅಧ್ಯಾಯವು.

---

{ಇಂದ್ರನು ಬೃಹಸ್ಪತ್ಯಾಚಾರ್ಯರನ್ನು ತಿರಸ್ಕರಿಸಿ ದುದು. ದೇವತೆಗಳ ಪ್ರಾರ್ಥನೆಯಮೇಲೆ ವಿಶ್ವರೂ ಪನು ಅವರಿಗೆ ಪುರೋಹಿತನಾದುದು}

ಈ ನಡುವೆ ಪರೀಕ್ಷಿದ್ರಾಜನು ಶುಕಮುನಿಯನ್ನು ಕುರಿತು “ಓ ಮಹ ರ್ಷೀ! ಬೃಹಸ್ಪತಿಯು ದೇವತೆಗಳನ್ನು ಬಿಟ್ಟು ಹೋದುದೇಕೆ? ಅವನು ತನ್ನ ಶಿಷ್ಯರಾದ ದೇವತೆಗಳಲ್ಲಿ ಬಹಳಪ್ರೇಮವುಳ್ಳವನಾಗಿದ್ದವನಲ್ಲವೆ? ಆ ದೇವ ತೆಗಳಿಂದ ಯಾವುದೋ ಒಂದು ದೊಡ್ಡ ತಪ್ಪು ನಡೆದಿರಬೇಕು. ಅವರ ತಪ್ಪೇನೆಂಬುದನ್ನು ನನಗೆ ತಿಳಿಸು” ಎಂದನು. ಅದಕ್ಕಾ ಶುಕಮುನಿಯು “ರಾಜೇಂದ್ರಾ ಕೇಳು! ಇಂದ್ರನು ತ್ರೈಲೋಕ್ಯವನ್ನೂ ಏಕಾಧಿಪತ್ಯದಿಂದ ಆಳುತ್ತಿದ್ದಾಗ, ಅವನಿಗೆ ಮಿತಿಮೀರಿದ ಹೆಮ್ಮೆಯುಂಟಾಯಿತು. ಈ ಐಶ್ವರ್ಯ ಮದದಿಂದ ಹಿಂದುಮುಂದುತಿಳಿಯದೆ ಉನ್ಮಾರ್ಗದಲ್ಲಿ ಪ್ರವರ್ತಿಸುವುದಕ್ಕೆ ತೊಡಗಿದನು. ಒಮ್ಮೆ ಆದೇವೇಂದ್ರನು ಸಭೆಯಲ್ಲಿ ಕುಳಿತಿದ್ದಾಗ, ಏಕಾದಶರು

ದ್ರರೂ, ಅಷ್ಟವಸುಗಳೂ, ದ್ವಾದಶಾದಿತ್ಯರೂ, ಅನೇಕಮಹರ್ಷಿಗಳೂ, ವಿಶ್ವೇದೇವತೆಗಳೂ, ಸಾಧ್ಯರೂ, ಅಶ್ವಿನೀದೇವತೆಗಳೂ ಅವನನ್ನು ಸುತ್ತಿ ಸೇವಿಸುತಿದ್ದರು. ಮತ್ತು ಸಿದ್ಧಚಾರಣಗಂಧರ್ವಾದಿಗಳೂ, ಬ್ರಹ್ಮವಾದಿಗಳೂ,ವಿದ್ಯಾಧರರೂ, ಅಪ್ಸರಸ್ಸುಗಳೂ, ಕಿನ್ನರರೂ, ಪತಗರೂ,ನಾಗರೂ, ಅವನನ್ನು ಮನೋಹರವಾದ ಗಾನಗಳಿಂದ ಸ್ತುತಿಸುತಿದ್ದರು. ದೇವೇಂದ್ರನುಇಂತಹ ಮಹಾಸಭೆಯನಡುವೆ ರಾಜಸಿಂಹಾಸನದಮೇಲೆ ಬಹಳ ವೈಭವದಿಂದ ಕುಳಿತು, ತ್ರೈಲೋಕ್ಯರಾಜ್ಯಾಧಿಪತ್ಯಕ್ಕೆ ಸೂಚಕಗಳಾದ ಛತ್ರಚಾಮರಗಳೊಡನೆ, ತನ್ನ ಅರ್ಧಾಸನದಲ್ಲಿ ಶಚೀದೇವಿಯನ್ನೂ ಕುಳ್ಳಿರಿಸಿಕೊಂಡು, ಸಭೆಯನ್ನಲಂಕರಿಸಿದ್ದ ಕಾಲದಲ್ಲಿ, ಸಮಸ್ತದೇವತೆಗಳಿಗೂ ಗುರುವಾಗಿಯೂ, ಪರಮಪೂಜ್ಯನಾಗಿಯೂ ಇರುವ ಬೃಹಸ್ಪತಿಯು ಆ ಸಭಾಸ್ಥಾನವನ್ನು ಪ್ರವೇಶಿಸಿದನು. ಇವನನ್ನು ನೋಡಿಯೂ ಇಂದ್ರನು ಮೇಲೆದ್ದು ನಿಲ್ಲದೆ, ತಲೆಬಗ್ಗಿ ನಮಸ್ಕರಿಸದೆ, ಮದಾಂಧನಾಗಿ ಕುಳಿತಿದ್ದನು! ಇದನ್ನು ಕಂಡು ಬೃಹಸ್ಪತಿಗೆ ಮನಸ್ಸಿನಲ್ಲಿ ಕೋಪವು ಹುಟ್ಟಿತು. ಆದರೆ ಅವನು ಬಹಳ ವಿವೇಕಿಯಾದುದರಿಂದ, ಯಾವ ಮಾತನ್ನೂ ಆಡದೆ ಹಿಂತಿರುಗಿ ಹೊರಟುಹೋದನು. ಇದನ್ನು ನೋಡಿದಮೇಲೆ ಇಂದ್ರನಿಗೆ ತಾನು ಮಾಡಿದುದು ತಪ್ಪೆಂದು ತೋರಿತು. ಈ ಆಚಾರ್ಯತಿರಸ್ಕಾರಕ್ಕಾಗಿ ತನ್ನಲ್ಲಿ ತಾನು ಕೊರಗುತ್ತ, ಆ ಸಭೆಯವರೆಲ್ಲರೂ ಕೇಳುತ್ತಿರುವಹಾಗೆ, ತನ್ನನ್ನೇ ತಾನು ಹೀಗೆಂದು ನಿಂದಿಸಿ ಕೊಳ್ಳುವನು- “ಅಯ್ಯೋ! ನಾನು ಎಂತಹ ಅನರ್ಥಕ್ಕೆ ಗುರಿಯಾದೆನು! ನಾನು ಮಾಡಿದುದು ಬಹಳತಪ್ಪು! ಐಶ್ವರ್ಯಮದದಿಂದ ಮೈಮರೆತು ಆಚಾರ್ಯನನ್ನೇ ಅವಮಾನಿಸಿದೆನು. ನನ್ನಂತೆ ಅಲ್ಪಬುದ್ಧಿಯುಳ್ಳವನು ಲೋಕದಲ್ಲಿ ಬೇರೊಬ್ಬನುಂಟೆ? ಕೇವಲ ಸಾತ್ವಿಕಸ್ವಭಾವವುಳ್ಳ ದೇವತೆಗಳೆಲ್ಲರಿಗೂ ನಾನೇ ಪ್ರಭುವಾಗಿದ್ದರೂ, ರಾಕ್ಷಸಸ್ವಭಾವನನ್ನು ತೋರಿಸಿಬಿಟ್ಟೆನು. ಛಿ! ನನಗೆ ಈ ಅನರ್ಥವನ್ನು ತಂದಿಡುವುದಕ್ಕೆ ಈ ಐಶ್ವರ್ಯವಲ್ಲವೇ ಕಾರಣವು! ಆದುದರಿಂದ ಎಲ್ಲಾ ಅನರ್ಥಗಳಿಗೂ ಐಶ್ವರ್ಯವೇ ಮೂಲವು ಇದಕ್ಕಾಗಿಯೇ ವಿವೇಕಿಗಳಾದವರು ಬ್ರಹ್ಮಲೋಕಾಧಿಪತ್ಯಕ್ಕೂ ಆಸೆಪಡಲಾರರು. ಆದರೆ ಮಹಾ

ರಾಜನು ರಾಜಸಿಂಹಾಸನದಲ್ಲಿ ಕುಳ್ಳಿರುವಾಗ, ಸಭೆಗೆ ಬಂದ ಮಹಾತ್ಮರ ನ್ನು ಪ್ರತ್ಯುತ್ಥಾನಾದಿಗಳಿಂದ ಗೌರವಿಸಬೇಕಾದ ಅವಶ್ಯವಿಲ್ಲವೆಂದು ಕೆಲವರು ಸಮಾಧಾನವನ್ನು ಹೇಳುವುದುಂಟು. ಹಾಗೆ ಹೇಳುವವರು ಧರ್ಮಜ್ಞ ರಲ್ಲವೆಂದೇ ನನ್ನ ಮತವು! ಇವರ ಮಾತನ್ನು ನಂಬಿ ನಡೆಯತಕ್ಕವನು, ಕಲ್ಲಿನದೋಣಿಯನ್ನೇರಿ ಹೊಳೆಯನ್ನು ದಾಟುವರಂತೆ ಅಧೋಗತಿಯನ್ನೇ ಹೊಂದುವನು. ಆದುದಾಯಿತು! ಈಗಲಾದರೂ ನಾನು ಐಶ್ವರ್ಯಮದ ವನ್ನು ಬಿಟ್ಟು, ಆತನ ಪಾದಗಳಿಗೆ ನಮಸ್ಕರಿಸಿ, ಅವನನ್ನು ಪ್ರಸನ್ನನಾ ಗುವಂತೆ ಮಾಡುವೆನು" ಎಂದು ದೇವೇಂದ್ರನು ಮನಸ್ಸಿನಲ್ಲಿ ನಿಶ್ಚಯಿಸಿ ಕೊಂಡು ಹೊರಟುಬರುವಷ್ಟರಲ್ಲಿ, ಬೃಹಸ್ಪತಿಯು ಯೋಗಮಹಿಮೆ ಯಿಂದ ತನ್ನ ಮನೆಯಲ್ಲಿಯೇ ಇಂದ್ರನ ಕಣ್ಣಿಗೆ ಬೀಳದಂತೆ ಅದೃಶ್ಯನಾ ದನು. ಇಂದ್ರನು! ಅವನನ್ನು ಕಂಡು ಹಿಡಿಯುವುದಕ್ಕಾಗಿ ಎಷ್ಟೋಪ್ರಕಾರದ ಉ ಪಾಯಗಳನ್ನು ಹುಡುಕಿದರೂ ಕಾಣಲಾರದೆ, ಬಹಳ ಚಿಂತಾಕ್ರಾಂತ ನಾಗಿ ಸಂಕಟದಿಂದ ತಪಿಸುತಿದ್ದನು. ಅವನ ಮನಸ್ಸಿಗೆ ಸ್ವಲ್ಪವೂ ನೆಮ್ಮ ದಿಯಿರಲಿಲ್ಲ. ಈ ಹುಳುಕನ್ನು ತಿಳಿದು ದೇವಶತ್ರುಗಳಾದ ದಾನವರು ಅ ಮರಾವತಿಯನ್ನು ಮುತ್ತುವುದಕ್ಕೆ ಇದೇಸಮಯವೆಂದೆಣಿಸಿ, ಶುಕ್ರಾಚಾ ರ್ಯನ ಪ್ರೋತ್ಸಾಹದಿಂದ ಮತ್ತಷ್ಟು ಮದಾಂಧರಾಗಿ ದಂಡೆತ್ತಿಬಂದರು. ದೇವಾಸುರರಿಗೆ ಯುದ್ಧಾರಂಭವಾಯಿತು. ದೇವತೆಗಳೆಲ್ಲರೂ ರಾಕ್ಷಸರ ಬಾ ಣಪ್ರಹಾರದಿಂದ ಮೈಮುರಿದು, ನಾಚಿಕೆಯಿಂದ ತಲೆಯೆತ್ತದೆ, ಇಂ ದ್ರನನ್ನು ಮುಂದಿಟ್ಟುಕೊಂಡು ಬ್ರಹ್ಮನ ಬಳಿಗೆ ಬಂದು ಮೊರೆಯಿ ಟ್ಟರು. ಬ್ರಹ್ಮನು ಅವರ ದುರವಸ್ಥೆಯನ್ನು ನೋಡಿ ಕನಿಕರಗೊಂಡು. ಅವರನ್ನು ಸಮಾಧಾನಪಡಿಸುತ್ತ, "ಓ ದೇವತೆಗಳಿರಾ! ನೀವು ಬಹಳ ತಪ್ಪನ್ನು ಮಾಡಿದಿರಿ! ನಿಮ್ಮ ತಪ್ಪಿನಿಂದಲೇ ನಿಮಗೆ ಈವಿಧವಾದಕ ಷ್ಟವು ಪ್ರಾಪ್ತವಾಯಿತು. ಪಾಪಕ್ಕೆ ತಕ್ಕ ಫಲವನ್ನನುಭವಿಸದೆ ತೀರದು! ಬ್ರಹ್ಮಜ್ಞಾನಸಂಪನ್ನನಾಗಿಯೂ, ಜಿತೇಂದ್ರಿಯನಾಗಿಯೂ ಇರುವ ಆ ಚಾರ್ಯನನ್ನೇ ನೀವು ನಿಮ್ಮ ಐಶ್ವರ್ಯಮದದಿಂದ ಅವಮಾನಪಡಿಸಿದಿರಿ! ಆ ಅಪರಾಧಕ್ಕೆ ತಕ್ಕ ಫಲವು ಈಗಲೇ ನಿಮಗೆ ಕಂಡುಬಂದಿತು ನೋಡಿದಿ.

ರಾ! ಆ ಪಾಪವೇ ನಿಮಗೆ ದೊಡ್ಡಶತ್ರುವೆಂದು ತಿಳಿಯಿರಿ! ಹಾಗಿಲ್ಲದಪಕ್ಷ ದಲ್ಲಿ ಐಶ್ವರ್ಯರಹಿತರಾಗಿ ದುರ್ಬಲರಾದ ನಿಮ್ಮ ಶತ್ರುಗಳು, ಐಶ್ವರ್ಯದಿಂ ದ ಪ್ರಬಲರಾದ ನಿಮ್ಮನ್ನು ಜಯಿಸುವುದೆಂದರೇನು" ದೇವೇಂದ್ರಾ! ಮೊ ದಲು ನಿನ್ನ ಶತ್ರುಗಳೂ ಗುರುತಿರಸ್ಕಾರದಿಂದಲೇ ತಮ್ಮ ರಾಜ್ಯಸಂಪತ್ತ ನ್ನು ಕಳೆದುಕೊಂಡು ದುರ್ಬಲರಾಗಿದ್ದರು ಅವರೇ ಈಗ ತಮ್ಮ ಗುರುವಾದ ಶುಕ್ರಾಚಾರ್ಯನನ್ನು ಭಕ್ತಿಯಿಂದಾರಾಧಿಸಿ ಆ ಆಚಾರ್ಯಾನುಗ್ರಹದಿಂದ ಬಲಶಾಲಿಗಳಾದರು! ಗುರುವಾದ ಶುಕ್ರಾಚಾರ್ಯನನ್ನೇ ಪರದೈವವೆಂ ದು ಭಾವಿಸಿಕೊಂಡಿರುವ ಆ ದೈತ್ಯರು, ತಮಗೆ, ಮೇಲೆಮೇಲೆ ಹೆಚ್ಚುತ್ತಿ ರುವ ವೀರ್ಯೋದ್ರೇಕದಿಂದ ಈಗಲೋ ನಾಳೆಯೋ ಅಥವಾ ನಾಡಿದೋ ಈ ನಿನ್ನ ಲೋಕಕ್ಕೂ ದಂಡೆತ್ತದೆ ಬಿಡರು. ಆ ಶುಕ್ರಾಚಾರ್ಯನ ಮಂ ತ್ರಬಲದಿಂದ ಬಹಳ ಗೂಢಾಲೋಚನೆಯುಳ್ಳ ಆ ದಾನವರು, ಈಗ ತ್ರೈ ಲೋಕ್ಯವನ್ನೂ ಲಕ್ಷ್ಯಮಾಡಲಾರರು. ಆದರೆ ಅವರಿಗೆ ಐಶ್ವರ್ಯವೆಂಬು ದು ಸ್ಥಿರವಲ್ಲ ಅವರು ಸಹಜವಾಗಿಯೇ ಕ್ರೂರರಾದುದರಿಂದ ಬ್ರಾಹ್ಮಣ ರನ್ನೂ, ಗೋವುಗಳನ್ನೂ, ಭಗವಂತನನ್ನೂ, ಮಹಾತ್ಮರನ್ನೂ ತಿರಸ್ಕರಿಸುವ ಸ್ವಭಾವವುಳ್ಳವರು, ಆದುದರಿಂದ ಅವರಿಗೆ ಎಂದಿದ್ದರೂ ದುಃಖವು ತಪ್ಪ ದು. ಅಂತಹ ಗೋಬ್ರಾಹ್ಮಣಾದಿಗಳಲ್ಲಿ ಯಾರು ಪೂಜ್ಯಭಾವದಿಂದಿರುವ ರೋ ಅವರಿಗೆ ಎಂದಿದ್ದರೂ ಸುಖವುಂಟು. ಮಹಾತ್ಮರನ್ನು ಅವಮಾನಪಡಿ ಸತಕ್ಕವರು ಎಂತಹ ಪ್ರಭುಗಳಾಗಿದ್ದರೂ ಅವರಿಗೆ ಕೇಡು ತಪ್ಪದು. ಆ ದುದರಿಂದ ನೀವು ಸ್ವಲ್ಪಕಾಲದವರೆಗೆ ತಾಳ್ಮೆಯಿಂದಿದ್ದರೆ, ನಿಮಗೆ ಕ್ಷೇಮ ವುಂಟು. ಆದರೆ ನೀವು ಈಗಲೇ ನಡೆಸಬೇಕಾದ ಕೆಲಸವೊಂದುಂಟು! ತ್ವ ಷ್ಟೃಕುಮಾರನಾದ ವಿಶ್ವರೂಪನೆಂಬ ಬ್ರಾಹ್ಮಣನಿರುವನು. ಅವನು ಮ ಹಾತಪಸ್ವಿಯು! ಜಿತೇಂದ್ರಿಯನು! ಅವನನ್ನು ನೀವು ಪುರೋಹಿತನನ್ನಾಗಿ ವರಿಸಬೇಕು! ನೀವು ತಕ್ಕ ರೀತಿಯಿಂದ ಅವನನ್ನು ಅನುವರ್ತಿಸುತಿದ್ದರೆ, ನಿ ಮ್ಮ ಕೋರಿಕೆಯನ್ನು ತಪ್ಪದೆ ನೆರವೇರಿಸುವನು. ಒಂದೊಂದುವೇಳೆ ಆತನು ದಾನವರಲ್ಲಿ ಪಕ್ಷಪಾತವನ್ನು ತೋರಿಸಬಹುದು. ಅದನ್ನೂ ನೀವುಸಹಿಸಿಕೊಂ ಡಿರಬೇಕು" ಎಂದನು. ಬ್ರಹ್ಮನ ವಾಕ್ಯವನ್ನು ಕೇಳಿ ದೇವತೆಗಳೆಲ್ಲರೂ ಸಂ

ತುಷ್ಟರಾಗಿ, ವಿಶ್ವರೂಪನ ಬಳಿಗೆ ಬಂದರು. ಅವನನ್ನು ಪ್ರೇಮದಿಂದಾಲಿಂ ಗಿಸಿಕೊಂಡು “ಓ ಮುನೀಂದ್ರಾ! ನಾವು ನಿನ್ನಾಶ್ರಮಕ್ಕೆ ಅತಿಥಿಗಳಾಗಿ ಬಂದಿರುವೆವು. ನಿನಗೆ ಕ್ಷೇಮವುಂಟಾಗಲಿ! ನೀನು ನಿನ್ನ ಪಿತೃಗಳಾದ ನಮಗೆ ಕಾಲೋಚಿತವಾದ ಉಪಕಾರವನ್ನು ಮಾಡಬೇಕು ಸತ್ಪುತ್ರರಿಗೆ ಪಿತೃ ಶುಶ್ರೂಷೆಯೇ ಮೇಲಾದ ಧರ್ಮವು ಒಂದೆರಡುಮಕ್ಕಳನ್ನು ಹೆತ್ತವರೂ ಕೂಡ ತಮ್ಮ ಪಿತೃಗಳಲ್ಲಿ ಗೌರವವನ್ನು ತೋರಿಸಬೇಕಾದುದು ಧರ್ಮವು. ಹೀಗಿರುವಾಗ ನಿಮ್ಮಂತಹ ಬ್ರಹ್ಮಚಾರಿಗಳಿಗೆ ಇದು ಉತ್ತಮಧರ್ಮವೆಂಬು ದನ್ನು ಹೇಳಬೇಕಾದುದೇನು? ಆಚಾರ್ಯನನ್ನು ಪರಬ್ರಹ್ಮವೆಂಬ ಭಾವದಿಂ ದಲೇ ಆರಾಧಿಸಬೇಕು. ತಂದೆಯನ್ನು ಲೋಕಪಿತಾಮಹನಾದ ಬ್ರಹ್ಮನೆಂ ದಾರಾಧಿಸಬೇಕು. ಸಹೋದರನನ್ನು ದೇವೇಂದ್ರನ ಸ್ವರೂಪದಿಂದ ಭಾವಿ ಸಿ ಪೂಜಿಸಬೇಕು. ತಾಯಿಯನ್ನು ಭೂದೇವಿಯಂತೆ ಭಾವಿಸಿ ಪೂಜಿಸಬೇ ಕು ಹಾಗೆಯೇ ಸಹೋದರಿಯನ್ನು ದಯಾಸ್ವರೂಪದಿಂದಲೂ, ಅತಿಥಿ ಯನ್ನು ಧರ್ಮಸ್ವರೂಪದಿಂದಲೂ, ಅಭ್ಯಾಗತನನ್ನು ಅಗ್ನಿಸ್ವರೂಪದಿಂ ದಲೂ, ಸಮಸ್ತಭೂತಗಳನ್ನೂ ತನ್ನ ಸ್ವರೂಪದಿಂದಲೂ ಭಾವಿಸಬೇಕು. ಆದುದರಿಂದ ಓ ಬ್ರಾಹ್ಮಣೋತ್ತಮಾ! ನಿನ್ನ ಪಿತೃಗಳಾದ ನಾವು ಯಾ ವುದೋ ಒಂದು ಕಷ್ಟದಲ್ಲಿ ಸಿಕ್ಕಿ ನಿನ್ನಲ್ಲಿಗೆ ಬಂದಿರುವೆವು. ನಮಗೆ ನಮ್ಮ ಶತ್ರುಗಳಿಂದುಂಟಾದ ತಿರಸ್ಕಾರವನ್ನೂ, ಅದರಿಂದ ನಮಗುಂಟಾದ ಕಷ್ಟ ವನ್ನೂ ನೀಗಿಸುವ ಭಾರವು ನಿನ್ನದು. ನಮ್ಮ ಕೋರಿಕೆಯನ್ನು ನೀನು ನಿನ್ನ ತಪೋಮಹಿಮೆಯಿಂದಲೇ ನೆರವೇರಿಸಬಹುದು. ನೀನು ಬ್ರಾಹ್ಮಣೋ ತ್ತಮನು! ಬ್ರಹ್ಮಜ್ಞಾನಸಂಪನ್ನನು! ಮಹಾತಪಸ್ವಿಯು! ಸಮಸ್ತವರ್ಣ ಗಳಿಗೂ ಗುರುವೆನಿಸಿಕೊಂಡವನು ಆದುದರಿಂದ ನೀನು ನಮಗೆ ಪುರೋಹಿ ತನಾಗಿರಬೇಕು. ನಿನ್ನ ತೇಜೋಬಲದಿಂದ ನಾವು ಅನಾಯಾಸವಾಗಿ ಶ ತ್ರುಗಳನ್ನು ಜಯಿಸಬಹುದು! ನಮ್ಮಲ್ಲಿ ಅನುಗ್ರಹವನ್ನು ತೋರಿಸು! ನ ಮಗಿಂತಲೂ ನೀನು ವಯಸ್ಸಿನಲ್ಲಿ ಚಿಕ್ಕವನಾದರೂ, ನಿನ್ನ ಪಾದಗಳನ್ನು ಹಿಡಿದು ನಮಸ್ಕರಿಸುವೆವು. ಕಾರ್ಯಾರ್ಥಿಗಳು ಸ್ವಪ್ರಯೋಜನಕ್ಕಾಗಿ ತ ಮಗಿಂತಲೂ ಚಿಕ್ಕವರನ್ನು ನಮಸ್ಕರಿಸಿದರೂ ದೋಷವಿಲ್ಲ. ಇದಲ್ಲದೆ ನಿ

ನ್ನಂತೆ ವೇದಾಧ್ಯಯನಸಂಪನ್ನರಾದವರು ವಯಸ್ಸಿನಲ್ಲಿ ಚಿಕ್ಕವರಾಗಿದ್ದರೂ ಮಹಿಮೆಯಲ್ಲಿ ದೊಡ್ಡವರು. ವಯಸ್ಸಿನಿಂದಲೇ ಮನುಷ್ಯನು ದೊಡ್ಡವನಾಗಲಾರನು. ಆದುದರಿಂದ ನೀನು ನಮಗೆ ಸರ್ವವಿಧದಲ್ಲಿಯೂ ಪೂಜ್ಯನು" ಎಂದರು ಈ ದೇವತೆಗಳ ಪ್ರಾರ್ಥನೆಯನ್ನು ಕೇಳಿ ಮಹಾತಪಸ್ವಿಯಾದ ವಿಶ್ವರೂಪನು, ಮಂದಹಾಸಪೂರ್ವಕವಾಗಿ ಅವರನ್ನು ಕುರಿತು ಮೃದು ವಾಕ್ಯದಿಂದ ಹೀಗೆಂದು ಹೇಳುವನು. "ಎಲೈ ಪೂಜ್ಯರೆ! ಲೋಕದಲ್ಲಿ ಪೌರೋಹಿತ್ಯವೆಂಬುದು ಬಹಳ ನಿಂದ್ಯಕಾರ್ಯವು. ಅದು ಬ್ರಹ್ಮತೇಜಸ್ಸನ್ನು ಕೆಡಿಸಿಬಿಡುವುದು ಹಾಗಿದ್ದರೂ ಲೋಕಪಾಲಕರಾದ ನೀವೆಲ್ಲರೂ ಬಂದು ಪ್ರಾರ್ಥಿಸುವುದರಿಂದ ನಿಮ್ಮ ಕೋರಿಕೆಯನ್ನು ನಿರಾಕರಿಸಲಾರೆನು. ಪಿತೃಗಳಾದ ನೀವು ಬಂದು ಕೇಳುವಾಗ ಪಿತೃಭಕ್ತಿಯುಳ್ಳ ನಾನು ಹೇಗೆತಾನೇ ನಿರಾಕರಿಸಲಿ. ಇದಲ್ಲದೆ ನಿಮಗೆ ನಾನು ಶಿಷ್ಯನು. ನಿಮ್ಮನ್ನು ಗುರುವಿನಂತೆ ಭಾವಿಸಿರುವೆನು. ನಿಮ್ಮ ಆಜ್ಞೆಯನ್ನು ನಡೆಸಬೇಕಾದುದೇ ನನ್ನ ಅವಶ್ಯ ಕಾರ್ಯವು. ಶಿಷ್ಯರಿಗೆ ಗುರುವಾಕ್ಯವನ್ನು ನಡೆಸುವುದೇ ಉತ್ತಮಪುರುಷಾರ್ಥವೆಂದು ಹಿರಿಯರು ಹೇಳಿರುವರು. ಹಾಗಿದ್ದರೂ, ಈಗ ಧನಾರ್ಜನೆಗಾಗಿ ನಾನು ಪೌರೋಹಿತ್ಯವನ್ನೊಪ್ಪಿಕೊಳ್ಳತಕ್ಕವನಲ್ಲ. ಶಬ್ದಾದಿವಿಷಯಗಳಲ್ಲಿ ಆಸೆಯನ್ನು ಬಿಟ್ಟ ವಿರಕ್ತರು, ತಮ್ಮ ದೇಹಧಾರಣೆಗೆ ಬೇಕಾದುದನ್ನುಮಾತ್ರವೇ ಬಯಸುವರು ಅಂತವರು ಹೊಲಗದ್ದೆಗಳಲ್ಲಿ ಉದಿರಿದ ಧಾನ್ಯಗಳನ್ನಾಗಲಿ, ಕಾಳುಗಳನ್ನಾಗಲಿ ತಿಂದು ತೃಪ್ತಿಪಡುವರು. ಅವರಿಗೆ ಅದೇ ಸಾಕಾದ ಧನವು. ಅವುಗಳಿಂದಲೇ ಅವರು ಪಂಚಮಹಾಯಜ್ಞಾದಿಕರ್ಮಗಳೆಲ್ಲವನ್ನೂ ಲೋಪವಿಲ್ಲದೆ ನಡೆಸುತ್ತಬರುವರು. ಹೀಗಿರುವಾಗ ನಿಮ್ಮಲ್ಲಿ ಪೌರೋಹಿತ್ಯದಿಂದ ನಾನು ಹೊಂದಬೇಕಾದ ಲಾಭವೇನು? ನಿಂದಾಸ್ಪದವಾದ ಈ ಕಾರ್ಯಕ್ಕೆ ನಾನು ಹೇಗೆತಾನೇ ಆಸೆಪಡಲಿ! ಪೌರೋಹಿತ್ಯವು ಸಿಕ್ಕಿದುದಕ್ಕಾಗಿ ಸಂತೋಷಿಸತಕ್ಕವರು ಮೂಢರೇ ಹೊರತು, ವಿರಕ್ತರು ಅದಕ್ಕೆ ಆಸೆಪಡಲಾರರು ಆ ವಿರಕ್ತರಿಗೆ ಉಂಛವೃತ್ತಿಯೇ (ಭಿಕ್ಷಾಟನವೇ) ಉತ್ತಮ ಜೀವನವು. ಹಾಗಿದ್ದರೂ ತಂದೆಗಳಾದ ನೀವು ಕೇಳಿಕೊಳ್ಳುವುದರಿಂದ, ನಿಮ್ಮ ಮಾತಿಗೆ ನಾನು ಪ್ರತ್ಯುತ್ತರವನ್ನು ಹೇಳಲಾರೆನು.

ನಿಮ್ಮ ಮಾತಿಗಾಗಿ ನಾನು ಈ ಅಲ್ಪಕಾರ್ಯವನ್ನು ನಡೆಸುವುದೇನೂ ಅತಿಶ
ಯವಲ್ಲ. ಆದುದರಿಂದ ನಿಮ್ಮ ಕೋರಿಕೆಯನ್ನು ನಾನು ನನ್ನ ಸಮಸ್ತ
ಧರ್ಮಗಳಿಂದಲೂ, ಕೊನೆಗೆ ನನ್ನ ಪ್ರಾಣಗಳಿಂದಲೂ ಸಾಧಿಸಿಕೊಡಬೇಕು"
ಎಂದನು ಹೀಗೆ ಮಹಾತಪಸ್ವಿಯಾದ ವಿಶ್ವರೂಪನು, ದೇವತೆಗಳ ಪ್ರಾ
ರ್ಥನೆಯಂತೆ ಅವರಿಗೆ ತಾನು ಪುರೋಹಿತನಾಗಿರುವಂತೆ ವಾಗ್ದಾನಮಾಡಿ,
ಅವರಿಗೆ ಪುರೋಹಿತನಾಗಿದ್ದು ಬಹಳಶ್ರದ್ಧೆಯಿಂದ ಬೇಕಾದ ಕಾರ್ಯಗ
ಳೆಲ್ಲವನ್ನೂ ನಡೆಸಿಕೊಡುತಿದ್ದನು ಅತ್ತಲಾಗಿ ದಾನವರಿಗೆ ಶುಕ್ರಾಚಾರ್ಯನ
ನೀತಿಚಾತುರ್ಯದಿಂದ, ಬೇರೊಬ್ಬರಿಂದ ಕದಲಿಸುವುದಕ್ಕಾಗದಂತೆ ರಾಜ್ಯಸಂ
ಪತ್ತು ಸ್ಥಿರಪಟ್ಟಿದ್ದರೂ, ಈ ವಿಶ್ವರೂಪನು ತನ್ನಲ್ಲಿದ್ದ ನಾರಾಯಣಕವಚ
ವೆಂಬ ಮಂತ್ರವಿದ್ಯೆಯಿಂದ, ಅದನ್ನಾಕರ್ಷಿಸಿ ಇಂದ್ರನಿಗೆ ಕೊಟ್ಟನು.
ಮಹಾಧೀಮಂತನಾದ ಈ ವಿಶ್ವರೂಪನು, ಅದೇಮಂತ್ರವನ್ನು ಇಂದ್ರ
ನಿಗೂ ಉಪದೇಶಿಸಿದನು. ಈ ಮಂತ್ರಬಲದಿಂದ ಸುರಕ್ಷಿತನಾಗಿದ್ದ ದೇವೇಂ
ದ್ರನು, ಅಸುರಸೈನ್ಯವೆಲ್ಲವನ್ನೂ ನಿರ್ಮೂಲಮಾಡಿ ಸ್ವರ್ಗಸಾಮ್ರಾಜ್ಯ
ವನ್ನನುಭವಿಸುತಿದ್ದನು. ಎಂದನು ಇಲ್ಲಿಗೆ ಏಳನೆಯ ಅಧ್ಯಾಯವು.

---

### ವಿಶ್ವರೂಪನು ದೇವೇಂದ್ರನಿಗೆ ನಾರಾಯಣ ಕವಚ ವೆಂಬ ಮಂತ್ರವನ್ನುಪದೇಶಿಸಿದುದು.

ಇದನ್ನು ಕೇಳಿ ಪರೀಕ್ಷಿದ್ರಾಜನು, ತಿರುಗಿ ಶುಕಮುನಿಯನ್ನು ಕುರಿತು
"ಓಮಹರ್ಷೀ! ! ಸಹಸ್ರಾಕ್ಷನಾದ ದೇವೇಂದ್ರನು, ಯಾವ ಮಂತ್ರಬಲ
ದಿಂದ ಶತ್ರುಸೈನ್ಯಗಳೆಲ್ಲವನ್ನೂ ಲೀಲೆಯಿಂದಲೇ ಜಯಿಸಿ, ತ್ರೈಲೋ
ಕ್ಯಾಧಿಪತ್ಯವನ್ನನುಭವಿಸಿದನೋ, ಆ ನಾರಾಯಣಕವಚವೆಂಬ ಮಂತ್ರ
ವಿದ್ಯೆಯನ್ನು ನನಗೂ ದಯವಿಟ್ಟು ಉಪದೇಶಿಸಬೇಕು "ಎಂದನು. ಅದ
ಕ್ಕಾಶುಕನು, "ರಾಜೇಂದ್ರಾ ಕೇಳು ! ತ್ವಪ್ಟೃಪುತ್ರನಾದ ವಿಶ್ವರೂ
ಪನು, ದೇವತೆಗಳಿಗೆ ಪುರೋಹಿತನಾಗಿ ಬಂದಮೇಲೆ, ಶತ್ರುಜಯಕ್ಕೆ
ಉಪಾಯವೇನೆಂದು ಪ್ರಶ್ನೆಮಾಡಿದ ದೇವೇಂದ್ರನಿಗೆ ಈ ನಾರಾಯಣ ಕ
ವಚವೆಂಬ ಮಂತ್ರವನ್ನುಪದೇಶಿಸಿದನು. ಅದನ್ನೇ ನಿನಗೆ ಹೇಳುವೆನು ಸಾವ

ಧಾನವಾಗಿ ಕೇಳು. ವಿಶ್ವರೂಪನು ಈ ಮಂತ್ರೋಪದೇಶವನ್ನು ಮಾಡು ವಾಗ ಇಂದ್ರನನ್ನು ಕುರಿತು. “ಇಂದ್ರಾ! ಮನುಷ್ಯನಿಗೆ ತನ್ನ ದೇಹದಲ್ಲಿ ಯಾಗಲಿ, ಇತರಭೂತಗಳಿಂದಾಗಲಿ, ದೈವಿಕವಾಗಿಯಾಗಲಿ ಯಾವುದಾದ ರೂ ವಿಪತ್ತು ಸಂಭವಿಸಿದಾಗ, ಶ್ರೀಹರಿಧ್ಯಾನವನ್ನು ಮಾಡುತ್ತ ಈ ನಾರಾ ಯಣಕವಚವೆಂಬ ಮಂತ್ರವನ್ನು ಜಪಿಸಬೇಕು. ಈ ಮಂತ್ರಜಪವನ್ನಾರಂ ಭಿಸುವುದಕ್ಕೆ ಮೊದಲು, ಕೈಕಾಲುಗಳನ್ನು ತೊಳೆದು, ಆಚಮನವನ್ನು ಮಾ ಡಿ ಶುಚಿಯಾಗಿ ಬಂದು, ಬೆರಳಿಗೆ ದರ್ಭೆಪವಿತ್ರವನ್ನಿಟ್ಟುಕೊಂಡು, ಉತ್ತರಾ ಭಿಮುಖವಾಗಿ ಕುಳ್ಳಿರಬೇಕು. ಮತ್ತು ಮೌನವ್ರತವನ್ನು ಹಿಡಿದು, ಅಷ್ಟಾ ಕ್ಷರಮಂತ್ರದಿಂದಲೂ, ದ್ವಾದಶಾಕ್ಷರಮಂತ್ರದಿಂದಲೂ, ವಿಷ್ಣು ಷಡಕ್ಷರಿ ಯೆಂಬ ಮಂತ್ರದಿಂದಲೂ, ಅಂಗನ್ಯಾಸಕರನ್ಯಾಸಗಳನ್ನು ಮಾಡಿದಮೇಲೆ ಭಯನಿವಾರಣಾರ್ಥವಾಗಿ, ಭಗವನ್ಮಯವಾದ ಆ ನಾರಾಯಣಕವಚಮಂ ತ್ರವನ್ನು ಜಪಿಸಬೇಕು. ಜಪಕ್ಕೆ ಮೊದಲು ಅಂಗನ್ಯಾಸಕರನ್ಯಾಸಕ್ರಮ ಗಳನ್ನು ವಿವರಿಸುವೆನು ಕೇಳು! ಮೊದಲು, ಕಾಲುಗಳು, ಆಮೇಲೆ ಮೊಳಕಾ ಲುಗಳು, ಅದರಮೇಲೆ ತೊಡೆಗಳು, ಹಾಗೆಯೇ ಹೊಟ್ಟೆ, ಹೃದಯ, ಎದೆ, ಮುಖ, ತಲೆ, ಎಂಬೀ ಕ್ರಮದಿಂದಾಗಲಿ, ತಲೆಯಿಂದಾರಂಭಿಸಿ ಪಾದಗಳ ವರೆಗೆ ವಿಲೋಮವಾಗಿಯಾಗಲಿ, ಈ ಎಂಟಂಗಗಳಲ್ಲಿಯೂ “ಓಂ ನಮೋ ನಾರಾಯಣಾಯ” ಎಂಬೀ ಅಷ್ಟಾಕ್ಷರಮಂತ್ರದೊಳಗಿನ ಒಂದೊಂದಕ್ಷರ ವನ್ನೂ, ಮೊದಲು ಪ್ರಣವಾಕ್ಷರದೊಡನೆಯೂ, ಕೊನೆಯಲ್ಲಿ ನಮಶ್ಶಬ್ದ ದೊಡನೆಯೂ ಸೇರಿಸಿ, ವಿನ್ಯಾಸಮಾಡಬೇಕು. ಆಮೇಲೆ “ಓಂ ನಮೋ ಭಗವತೇ ವಾಸುದೇವಾಯ” ಎಂಬೀ ದ್ವಾದಶಾಕ್ಷರೀಮಂತ್ರದಿಂದ ಕರನ್ಯಾ ಸವನ್ನು ಮಾಡಬೇಕು. ಈ ಮಂತ್ರದೊಳಗಿನ ಹನ್ನೆರಡಕ್ಷರಗಳನ್ನೂ ಕ್ರಮ ವಾಗಿ ಎರಡು ಕೈಗಳಲ್ಲಿಯೂ, ತೋರುಬೆರಳಿನಿಂದ ಕಿರುಬೆರಳಿನವರೆಗೆ ನಾ ಲ್ಕುಬೆರಳುಗಳು, ಮತ್ತು ಹೆಬ್ಬೆರಳುಗಳ ಎರಡೆರಡು ಗಿಣ್ಣುಗಳು, ಈ ಹನ್ನೆರ ಡುಸ್ಥಾನಗಳಲ್ಲಿ ನ್ಯಾಸಮಾಡಬೇಕು. ಆಮೇಲೆ “ಓಂ ವಿಷ್ಣವೇ ನಮಃ” ಎಂಬೀ ವಿಷ್ಣುಷಡಕ್ಷರೀ ಮಂತ್ರದಲ್ಲಿ, ಮೊದಲಿಂದ ಕ್ರಮವಾಗಿ, ಓಂಕಾರವ ನ್ನು ಹೃದಯದಲ್ಲಿಯೂ, ವಿವರ್ಣವನ್ನು ತಲೆಯಲ್ಲಿಯೂ, ಷಕಾರವನ್ನು ಭ್ರೂ

ಮಧ್ಯದಲ್ಲಿಯೂ, ಣಕಾರವನ್ನು ಶಿಖೆಯಲ್ಲಿಯೂ, ವೇಕಾರವನ್ನು ಕಣ್ಣುಗ ಗಲ್ಲಿಯೂ, ನಕಾರವನ್ನು ಎಲ್ಲಾ ಕೀಲುಗಳಲ್ಲಿಯೂ ವಿನ್ಯಾಸಮಾಡಿ, ಉಳಿದ ಮಕಾರವಿಸರ್ಗಗಳಿಗೆ "ಘಟ್" ಎಂಬುದನ್ನೂ ಸೇರಿಸಿ, ಚುಟಿಕೆಹಾಕುತ್ತ ದಿಗ್ಬಂಧನವನ್ನು ಮಾಡಬೇಕು. ಇವು ಅಸ್ತ್ರವನ್ನುದ್ದೇಶಿಸಿ ಹೇಳತಕ್ಕ ಮಂ ತ್ರಾಕ್ಷರಗಳು. ಈ ನ್ಯಾಸಗಳಿಂದ ಉಪಾಸಕನು, ಮಂತ್ರಪುನಶ್ಚರಣೆಗೆ ಯೋಗ್ಯವಾದ ಶುದ್ಧದೇಹವುಳ್ಳವನಾಗುವನು. ಈ ಅಂಗನ್ಯಾಸಕರ ನ್ಯಾಸಗಳು ಮುಗಿದಮೇಲೆ, . ಧ್ಯಾನಯೋಗ್ಯನಾಗಿಯೂ, ಜ್ಞಾನ ಶಕ್ತಿ, ಬಲ, ಐಶ್ವರ್ಯ, ವೀರ್ಯ, ತೇಜಸ್ಸುಗಳೆಂಬ ಷಡ್ಗುಣಗಳಿಂದ ಪರಿಪೂರ್ಣನಾ ಗಿಯೂ, ಇರುವ ಪರಮಾತ್ಮನನ್ನು ಧ್ಯಾನಿಸುತ್ತ, ಜ್ಞಾನ, ತೇಜಸ್ಸು, ತಪಸ್ಸುಮುಂತಾದುವುಗಳಿಗೆಲ್ಲಾ ಆಶ್ರಯವಾದ ನಾರಾಯಣಕವಚವೆಂಬ ಈ ಕೆಳಗಿನ ಮಂತ್ರವನ್ನು ಜಪಿಸುವುದಕ್ಕೆ ತೊಡಗಬೇಕು.

## ನಾರಾಯಣಕವಚವೆಂಬ ಮಂತ್ರವು.

"ಗರುತ್ಮಂತನ ಬೆನ್ನಮೇಲೆ ಪಾದಕಮಲಗಳನ್ನೂರಿ ಕುಳಿತವ ನಾಗಿಯೂ, ಶಂಖ, ಚಕ್ರ, ಗದಾ, ಖಡ್ಗ, ಚರ್ಮ, ಖೇಟಕ, ಧನುಸ್ಸು, ಬಾ ಣ, ಪಾಶಗಳೆಂಬ ಈ ಎಂಟುದಿವ್ಯಾಯುಧಗಳಿಂದೊಪ್ಪುತ್ತಿರುವ ಅಷ್ಟಭು ಜಗಳುಳ್ಳವನಾಗಿಯೂ, ಅಣಿಮಾದ್ಯಷ್ಟಸಿದ್ಧಿಗಳುಳ್ಳವನಾಗಿಯೂ (ಸ್ವತ ಸ್ಸಿದ್ಧವಾಗಿರುವ ಅಪಹತಪಾಪ್ಮತ್ವವೇ ಮೊದಲಾದ ಅಷ್ಟಗುಣಗಳುಳ್ಳವ ನಾಗಿಯೂ) ಇರುವ ಸರ್ವೇಶ್ವರನು, ನನ್ನನ್ನು ಸರ್ವಾವಸ್ಥೆಗಳಲ್ಲಿಯೂ ರಕ್ಷಿ ಸುತ್ತಿರಲಿ! ಜಲದಲ್ಲಿರುವ ಮತ್ಸ್ಯಮೂರ್ತಿಯು, ಜಲಜಂತುಗಳಿಂದಲೂ ವರುಣಪಾಶದಿಂದಲೂ ನನ್ನನ್ನು ರಕ್ಷಿಸಲಿ! ಮಾಯಾವಟು (ಕಪಟಬ್ರಹ್ಮ ಚಾರಿ) ವಾದ ವಾಮನಮೂರ್ತಿಯು, ನೆಲದಲ್ಲಿ ನನ್ನನ್ನು ಅಪಾಯಗಳಿಂದ ರಕ್ಷಿಸಲಿ! ಮೂರಡಿಗಳಿಂದ ಮೂರುಲೋಕಗಳನ್ನೂ ಅಳೆದ ತ್ರಿವಿಕ್ರಮ ಮೂರ್ತಿಯೂ, ಆಕಾಶದಲ್ಲಿ ನನಗೆ ರಕ್ಷಕನಾಗಿರಲಿ! ಯಾವನು ಅಟ್ಟಹಾಸ ಮಾಡುವಾಗ ದಿಕ್ಕುಗಳೆಲ್ಲವೂ ಮೊಳಗುತಿದ್ದುವೋ, ಅಂತಹ ಅದ್ಭುತಶಕ್ತಿ ಯುಳ್ಳವನಾಗಿಯೂ, ರಾಕ್ಷಸವೈರಿಯಾಗಿಯೂ ಇರುವ ನೃಸಿಂಹಮೂರ್ತಿ ಯು, ದುರ್ಗಗಳಲ್ಲಿಯೂ, ಅರಣ್ಯಪ್ರದೇಶಗಳಲ್ಲಿಯೂ, ರಣರಂಗಗಳಲ್ಲಿಯೂ

ನನಗೆ ರಕ್ಷಕನಾಗಿರಲಿ! ಯಜ್ಞಸ್ವರೂಪಿಯಾಗಿಯೂ, ಹಿರಣ್ಯಾಕ್ಷಸಂಹಾರಿ ಯಾಗಿಯೂ, ತನ್ನ ಕೋರೆಹಲ್ಲುಗಳಿಂದ, ಪಾತಾಳದಲ್ಲಿ ಹುದುಗಿದ್ದ ಭೂ ಮಿಯನ್ನುದ್ಧರಿಸಿದವನಾಗಿಯೂ ಇರುವ ವಾರಾಹಮೂರ್ತಿಯು, ಮಾರ್ಗ ಗಳಲ್ಲಿ ನನ್ನನ್ನು ರಕ್ಷಿಸಲಿ! ಪರಶುರಾಮಮೂರ್ತಿಯು ಪರ್ವತಶಿಖರಗಳಲ್ಲಿ ನನ್ನ ನ್ನು ರಕ್ಷಿಸಲಿ! ಭರತಾಗ್ರಜನಾಗಿಯೂ, ಲಕ್ಷ್ಮಣಸಹೋದರನಾಗಿಯೂ ಇರುವ ಶ್ರೀದಾಶರಥಿರಾಮನು, ದೇಶಾಂತರಗಳಲ್ಲಿ ನನ್ನನ್ನು ರಕ್ಷಿಸಲಿ! ಶ್ರೀ ಮನ್ನಾರಾಯಣನು, ಅಭಿಚಾರ (ಶೂನ್ಯ) ಮೊದಲಾದ ಕ್ರೂರಕರ್ಮಗಳಿಂದ ಲೂ, ಬೇರೆ ಎಲ್ಲಾ ಅಪಾಯಗಳಿಂದಲೂ ನನ್ನನ್ನು ಕಾಪಾಡಲಿ! ನರಾವ ತಾರವನ್ನೆತ್ತಿದ ಸರ್ವೇಶ್ವರನು, ಗರ್ವದಿಂದಲೂ, ದತ್ತಾತ್ರೇಯಮೂರ್ತಿ ಯು, ಯೋಗವಿರೋಧಿಗಳಿಂದಲೂ ನನ್ನನ್ನು ರಕ್ಷಿಸಲಿ! ಯೋಗರಹಸ್ಯವನ್ನು ಪ್ರಚಾರಗೊಳಿಸಿದವನಾಗಿಯೂ,ಸಿದ್ಧೇಶ್ವರನಾಗಿಯೂ,ಪ್ರಾಣಿಗಳಿಗೆ ಜ್ಞಾ ನಪ್ರದಾನವನ್ನು ಮಾಡಿ, ಅವರ ಕರ್ಮಬಂಧನವನ್ನು ನೀಗಿಸಿದವನಾಗಿಯೂ ಇರುವ ಕಪಿಲಮೂರ್ತಿಯು, ಕರ್ಮಬಂಧದಿಂದ ನನ್ನನ್ನು ಕಾಪಾಡಲಿ!ಸನತ್ಕು ಮಾರಭಗವಂತನು ಕಾಮದಿಂದ ನನ್ನನ್ನು ಕಾಪಾಡಲಿ! ಮಧುಕೈಟಭರ ನ್ನು ಕೊಂದ ಹಯಗ್ರೀವಮೂರ್ತಿಯು, ನಾನು ಆಗಾಗ ದೇವತೆಗಳ ವಿಷ ಯನಲ್ಲಿ ನಡೆಸಬಹುದಾದ ಅಪರಾಧಗಳನ್ನು ಮನ್ನಿಸಿ, ಹೊರಗೆಲ್ಲಾ ನನ್ನ ನ್ನು ರಕ್ಷಿಸುತ್ತಿರಲಿ! ಭಗವಂತನನ್ನು ಎಡೆಬಿಡದೆ ಆರಾಧಿಸತಕ್ಕ ನಾರದ ಮಹರ್ಷಿಯು, ಭಗವದಾರಾಧನಕ್ಕೆ ಸಂಭವಿಸಬಹುದಾದ ವಿಘ್ನಗಳಿಂದ ನ ನ್ನನ್ನು ರಕ್ಷಿಸಲಿ! ಕೂರ್ಮರೂಪಿಯಾದ ಭಗವಂತನು ನನ್ನನ್ನು ಎಲ್ಲಾನರ ಕಗಳಿಂದಲೂ ತಪ್ಪಿಸಲಿ! ಧನ್ವಂತರಿಸ್ವರೂಪಿಯಾದ ಭಗವಂತನು ಅಪಥ್ಯ ದಿಂದ ನನ್ನನ್ನು ರಕ್ಷಿಸಲಿ! ಋಷಭರೂಪಿಯಾಗಿ ಜಿತೇಂದ್ರಿಯನಾದ ಭಗವಂತನು, ಮಳೆ, ಗಾಳಿ, ಬಿಸಿಲು ಮುಂತಾದ ದ್ವಂದ್ವಭಯದಿಂದ ನನ್ನ ನ್ನು ಕಾಪಾಡಲಿ! ಯಜ್ಞರೂಪಿಯಾದ ಭಗವಂತನು, ಲೋಕಾಪವಾ ದದಿಂದ ನನ್ನನ್ನು ಕಾಪಾಡಲಿ! ಬಲರಾಮಮೂರ್ತಿಯು ದುರ್ಜನರ ಕೆಡು ಕುಗಳಿಂದಲೂ, ಮೃತ್ಯುಭಯದಿಂದಲೂ ನನ್ನನ್ನು ಕಾಪಾಡಲಿ! ಆದಿಶೇಷ ಸ್ವರೂಪಿಯಾದ ಭಗವಂತನು, ಕೋಪಸ್ವಭಾವವುಳ್ಳ ಕ್ರೂರಸರ್ಪಗಳಿಂದ

ನನ್ನನ್ನು ಕಾಪಾಡಲಿ! ವ್ಯಾಸರೂಪಿಯಾದ ಭಗವಂತನು, ಅಜ್ಞಾನದಿಂದ ನನ್ನನ್ನು ರಕ್ಷಿಸಲಿ! ಬುದ್ಧರೂಪಿಯಾದ ಭಗವಂತನು ಬುದ್ಧಿಮೋಹಕ್ಕೆ ಕಾರಣವಾದ ಪಾಷಂಡಗಣಗಳಿಂದ ನನ್ನನ್ನು ಕಾಪಾಡಲಿ! ಧರ್ಮರಕ್ಷಣೆಗಾಗಿ ಅವತಾರವನ್ನೆತ್ತಿದ ಕಲಿಮೂರ್ತಿಯು, ಕಾಲಮಲವೆನಿಸಿದ ಕಲಿದೋಷದಿಂದ ನನ್ನನ್ನು ರಕ್ಷಿಸಲಿ! ಕೇಶವಮೂರ್ತಿಯು ಗದಾಪಾಣಿಯಾಗಿ ಪ್ರಾತಃಕಾಲದಲ್ಲಿ ನನ್ನನ್ನು ರಕ್ಷಿಸಲಿ ! ವೇಣುಹಸ್ತನಾದ ಗೋವಿಂದನು ಸಂಗವಕಾಲದಲ್ಲಿ ನನ್ನನ್ನು ರಕ್ಷಿಸಲಿ! ಶಕ್ತಿಧರನಾದ ನಾರಾಯಣನು ಪೂರ್ವಾಹ್ಣದಲ್ಲಿ ನನ್ನನ್ನು ರಕ್ಷಿಸಲಿ! ವಿಷ್ಣುವು ಚಕ್ರಧಾರಿಯಾಗಿ ಮಧ್ಯಾಹ್ನದಲ್ಲಿ ನನ್ನನ್ನು ರಕ್ಷಿಸಲಿ! ಧನುರ್ಧಾರಿಯಾಗಿ ತೇಜಸ್ಸಿನಿಂದ ಜ್ವಲಿಸುತ್ತಿರುವ ಮಾಧವನು, ಅಪರಾಹ್ಣದಲ್ಲಿ ನನ್ನನ್ನು ರಕ್ಷಿಸಲಿ ! ಯೋಗಿಗಳಲ್ಲಿಯೂ, ಜೀವಾತ್ಮರ ಹೃದಯದಲ್ಲಿಯೂ, ಕ್ಷೀರಾಬ್ಧಿಯಲ್ಲಿಯೂ ನೆಲೆಗೊಂಡ ಮಾಧವನು ಸಾಯಂಕಾಲದಲ್ಲಿ ನನ್ನನ್ನು ರಕ್ಷಿಸಲಿ! ಹೃಷೀಕೇಶನು ಪ್ರದೋಷಕಾಲದಲ್ಲಿ ನನ್ನನ್ನು ರಕ್ಷಿಸಲಿ, ಪ್ರದೋಷದಿಂದಾಚೆಗೆ ಅರ್ಧರಾತ್ರಿಯವರೆಗಿನಕಾಲದಲ್ಲಿಯೂ, ನಡುರಾತ್ರಿಯಲ್ಲಿಯೂ ಅಸಹಾಯಶೂರನಾದ ಪದ್ಮನಾಭನು ನನ್ನನ್ನು ರಕ್ಷಿಸಲಿ! ಶ್ರೀವತ್ಸಚಿಹ್ನವುಳ್ಳ ಶ್ರೀಧರನು, ಅಪರರಾತ್ರಿಯಲ್ಲಿ ನನ್ನನ್ನು ಕಾಪಾಡಲಿ! ಖಡ್ಗಧಾರಿಯಾದ ಜನಾರ್ದನನು ಉಷಃಕಾಲದಲ್ಲಿ ನನ್ನನ್ನು ಕಾಪಾಡಲಿ! ದಾಮೋದರನು ಸಂಧ್ಯಾಕಾಲಗಳಲ್ಲಿ, ನನ್ನನ್ನು ಕಾಪಾಡಲಿ! ಕಾಲಸ್ವರೂಪಿಯಾದ ಸರ್ವೇಶ್ವರನು, ಬೆಳಗಿನ ಜಾವದಲ್ಲಿ ನನ್ನನ್ನು ರಕ್ಷಿಸಲಿ! ಭಗವಂತನ ಹಸ್ತದಿಂದ ಪ್ರೇರಿತವಾಗಿ ಸಮಸ್ತಲೋಕವನ್ನೂ ಸುತ್ತುತ್ತ, ಪ್ರಳಯಕಾಲದ ಸಿಡಿಲಿನಂತೆತೀಕ್ಷ್ಣವಾದ ಹಲ್ಲುಗಳುಳ್ಳ ಯಾವ ಸುದರ್ಶನಚಕ್ರವು, ವಾಯುಪ್ರೇರಿತವಾದ ಅಗ್ನಿಯು, ಒಣಗಿದ ಪೊದೆಯನ್ನು ಸುಡುವಂತೆ, ಶತ್ರುಸೈನ್ಯವನ್ನು ದಹಿಸಿ ದಹಿಸಿ ನಿರ್ಮೂಲಮಾಡುತ್ತಿರುವುದೋ, ಆ ಚಕ್ರಾಯುಧವು ನಮ್ಮನ್ನು ರಕ್ಷಿಸಲಿ! ಸಿಡಿಲಿನಂತೆ ಅಗ್ನಿಕಣಗಳನ್ನೆರಚುತ್ತಿರುವ ಓ ಗದಾಯುಧವೆ! ಭಗವಂತನಿಗೆ ಅತ್ಯಂತಪ್ರಿಯವಾದ ಆಯುಧವೆನಿಸಿಕೊಂಡಿರುವ ನೀನು ನಿನ್ನ ಪಾದಾಶ್ರಿತನಾದ ನನಗೆ ಉಪದ್ರವಕಾರಿಗಳಾದ ಕೂಶ್ಮಾಂಡ, ವೈನಾಯಕ, ಯಕ್ಷ, ರಾಕ್ಷಸ, ಭೂತ, ಗ್ರಹಾದಿಗಳೆಲ್ಲವನ್ನೂ ಇತರ

ಶತ್ರುಗಳನ್ನೂ ನಿರ್ಮೂಲಮಾಡು' ಅವರ ರಕ್ತವನ್ನು ಹಿಂಡು! ಪಾಂಚಜ
ನ್ಯವೆಂಬ ಓ ಶಂಖರಾಜಾ! ಸಾಕ್ಷಾದ್ಭಗವಂತನ ಮುಖದ ಗಾಳಿಯಿಂದ ಪೂ
ರಿತನಾಗಿ,ಭಯಂಕರಧ್ವನಿಯಿಂದಲೇ ಶತ್ರುಗಳ ಹೃದಯವನ್ನು ನಡುಗಿಸತಕ್ಕ
ನೀನು, ಯಾತುಧಾನರು, ಪ್ರಮಥರು, ಮಾತೃಗಣಗಳು, ಭೂತಪ್ರೇತಪಿಶಾ
ಚಗಳು, ಮುಂತಾಗಿ ಭಯಂಕರದೃಷ್ಟಿಯುಳ್ಳ ಗ್ರಹಗಳೆಲ್ಲವನ್ನೂ ಓಡಿಸು.
ತೀಕ್ಷ್ಣಧಾರೆಯುಳ್ಳ ಓ ಖಡ್ಗಾಯುಧವೆ! ನೀನು ಭಗವಂತನಿಂದ ಪ್ರೇರಿತ
ನಾಗಿ ನಮ್ಮ ಶತ್ರುಗಳೆಲ್ಲರನ್ನೂ ಖಂಡಖಂಡವಾಗಿ ಕತ್ತರಿಸು! ಚಂದ್ರಬಿಂಬ
ದಂತೆ ನೂರಾರು ಕಣ್ಣುಗಳುಳ್ಳ ಓ ಖೇಟಕವೆ! ನೀನು ಪಾಪದೃಷ್ಟಿಯುಳ್ಳ
ನಮ್ಮ ಶತ್ರುಗಳ ಕಣ್ಣುಗಳನ್ನು ಮರೆಸು! ದುಷ್ಟಗ್ರಹಗಳಿಂದಲೂ, ಧೂ
ಮಕೇತುಗಳಿಂದಲೂ, ದುಷ್ಟಮನುಷ್ಯರಿಂದಲೂ, ಸರ್ಪಾದಿಗಳಿಂದಲೂ
ಕೋರೆಹಲ್ಲುಳ್ಳ ಇತರಪ್ರಾಣಿಗಳಿಂದಲೂ, ಭೂತಗಳಿಂದಲೂ, ನಮಗುಂಟಾ
ಗತಕ್ಕ ಸಮಸ್ತಭಯವೂ, ಆಭಗವಂತನ ನಾಮಗಳನ್ನೂ, ಅವನ ರೂಪಗಳ
ನ್ನೂ, ಅವನ ದಿವ್ಯಾಯುಧಗಳನ್ನೂ ಸ್ಮರಿಸುವುದರಿಂದ, ಆಯಾಕ್ಷಣವೇ ನಿ
ವೃತ್ತಿಹೊಂದಲಿ! ನಮ್ಮ ಶ್ರೇಯಸ್ಸಿಗೆ ಪ್ರತಿಬಂಧಕಗಳಾದುವೆಲ್ಲವೂ ನಿ
ರ್ಮೂಲವಾಗಲಿ!ರಥಂತರಾದಿಭೇದಗಳುಳ್ಳ ಸಾಮವೇದದಿಂದ ಸ್ತುತಿಸಲ್ಪಡ
ತಕ್ಕವನಾಗಿಯೂ, ಛಂದೋಮಯನಾಗಿಯೂ ಇರುವ ಗರುಡದೇವನು, ನ
ಮ್ಮನ್ನು ಸಮಸ್ತಕಷ್ಟಗಳಿಂದಲೂ ತಪ್ಪಿಸಲಿ! ವಿಷ್ವಕ್ಸೇನನು ತನ್ನ ನಾ
ಮಗಳಿಂದ ನಮ್ಮನ್ನು ರಕ್ಷಿಸಲಿ! ಆ ಭಗವಂತನ ಮೂರ್ತಿಗಳೂ, ಅವನ
ನಾಮಗಳೂ, ಅವನ ವಾಹನಗಳೂ, ಅವನ ದಿವ್ಯಾಯುಧಗಳೂ ನಮ್ಮ ಬು
ದ್ಧಿ, ಇಂದ್ರಿಯಗಳು, ಮನಸ್ಸು, ಪ್ರಾಣಗಳು, ಇವನ್ನೆಲ್ಲಾ ವಿಪತ್ತಿನಿಂದ
ರಕ್ಷಿಸಲಿ! ಚೇತನಾಚೇತನರೂಪವಾದ ಪ್ರಪಂಚವೆಲ್ಲವೂ ಪರಮಾತ್ಮ ಸ್ವ
ರೂಪವೆಂಬ ನಮ್ಮ ದೃಢವಾದ ನಂಬಿಕೆಯು ಸತ್ಯವಾಗಿದ್ದರೆ, ಅದರಿಂದ ನ
ಮ್ಮ ಬಾಧೆಗಳೆಲ್ಲವೂ ನೀಗಲಿ! "ಪರಮಪುರುಷನು ಜಗತ್ತಿಗೆಲ್ಲಾ ಅಂತರಾತ್ಮ
ನಾಗಿರುವಾಗಲೂ,ಪ್ರಾಕೃತಗಳಾದ ಆಯಾ ನಾಮರೂಪಗಳಿಂದುಂಟಾಗು
ವ ಭೇದವಿಲ್ಲದವನಾಗಿ, ಆಗಾಗ ತನ್ನ ಸಂಕಲ್ಪಜ್ಞಾನದಿಂದ ತಾನಾಗಿಯೇ
ಅಪ್ರಾಕೃತವಾದ ರಾಮಕೃಷ್ಣಾದಿರೂಪಗಳನ್ನೂ, ಆಯಾನಾಮಗಳನ್ನೂ

ಅದಕ್ಕೆ ತಕ್ಕ ಆಯುಧಗಳನ್ನೂ ಆಭರಣಗಳನ್ನೂ ಧರಿಸುವನು” ಎಂಬೀ ನಮ್ಮ ನಂಬಿಕೆಯು ಸತ್ಯವಾಗಿದ್ದರೆ, ಅವನು ನಮ್ಮ ಕೋರಿಕೆಗಳೆಲ್ಲವನ್ನೂ ಕೈಗೂಡಿಸಿ, ಸರ್ವದೇಶ ಸರ್ವಕಾಲ ಸರ್ವಾವಸ್ಥೆಗಳಲ್ಲಿಯೂ ನಮ್ಮನ್ನು ಸಮಸ್ತಭೂತಗಳಿಂದಲೂ ಭಯವಿಲ್ಲದಂತೆ ರಕ್ಷಿಸಲಿ! ತನ್ನ ಅಟ್ಟಹಾಸಧ್ವನಿಯಿಂದಲೇ ಭಕ್ತರ ಭಯವನ್ನು ನೀಗಿಸತಕ್ಕವನಾಗಿಯೂ, ತನ್ನ ತೇಜಸ್ಸಿನಿಂದಲೇ ಸೂರ್ಯಾದಿಗಳಿಗೂ ತೇಜಸ್ಸನ್ನು ಕೊಡತಕ್ಕವನಾಗಿಯೂ ಇರುವ ನಾರಸಿಂಹಮೂರ್ತಿಯು, ದಿಕ್ಕುಗಳಲ್ಲಿಯೂ, ವಿದಿಕ್ಕುಗಳಲ್ಲಿಯೂ, ಮೇಲೆಯೂ, ಕೆಳಗೂ, ಒಳಗೂ, ಹೊರಗೂ ಇನ್ನೂ ನಾನಾಕಡೆಗಳಲ್ಲಿಯೂ ನಮ್ಮನ್ನು ರಕ್ಷಿಸುತ್ತಿರಲಿ!” ಎಂದು ವಿಶ್ವರೂಪನು ದೇವೇಂದ್ರನಿಗೆ ನಾರಾಯಣಕವಚವೆಂಬ ಈ ಮಂತ್ರವನ್ನುಪದೇಶಿಸಿದಮೇಲೆ, ಆ ಇಂದ್ರನನ್ನು ಕುರಿತು “ಓ ದೇವೇಂದ್ರಾ! ಈ ಮಂತ್ರಜಪದಿಂದ ನೀನು ಅನಾಯಾಸವಾಗಿ ಅಸುರಸೇನೆಗಳನ್ನು ಜಯಿಸಬಹುದು. ಅಷ್ಟೇಕೆ? ಈ ಮಂತ್ರವನ್ನು ಅನುಸಂಧಾನಮಾಡತಕ್ಕ ಪುರುಷನು, ಮತ್ತೊಬ್ಬರನ್ನು ಕಣ್ಣಿಂದ ನೋಡಿದರೂ, ಕಾಲಿಂದ ಮುಟ್ಟಿದರೂ, ಅಂತವರ ಪಾಪಗಳೆಲ್ಲವೂ ನೀಗುವುವು. ಈ ಮಂತ್ರವಿದ್ಯೆಯನ್ನು ಧರಿಸಿದ ಪುರುಷನಿಗೆ, ರಾಜರಿಂದಾಗಲಿ, ಕಳ್ಳರಿಂದಾಗಲಿ, ವೈರಿಗಳಿಂದಾಗಲಿ, ಕ್ರೂರಗ್ರಹಗಳಿಂದಾಗಲಿ, ಯಾವುದರಿಂದಲೂ, ಯಾವಾಗಲೂ,ಎಳ್ಳಷ್ಟಾದರೂ ಭಯವಿರದು! ಹಿಂದೊಮ್ಮೆ ಕೌಶಿಕಗೋತ್ರದಲ್ಲಿ ಹುಟ್ಟಿದ ಬ್ರಾಹ್ಮಣನೊಬ್ಬನು, ಈ ಮಂತ್ರವನ್ನು ಉಪದೇಶಹೊಂದಿ, ಇದನ್ನು ಮರೆಯದೆ ಅನುಸಂಧಿಸುತಿದ್ದು, ಕೊನೆಗೆ ಯೋಗಧಾರಣೆಯಿಂದ ಒಂದು ಮರುಭೂಮಿಯಲ್ಲಿ ಶರೀರತ್ಯಾಗಮಾಡಿಬಿಟ್ಟನು. ಆಮೇಲೆ ಚಿತ್ರರಥನೆಂಬ ಗಂಧರ್ವನೊಬ್ಬನು, ತನ್ನ ಸ್ತ್ರೀಯರೊಡನೆ ವಿಮಾನವನ್ನೇರಿ ಬರುತ್ತ, ಆಬ್ರಾಹ್ಮಣನು ಶರೀರವನ್ನು ಬಿಟ್ಟುಹೋದ ಸ್ಥಲಕ್ಕೆ ನೇರವಾಗಿ ಆಕಾಶದಲ್ಲಿ ಹೋಗುತಿದ್ದನು. ಹೀಗೆ ದಾಟಿಹೋಗುವಾಗ ಆ ವಿಮಾನದ ನೆಳಲು ಆ ಮೃತದೇಹದಮೇಲೆ ಬಿದ್ದೊಡನೆ, ಆ ಗಂಧರ್ವನೂ ಅವನ ಪತ್ನಿಯರೂ ವಿಮಾನಸಹಿತವಾಗಿ ತಲೆಕೆಳಗಾಗಿ ಬಿದ್ದುಬಿಟ್ಟರು. ಆಗಂಧರ್ವನು ದುಃಖಿಸುತ್ತಿರುವಾಗ ವಾಲಖಿಲ್ಯನೆಂಬ ಮಹರ್ಷಿಯೂ ಬಂದು, ಆ ಗಂಧರ್ವನಿಗೆ ಶಾಸ್ತ್ರ

ಕನ ಪ್ರಭಾವವನ್ನೂ, ಅವನಲ್ಲಿದ್ದ ಮಂತ್ರವಿದ್ಯೆಯ ಮಹಿಮೆಯನ್ನೂ ತಿಳಿಸಿ "ಓ ಗಂಧರ್ವರಾಜಾ! ನೀನು ಈ ಮಹಾತ್ಮನ ಅಸ್ಥಿಯನ್ನು ತೆಗೆದುಕೊಂಡು ಹೋಗಿ ಒಂದು ಪುಣ್ಯನದಿಯಲ್ಲಿಡು! ಇದರಿಂದ ನಿನಗೆ ಕ್ಷೇಮವುಂಟು" ಎಂದನು. ಅದರಂತೆ ಗಂಧರ್ವನು ಆ ಅಸ್ಥಿಗಳನ್ನು ಸರಸ್ವತೀನದಿಯಲ್ಲಿಟ್ಟು, ಸ್ನಾನ ಮಾಡಿ ಸುಖದಿಂದ ತನ್ನ ಲೋಕಕ್ಕೆ ಹೋದನು. ದೇವೇಂದ್ರಾ! ಇದರಿಂದ ಆ ಮಂತ್ರದ ಪ್ರಭಾವವೆಷ್ಟೆಂಬುದು ವ್ಯಕ್ತವಾಗುವುದು! ಭಯಕಾಲಗಳಲ್ಲಿ ಯಾವನು ಈ ಮಂತ್ರವನ್ನು ಕೇಳುವನೋ, ಅಥವಾ ಧ್ಯಾನ ಮಾಡುವನೋ, ಅವನು ಎಲ್ಲಾ ಭಯದಿಂದಲೂ ಬಿಡಲ್ಪಡುವನು. ಕ್ರೂರ ಭೂತಗಳ ಕಣ್ಣಿಗೆ ಬೀಳಲಾರನು" ಎಂದನು. ರಾಜೇಂದ್ರಾ! ದೇವೇಂದ್ರನು ವಿಶ್ವರೂಪನಿಂದ ಈ ಮಂತ್ರವನ್ನುಪದೇಶಹೊಂದಿದಮೇಲೆ, ದಾನವರನ್ನು ಜಯಿಸಿ, ತ್ರೈಲೋಕ್ಯಾಧಿಪತ್ಯವನ್ನು ಹೊಂದಿ ಸುಖದಿಂದಿದ್ದನು. ಇಲ್ಲಿಗೆ ಎಂಟನೆಯ ಅಧ್ಯಾಯವು.

---

{ ವಿಶ್ವರೂಪನು ದಾನವರಲ್ಲಿ ಪಕ್ಷಪಾತವನ್ನು ತೋರಿಸಿದುದಕ್ಕಾಗಿ ಇಂದ್ರನು ಅವನ ತಲೆಗಳನ್ನು ಕತ್ತರಿಸಿದುದು. ಇಂದ್ರನಮೇಲೆ ಕೋಪದಿಂದ ತ್ವಷ್ಟನು ವೃತ್ರಾಸುರನನ್ನು ಹುಟ್ಟಿಸಿದುದು. ಇವನಿಗೆ ಭಯಪಟ್ಟು ದೇವತೆಗಳು ವಿಷ್ಣುವನ್ನು ಸ್ತುತಿಸಿದುದು }

ಓ ಪರೀಕ್ಷಿದ್ರಾಜಾ! ಕೇಳು! ದೇವಪುರೋಹಿತನಾದ ವಿಶ್ವರೂಪನಿಗೆ ಸೋಮಪೀಥವೆಂದೂ, ಸುರಾಪೀಥವೆಂದೂ, ಅನ್ನಾದವೆಂದೂ ಮೂರುತಲೆಗಳಿದ್ದುದಾಗಿ ಶ್ರುತಿಗಳಿಂದ ತಿಳಿದುಬರುವುದು. ಈ ವಿಶ್ವರೂಪನಿಗೆ ದೇವತೆಗಳು ತಂದೆಯ ಕುಲದವರು. ದಾನವರು ತಾಯಿಯ ಕುಲದವರು. ಇವನು ತನ್ನ ಪಿತೃಗಳಾದ ದೇವತೆಗಳಲ್ಲಿ ಪೌರೋಹಿತ್ಯಕ್ಕಾಗಿ ಒಪ್ಪಿಕೊಂಡದ್ದುದರಿಂದ,ಯಜ್ಞಕಾಲಗಳಲ್ಲಿ ಅವರಿಗೆಹವಿರ್ಭಾಗಗಳನ್ನುಕೊಡುವಾಗ,ಎಲ್ಲರಿಗೂ ಚೆನ್ನಾಗಿ ತಿಳಿಯುವಂತೆ ಆಯಾದೇವತೆಗಳ ಹೆಸರನ್ನು ಹಿಡಿದು, ಗಟ್ಟಿಯಾಗಿ ಕೂಗಿ ಕರೆಯುತ್ತ, ಬಹಳ ವಿನಯದಿಂದಲ್ಲೇ ಅವರವರಿಗೆ ಸಲ್ಲಿಸುತಿದ್ದನು. ಆದರೆ ಇವನಿಗೆ ಮಾತೃಪಕ್ಷದವರಾದ ದಾನವರಲ್ಲಿ ಸ್ನೇಹವು ತಪ್ಪಲಿಲ್ಲ

ಆದುದರಿಂದ ದೇವತೆಗಳಿಗೆ ತಿಳಿಯದಂತೆ ಏಕಾಂತವಾಗಿ ಆಗಾಗ ದಾನವ ರಿಗೂ ಹವಿರ್ಭಾಗವನ್ನು ಸಲ್ಲಿಸುತಿದ್ದನು. ಹೀಗೆ ವಿಶ್ವರೂಪನು ದೇ ವತೆಗಳನ್ನು ವಂಚಿಸಿ, ದಾನವರಿಗೆ ಯಜ್ಞಭಾಗಗಳನ್ನು ಸಲ್ಲಿಸುವುದನ್ನು ತಿಳಿ ದು, ಇಂದ್ರನು, ಅವನ ಕಪಟಸ್ವಭಾವಕ್ಕೆ ಹೆದರಿ, ಆ ಕ್ಷಣವೇ ಅವನ ತಲೆ ಗಳನ್ನು ಕತ್ತರಿಸಿಬಿಟ್ಟನು. ಹೀಗೆ ಕತ್ತರಿಸಿ ಬಿದ್ದ ತಲೆಗಳಲ್ಲಿ ಸೋಮಪೀಥ ವೆಂಬುದು ಕಪಿಂಜಲಪಕ್ಷಿಯಾಯಿತು. ಸುರಾಪೀಥವೆಂಬುದು ಕಲವಿಂಕಪಕ್ಷಿ ಯಾಯಿತು. ಅನ್ನಾದವೆಂಬುದು ತಿತ್ತಿರಿಪಕ್ಷಿಯಾಯಿತು. ಇಂದ್ರನು ಆ ಬ್ರಾಹ್ಮಣನ ತಲೆಯನ್ನು ಕಡಿದುದರಿಂದ, ಬ್ರಹ್ಮಹತ್ಯಾಪಾತಕವು ಆಕಾರ ಸಹಿತವಾಗಿ ಅವನ ಮುಂದೆ ಬಂದುನಿಂತಿತು. ಇಂದ್ರನು ಅದನ್ನು ನೀಗಿಸಿ ಕೊಳ್ಳುವುದಕ್ಕೆ ಶಕ್ತನಾಗಿದ್ದರೂ, ಬೊಗಸೆಯೊಡ್ಡಿ ಅದನ್ನು ಸ್ವೀಕರಿಸಿದ ನು. ಒಂದುಸಂವತ್ಸರದವರೆಗೆ ಹಾಗೆಯೇ ಇದ್ದು, ಕೊನೆಗೆ ಜನಾಪವಾ ದವನ್ನು ತಪ್ಪಿಸಿಕೊಳ್ಳುವುದಕ್ಕಾಗಿ, ಆ ಪಾಪವನ್ನು ನಾಲ್ಕು ಭಾಗಗಳಾಗಿ ವಿಭಾಗಿಸಿ, ಭೂಮಿ, ನೀರು, ವೃಕ್ಷಗಳು, ಹೆಂಗಸರು, ಈ ನಾಲ್ಕುಸ್ಥಳಗಳಿ ಗೂ ಒಂದೊಂದುಭಾಗವನ್ನು ಹಂಚಿಬಿಟ್ಟನು. ಈ ನಾಲ್ವರಲ್ಲಿ ಭೂಮಿಯು, ತನ್ನಲ್ಲಿ ಬಿದ್ದಹಳ್ಳಗಳು ತಾವಾಗಿಯೇ ಮುಚ್ಚಿಕೊಳ್ಳಬೇಕೆಂಬ ವರವನ್ನು ಪಡೆ ದು, ಆ ಬ್ರಹ್ಮಹತ್ಯೆಯ ಒಂದು ಭಾಗವನ್ನು ಧರಿಸುವುದಕ್ಕೆ ಒಪ್ಪಿದಳು. ಆ ಪಾಪವೇ ಈಗ ನೆಲದಲ್ಲಿ ಚೌಳುಪ್ಪಾಗಿ ಕಾಣಿಸುವುದು. ವೃಕ್ಷಗಳು ತ ಮ್ಮನ್ನು ಎಷ್ಟಾವೃತ್ತಿ ಕತ್ತರಿಸಿದರೂ ತಿರುಗಿ ಚಿಗುರುವಹಾಗಿ ವರವನ್ನು ಪ ಡೆದು, ಆ ಪಾಪದ ಎರಡನೆಯ ಭಾಗವನ್ನು ಗ್ರಹಿಸಿದುವು. ಆ ಪಾಪವೇ ಈ ಗ ಮರದ ರಸವಾಗಿ (ಅಂಟು) ಹೊರಡುತ್ತಿರುವುದು. ಸ್ತ್ರೀಯರು ಪ್ರಸವ ಕಾಲದವರೆಗೆ ತಮಗೆ ಸಂಭೋಗಸಾಮರ್ಥ್ಯವಿರಬೇಕೆಂಬ ವರವನ್ನು ಪಡೆದು. ಆ ಪಾಪದ ಮೂರನೆಯ ಭಾಗವನ್ನು ಪರಿಗ್ರಹಿಸಿದರು. ಆ ಪಾಪವೇ ಈಗ ಹೆಂಗಸರಲ್ಲಿ ತಿಂಗಳುತಿಂಗಳಿಗೂ ರಜೋರೂಪವಾಗಿ ಕಾಣಿಸುತ್ತಿರುವುದು. ಜಲವು ತಾನು ಎಲ್ಲಾಕಡೆಗೂ ಹರಡಿಕೊಳ್ಳತಕ್ಕವರವನ್ನು ಪಡೆದು,ಆ ಪಾ ಪವನ್ನು ಪರಿಗ್ರಹಿಸಿತು. ಆ ಪಾಪವೇ ಈಗ ನೀರಿನಲ್ಲಿ ಗುಳ್ಳೆಗಳಾಗಿಯೂ, ನೊರೆಗಳಾಗಿಯೂ ಕಾಣುತ್ತಿರುವುದು. ಆಮೇಲೆ, ಅತ್ತಲಾಗಿ ವಿಶ್ವರೂಪನ

ತಂದೆಯಾದ ತ್ವಷ್ಟನು, ಪುತ್ರಮರಣವಾರ್ತೆಯನ್ನು ಕೇಳಿ, ಇಂದ್ರನಮೇಲೆ ಅತ್ಯಾಗ್ರಹಗೊಂಡು, ಆ ಇಂದ್ರನನ್ನು ಕೊಲ್ಲುವುದಕ್ಕಾಗಿ ಒಬ್ಬ ಪುತ್ರನನ್ನು ಪಡೆಯಬೇಕೆಂದು ಒಂದು ಯಾಗವನ್ನಾರಂಭಿಸಿದನು. ಹೋಮವನ್ನು ಮಾಡುವಾಗ "ಓ ಇಂದ್ರಶತ್ರೋ ! ಬೆಳೆದುಬಾ ಬೆಳೆದುಬಾ ! ಶೀಘ್ರದಲ್ಲಿ ನಿನ್ನ ಶತ್ರುವನ್ನು ಕೊಲ್ಲು!" ಎಂದು ಹೇಳುತ್ತ, ಅಗ್ನಿಯಲ್ಲಿ ಹವಿಸ್ಸನ್ನು ಬಿಟ್ಟನು. ಆ ಹವಿಸ್ಸು ಅಗ್ನಿಯಲ್ಲಿ ಬಿದ್ದೊಡನೆಯೇ ದಕ್ಷಿಣಾಗ್ನಿಕುಂಡದಿಂದ ಭಯಂಕರಸ್ವರೂಪವುಳ್ಳ ಒಂದು ರಾಕ್ಷಸಾಕೃತಿಯು ಮೇಲಕ್ಕೆದ್ದುಬಂದು, ಲೋಕನಾಶಕ್ಕಾಗಿ ಹೊರಟಿರುವ ಪ್ರಳಯಕಾಲದ ಮೃತ್ಯುವೋ ಎಂಬಂತೆ ಕಾಣಿಸಿತು. ಅದರ ದೇಹವು ದಿನದಿನಕ್ಕೂ ಒಂದೊಂದು ಬಾಣಪಾತದಷ್ಟು ಪ್ರಮಾಣಕ್ಕೆ ಸುತ್ತಲೂ ಉಬ್ಬಿಬರುತಿತ್ತು. ಆ ರಾಕ್ಷಸನ ಮೈಬಣ್ಣವು ಕಾಡುಗಿಚ್ಚಿನಿಂದ ಉರಿಯುವ ಬೆಟ್ಟದಂತೆಯೂ, ಸಂಧ್ಯಾಕಾಲದ ಮೇಘದಂತೆಯೂ ಕ್ರೂರತೇಜಸ್ಸಿನಿಂದ ಜ್ವಲಿಸುತಿತ್ತು. ಅವನ ಗಡ್ಡಮೀಸೆಗಳು, ಕೆಂಪಗೆ ಕಾಯಿಸಿದ ತಾಮ್ರದ ಬಣ್ಣವನ್ನು ಹೋಲುತಿದ್ದುವು. ಅವನ ಕಣ್ಣಾಲಿಗಳು ಮಧ್ಯಾಹ್ನಕಾಲದ ಸೂರ್ಯಬಿಂಬದಂತೆ ಭಯಂಕರವಾಗಿ ಜ್ವಲಿಸುತಿದ್ದುವು. ಆಗಾಗ ಅವನು, ತೀಕ್ಷ್ಣವಾದ ಅಲಗುಗಳಿಂದ ಜ್ವಲಿಸುತ್ತಿರುವ ತನ್ನ ತ್ರಿಶೂಲಾಗ್ರದಲ್ಲಿ, ಭೂಮ್ಯಾಕಾಶಗಳನಡುವೆ ಸಿಕ್ಕಿದ ವಸ್ತುಗಳನ್ನೆಲ್ಲಾ ಪೋಣಿಸಿಕೊಂಡು, ಸಂತೋಷದಿಂದ ಕುಣಿದಾಡುವುದು, ಆಗಾಗ ಭಯಂಕರವಾಗಿ ಅಟ್ಟಹಾಸದಿಂದ ನಗುವುದು, ಭೂಮಿಯೆಲ್ಲವೂ ನಡುಗುವಂತೆ ಕಾಲಿಂದ ನೆಲವನ್ನೊದೆಯುವುದು, ಈ ವಿಧವಾದ ವಿನೋದಗಳಿಂದ ಬೇಗ ಬೆಳೆಯುತಿದ್ದನು. ಮತ್ತು ಅವನಿಗೆ ಬೆಟ್ಟದ ತಪ್ಪಲಂತೆ ಅಗಲವಾದ ಮೋರೆ! ಪರ್ವತಗುಹೆಯಂತೆ ಆಳವಾದ ಬಾಯಿ! ಆಕಾಶವನ್ನು ಭೇದಿಸುವಂತೆ ಉಬ್ಬಿದ ತಲೆ! ನಕ್ಷತ್ರಗಳನ್ನು ನೆಕ್ಕುವಂತೆ ನೀಡಿದ ನಾಲಗೆ ! ಮೂರುಲೋಕಗಳನ್ನೂ ಒಟ್ಟಾಗಿ ನುಂಗಿ ಬಿಡುವಂತೆ ಅಗಲಿಸಿದ ಬಾಯಿ! ನೋಡಿದವರನ್ನು ನಡುಗಿಸುವಂತೆ ನೀಡಿದ ಕೋರೆದಾಡೆಗಳು ! ಅಂತಹ ಭಯಂಕರಸ್ವರೂಪದಿಂದ ಕಾಲಮೃತ್ಯುವಿನಂತೆ ಕಾಣಿಸುತಿದ್ದನು. ಆಗಾಗ ಆ ರಾಕ್ಷಸನು ಭಯಂಕರವಾದ ಮುಖವ

ನ್ನು ತೆರೆದು ಆಕಳಿಸುವುದನ್ನು ನೋಡಿ, ಸಮಸ್ತಭೂತಗಳೂ ಭಯದಿಂದ ಚದರಿ ನಾನಾದಿಕ್ಕುಗಳಿಗೆ ಓಡಿದುವು. ರಾಜೇಂದ್ರಾ! ಆ ತ್ವಷ್ಟನ ತಪೋ ಬಲವೇ ಹೀಗೆ ರಾಕ್ಷಸಾಕೃತಿಯಿಂದ ಬಂದು ಲೋಕವೆಲ್ಲವನ್ನೂ ನುಂಗುವು ದಕ್ಕೆ ತೊಡಗಿತಲ್ಲದೆ ಬೇರೆಯಲ್ಲ! ಹೀಗೆ ಅವನ ದೇಹವು ಲೋಕವೆಲ್ಲವನ್ನೂ ಆಕ್ರಮಿಸುತ್ತ ಬಂದುದರಿಂದ ಅವನಿಗೆ ವೃತ್ರನೆಂದು ಹೆಸರಾಯಿತು. ಈತ ನು ಪರಮಪಾಪಿಷ್ಠನು! ಇಂದ್ರಾದಿಲೋಕಪಾಲರಿಗೆಲ್ಲಾ ವಿರೋಧಿಯಾಗಿ, ಲೋಕದಲ್ಲಿ ಯಾರಿಗೂ ತಡೆಯಲಸಾಧ್ಯವಾದ ಕ್ರೂರಸ್ವಭಾವವುಳ್ಳ ವನಾಗಿದ್ದನು. ಇವನನ್ನು ನಿಗ್ರಹಿಸುವುದಕ್ಕಾಗಿ ಇಂದ್ರಾದಿಲೋಕಪಾಲ ಕರೆಲ್ಲರೂ ತಮ್ಮತಮ್ಮ ಸೈನ್ಯಗಳೊಡನೆ ಬಂದು, ದಿವ್ಯಾಯುಧಗಳಿಂದಲೂ, ಅ ಸ್ತ್ರಶಸ್ತ್ರಗಳಿಂದಲೂ ಅವನನ್ನು ಕೊಲ್ಲುವುದಕ್ಕೆ ಯತ್ನಿಸಿದರು ದೇವತೆಗಳು ಅವನಮೇಲೆ ಯಾವಯಾವ ಶಸ್ತ್ರಾಸ್ತ್ರಗಳನ್ನು ಪ್ರಯೋಗಿಸಿದರೂ, ಆ ರಾಕ್ಷ ಸನು ಅವೆಲ್ಲವನ್ನೂ ಒಂದೇ ಆಪೋಶನವಾಗಿ ನುಂಗುತ್ತಬಂದನು. ಅವನ ಅಸಾಧಾರಣಶಕ್ತಿಯನ್ನು ನೋಡಿ ದೇವತೆಗಳಿಗೆ ಆಶ್ಚರ್ಯವುಂಟಾಯಿತು! ದೇವತೆಗಳ ವೀರ್ಯವೆಲ್ಲವೂ ಅಡಗಿಹೋಯಿತು! ಅವರೆಲ್ಲರೂ ದುಃಖದಿಂದ ಕೊರಗುತ್ತ ಆದಿಪೂರುಷನಾದ ಭಗವಂತನನ್ನು ಸ್ಮರಿಸಿ, ತಮ್ಮೊಳಗೆ ತಾವು ಚಿಂತಿಸುವರು. “ಅಯ್ಯೋ! ಇನ್ನು ನಮಗೆ ಆ ಭಗವಂತನ ಪಾದಾಶ್ರಯ ವೊಂದಲ್ಲದೆ ಬೇರೆ ಗತಿಯಿಲ್ಲ! ಪೃಥಿವಿ, ಅಪ್ಪು, ತೇಜಸ್ಸು, ವಾಯು, ಆ ಕಾಶಗಳೆಂಬ ಪಂಚಮಹಾಭೂತಗಳೂ, ಮೂರುಲೋಕಗಳೂ, ಬ್ರಹ್ಮದೇ ವನೇ ಮೊದಲಾಗಿ ನಾವೆಲ್ಲರೂ ಯಾವನ ನಿಯಮಕ್ಕೊಳಪಟ್ಟು, ಬಯಭ ಕ್ತಿಗಳಿಂದ ಪೂಜೆಯನ್ನೊಪ್ಪಿಸುವೆವೋ, ಮೃತ್ಯುವೂಕೂಡ ಯಾವ ನಿಗೆ ಭಯಪಡುವುದೋ, ಅಂತಹ ಪರಮಪುರುಷನುಹೊರತು ನಮಗೆ ಬೇರೆ ದಿಕ್ಕಾರು! ಆ ಭಗವಂತನಲ್ಲಿ ಯಾವ ಮಹಾಮಹಿಮೆಯಿದ್ದರೂ ಅ ದು ಅವನಿಗೆ ಸಹಜವೇಹೊರತು ಆಶ್ಚರ್ಯಕರವಲ್ಲ! ಅವನು ಪೂರ್ಣಕಾಮ ನು! ಮಹಾನಂದಮಯನಾದುದರಿಂದ ಆತ್ಮಾನುಭವದಲ್ಲಿ ನೆಲೆಗೊಂಡ ವನು! ರಾಗದ್ವೇಷಾದಿದೋಷಗಳಿಲ್ಲದವನು. ಸರ್ವೇಶ್ವರನು. ಅಂತಹ ಪರ ಮಪುರುಷನನ್ನು ಬಿಟ್ಟು ಬೇರೆಯವರನ್ನು ಆಶ್ರಯಿಸತಕ್ಕವನು, ನಾಯಿಯ

ಬಾಲವನ್ನು ಹಿಡಿದು ಸಮುದ್ರವನ್ನು ದಾಟುವುದಕ್ಕೆ ಪ್ರಯತ್ನಿಸುವ ಮೂ ಢನಂತೆಯೇ ಹೊರತು ಬೇರೆಯಲ್ಲ. ಮೊದಲು ಸತ್ಯವ್ರತನೆಂಬ ಮನುವು, ತನಗೆ ನಾವೆಯಂತಿದ್ದ ಭೂಮಿಯು ಪ್ರಳಯಸಮುದ್ರದಲ್ಲಿ ಮುಳುಗಿಹೋ ಗುತಿದ್ದಾಗ,ಅದನ್ನು, ಅಲ್ಲಿಮತ್ಸ್ಯಮೂರ್ತಿಯಾಗಿದ್ದ ಯಾವನ ಕೋರೆಹಲ್ಲು ಗಳಲ್ಲಿ ಕಟ್ಟಿ, ಮಹಾವಿಪತ್ತನ್ನು ತಪ್ಪಿಸಿಕೊಂಡನೋ, ಆ ಭಗವಂತನೇ ಈಗ ನಮಗೂ ವೃತ್ರಾಸುರನಿಂದುಂಟಾದ ಭಯವನ್ನು ತಪ್ಪಿಸಬೇಕಲ್ಲದೆ ಬೇರೆಯ ಲ್ಲ. ಹಿಂದೆ ಪ್ರಳಯಕಾಲದಲ್ಲಿ ಯಾವನ ನಾಭಿಕಮಲದಿಂದ ಮೊದಲು ಹು ಟ್ಟಿದ ಚತುರ್ಮುಖನೂಕೂಡ, ತನ್ನ ಸುತ್ತಲೂ ಬಿರುಗಾಳಿಯಿಂದೆದ್ದ ಭಯಂಕರವಾದ ಅಲೆಗಳಿಂದ ಮೊರೆಯುತ್ತಿರುವ ಸಮುದ್ರಜಲವನ್ನು ಹೊರತು ಬೇರೊಂದನ್ನೂ ಕಾಣದೆ, ತನ್ನ ಉತ್ಪತ್ತಿಗೆ ಕಾರಣವಸ್ತು ವಾವುದೆಂದೂ ತಿಳಿಯಲಾರದೆ, ಬೇರೆ ಯಾರೂ ದಿಕ್ಕಿಲ್ಲದೆ ಕಳವಳಿಸುತಿ ದ್ದು, ಕೊನೆಗೆ ಯಾವನ ಅನುಗ್ರಹದಿಂದಲೇ ಆ ಭಯವನ್ನು ದಾಟಿದನೋ ಆ ಪರಮಪುರುಷನೇ ಈಗ ನಮಗೂ ದಿಕ್ಕಾಗಲಿ! ಯಾವನು ಎಣೆಯಿಲ್ಲದವ ನಾಗಿ, ಸರ್ವಸ್ವತಂತ್ರನಾಗಿದ್ದು, ತನ್ನ ಮಾಯೆಯಿಂದ ನಮ್ಮೆಲ್ಲರನ್ನೂ ಸೃ ಷ್ಟಿಸಿದನೋ, ಯಾವನ ಅನುಗ್ರಹದಿಂದಲೇ ನಾವು ಈ ವ್ಯಷ್ಟಿರೂಪ ವಾದ ಜಗತ್ತನ್ನು ಸೃಷ್ಟಿಸಿದೆವೋ, ಯಾವನು ನಮ್ಮ ಹೃದಯದಲ್ಲಿಯೇ ಇದ್ದು ನಮ್ಮನ್ನು ಪ್ರೇರಿಸುತಿದ್ದರೂ, ಅವನ ದಿವ್ಯಸ್ವರೂಪವನ್ನು ಕಾಣ ಲಾರದೆ ನಮಗೆ ನಾವೇ ಸ್ವತಂತ್ರರೆಂದು ಭ್ರಮಿಸುತ್ತಿರುವೆವೋ, ಅಂತಹ ವಿಚಿತ್ರಶಕ್ತಿಯುಳ್ಳ ಭಗವಂತನೇ ನಮಗೆ ರಕ್ಷಕನು! ಯಾವನು ನಮ್ಮಲ್ಲಿ ತನ್ನವರೆಂಬ ಅಭಿಮಾನವಿಟ್ಟು ರಕ್ಷಿಸುವುದಕ್ಕಾಗಿ, ಒಂದೊಂದುಯುಗದಲ್ಲಿ ಯೂ ತನ್ನಸಂಕಲ್ಪದಿಂದ ದೇವತಿರ್ಯಙ್ಮನುಷ್ಯಜನ್ಮಗಳಲ್ಲಿ ಬೇರೆಬೇರೆ ರೂ ಪಗಳಿಂದ ಅವತಾರವನ್ನೆತ್ತಿ, ನಮಗಿರುವ ಶತ್ರುಬಾಧೆಯನ್ನು ನೀಗಿಸುತ್ತಿರು ವನೋ ಆ ಪರಮಪುರುಷನೇ ಈಗಲೂ ನಮ್ಮನ್ನು ರಕ್ಷಿಸಬೇಕಲ್ಲದೆ ಬೇರೆ ಯಲ್ಲ! ಆದುದರಿಂದ ನಾವೆಲ್ಲರೂ ಈಗ ಭಕ್ತವತ್ಸಲನಾಗಿಯೂ, ನಮಗೆ ಪರದೈವವಾಗಿಯೂ, ಪ್ರಕೃತಿಪುರುಷಶರೀರಕನಾಗಿಯೂ, ಸಮಸ್ತ ಪ್ರಪಂ ಚಕ್ಕೂ ಅಂತರಾತ್ಮನಾಗಿಯೂ ಆ ಪ್ರಕೃತಿಪುರುಷರಿಗಿಂತಲೂ ವಿಲಕ್ಷಣ

ನಾಗಿಯೂ ಇರುವ ಆ ಭಗವಂತನನ್ನೇ ಶರಣುಹೊಂದಬೇಕು. ಅವನು ತ
ಪ್ಪದೆ ನಮಗೆ ಕ್ಷೇಮವನ್ನುಂಟುಮಾಡುವನು. ಈಗ ನಾವು ಮಾಡಬೇಕಾದ
ಕಾರ್ಯವು ಇದೊಂದೇಹೊರತುಬೇರೆಗತಿಯಿಲ್ಲ!"ಎಂದು ನಿಶ್ಚಯಿಸಿಕೊಂಡರು.
ಹೀಗೆ ದೇವತೆಗಳೆಲ್ಲರೂ ಭಗವಂತನ ಗುಣಗಳನ್ನು ಕೊಂಡಾಡುತ್ತಿರುವಷ್ಟರ
ಲ್ಲಿಯೇ, ಅವರ ಪಶ್ಚಿಮದಿಕ್ಕಿನಲ್ಲಿ ಶ್ರೀಮಹಾವಿಷ್ಣುವು ಶಂಖಚಕ್ರಗದಾಧಾ
ರಿಯಾಗಿ ಅವರಕಣ್ಣಿಗೆ ಗೋಚರಿಸಿದನು. ಸುನಂದರೇ ಮೊದಲಾದ ಹದಿನಾ
ರುಮಂದಿ ಮಹಾಪುರುಷರು ಅವನನ್ನು ಹಿಂಬಾಲಿಸಿ ಬರುತ್ತಿದ್ದರು. ಶ್ರೀವ
ತ್ಸವೆಂಬ ಮಚ್ಚೆ, ಕೌಸ್ತುಭಮಣಿ, ಇವೆರಡುಹೊರತು ಬೇರೆಎಲ್ಲಾ ಭಾಗಗ
ಳಲ್ಲಿಯೂ ಇವರೂ ಆ ಭಗವಂತನನ್ನೇ ಹೋಲುತ್ತಿದ್ದರು. ಹೀಗೆ ಭಕ್ತವರ್ಗ
ದಿಂದ ಪರಿವೃತನಾದ ಭಗವಂತನ ಸ್ವರೂಪವನ್ನು ಕಂಡೊಡನೆ, ಇಂದ್ರಾದಿ
ದೇವತೆಗಳೆಲ್ಲರೂ, ಆನಂದದಿಂದ ಮೈಮರೆತು, ನೆಲದಮೇಲೆ ದಂಡಾಕಾರ
ವಾಗಿ ಬಿದ್ದು ನಮಸ್ಕರಿಸಿದರು. ಸ್ವಲ್ಪಕಾಲದವರೆಗೆ ಮೈಮೇಲೆ ಪ್ರಜ್ಞೆಯಿ
ಲ್ಲದಂತೆ ಹಾಗೆಯೇ ಬಿದ್ದಿದ್ದು, ಕೊನೆಗೆ ಎಲ್ಲರೂ ಮೆಲ್ಲಗೆ ಮೇಲೆದ್ದುನಿಂತು,
ಅವನಮುಂದೆ ಕೈಜೋಡಿಸಿ ಹೀಗೆಂದು ಸ್ತೋತ್ರಮಾಡುವರು. "ಓ
ದೇವಾ! ಯಜ್ಞಾದಿಕರ್ಮಗಳು ಮೋಕ್ಷವಿರೋಧಿಗಳೆನಿಸಿದ್ದರೂ ಅವು
ಗಳನ್ನು ನಿನ್ನ ಆರಾಧನರೂಪವಾಗಿ ನಡೆಸಿದಾಗ, ಅವೇ ಉತ್ತಮಪು
ರುಷಾರ್ಥವಾದ ಮೋಕ್ಷಕ್ಕೆ ಕಾರಣವಾಗುವುದು. ಯಜ್ಞವೇ ನಿನ್ನ
ಸೃಷ್ಟಿಸಾಮರ್ಥ್ಯವು! ಆ ಯಜ್ಞಾದಿಗಳನ್ನು ಮುಗಿಸುವುದಕ್ಕೆ ಬೇಕಾ
ದಷ್ಟು ಆಯುಸ್ಸನ್ನು ಕೊಡತಕ್ಕವನೂ ನೀನೇ! ಆ ಯಜ್ಞಗಳಿಗೆ ಫಲವನ್ನು
ಕೊಟ್ಟು ಅನಿಷ್ಟನಿವಾರಣವನ್ನುಮಾಡಿ ರಕ್ಷಿಸತಕ್ಕವನೂ ನೀನೇ! ಆಶ್ರಿತ
ರಕ್ಷಣಕ್ಕಾಗಿ ಸದಾಕಾಲದಲ್ಲಿಯೂ ಸುದರ್ಶನಚಕ್ರವನ್ನು ಕೈಯಲ್ಲಿ ಧರಿಸಿರ
ತಕ್ಕ ನಿನಗೆ ನಮಸ್ಕಾರವು. ನಿನ್ನ ನಾಮಸ್ಮರಣಮಾತ್ರವೇ ಸಮಸ್ತ ವಿಪ
ತ್ತುಗಳನ್ನೂ ನೀಗಿಸುವುದು. ಸ್ವರ್ಗ, ನರಕ, ಮೋಕ್ಷಗಳೆಂಬ ಮೂರು ಬಗೆ
ಯ ಗತಿಗಳನ್ನೂ, ನೀನೇ ನಡೆಸತಕ್ಕವನು. ನೀನು ಜಗತ್ಕಾರಣನು. ಪ್ರಕೃ
ತಿಪುರುಷರಿಗಿಂತಲೂ ವಿಲಕ್ಷಣನು. ನಿನ್ನಿಂದ ಸೃಷ್ಟಿಸಲ್ಪಟ್ಟವರಾಗಿ, ನಿನ್ನ
ನಿಯಮಕ್ಕೊಳಪಟ್ಟಿರುವ ನಾವೊಬ್ಬರೂ ಅಂತಹ ನಿನ್ನ ಸ್ವರೂಪವನ್ನು, ಕಾ

ಣಲಾರೆವು. ಓ ಷಾಡ್ಗುಣ್ಯಪರಿಪೂರ್ಣಾ! ನಿನಗೆ ನಮಸ್ಕಾರವು! ಓ ನಾರಾಯ ಣಾ! ವಾಸುದೇವಾ!ಆದಿಪುರುಷಾ! ಮಹಾಪುರುಷಾ' ಮಹಾನುಭಾವಾ! ಪರ ಮಮಂಗಳಸ್ವರೂಪಾ!ಪರಮಕಲ್ಯಾಣಗುಣಾಕರಾ!ಪರಮಕಾರುಣಿಕಾ!ಜಗ ದಾಧಾರಾ!ಲೋಕೈಕನಾಥಾ!ಸರ್ವೇಶ್ವರಾ! ಓ ಲಕ್ಷ್ಮೀನಾಥಾ! ನಿನಗೆ ನಮ ಸ್ಕಾರವು ದೇವಾ! ಜ್ಞಾನಿಗಳಾದ ಪರಮಹಂಸರು, ಸನ್ಯಾಸಧರ್ಮದ ಲ್ಲಿರುವ ಪರಿವ್ರಾಜಕರು,ಇವರೇ ಮೊದಲಾಗಿ ಯೋಗಿಗಳೆಲ್ಲರೂ ಉತ್ತಮವಾ ದ ಸಮಾಧಿಯೋಗದಿಂದ ನಿನ್ನನ್ನು ಸಾಕ್ಷಾತ್ಕರಿಸಿರುವರು. ಅವರೆಲ್ಲರೂ ಆ ಕರ್ಮಜ್ಞಾನಬಲದಿಂದುಂಟಾದ ಭಕ್ತಿಯೋಗದಿಂದ ಅಜ್ಞಾನವೆಂಬ ಆವ ರಣವನ್ನು ಭೇದಿಸಿ, ಮನಶ್ಶುದ್ಧಿಯನ್ನುಂಟುಮಾಡಿಕೊಂಡು ಆತ್ಮಸ್ವರೂ ಪವನ್ನು ತಿಳಿಯುವರು. ಹಾಗೆ ಆತ್ಮಸ್ವರೂಪವನ್ನು ತಿಳಿದಮೇಲೆ ಆ ಜೀ ವಾತ್ಮನಿಗೂ ಅಂತರ್ಯಾಮಿಯಾಗಿಯೂ, ಮಹಾನಂದಸ್ವರೂಪನಾಗಿಯೂ ಇರುವ ನಿನ್ನನ್ನು ಕಾಣುವರು. ಲೋಕದ ಸೃಷ್ಟಿಸ್ಥಿತಿಸಂಹಾರಗಳಿಗೆ ನೀನೇ ಕರ್ತನು. ಈ ಸೃಷ್ಟ್ಯಾದಿಕಾರ್ಯಗಳೆಲ್ಲವೂ ನಿನ್ನ ಲೀಲೆಗಳಲ್ಲದೆ ಬೇರೆಯಲ್ಲ. ಈ ನಿನ್ನ ವ್ಯಾಪಾರಗಳು ಪ್ರಾಕೃತಜನರ ವ್ಯಾಪಾರಗಳಂತಲ್ಲ. ಅವುಗಳನ್ನು ಯಾರೂ ತಿಳಿಯಲಾರರು. ನಮ್ಮಂತೆ ನೀನು ಬೇರೆ ಆಧಾರವನ್ನಾಗಲಿ, ಸಹಾಯವನ್ನಾಗಲಿ ಅಪೇಕ್ಷಿಸತಕ್ಕವನಲ್ಲ. ಸತ್ವಾದಿಗುಣಗಳೊಂದೂ ನಿನ್ನ ನ್ನು ಕದಲಿಸಲಾರವು. ಯಾವ ವಿಕಾರಗಳಿಗೂ ನೀನು ಈಡಾಗತಕ್ಕವನಲ್ಲ. ಸೂಕ್ಷ್ಮದಶೆಯಲ್ಲಿ ನಿನ್ನಲ್ಲಿಯೇ ಒಂದಾಗಿ ಸೇರಿರುವ ಚೇತನಾಚೇತನಗಳೊಡ ನೆ, ನೀನೇ ಈ ಪ್ರಪಂಚರೂಪವಾಗಿ ಹರಡಿಕೊಳ್ಳುವೆ. ಈ ಜಗತ್ತಿಗೆ ನೀನ ಲ್ಲದೆ ಬೇರೊಬ್ಬರೂ ಆಶ್ರಯವಿಲ್ಲ. ನೀನೇ ಸೃಷ್ಟಿ,ಸ್ಥಿತಿ, ಲಯ ಕಾರ್ಯಗಳನ್ನು ನಡೆಸತಕ್ಕವನು. ಆದರೆ ಕರ್ಮವಶರಾದ ಬದ್ಧಜೀವರಂತೆ, ಆ ಕಾರ್ಯಗಳಿಂದ ನೀನೂ ಸತ್ವಾದಿಗುಣಗಳಿಗೆ ವಶನಾಗಿ,ಪ್ರಪಂಚದಲ್ಲಿ ಬಿದ್ದು, ಆ ಕರ್ಮಫಲ ವನ್ನೂ ಸ್ವೀಕರಿಸಿಕೊಳ್ಳುತ್ತಿರುವೆಯೋ, ಅಥವಾ! ತತ್ವಜ್ಞನಾಗಿ ಆ ತ್ಮಾನುಭವದಲ್ಲಿ ನೆಲೆಗೊಂಡ ಜ್ಞಾನಿಯಂತೆ ಆ ಕರ್ಮಫಲಗಳನ್ನು ಅಂಟಿಸಿ ಕೊಳ್ಳದೆ ಉದಾಸೀನನಾಗಿಯೇ ಇರುವೆಯೋ, ಈ ವಿಷಯವನ್ನು ನಾ ವು ಯಾರೂ ತಿಳಿಯಲಾರೆವು. ಆದರೆ ನಿನ್ನನ್ನು ಸಂಸಾರಿಜೀವನಂತೆ ಕೇವಲ

ಕರ್ತೃವೆಂದಾಗಲಿ, ಜ್ಞಾನಿಯಂತೆ ಕೇವಲ ಉದಾಸೀನನೆಂದಾಗಲಿ ಹೇಳುವು ದಕ್ಕಿಲ್ಲ. ನಿನ್ನಲ್ಲಿ ಕರ್ತೃತ್ವವೂ, ಔದಾಸೀನ್ಯವೂ ಎರಡೂ ಕಾಣುತ್ತಿರುವುವು. ಈ ಎರಡುಸ್ವಭಾವಗಳೂ ಪರಸ್ಪರವಿರುದ್ಧಗಳಾಗಿದ್ದರೂ ನಿನ್ನಲ್ಲಿ ಮಾ ತ್ರ ಇವು ವಿರೋಧವಿಲ್ಲದೆಯೇ ಸಂಘಟಿಸುವುವು. ನೀನು ಸಮಸ್ತಚೇತನಾ ಚೇತನಗಳಿಗೂ ಅಂತರ್ಯಾಮಿಯಾಗಿ ಅವುಗಳನ್ನು ನಿಯಮಿಸತಕ್ಕವನಾದು ದರಿಂದ, ಕರ್ಮನಿಷ್ಠರಲ್ಲಿಯೂ, ಜ್ಞಾನನಿಷ್ಠರಲ್ಲಿಯೂ, ಅಂತರಾತ್ಮನಾಗಿ ಅವರಿಬ್ಬರಿಗಿಂತಲೂ ವಿಲಕ್ಷಣನಾಗಿರುವೆ! ವಿಚಿತ್ರಶಕ್ತಿಯುಳ್ಳ ನಿನ್ನಲ್ಲಿ ಎಂ ತಹ ವಿರುದ್ಧಗುಣಗಳೂ ಅನುಕೂಲಿಸಿಬರುವುವು. ನೀನು ಸರ್ವಜೀವಾಂತ ರ್ಯಾಮಿಯಾಗಿದ್ದರೂ ನಿನ್ನ ಮಹಿಮೆಯನ್ನು ಯಾರೂ ಕಾಣಲಾರರು. ನಿನ್ನ ಅನುಗ್ರಹಕ್ಕೆ ಪಾತ್ರರಲ್ಲದ ಅನೇಕ ದುರ್ಮತವಾದಿಗಳು, ನಿನ್ನ ಸ್ವರೂಪವ ನ್ನು ತಿಳಿಯುವುದಕ್ಕೆ ಯತ್ನಿಸಿ, ನಿಶ್ಚಯಜ್ಞಾನವನ್ನು ಪಡೆಯಲಾರದೆ ಸಂದೇಹ ದಿಂದ ನಾನಾವಿಧವಾಗಿ ತರ್ಕಿಸುವರು ಅಲ್ಲಲ್ಲಿ ಹುಡುಕಿ ತೆಗೆದ ಪ್ರಮಾಣಾ ಭಾಸಗಳ ಆಧಾರದಮೇಲೆ, ಆಗಾಗ ಅವರವರಿಗೆ ತೋರಿದಂತೆ ಬರೆದಿಟ್ಟ ಸು ಳ್ಳುಶಾಸ್ತ್ರಗಳಲ್ಲಿ ನಂಬಿಕೆಯಿಂದ ಮನಸ್ಸುಕಲಗಿ, ತಮ್ಮ ನಿಶ್ಚಯವೇ ಸಿದ್ಧಾಂ ತವೆಂಬ ದುರಾಗ್ರಹದಿಂದ ವಾದಿಸುವರು ಆದರೇನು! ಈ ವಾದಪ್ರತಿವಾದಗ ಳೊಂದೂ ನಿನಗೆ ಸಂಬಂಧಿಸಲಾರವು. ಪ್ರಕೃತಿಸಂಬಂಧವಾದ ದೋಷಗಳಾ ವುವೂ ನಿನ್ನನ್ನು ಮುಟ್ಟಲಾರವು ಪ್ರಳಯದಶೆಯಲ್ಲಿ ಸಮಸ್ತಪ್ರಪಂಚ ವನ್ನೂ ನಿನ್ನಲ್ಲಿಯೇ ಸೇರಿಸಿಕೊಂಡು ನೀನೊಬ್ಬನೇ ಇದ್ದವನು. ನಿನ್ನ ಮಾಯೆಗೂ ನೀನು ಒಳಪಡದವನು. ಇಂತಹ ವಿಚಿತ್ರಶಕ್ತಿಯುಳ್ಳ ನಿನ್ನಲ್ಲಿ ಎಂತಹ ವಿರುದ್ಧಧರ್ಮಗಳಾದರೂ ಹೊಂದಿಕೊಳ್ಳುವುವು. ಒಂದು ಹಗ್ಗದ ತುಂಡನ್ನುನೋಡಿ ಕೆಲವರುಹಾವೆಂದು ಭ್ರಮಿಸಬಹುದು ಕೆಲವರು ನಿಜವಾ ದ ಬುದ್ಧಿಯಿಂದ ಹಗ್ಗವೆಂದೇ ತಿಳಿದುಕೊಳ್ಳಬಹುದು. ಯಾರು ಯಾವವಿಧ ವಾಗಿ ತಿಳಿದುಕೊಂಡರೂ ಆ ಹಗ್ಗದ ಸ್ವರೂಪಕ್ಕೇನೂ ಹಾನಿಯಿಲ್ಲವ ಷ್ಟೆ? ಹಾಗೆಯೇ ನೀನೂ ಕೂಡ, 'ಸಮಬುದ್ಧಿಯುಳ್ಳವರಿಗಾಗಲಿ, ವಿಷಮ ಬುದ್ಧಿಯುಳ್ಳವರಿಗಾಗಲಿ ಅವರವರ ಬುದ್ಧಿಗೆ ತಕ್ಕಂತೆ ತೋರುತ್ತ ಏಕ ರೂಪವಾಗಿರತಕ್ಕವನು. ನೀನು ಸೃಷ್ಟ್ಯಾದಿಕಾರ್ಯಗಳಲ್ಲಿ ಸ್ವತಂತ್ರನಾದು

ದರಿಂದ ನೀನು ಕರ್ತೃವೆನಿಸಿಕೊಳ್ಳುವೆ. ಜೀವನನ್ನು ಆಯಾಕರ್ಮಗಳಲ್ಲಿ ನಿಯಮಿಸಿ ಸುಖದುಃಖಗಳನ್ನು ತಗುಲುಕಟ್ಟುವುದರಿಂದ ಪ್ರೇರಕತ್ವವೂ ನಿನ್ನಲ್ಲಿ ಹೊಂದುವುದು. ಆ ಜೀವಾತ್ಮಗಳ ಸುಖದುಃಖಗಳನ್ನು ಉದಾಸೀನನಾಗಿ ನೋಡುತ್ತಿರುವುದರಿಂದ ಉದಾಸೀನನೆಂದರೂ ನಿನಗೆ ಸಲ್ಲುವುದು. ಓ ದೇವಾ ! ಜಗತ್ತಿಗೆಲ್ಲಾ ನಿಮಿತ್ತಕಾರಣವಾದ ನೀನೇ ಅದಕ್ಕೆ ಉಪಾದಾನಕಾರಣವಾಗಿಯೂ ಇದ್ದು, ಸಮಸ್ತವಸ್ತುಗಳಲ್ಲಿಯೂ ಸೇರಿದ್ದರೂ, ನಿನಗೆ ಆ ವಿಕಾರಗಳೊಂದೂ ಅಂಟವು. ಅಚೇತನಗಳೊಡಗೂಡಿದ ಸಮಸ್ತಜೀವಗಳೂ ನಿನಗೆ ಶರೀರವಾಗಿರುವುದರಿಂದ ಆ ವಿಕಾರಗಳೆಲ್ಲವೂ ಆ ಚೇತನಾಚೇತನಗಳಲ್ಲಿಯೇ ನಿಂತುಹೋಗುವುವೇಹೊರತು ನಿನ್ನವರೆಗೆ ಮುಟ್ಟಲಾರವು. ನೀನು ಸರ್ವೇಶ್ವರನು. ಸರ್ವಜಗತ್ಕಾರಣನು. ನೀನೊಬ್ಬನೇ ಈ ಸಮಸ್ತಜಗದ್ರೂಪವಾಗಿ ತೋರಕ್ಕವನಾದುದರಿಂದ, ನಿನ್ನನ್ನು ಬಿಟ್ಟ ಬೇರೆವಸ್ತುವಿಲ್ಲ. ನಿನಗಿಂತ ಉತ್ತಮವಾಗಲಿ, ನಿನಗೆ ಸಮಾನವಾಗಲಿ ಬೇರೊಂದಿಲ್ಲ. ಓ ಭಗವಂತಾ! ಓ ಮಧುಸೂಧನಾ! ಯಾವ ಪ್ರಯೋಜನವನ್ನೂ ಇದಿರು ನೋಡದೆ. ನಿನ್ನಲ್ಲಿ ಭಕ್ತಿಯನ್ನು ಮಾಡುತ್ತಿರುವ ಹಿರಿಯರು,ನಿನ್ನ ಅಸಾಧಾರಣಗುಣಗಳನ್ನು ನೋಡಿಯೇ ನಿನ್ನನ್ನುಹೊರತು ಬೇರೊಂದನ್ನೂ ಕಣ್ಣೆತ್ತಿಯೂ ನೋಡುವವರಲ್ಲ. ಅವರು ಪುರುಷಾರ್ಥಗಳಲ್ಲಿ ಯಾವುದು ಮೇಲೆಂಬುದನ್ನು ಚೆನ್ನಾಗಿ ಬಲ್ಲರು! ಅಂತಹ ಭಾಗವತೋತ್ತಮರೆಲ್ಲರೂ ನಿನ್ನ ಗುಣಗಳೆಂಬ ಅಮೃತಸಮುದ್ರದಲ್ಲಿ ಒಂದೆರಡು ಬಿಂದುಗಳನ್ನು ರುಚಿನೋಡಿ, ಅದರಿಂದಲೇ ನಿರತಿಶಯಾನಂದವನ್ನನುಭವಿಸುತ್ತ ಪ್ರತ್ಯಕ್ಷವಾಗಿಯೂ, ಶಾಸ್ತ್ರಗಳಿಂದಲೂ ತಿಳಿಯತಕ್ಕ ಇಹಲೋಕ ಪರಲೋಕ ಸುಖಗಳೆಲ್ಲವನ್ನೂ ಮರೆತು ನಿನ್ನ ಪಾದಸೇವೆಯನ್ನು ಮಾಡುತ್ತಿರುವರು. ಓ ದೇವಾ ! ನೀನು ಸಮಸ್ತವಸ್ತುಗಳಲ್ಲಿಯೂ ಪ್ರವೇಶಿಸಿ, ಸಮಸ್ತಕ್ಕೂ ನಿಯಾಮಕನಾಗಿರುವೆ. ಅವೆಲ್ಲಕ್ಕೂ ನೀನೇ ಆಧಾರನು! ಮೂರಡಿಗಳಿಂದ ಮೂರುಲೋಕವನ್ನಳೆದ ನಿನಗೆ ಸಾಧ್ಯವಲ್ಲದ ಕಾರ್ಯವೇನುಂಟು? ಸೂರ್ಯಚಂದ್ರಾಗ್ನಿಗಳು ಮೂವರೂ ನಿನ್ನ ನೇತ್ರಗಳು! ನೀನು ಮೂರುಲೋಕವನ್ನೂ ಆಕರ್ಷಿಸತಕ್ಕ ಮಹಿಮೆಯುಳ್ಳವನು! ದೈತ್ಯ ದಾನವ ದೇವಮನುಷ್ಯಾದಿಗ

ಳೆಲ್ಲರೂ ನಿನ್ನ ವಿಭೂತಿಗಳೇ ಆದುದರಿಂದ ಅವರಲ್ಲಿ ಕೆಲವರನ್ನುಮಾತ್ರ ಕೊಲ್ಲುವುದಕ್ಕೆ ಉಪಾಯವನ್ನು ಚಿಂತಿಸುವುದೇನೋ ನಿನಗೆ ಯುಕ್ತವಲ್ಲ. ಹಾಗಿದ್ದರೂ ಹಿಂದೆ ನೀನು ಸ್ವೇಚ್ಛೆಯಿಂದಲೇ, ಮತ್ಸ್ಯ, ಕೂರ್ಮ ವರಾಹ, ನಾರಸಿಂಹ, ವಾಮನಾದ್ಯಾಕಾರಗಳಿಂದ, ಜಲಜಂತುಗಳಂತೆಯೂ, ದೇವತೆಗಳಂತೆಯೂ, ಮನುಷ್ಯರಂತೆಯೂ ಆಕಾರವನ್ನು ತಾಳಿ, ಶತ್ರುಗಳನ್ನು ಅವರವರ ಅಪರಾಧಕ್ಕೆ ತಕ್ಕಂತೆ ದಂಡಿಸಿದೆಯಲ್ಲವೆ? ಹೀಗೆ ದಾರಿತಪ್ಪಿ ನಡೆಯುವವರನ್ನು ದಂಡಿಸುವುದೇ ನಿನ್ನ ಧರ್ಮವಾದುದರಿಂದ, ನಿನಗೆ ಸಮ್ಮತವಾಗಿದ್ದಪಕ್ಷದಲ್ಲಿ ಈಗ ವೃತ್ರನನ್ನು ಕೊಲ್ಲಬೇಕು. ಪ್ರಭೂ! ಇದೋ! ನಾವೆಲ್ಲರೂ ನಿನ್ನವರು! ನಿನ್ನ ಪಾದಾರವಿಂದದಲ್ಲಿ ನಟ್ಟಮನಸ್ಸುಳ್ಳವರು! ಈಗ ನಿನ್ನ ದಿವ್ಯಮಂಗಳ ವಿಗ್ರಹವನ್ನು ಪ್ರತ್ಯಕ್ಷವಾಗಿ ತೋರಿಸಿದುದರಿಂದ ನಮ್ಮೆಲ್ಲರನ್ನೂ ನೀನು ಅನುಗ್ರಹಿಸಿ ಪರಿಗ್ರಹಿಸಿದಂತಾಯಿತು! ದೇವಾ! ನಿನ್ನ ಕೃಪಾಪೂರ್ವಕವಾದ ಕಟಾಕ್ಷವೀಕ್ಷಣದಿಂದಲೂ, ಅಮೃತಧಾರೆಯಂತಿರುವ ನಿನ್ನ ಮಧುರವಾಕ್ಯದಿಂದಲೂ ನಮ್ಮ ಹೃದಯಸಂತಾಪವನ್ನು ನೀಗಿಸು! ಓ ಮಹಾತ್ಮಾ! ನೀನು ಸಮಸ್ತಜಗತ್ತಿನ ಸೃಷ್ಟಿಸ್ಥಿತಿಲಯಗಳಿಗೆ ಕಾರಣವಾದ ಆತ್ಮಮಾಯೆಯಿಂದ ವಿನೋದಿಸತಕ್ಕವನು. ಸಮಸ್ತಜೀವರಾಶಿಗಳ ಹೃದಯದಲ್ಲಿ ಜೀವಶರೀರಕನಾಗಿಯೂ,ಹೊರಗೆ ಪ್ರಕೃತಿಶರೀರಕನಾಗಿಯೂ ಇದ್ದು, ಆಯಾ ದೇಶಕ್ಕೂ, ಆಯಾ ಕಾಲಕ್ಕೂ, ಆಯಾ ದೇಹಗಳಿಗೂ, ಆಯಾ ಅವಸ್ಥೆಗಳಿಗೂ ತಕ್ಕಂತೆ, ಸುಖದುಃಖಾದಿಗಳನ್ನೊದಗಿಸುತ್ತ ಎಲ್ಲಾ ಕಡೆಯೂ ವ್ಯಾಪಿಸಿರತಕ್ಕವನು. ಸಮಸ್ತಜೀವಗಳ ಚಿತ್ತವೃತ್ತಿಗೂ ನೀನು ಸಾಕ್ಷೀಭೂತನಾಗಿ ನಿಂತಿರತಕ್ಕವನು. ಬೆಂಕಿಯಿಂದ ಹೊರಟ ಕಿಡಿಗಳಂತೆ ನಾವೆಲ್ಲರೂ ನಿನ್ನ ಅಂಶಭೂತರಾಗಿ ನಿನ್ನಿಂದಲೇ ಹುಟ್ಟಿದವರು. ನಾವು ಕೇಳಿಕೊಳ್ಳತಕ್ಕ ಕೋರಿಕೆಯನ್ನು ನೆರವೇರಿಸುವುದು ನಿನಗೆ ಎಷ್ಟುಮಾತ್ರವೂ ದೊಡ್ಡದಲ್ಲ. ನಿನ್ನಿಂದ ನಾವು ಸಮಸ್ತ ಪ್ರಯೋಜನಗಳನ್ನೂ ಪಡೆಯತಕ್ಕವರೇ ಹೊರತು, ನಮ್ಮಿಂದ ನಿನಗೆ ಆಗಬೇಕಾದ ಪ್ರಯೋಜನವೇನೂ ಇರುವುದಿಲ್ಲ. ನಾವು ಇಲ್ಲಿಗೆ ಬಂದ ಕಾರ್ಯವನ್ನು ನಡೆಸಿಕೊಡಬೇಕು.

ದೈತ್ಯದಾನವರೂ ನಮ್ಮಂತೆಯೇ ನಿನಗೆ ಸಮಾನರಾಗಿದ್ದರೂ, ನಾವು ಪರ
ಮಗುರುವಾದ ನಿನ್ನ ಸಂಸಾರತಾರಕವಾದ ಪಾದಾರವಿಂದಗಳನ್ನೇ ಶರಣು
ಹೊಂದಿರುವೆವಾದುದರಿಂದ ನಮ್ಮ ಪ್ರಾರ್ಥನೆಯನ್ನು ನೀನು ನಡೆಸಿಕೊಡ
ಬೇಕು. ಹೇ ಜಗದೀಶಾ! ತ್ವಷ್ಟೃಪುತ್ರನಾದ ವೃತ್ರನು, ಮೂರುಲೋ
ಕವನ್ನೂ ನುಂಗುತ್ತಿರುವನು. ಅವನು ನಮ್ಮೆಲ್ಲರ ತೇಜಸ್ಸನ್ನೂ, ನಮ್ಮ ಶ
ಸ್ತ್ರಾಸ್ತ್ರಗಳೆಲ್ಲವನ್ನೂ ಅಡಗಿಸಿಬಿಟ್ಟಿರುವನು ಅವನನ್ನು ನೀನು ವಧಿಸಬೇಕು.
ಹೇ ಕೃಷ್ಣಾ! ನೀನು ದೋಷರಹಿತನು! ನಿತ್ಯಶುದ್ಧನು! ಸಮಸ್ತಜೀವಗ
ಳ ಹೃದಯಪುಂಡರೀಕದಲ್ಲಿ ವಾಸಮಾಡತಕ್ಕವನು! ಮನೋವ್ಯಾಪಾರಗ
ಳಿಗೂ ಸಾಕ್ಷೀಭೂತನಾಗಿ ನೋಡತಕ್ಕವನು. ಆದುದರಿಂದ ನಿನಗೆ ತಿಳಿಯ
ದ ವಿಷಯವಿಲ್ಲ. ನೀನು ಭೂಭಾರವನ್ನು ಪರಿಹರಿಸತಕ್ಕವನು. ಪರಿಶುದ್ಧ
ವಾದ ಕೀರ್ತಿಯುಳ್ಳವನು. ನಾವು, ಬೇರೆ ಎಲ್ಲಾ ಪ್ರಯತ್ನಗಳನ್ನೂ ಬಿ
ಟ್ಟು ನಿನ್ನಲ್ಲಿ ಮರೆಹೊಕ್ಕಿರುವೆವು. ಆಶ್ರಿತರಲ್ಲಿ ವಾತ್ಸಲ್ಯವನ್ನು ತೋರಿಸು
ವುದೇ ನಿನ್ನ ಸ್ವಭಾವವು. ಸಂಸಾರಮಾರ್ಗದಲ್ಲಿ ತೊಳಲುವ ಜೀವಿಗಳಿಗೆ
ನಿನ್ನ ಪಾದಚ್ಛಾಯೆಯೇ ಆಶ್ರಯವು. ನೀನೇ ಪುರುಷಾರ್ಥಸ್ವರೂಪನು. ದುಃ
ಖಪರಿಹಾರಕನಾದುದರಿಂದಲೇ ನೀನು ಹರಿಯೆಂದು ಕೀರ್ತಿಸಲ್ಪಡುವೆ. ಇಂ
ತಹ ಮಹಾಮಹಿಮೆಯುಳ್ಳ ನಿನಗೆ ನಮಸ್ಕಾರವು" ಎಂದರು. ರಾಜೇಂದ್ರಾ!
ಹೀಗೆ ದೇವತೆಗಳಿಂದ ಸ್ತುತಿಸಲ್ಪಟ್ಟ ಭಗವಂತನು ಅವರಲ್ಲಿ ಪ್ರಸನ್ನನಾಗಿ
ಹೀಗೆಂದು ಹೇಳುವನು. "ಎಲೈ ದೇವಶ್ರೇಷ್ಠರೆ! ನಿಮ್ಮ ಸ್ತೋತ್ರಕ್ಕಾಗಿ
ನಾನು ಬಹಳ ಸಂತೋಷಿಸಿದೆನು. ಈ ಸ್ತೋತ್ರವಿದ್ಯೆಯಿಂದಲೇ ಮನು
ಷ್ಯರು ನನ್ನಲ್ಲಿ ಭಕ್ತಿಯನ್ನು ಬೆಳೆಸಿ, ದೇಹಕ್ಕಿಂತಲೂ ವಿಲಕ್ಷಣವಾದ ಆತ್ಮ
ಸ್ವರೂಪವನ್ನು ತಿಳಿಯಬಲ್ಲರು. ಎಲೈ ದೇವತೆಗಳಿರಾ! ನಾನು ಪ್ರಸನ್ನ
ನಾದಮೇಲೆ ಯಾವುದೂ ದುರ್ಲಭವಲ್ಲ. ನನ್ನನ್ನು ಸಂತೋಷಗೊಳಿಸಿದ
ವನು ತನಗೆ ಬೇಕಾದ ಕೋರಿಕೆಗಳೆಲ್ಲವನ್ನೂ ಅನಾಯಾಸವಾಗಿ ಹೊಂದ
ಬಹುದು. ಹಾಗಿದ್ದರೂ ನನ್ನಲ್ಲಿ ನಟ್ಟಮನಸ್ಸುಳ್ಳ ತತ್ವಜ್ಞಾನಿಯು, ನ
ನ್ನನ್ನು ಹೊರತು ಬೇರೊಂದನ್ನೂ ಆಶಿಸಲಾರನು. ಶಬ್ದಾದಿವಿಷಯಗಳನ್ನೇ
ಪುರುಷಾರ್ಥವೆಂದು ನೆನೆಸತಕ್ಕ ಕೆಲವು ಮೂಢರು, ಇಂದ್ರಿಯಗಳಿಗೆ ವಶರಾ

ಗಿ ತಮ್ಮ ಕ್ಷೇಮಕ್ಕೆ ತಾವು ದಾರಿಯನ್ನು ಕಾಣದೆ ಅಲ್ಪಫಲಗಳಿಗೆ ಆಸೆಪ
ಟ್ಟು ಕೆಟ್ಟುಹೋಗುವುದುಂಟು. ಅಂತವರಿಗೆ ಅವರ ಕೋರಿಕೆಗಿಂತಲೂ
ಉತ್ತಮವಾದ ಶ್ರೇಯಸ್ಸನ್ನು ಕೊಡಬಲ್ಲವನೊಬ್ಬನು, ಅವರವರು ಕೇಳಿ
ದುದನ್ನುಮಾತ್ರ ಕೊಟ್ಟುಬಿಟ್ಟರೆ, ಅವನನ್ನೂ ಅದೇವಿಧವಾದ ಮಂದಬು
ದ್ಧಿಯುಳ್ಳವನೆಂದೇ ಹೇಳಬೇಕು. ಪುರುಷಾರ್ಥಗಳಲ್ಲಿ ಯಾವುದು ಮೇಲೆಂ
ಬುದನ್ನೂ, ಅದನ್ನು ಸಾಧಿಸುವುದಕ್ಕೆ ತಕ್ಕ ಉಪಾಯವನ್ನೂ ತಿಳಿದವನು,
ಅದನ್ನು ತಿಳಿಯದೆ ಕರ್ಮಮಾರ್ಗದಲ್ಲಿ ತೊಳಲತಕ್ಕವರನ್ನು ಕಂಡಾಗ ಅವ
ರನ್ನು ಆಮಾರ್ಗದಿಂದ ತಪ್ಪಿಸಬೇಕೇಹೊರತು, ಅದರಲ್ಲಿಯೇ ಪ್ರೇರಿಸ
ಬಾರದು. ರೋಗಿಗಳು ಅಪಥ್ಯಕ್ಕಾಸೆಪಟ್ಟರೂ ಉತ್ತಮವೈದ್ಯರು ಅದನ್ನು
ಅವರಿಗೆ ಕೊಡದಿರುವಂತೆ, ಅಜ್ಞರಾದವರು ಕರ್ಮಮಾರ್ಗದಲ್ಲಿ ಹೋಗುವು
ದನ್ನು ನೋಡಿದಾಗ ತಿಳಿದವರು ಅವರನ್ನು ತಡೆಯದೆ ಬಿಡಲಾರರು. ಆದು
ದರಿಂದ ಈಗ ನೀವು ಮೋಕ್ಷಪ್ರದನಾದ ನನ್ನನ್ನು ಪ್ರಸನ್ನನನ್ನಾಗಿ ಮಾ
ಡಿಕೊಂಡು, ಶತ್ರುಜಯಕ್ಕಾಗಿ ನನ್ನಲ್ಲಿ ಪ್ರಾರ್ಥಿಸುವುದು ನಿಮ್ಮ ಬುದ್ಧಿ
ಮಾಂದ್ಯವನ್ನು ಚೆನ್ನಾಗಿ ತೋರಿಸುವುದು. ಆದರೆ ನೀವು ಕೇಳಿದ
ಮಾತ್ರಕ್ಕೆ ಮೋಕ್ಷವನ್ನು ಕೊಡಬಲ್ಲ ನಾನು ನಿಮ್ಮ ಕೋರಿಕೆಯಂತೆ ನಡೆ
ಸುವುದೂ ಸರಿಯಲ್ಲ ಆದುದರಿಂದ ನಾನು ಸಾಕ್ಷಾತ್ತಾಗಿ ಈ ವಿಷಯದ
ಲ್ಲಿ ಪ್ರವರ್ತಿಸಲಾರೆನು. ಆದರೆ ನಿಮ್ಮ ಕೋರಿಕೆಯು ನೆರವೇರುವುದಕ್ಕೆ
ಬೇರೆ ಉಪಾಯಾಂತರವನ್ನು ತಿಳಿಸುವೆನು ಕೇಳಿರಿ! ದಧೀಚಿಯೆಂಬ ಮಹ
ರ್ಷಿಯೊಬ್ಬನುಂಟು. ಅವನು ಮಹಾತಪಸ್ವಿಯು. ಬಹಳ ಜ್ಞಾನಿಯು,
ಪರಮಾತ್ಮೋಪಾಸಕನು! ನೀವೆಲ್ಲರೂ ಈಗಲೇ ಅವನಲ್ಲಿ ಹೋಗಿ ಮರೆ
ಹೊಕ್ಕರೆ, ನಿಮ್ಮ ಕೋರಿಕೆಯು ಕೈಗೂಡುವುದು. ನೀವು ಅವನಲ್ಲಿಗೆ
ಹೋಗಿ ವಿದ್ಯೆಯಿಂದಲೂ, ವ್ರತದಿಂದಲೂ, ತಪಸ್ಸಿಂದಲೂ, ಸಾರವ
ತ್ತಾದ ಅವನ ಶರೀರವನ್ನು ಕೊಡುವಂತೆ ಯಾಚಿಸಿರಿ! ಆ ಮಹರ್ಷಿಯು,
ಪರಿಶುದ್ಧವಾದ ಬ್ರಹ್ಮವಿದ್ಯೆಯಲ್ಲಿ ಪಾರಂಗತನು. ಅವನು ತನ್ನಲ್ಲಿದ್ದ ಆ
ಬ್ರಹ್ಮವಿದ್ಯೆಯನ್ನು ಮೊದಲು ಅಶ್ವಿನೀದೇವತೆಗಳಿಗೆ ಉಪದೇಶಿಸಿರುವನು.
ಆ ವಿದ್ಯೆಯು ಅಶ್ವಶಿರಸ್ಸೆಂದು ಪ್ರಸಿದ್ಧಿಗೊಂಡಿರುವುದು. ಆ ವಿದ್ಯೋಪ

ದೇಶದಿಂದಲೇ ಅಶ್ವಿನೀದೇವತೆಗಳಿಗೆ ಮರಣವಿಲ್ಲದಂತಾಯಿತು. ಆ ದಧೀಚಿ ಮುನಿಯು ತನ್ನ ತಂದೆಯಾದ ಅಥರ್ವಮುನಿಯಿಂದ, ಸಾಕ್ಷಾತ್ತಾಗಿನನ್ನನ್ನೇ ಅಧಿದೇವತೆಯಾಗಿ ಉಳ್ಳ ನಾರಾಯಣಕವಚವೆಂಬ ಮಂತ್ರವನ್ನು ಮೊದಲು ತಾನು ಉಪದೇಶಹೊಂದಿ, ಆಮೇಲೆ ಅದನ್ನು ತ್ವಷ್ಟೃವಿಗೆ ಉಪದೇಶಿಸಿದನು. ಆ ತ್ವಷ್ಟನು ಅದೇ ಮಂತ್ರವನ್ನು ತನ್ನ ಮಗನಾದ ವಿಶ್ವರೂಪನಿಗೆ ಉಪದೇಶಮಾಡಿದರು. ಆವಿಶ್ವರೂಪನಿಂದ ನಿನಗೆ ಉಪದೇಶಿಸಲ್ಪಟ್ಟಿತು. ಹೀಗೆ ನಾರಾಯಣಕವಚವೆಂಬ ಮಂತ್ರಕ್ಕೆ, ಆ ದಧೀಚಿಯ ದೇಹವು ಮೊದಲು ಆಶ್ರಯವಾಗಿದ್ದುದರಿಂದ, ಆಶರೀರದಲ್ಲಿ ಬಹಳ ಶಕ್ತಿಯುಂಟು. ಎಲೈ ಅಶ್ವಿನೀದೇವತೆಗಳಿರಾ! ನೀವಿಬ್ಬರೂ ನಿಮ್ಮ ಗುರುವಾದ ದಧೀಚಿಯಲ್ಲಿ ಹೋಗಿ, ಅವನ ದೇಹವನ್ನು ಯಾಚಿಸಿದಪಕ್ಷದಲ್ಲಿ, ಶರಣಾಗತರಕ್ಷಣಧರ್ಮವನ್ನು ಬಲ್ಲವನಾದ ಆ ಮಹರ್ಷಿಯು, ನಿಮಗೆ ತನ್ನ ದೇಹವನ್ನು ಕೊಡುವುದರಲ್ಲಿ ಸಂದೇಹವಿಲ್ಲ, ಆ ಶರೀರವನ್ನು ತಂದು ವಿಶ್ವಕರ್ಮನ ವಶಕ್ಕೆ ಕೊಟ್ಟರೆ, ಅವನು ಅವುಗಳಿಂದ ಒಂದು ದಿವ್ಯಾಯುಧವನ್ನು ನಿರ್ಮಿಸಿಕೊಡುವನು. ಆ ಆಯುಧವನ್ನು ಗ್ರಹಿಸಿ ದೇವೇಂದ್ರನು ನನ್ನ ತೇಜಸ್ಸನ್ನು ಅದರಲ್ಲಿ ಆವಾಹಿಸಿ, ವೃತ್ರಾಸುರನ ತಲೆಯನ್ನು ಛೇದಿಸಬಹುದು. ಹೀಗೆ ಆ ವೃತ್ರಾಸುರನನ್ನು ಸಂಹರಿಸಿದಮೇಲೆ ಪೂರ್ವದಂತೆ ನೀವು ರಾಜ್ಯಸಂಪತ್ತನ್ನೂ, ನಿಮ್ಮ ಶಸ್ತ್ರಾಸ್ತ್ರಗಳನ್ನೂ, ನಿಮ್ಮ ಆಯುಧಗಳನ್ನೂ, ನಿಮ್ಮ ತೇಜಸ್ಸನ್ನೂ ಪಡೆಯಬಹುದು. ಎಲೈ ದೇವತೆಗಳಿರಾ! ಇನ್ನು ಭಯಪಡಬೇಡಿರಿ! ನಿಮಗೆ ಕ್ಷೇಮವಾಗಲಿ! ನನ್ನನ್ನು ನಂಬಿದವರಿಗೆ ಯಾವವಿಧದಲ್ಲಿಯೂ ದುಃಖವುಂಟಾಗದು. ಇನ್ನು ನೀವು ಹೋಗಿಬನ್ನಿರಿ" ಎಂದನು. ಇದು ಒಂಭತ್ತನೆಯ ಅಧ್ಯಾಯವು.

---

{ ಇಂದ್ರನು ದಧೀಚಿಮುನಿಯ ಅಸ್ಥಿಯಿಂದ ವಜ್ರಾಯುಧವನ್ನು ಮಾಡಿಸಿ ವೃತ್ರನೊಡನೆ ಯುದ್ಧಕ್ಕೆ ಹೊರಟುದು. }

ರಾಜೇಂದ್ರಾ! ಕೇಳು! ಲೋಕರಕ್ಷಕನಾದ ಭಗವಂತನು ಇಂದ್ರಾದಿದೇವತೆಗಳಿಗೆ ಹೀಗೆಂದು ನಿಯಮಿಸಿ, ಅವರೆಲ್ಲರೂ ನೋಡುತಿದ್ದಹಾಗೆಯೇ

ಕಣ್ಮರೆಯಾದನು. ದೇವತೆಗಳೆಲ್ಲರೂ ಭಗವದಾಜ್ಞೆಯಂತೆ ಅಥರ್ವಪುತ್ರ ನಾದ ದಧೀಚಿಯ ಬಳಿಗೆ ಬಂದು, ಅವನ ದೇಹವನ್ನು ಯಾಚಿಸಿದ ರು. ಮಹಾನುಭಾವನಾದ ಆ ದಧೀಚಿಯು ಲೋಕಕ್ಷೇಮಕ್ಕಾಗಿ ತನ್ನ ದೇ ಹವು ಉಪಯೋಗಪಡುವುದೆಂದು ಮನಸ್ಸಿನಲ್ಲಿ ಸಂತೋಷಗೊಂಡಿದ್ದರೂ, ಮೇಲೆಮಾತ್ರ ಹಾಸ್ಯಪೂರ್ವಕವಾಗಿ ಹೀಗೆಂದು ಹೇಳುವನು. “ಎಲೈ ದೇವತೆಗಳಿರಾ! ನೀವಾದರೋ ಮರಣವಿಲ್ಲದವರು! ಆದುದರಿಂದ ಪ್ರಾಣಿಗಳಿಗೆ ಮರಣಕಾಲದಲ್ಲಿ ಶರೀರವನ್ನು ಬಿಟ್ಟುಹೋಗುವಾಗ, ಎಷ್ಟು ದುಸ್ಸಹವಾದ ಸಂಕಟವೆಂಬುದು ನಿಮಗೆ ತಿಳಿದಿರಲಾರದು! ಬದುಕಿರಬೇಕೆಂ ಬ ಆಸೆಯು ಪ್ರಾಣಿಸಾಮಾನ್ಯಕ್ಕೆ ತಪ್ಪಿದುದಲ್ಲ! ದೇಹವುಳ್ಳವರಿಗೆ ದೇಹವೇ ಎಲ್ಲಕ್ಕಿಂತಲೂ ಪ್ರಿಯತಮವಾಗಿರುವುದು. ಸಾಕ್ಷಾನ್ನಾರಾಯಣ ನೇ ಬಂದು ಯಾಚಿಸಿದರೂ ಆ ದೇಹವನ್ನು ಕೊಡುವುದಕ್ಕೆ ಯಾವನೂ ಇಷ್ಟಪಡಲಾರನು? ಈ ವಿಚಾರವನ್ನು ತಿಳಿಯದೆ ನೀವು ನನ್ನದೇಹವನ್ನು ಕೇಳುವಿರಲ್ಲಾ! ಇದು ನ್ಯಾಯವೆ?” ಎಂದನು. ಅದಕ್ಕಾ ದೇವತೆಗಳು “ಓ ಮುನೀಂದ್ರಾ! ನೀನು ಹೇಳುವುದೇನೋ ನಿಜವೆ! ಆದರೆ, ನಿನ್ನ ಚರಿ ತ್ರವು ಲೋಕಸ್ತುತ್ಯವಾದುದು! ನೀನು ಭೂತಗಳಲ್ಲಿ ದಯೆಯನ್ನು ತೋರಿಸತಕ್ಕ ಸ್ವಭಾವವುಳ್ಳವನು. ನಿನ್ನಂತಹ ಮಹಾತ್ಮರಿಗೆ ಪರೋಪ ಕಾರಕ್ಕಾಗಿ ತ್ಯಜಿಸಬಾರದ ವಸ್ತುವೊಂದಾದರೂ ಇರುವುದಿಲ್ಲ. ಪ್ರಾಣಿಗ ಳಿಗೆ ದೇಹವನ್ನು ಬಿಡುವುದು ಬಹಳ ಕಷ್ಟವೆಂಬುದೇನೋ ವಾಸ್ತವವಾಗಿ ದ್ದರೂ, ನಿನ್ನಂತಹ ಮಹಾತ್ಮರು ಆ ಕಷ್ಟವನ್ನೆಣಿಸಲಾರರು! ನಮ್ಮಂತೆ ಸ್ವಪ್ರಯೋಜನದಲ್ಲಿಯೇ ದೃಷ್ಟಿಯಿಟ್ಟವರಾದರೋ, ಬೇರೊಬ್ಬರ ಕಷ್ಟ ಸುಖಗಳನ್ನು ಯೋಚಿಸದೆ ತಮಗೆ ಬೇಕಾದುದನ್ನು ಇತರರಲ್ಲಿ ಸಂ ಕೋಚವಿಲ್ಲದೆ ಯಾಚಿಸುವುದೇನೋ ಸಹಜವು; ಇತರರ ಕಷ್ಟಸುಖ ಗಳನ್ನು ತಿಳಿದವರು ಹೀಗೆ ಯಾಚಿಸುವುದಕ್ಕೇ ಹೋಗಲಾರರು. ಹಾಗೆ ಯೇ ಯಾಚಿಸಲ್ಪಡತಕ್ಕವನೂ ಕೂಡ ಉದಾರಿಯಾಗಿದ್ದಪಕ್ಷದಲ್ಲಿ, ತನ್ನಲ್ಲಿ ಬಂದು ಯಾಚಿಸಿದವರಿಗೆ ಇಲ್ಲವೆಂದು ಹೇಳಲಾರನು. ತಾನು ದಾನಸಮರ್ಥ ನಾಗಿರುವಾಗಲೂ ಯಾವನು, ಯಾಚಕರನ್ನು ನಿರಾಕರಿಸುವನೋ,

ಅವನೂ ಇತರರ ಕಷ್ಟವನ್ನು ತಿಳಿಯದಂತೆಯೇ ಆಗುವುದಲ್ಲವೆ? ಆಗ ಯಾಚಕನಿಗೂ, ಯಾಚಿಸಲ್ಪಡತಕ್ಕವನಿಗೂ ತಾರತಮ್ಯವೇ ಇಲ್ಲದಂತಾಗುವುದಲ್ಲವೆ? ಆದರಂತೆ ಈಗ ನಾವೇನೋ ನಿನ್ನ ಕಷ್ಟಸುಖಗಳನ್ನು ಯೋಚಿಸದೆ, ಕೇವಲ ಸ್ವಪ್ರಯೋಜನಪರರಾಗಿ ನಿನ್ನಲ್ಲಿ ಬಂದು ಯಾಚಿಸುತ್ತಿರುವೆವು. ಈಗ ನೀನೂ ದೇಹಾಭಿಮಾನದಿಂದ ನಮ್ಮ ಪ್ರಾರ್ಥನೆಯನ್ನು ನಡೆಸಿಕೊಡದಿದ್ದ ಪಕ್ಷದಲ್ಲಿ, ನೀನೂ ಕೇವಲಸ್ವಾರ್ಥಪರನಾಗಿ ನಮ್ಮ ಕಷ್ಟವನ್ನು ಯೋಚಿಸದೆ ಹೋದಂತೆಯೇ ಆಗುವುದಲ್ಲವೆ? ಆಗ ಮೂಢರಾದ ನಮಗೂ, ಮಹಾಜ್ಞಾನಿಯಾದ ನಿನಗೂ ವ್ಯತ್ಯಾಸವೇನಾಯಿತು? ನೀನೂ ನಮ್ಮಂತೆಯೇ ಆದೆಯಲ್ಲವೆ?" ಎಂದರು. ಅವರ ಮಾತಿಗೆ ದಧೀಚಿಯು ಸಂತೋಷಿಸಿ "ಎಲೈ ದೇವತೆಗಳಿರಾ! ನಿಮ್ಮ ಧರ್ಮಬುದ್ಧಿಯನ್ನು ತಿಳಿಯಬೇಕೆಂಬುದಕ್ಕಾಗಿಯೇ ನಾನು ಮೊದಲು ನಿಮ್ಮನ್ನು ತಿರಸ್ಕರಿಸಿದೆನೇಹೊರತು ಬೇರೆಯಲ್ಲ! ಪ್ರಾರಬ್ಧಕರ್ಮವು ತೀರಿದಮೇಲೆ ತಾನಾಗಿಯೇ ಬಿದ್ದುಹೋಗತಕ್ಕ ಈ ನನ್ನ ದೇಹದಿಂದ, ನಿಮಗೆ ಉಪಕಾರವಾಗುವಪಕ್ಷದಲ್ಲಿ, ಇದನ್ನು ಕೊಡುವುದರಲ್ಲಿ ಅಡ್ಡಿಯೇನಿದೆ! ಮನಃಪೂರ್ವಕವಾಗಿ ಕೊಡುವೆನು. ಲೋಕದಲ್ಲಿ ಯಾವ ಪುರುಷನು ಭೂತದಯಾಪರನಾಗಿ, ಅಸ್ಥಿರವಾದ ತನ್ನ ದೇಹದಿಂದ ಸ್ಥಿರವಾದ ಕೀರ್ತಿಯನ್ನೂ, ಧರ್ಮವನ್ನೂ ಗಳಿಸಿಡುವನೋ, ಅವನ ಜನ್ಮವೇ ಉತ್ತಮವೆನಿಸುವುದು. ಈ ಉಪಕಾರಬುದ್ಧಿಯಿಲ್ಲದವನ ಜನ್ಮವು ಸ್ಥಾವರವರ್ಗಗಳಿಗೂ ಹಾಸ್ಯಾಸ್ಪದವಾಗುವುದು. ಏಕೆಂದರೆ. ಅಚೇತನಗಳಾದ ವೃಕ್ಷಾದಿಗಳೂಕೂಡ ತಮ್ಮ ದೇಹವನ್ನೊಪ್ಪಿಸಿ ಇತರರಿಗೆ ಉಪಕಾರವನ್ನು ಮಾಡುವುವು. ಮುಖ್ಯವಾಗಿ ಇತರಪ್ರಾಣಿಗಳ ದುಃಖವನ್ನುನೋಡಿ ದುಃಖಿಸುವುದು, ಅವುಗಳ ಸಂತೋಷವನ್ನು ಕಂಡು ಸಂತೋಷಿಸುವುದು, ಇದೇ ಅಕ್ಷಯವಾದ ಧರ್ಮವೆಂದು ಹಿರಿಯರು ನಿರ್ಣಯಿಸಿರುವರು. ಅಯ್ಯೋ! ಇದಲ್ಲವೇ ಕಷ್ಟವು. ಲೋಕದಲ್ಲಿ ನಾಯಿನರಿಗಳು ತಿನ್ನತಕ್ಕುದಾಗಿಯೂ, ತಮಗೆ ಯಾವವಿಧದಲ್ಲಿಯೂ ಉಪಯೋಗವಿಲ್ಲದುದಾಗಿಯೂ, ಕ್ಷಣಕಾಲವಿದ್ದು ಹೋಗತಕ್ಕುದಾಗಿಯೂ, ಜ್ಞಾತಿಗಳಲ್ಲಿ ಕಲಹಕ್ಕೆ ಕಾರಣವಾಗಿಯೂ ಇರುವ ಶರೀರವನ್ನು, ಯಾವನು ಪರೋಪಕಾರಕ್ಕಾಗಿ ಉಪಯೋಗಿಸುವುದಿ

ಲ್ಲವೋ ಆ ಮನುಷ್ಯನ ಜನ್ಮವು ಕೇವಲ ನಿರರ್ಥಕವಾದುದು. ಅಂತವನ ಸ್ಥಿತಿಗಿಂತಲೂ ಲೋಕದಲ್ಲಿ ಶೋಚನೀಯವಾದುದು ಬೇರೆಯಾವುದೂ ಇಲ್ಲ" ಎಂದು ನಿಶ್ಚಯಿಸಿ, ದಧೀಚಿಯು ತನ್ನ ಆತ್ಮವನ್ನು ಪರಬ್ರಹ್ಮನಲ್ಲಿ ಸೇರಿಸಿ, ದೇಹವನ್ನು ಬಿಟ್ಟು ಹೋಗುವುದಕ್ಕೆ ಸಿದ್ಧನಾದನು. ಪರಮಾತ್ಮನಲ್ಲಿ ಯೇ ನಟ್ಟ ಮನಸ್ಸುಳ್ಳವನಾಗಿ, ಇಂದ್ರಿಯಗಳನ್ನು ಜಯಿಸಿ, ಮನಸ್ಸನ್ನೂ, ಬುದ್ಧಿಯನ್ನೂ, ಹೊರಗಿನ ವ್ಯಾಪಾರಗಳಿಂದ ಹಿಂತಿರುಗಿಸಿ, ಪ್ರಾಣಗಳನ್ನು ತಡೆದು, ಆತ್ಮತತ್ವವನ್ನೇ ಧ್ಯಾನಿಸುತ್ತ, ಸಮಾಧಿಯೋಗದಲ್ಲಿದ್ದು, ತನ್ನ ಹೊರಗಿನ ದೇಹವನ್ನು ಮರೆತುಬಿಟ್ಟನು. ಆತ್ಮವು ದೇಹವನ್ನು ಬಿಟ್ಟು ಹೋಗಿ ಪರಬ್ರಹ್ಮನಲ್ಲಿ ಲಯಹೊಂದಿತು. ದೇಹವು ಕೆಳಗೆ ಬಿದ್ದುಹೋಯಿ ತು. ಆಮೇಲೆ ಇಂದ್ರನು ಆ ದೇಹದಲ್ಲಿದ್ದ ಎಲುಬುಗಳನ್ನು ತೆಗೆದು ವಿಶ್ವ ಕರ್ಮನಿಗೆ ಕೊಡಲು, ವಿಶ್ವಕರ್ಮನು ಆ ಅಸ್ಥಿಗಳಿಂದಲೇ ಒಂದು ವಜ್ರಾ ಯುಧವನ್ನು ನಿರ್ಮಿಸಿಕೊಟ್ಟನು. ದೇವೇಂದ್ರನು ಆ ವಜ್ರವನ್ನು ಗ್ರಹಿಸಿ ದೊಡನೆ, ಭಗವಂತನ ದಿವ್ಯತೇಜಸ್ಸು ಅವನಲ್ಲಿ ನೆಲೆಗೊಂಡಿತು., ಸಕಲದೇವ ಗಣಗಳೊಡಗೂಡಿ ಐರಾವತನ್ನೇರಿ ಯುದ್ಧಕ್ಕಾಗಿ ಹೊರಟನು. ಅನೇಕದೇವ ರ್ಷಿಗಳಿಂದ ಸ್ತುತಿಸಲ್ಪಡುತ್ತ ತ್ರೈಲೋಕ್ಯವನ್ನೂ ಸಂತೋಷಗೊಳಿಸು ವಂತೆ ಸಮಸ್ತದೇವಸೈನ್ಯಗಳನ್ನೂ ಕಟ್ಟಿಕೊಂಡು, ವೃತ್ರಾಸುರನಮೇಲೆ ದಂಡೆತ್ತಿ ಪ್ರಳಯಕಾಲದ ರುದ್ರನಂತೆ ತೋರುತ್ತ, ಅನೇಕ ರಾಕ್ಷಸಸೈನ್ಯಗಳ ನಡುವೆ ವೀರ್ಯದಿಂದ ಕೊಬ್ಬಿನಿಂತಿರುವ ವೃತ್ರಾಸುರನನ್ನಿದಿರುಗೊಂಡನು ರಾಜೇಂದ್ರಾ! ಕೃತತ್ರೇತಾಯುಗಗಳ ಸಂಧಿಕಾಲದಲ್ಲಿ ನರ್ಮದಾನದಿಯ ತೀರದಲ್ಲಿ ದೇವಾಸುರಸೈನ್ಯಗಳೆರಡಕ್ಕೂ ಅತಿಭಯಂಕರವಾದ ಯುದ್ಧವು ಪ್ರವರ್ತಿಸಿತು. ಏಕಾದಶರುದ್ರರು, ಅಷ್ಟವಸುಗಳು, ದ್ವಾದಶಾದಿತ್ಯರು. ಅಶ್ವಿನೀದೇವತೆಗಳಿಬ್ಬರು, ಪಿತೃದೇವತೆಗಳು, ಅಗ್ನಿದೇವತೆಗಳು, ಸಪ್ತ ಮರು ತ್ತುಗಳು, ಋಭುಗಳು, ಸಾಧ್ಯರು ವಿಶ್ವೇದೇವತೆಗಳು, ಮೊದಲಾದ ಸಮಸ್ತ ದೇವಗಣಗಳಿಂದಲೂ ಪರಿವೃತನಾದ ದೇವೇಂದ್ರನು, ತನ್ನ ತೇಜಸ್ಸಿನಿಂದ ದಿಕ್ಕುಗಳೆಲ್ಲವನ್ನೂ ಬೆಳಗುತ್ತ, ವಜ್ರಧಾರಿಯಾಗಿ ಬರುತ್ತಿರುವುದನ್ನು ನೋಡಿ ಅತ್ತಲಾಗಿರಾಕ್ಷಸರೆಲ್ಲರಿಗೂ ಸಹಿಸಲಾರದ ಕೋಪಾವೇಶವುಂಟಾಯಿತು.

ಆಗ ವೃತ್ರನಕಡೆಯ ಸೇನಾಧಿಪತಿಗಳಾದ ನಮುಚಿ, ಶಂಬರ, ಅನರ್ವ, ದ್ವಿಮೂರ್ಧ, ವೃಷಭ, ಅಂಬರ, ಹಯಗ್ರೀವ, ಶಂಕುಶಿರಸ್ಸು, ವಿಪ್ರಚಿತ್ತಿ, ಅಯೋಮುಖ, ಪುಲೋಮ, ವೃಷಪರ್ವ, ಪ್ರಹೇತಿ ಹೇತಿ, ಉತ್ಕಟ, ಧೂಮ್ರಕೇಶ, ವಿರೂಪಾಕ್ಷ, ಕಪಿಲ, ವಿಭಾವಸು, ಮುಂತಾದ ದೈತ್ಯ ದಾನವರೂ, ಯಕ್ಷರಾಕ್ಷಸರೂ, ಯುದ್ಧಕ್ಕೆ ಸಿದ್ಧರಾಗಿ ನಿಂತರು. ಇದಲ್ಲದೆ ಇಲ್ವಲ, ವಾತಾಪಿ, ಪಲ್ವಲ, ದಂದಶೂಕ, ವೃಷಧ್ವಜ, ಕಾಲನಾಭ, ಮಹಾನಾಭ, ಭೂತಸಂತಾಪನ, ವೃಕ, ಮಾಲಿ,ಸುಮಾಲಿ, ಮೊದಲಾದ ವೀರಾಗ್ರೇಸರರೆಲ್ಲರೂ ಸಾವಿರಾರು ಸಂಖ್ಯೆಯಿಂದ ಗುಂಪುಕೂಡಿದರು,ಸುವರ್ಣಮಯವಾದ ಯುದ್ಧಭೂಷಣಗಳನ್ನು ತೊಟ್ಟು, ಮೃತ್ಯುದೇವತೆಗೂ ತಡೆಯಲಾರದ ದೇವಸೈನ್ಯವನ್ನಿದಿರಿಸಿ,ಸ್ವಲ್ಪಮಾತ್ರವೂ ಭಯವಿಲ್ಲದೆ ಮಹಾಮದದಿಂದ ಸಿಂಹನಾದವನ್ನು ಮಾಡುತ್ತ!ಗದೆಗಳಿಂದಲೂ, ಶಸ್ತ್ರಾಸ್ತ್ರಗಳಿಂದಲೂ, ಪರಿಘಗಳಿಂದಲೂ, ಬಾಣಗಳಿಂದಲೂ, ನಾನಾದಿಕ್ಕುಗಳಲ್ಲಿ ಹೊಡೆಯುವುದಕ್ಕೆ ತೊಡಗಿದರು ಕೆಲವರು ಪ್ರಾಸಗಳನ್ನೂ, ಕೆಲವರು ಮುದ್ಗರಗಳನ್ನೂ ಕೆಲವರು ತೋಮರಗಳನ್ನೂ ಪಯೋಗಿಸಿದರು ಹಾಗೆಯೇ ಅವರವರು ತಮ್ಮತಮ್ಮ ಕೈಗೆ ಸಿಕ್ಕಿದಂತೆ ಶೂಲಗಳಿಂದಲೂ, ಗಂಡುಗೊಡಲಿಗಳಿಂದಲೂ, ಕತ್ತಿಗಳಿಂದಲೂ, ಈಟಿಗಳಿಂದಲೂ,ಮುಸುಂಡಿಗಳಿಂದಲೂ,ದೇವಸೈನ್ಯವನ್ನು ನಾನಾಕಡೆಯಿಂದ ಪ್ರಹರಿಸುತಿದ್ದರು. ಹೀಗೆ ಮೇಲೆಮೇಲೆ ಹೊರಟು ಬರುತ್ತಿರುವ ರಾಕ್ಷಸರಬಾಣ ಪರಂಪರೆಗಳಲ್ಲಿ ಮೇಘಪರಂಪರೆಗಳಿಂದ ಮರೆಸಲ್ಪಟ್ಟ ನಕ್ಷತ್ರಗಳಂತೆ ದೇವಸೈನ್ಯವೆಲ್ಲವೂ ಮರೆಸಿಹೋಯಿತು. ಆದರೆ ಇದರಿಂದ ದೇವತೆಗಳಿಗೆ ಯಾವವಿಧವಾದ ಅಪಾಯವೂ ಉಂಟಾಗಲಿಲ್ಲ! ರಾಕ್ಷಸರಿಂದ ಪ್ರಯೋಗಿಸಲ್ಪಟ್ಟ ಆಯುಧವೆಲ್ಲವನ್ನೂ, ದೇವತೆಗಳು ತಮ್ಮ ಹಸ್ತಲಾಘುವದಿಂದ ನಡುದಾರಿಯಲ್ಲಿಯೇ ಕತ್ತರಿಸಿ ಕೆಡುಹುತಿದ್ದರು. ಆಗ ತಮ್ಮ ಆಯುಧಗಳೆಲ್ಲವೂ ದೇವತೆಗಳ ಮೈಯನ್ನು ಸೋಕದೆ ನಡುದಾರಿಯಲ್ಲಿಯೇ ಕತ್ತರಿಸಿ ಬೀಳುವುದನ್ನುನೋಡಿ ರಾಕ್ಷಸರಿಗೆ ಮತ್ತಷ್ಟು ಕೋಪವು ಹೆಚ್ಚಿತು. ಆ ಕೋಪದಿಂದ ಅನೇಕರಾಕ್ಷಸವೀರರು, ಬೆಟ್ಟದ ಶಿಖರಗಳನ್ನೂ ದೊಡ್ಡಮರಗಳನ್ನೂ, ಕಲ್ಲುಬಂಡೆಗಳನ್ನೂ ಕಿತ್ತುತಂದು, ದೇವಸೈನ್ಯದ

ಮೇಲೆ ವರ್ಷಿಸುತಿದ್ದರು. ಅವುಗಳನ್ನೂ ದೇವತೆಗಳು ನಡುದಾರಿಯ ಲ್ಲಿಯೇ ಕತ್ತರಿಸುತಿದ್ದರು. ಆಗ ರಾಕ್ಷಸರಿಗೆ ತಮ್ಮ ಪ್ರಯತ್ನವೆಲ್ಲವೂ ವಿಫಲವಾದದನ್ನು ನೋಡಿ ಮನಸ್ಸಿನಲ್ಲಿ ಸ್ವಲ್ಪವಾಗಿ ಭಯವು ಹುಟ್ಟಿ ತು. ರಾಜೇಂದ್ರಾ ! ಇದೆಲ್ಲವೂ ಭಗವದನುಗ್ರಹದ ಫಲವೆಂದು ತಿಳಿ ! ಕ್ಷುದ್ರಜನಗಳ ನಿಂದಾವಾಕ್ಯಗಳು ಮಹಾತ್ಮರನ್ನು ಹೇಗೆ ಕಲಗಿಸಲಾರ ವೋ, ಅದರಂತೆಯೇ ಭಗವದನುಗ್ರಹಕ್ಕೆ ಪಾತ್ರರಾದ ದೇವತೆಗಳಲ್ಲಿ ದೈತ್ಯ ದಾನವರ ಸಾಹಸಗಗಳೆಲ್ಲವೂ ನಿರರ್ಥಕಗಳಾದುವು. ವಿಷ್ಣುಭಕ್ತಿಹೀನರಾ ದ ಆ ರಾಕ್ಷಸರ ವೀರ್ಯವೂ, ಹೆಮ್ಮೆಯೂ ಕ್ರಮಕ್ರಮವಾಗಿ ತಗ್ಗುತ್ತಬಂ ದಿತು. ಕೊನೆಗೆ ಅಲ್ಲಿದ್ದ ರಾಕ್ಷಸಸೈನ್ಯಗಳೆಲ್ಲವೂ ತಮ್ಮ ಪ್ರಯತ್ನವು ವಿಫ ಲವಾಗುತ್ತಿರುವುದನ್ನು ನೋಡಿ ಭಯಪಟ್ಟು, ತಮ್ಮ ಪ್ರಭುವಾದ ವೃತ್ರನ ನ್ನೂ ಲಕ್ಷ್ಯಮಾಡದೆ, ಆ ಯುದ್ಧರಂಗದಿಂದ ಒಬ್ಬೊಬ್ಬರಾಗಿ ಪಲಾಯನ ಮಾಡುವುದಕ್ಕೆ ತೊಡಗಿದರು. ಆಗ ವೃತ್ರನು ತನ್ನ ಸೈನ್ಯಗಳೆಲ್ಲವೂ ತನ್ನ ನ್ನುಮಾತ್ರ ಬಿಟ್ಟು ನಾಚಿಕೆಯಿಲ್ಲದೆ ಭಯದಿಂದ ಓಡಿ ಹೋಗುವ ಪ್ರಯ ಯತ್ನದಲ್ಲಿರುವುದನ್ನು ತಿಳಿದು, ಅವರ ಹೇಡಿತನಕ್ಕಾಗಿ ನಗುತ್ತ, ಅವರನ್ನು ತಡೆದು ನಿಲ್ಲಿಸಿ, ಕಾಲೋಚಿತವಾಗಿಯೂ, ಇಂಪಾಗಿಯೂ ಇರುವ ಮಾತಿ ನಿಂದ ಹೀಗೆಂದು ಹೇಳುವನು. “ಓ ವಿಪ್ರಚಿತ್ತೀ ! ಓ ಶಂಬರಾ ! ಓ ನ ಮುಚೀ ! ಓ ಪುಲೋಮಾ! ಮಯಾ! ಅನರ್ವಾ! ಇದೇನಿದು? ಬಹಳ ಚೆನ್ನಾ ಯಿತು. ನನ್ನ ಮಾತನ್ನು ಕೇಳಿರಿ ! ನೀವು ರಾಕ್ಷಸವೀರರೆನಿಸಿಕೊಂಡಿದ್ದೂ ಹೀಗೆ ಯುದ್ಧಕ್ಕೆ ಭಯಪಟ್ಟು ಓಡಿ ಹೋಗುವುದೆಂದರೇನು? ಹುಟ್ಟಿದವರಿಗೆ ಎಂದಿದ್ದರೂ ಸಾವು ತಪ್ಪದು! ಮರಣವನ್ನು ತಪ್ಪಿಸಿಕೊಳ್ಳುವುದಕ್ಕೆ ಲೋ ಕದಲ್ಲಿ, ಯಾರಿಗೂ ಯಾವ ಉಪಾಯದಿಂದಲೂ ಸಾಧ್ಯವಿಲ್ಲ. ಹೇಗಿದ್ದರೂ ಮರಣವನ್ನು ಹೊಂದಬೇಕಾಗಿರುವಾಗ, ಅದನ್ನು ಉತ್ತಮವಾದ ಮಾರ್ಗ ದಿಂದ ತಂದುಕೊಳ್ಳುವುದು ಮೇಲಲ್ಲವೆ? ಅನೇಕವಿಧವಾದ ಮರಣಗಳಲ್ಲಿ ಈ ಎರಡು ಬಗೆಯ ಮರಣಗಳೇ ಸಾರ್ಥಕಗಳೆಂದು ಹಿರಿಯರು ಹೇಳಿರು ವರು. ಇವು ಬಹಳ ಭಾಗ್ಯಶಾಲಿಗಳಿಗಲ್ಲದೆ ಸಾಮಾನ್ಯರಿಗೆ ಸಿಕ್ಕಲಾರವು. ಬ್ರ ಹ್ಮಧ್ಯಾನರೂಪವಾದ ಧಾರಣಾಯೋಗದಿಂದ ಪ್ರಾಣಗಳನ್ನಡಗಿಸಿ ಶರೀರ

ವನ್ನು ಬಿಡುವುದೊಂದು! ಯುದ್ಧದಲ್ಲಿ ಧೈರ್ಯದಿಂದ ನಿಂತು ಶತ್ರುಗಳಕೈ ಯಿಂದ ಸಾಯುವುದೊಂದು! ಇವೆರಡೇ ದೇಹತ್ಯಾಗಕ್ಕೆ ಮೇಲಾದ ಉಪಾ ಯಗಳು. ಇದು ಸಾಮಾನ್ಯಜನರಿಗೆ ಲಭ್ಯವಲ್ಲ. ಆದುದರಿಂದ ನೀವು ಧೈರ್ಯ ದಿಂದ ನಿಂತು ಯುದ್ಧಮಾಡಿರಿ! ನಾವು ಜಯಿಸಿದರೆ ನಮ್ಮ ಉದ್ದೇಶವು ಕೈಗೂಡುವುದು! ಸತ್ತರೆ ನಮಗೆ ಕೀರ್ತಿಯೂ ವೀರಸ್ವರ್ಗವೂ ಲಭಿಸುವು ದು. ಇಂತಹ ಮರಣಕ್ಕೆ ನಾವೆಲ್ಲರೂ ಆಸೆಪಡಬೇಕೇ ಹೊರತು ಭಯ ಪಡಬಾರದು! ನಿಂತು ಯುದ್ಧಮಾಡಿರಿ" ಎಂದನು. ಇದು ಹತ್ತನೆಯ ಅಧ್ಯಾಯವು.

---

## ವೃತ್ರನು ಇಂದ್ರನಿಗೆ ತತ್ವವನ್ನು ತಿಳಿಸಿದುದು.

ಹೀಗೆ ವೃತ್ರನು ತನ್ನ ಸೈನಿಕರಿಗೆ ಧರ್ಮಯುಕ್ತವಾದ ಬುದ್ಧಿವಾದ ವನ್ನು ಹೇಳಿ ತಡೆಯುತಿದ್ದರೂ, ಆ ಸೈನಿಕರು, ಕೇವಲಭಯಗ್ರಸ್ತರಾಗಿ ತಮ್ಮ ಪ್ರಭುವಿನ ಮಾತನ್ನೂ ಕೇಳದೆ, ಪಲಾಯನಮಾಡುತ್ತಲೇ ಇದ್ದರು. ರಾಕ್ಷಸಸೈನ್ಯಗಳೆಲ್ಲವೂ ನಾನಾಕಡೆಗೆ ಚದರಿದುವು. ಇದನ್ನು ನೋಡಿ ದೇ ವತೆಗಳು "ಇದೇ ತಮಗೆ ಅನುಕೂಲಕಾಲವೆಂದು ತಿಳಿದು". ಓಡಿ ಹೋಗು ತಿದ್ದ ರಾಕ್ಷಸರನ್ನು ಮೇಲೆಮೇಲೆ ಬೆನ್ನಟ್ಟಿ ಹೋಗುತಿದ್ದರು. ದಿಕ್ಕಿಲ್ಲದೆ ಓ ಡುತ್ತಿರುವ ತನ್ನ ಸೈನ್ಯವನ್ನೂ, ಅದನ್ನು ಬೆನ್ನಟ್ಟಿಹೋಗುತಿದ್ದ ದೇವತೆಗಳ ಉತ್ಸಾಹವನ್ನೂ ನೋಡಿ ವೃತ್ರಾಸುರನಿಗೆ ತಡೆಯಲಾರದ ಕೋಪವುಂ ಟಾಯಿತು. ಆಗ ಆ ವೃತ್ರನೊಬ್ಬನೇ ಆ ದೇವತೆಗಳೆಲ್ಲರನ್ನೂ ತನ್ನ ಶಕ್ತಿ ಯಿಂದ ಅಡ್ಡಗಟ್ಟಿನಿಂತು, ಹುಂಕಾರದಿಂದ ಹೆದರಿಸುತ್ತ, ನಿಂದಾಪೂರ್ವಕ ವಾಗಿ ಹೀಗೆಂದು ಹೇಳುವನು. "ಎಲೈ ದೇವತೆಗಳಿರಾ! ಮಲವಿಸರ್ಜನದಂತೆ ತಾಯಿಯಹೊಟ್ಟೆಯಿಂದಬಿದ್ದು, ಕೆಲಸಕ್ಕೆ ಬಾರದೆ ಭಯದಿಂದ ಪಲಾಯ ನಮಾಡುತ್ತಿರುವ ಈ ರಾಕ್ಷಸರನ್ನು ಬೆನ್ನಟ್ಟಿಹೋಗಿ ಹೊಡೆದುದರಿಂದನಿಮ ಗೆ ಕೀರ್ತಿಯೇನು? ಹೇಡಿಗಳನ್ನು ಕೊಲ್ಲುವುದು ಶೂರರಿಗೆ ಧರ್ಮವಲ್ಲ! ಅದ ರಿಂದ ಸದ್ಗತಿಯೂ ಉಂಟಾಗಲಾರದು! ನಿಮಗೆ ಅಲ್ಪಸುಖದಲ್ಲಿ ಆಸೆಯಿಲ್ಲ ದೆ, ಯುದ್ಧಮಾಡಬೇಕೆಂಬ ಉತ್ಸಾಹವಾಗಲಿ, ಯುದ್ಧಮಾಡತಕ್ಕ ಶಕ್ತಿ

ಯಾಗಲಿ ಇದ್ದರೆ, ನನ್ನಮುಂದೆ ಕ್ಷಣಮಾತ್ರದವರೆಗೆ ನಿಲ್ಲಿರಿ” ಎಂದು ಹೇಳಿ, ಸಮಸ್ತಲೋಕವೂ ಭಯದಿಂದ ಪ್ರಜ್ಞೆತಪ್ಪಿ ಬೀಳುವಂತೆ ಕೋಪದಿಂದ ಗರ್ಜಿಸಿದನು. ಈ ಗರ್ಜನಧ್ವನಿಯನ್ನು ಕೇಳಿ ಅನೇಕದೇವತೆಗಳು ಸಿಡಿಲುಬಡಿದಂತೆ ಮೂರ್ಛಿತರಾಗಿ ಬಿದ್ದರು. ಆಗ ವೃತ್ರನು ಶೂಲವನ್ನು ಹಿಡಿದು ಮದೋನ್ಮತ್ತನಾಗಿ, ಮದದಿಂದ ಕೊಬ್ಬಿದ ಕಾಡಾನೆಯು ವನವನ್ನು ಮರ್ದಿಸುವಂತೆ, ಆ ದೇವಸೈನ್ಯದಲ್ಲಿ ಪ್ರವೇಶಿಸಿ, ಮೂರ್ಛಿತರಾಗಿದ್ದ ದೇವಸೈನ್ಯವೆಲ್ಲವನ್ನೂ ತನ್ನ ಕಾಲಿನಿಂದ ತಿಕ್ಕಿ ಕೊಲ್ಲುತ್ತ ಬಂದನು. ಇದನ್ನು ನೋಡಿ ದೇವೇಂದ್ರನಿಗೆ ಸಹಿಸಲಾರದ ಕೋಪವುಂಟಾಯಿತು. ಆವೃತ್ರನಮೇಲೆ ಭಯಂಕರವಾದ ಒಂದು ಗದೆಯನ್ನು ಪ್ರಯೋಗಿಸಿದನು. ಇದಿರಾಗಿ ಬರುತಿದ್ದ ದುಸ್ಸಹವಾದ ಆಗದೆಯನ್ನು, ವೃತ್ರನು ತನ್ನ ಎಡಗೈಯಿಂದಲೇ ಅನಾಯಾಸವಾಗಿ ಹಿಡಿದು, ಮುಂದೆ ಬಂದು, ಇಂದ್ರನ ವಾಹನವಾದ ಐರಾವತದಕುಂಭಸ್ಥಳವನ್ನೇಲೆ ವೇಗದಿಂದ ಅಪ್ಪಳಿಸಿದನು. ಈ ಅದ್ಭುತಪರಾಕ್ರಮವನ್ನು ನೋಡಿ ಎಲ್ಲರೂ ಆಶ್ಚರ್ಯಪಟ್ಟರು. ಈ ಗದಾದಂಡದಿಂದ ತಾಡಿತವಾದ ಐರಾವತವು, ವಜ್ರಭಿನ್ನವಾದ ಪರ್ವತದಂತೆ, ತಲೆಯೊಡೆದು ರಕ್ತವನ್ನು ಸುರಿಸುತ್ತ, ಆ ಪ್ರಹಾರವೇಗವನ್ನು ತಡೆಯಲಾರದೆ ಬಹಳವಾಗಿ ನೊಂದು, ತನ್ನಮೇಲೆ ಕುಳಿತಿದ್ದ ಇಂದ್ರನೊಡನೆ ಏಳು ಬಿಲ್ಲಳತೆಯ ದೂರಕ್ಕೆ ಹಿಂದೆ ಸರಿಯಿತು. ಐರಾವತವು ಹೀಗೆ ಇಂದ್ರಸಹಿತವಾಗಿ ಯುದ್ಧಭೂಮಿಯಿಂದ ಹಿಂಜರಿಯುತ್ತಿರುವುದನ್ನು ನೋಡಿ ವೃತ್ರನಿಗೆ ಮತ್ತಷ್ಟು ಉತ್ಸಾಹವು ಹುಟ್ಟಿತು. ಇಂದ್ರನನ್ನು ಕೊಲ್ಲುವುದಕ್ಕೆ ತಕ್ಕ ಸಮಯವು ಸಿಕ್ಕಿದ್ದರೂ, ವೃತ್ರನು, ದುರ್ಬಲರಾದವರನ್ನು ಕೊಲ್ಲುವುದು ಅಧರ್ಮವೆಂದೆಣಿಸಿ, ತಿರುಗಿ ಗದೆಯನ್ನು ಪ್ರಯೋಗಿಸದೆ! ಸುಮ್ಮನಿದ್ದನು. ಸ್ವಲ್ಪಕಾಲದೊಳಗಾಗಿಯೇ ದೇವೇಂದ್ರನು ಚೇತರಿಸಿಕೊಂಡು, ಅಮೃತವನ್ನು ತೊಟ್ಟಿಕ್ಕುತ್ತಿರುವ ತನ್ನ ಹಸ್ತದಿಂದ ಐರಾವತದ ಮೈಯನ್ನು ಸವರಿ, ಅದರ ಬಾಧೆಯನ್ನು ನೀಗಿಸಿ, ತಿರುಗಿ ಯುದ್ಧಾಭಿಮುಖನಾಗಿ ಬಂದನು. ಇಂದ್ರನುವಜ್ರಾಯುಧವನ್ನು ಹಿಡಿದು, ತಿರುಗಿ ಯುದ್ಧಸನ್ನದ್ಧನಾಗಿ ಬರುತ್ತಿರುವುದನ್ನು ನೋಡಿದೊಡನೆ, ವೃತ್ರನಿಗೆ ಹಿಂದೆ ಆ ದೇವೇಂದ್ರನು ನಿರ್ದಯ

ನಾಗಿ ತನ್ನಣ್ಣನಾದ ವಿಶ್ವರೂಪನನ್ನು ಕೊಂದ ಘೋರಕೃತ್ಯವು ನೆನಪಿಗೆ ಬಂದಿತು. ದುಃಖದಿಂದಲೂ ಮೋಹದಿಂದಲೂ ಕುದಿಯುತ್ತ ಆ ಇಂದ್ರನನ್ನು ಹಾಸ್ಯಮಾಡಿ ಹೀಗೆಂದು ಹೇಳುವನು. “ಎಲೆ ನೀಚಾ! ನೀನು ನನ್ನಣ್ಣನಾದ ವಿಶ್ವರೂಪನನ್ನು ಕೊಂದು ಬ್ರಹ್ಮಹತ್ಯೆಗೂ, ಗುರುಹತ್ಯೆಗೂ ಪಾತ್ರನಾದ ಪರಮಪಾಪಿಯು! ಈಗ ನೀನು ದೈವವಶದಿಂದ ನನ್ನ ಕಣ್ಣಿಗೆ ಬಿದ್ದಿರುವೆ. ಕಲ್ಲಿನಂತೆ ಕಠಿನವಾದ ಈ ನಿನ್ನ ಹೃದಯವನ್ನು ಈಗಲೇ ನಾನು ಈ ಶೂಲದಿಂದ ಭೇದಿಸಿ, ನನ್ನಣ್ಣನ ಸಾಲವನ್ನು ತೀರಿಸುವೆನು ನೋಡು. ಅಯ್ಯೋ ಪಾಪೀ! ನನ್ನಣ್ಣನಾದರೋ ಬ್ರಾಹ್ಮಣನು! ವೇದಾಧ್ಯಯನಸಂಪನ್ನನು! ನಿನಗೆ ಆಚಾರ್ಯನು! ಆತ್ಮಜ್ಞನು! ಯಜ್ಞದೀಕ್ಷೆಯನ್ನು ವಹಿಸಿದ್ದವನು. ಹೀಗೆ ಪರಮಸಾಧುವೆನಿಸಿದ ಆ ನನ್ನ ಸಹೋದರನು, ನಿರಪರಾಧಿಯಾಗಿದ್ದಾಗಲೂ, ನಿಷ್ಕರುಣನಾಗಿ ನೀನು ಅವನನ್ನು ನಂಬಿಸಿ, ಸ್ವರ್ಗಕಾಮನು ಯಜ್ಞಪಶುವನ್ನು ಕೊಲ್ಲುವಂತೆ ಅವನ ತಲೆಯನ್ನು ಕಡಿದೆಯಲ್ಲವೆ! ಅಯ್ಯೋ ನೀಚಾ! ನಿನ್ನಂತಹ ಪಾಪಾತ್ಮರು ಲೋಕದಲ್ಲಿ ಯಾರುಂಟು? ನೀನು ನಾಚಿಕೆಯಿಲ್ಲದವನು! ಭಾಗ್ಯಹೀನನು! ಲೋಕಾಪವಾದಕ್ಕೆ ಹೆದರದವನು! ದಯಾಶೂನ್ಯನು. ಗುರುಹತ್ಯಾರೂಪವಾದ ನಿನ್ನ ಕ್ರೂರಕೃತ್ಯಕ್ಕಾಗಿ ಭೂತಪ್ರೇತಪಿಶಾಚಗಳೂ ನಿನ್ನನ್ನು ನಿಂದಿಸದೆ ಬಿಡಲಾರವು! ಅಂತಹ ಪಾಪಿಯಾದ ನಿನ್ನನ್ನು ಇದೋ ಈ ಶೂಲದಿಂದ ಕತ್ತರಿಸಿ ಕೆಡಹುವೆನು ನೋಡು! ಎಲೆ ಪಾಪಿ! ಪವಿತ್ರವಾದ ಅಗ್ನಿಯೂಕೂಡ ನಿನ್ನ ಶರೀರವನ್ನು ಸುಡಲಾರದು. ಇದು ಹದ್ದು ಕಾಗೆಗಳಿಗೆ ಆಹಾರವಾಗಬೇಕಲ್ಲದೆ ಬೇರೆಯಲ್ಲ! ಕ್ರೂರನಾದ ನಿನ್ನನ್ನು ಹಿಂಬಾಲಿಸುವ ಈ ದೇವತೆಗಳೆಲ್ಲರನ್ನೂ ಇತ್ತಲಾಗಿ ಬರಹೇಳು! ಅವರು ಎಷ್ಟೇ ಶಸ್ತ್ರಾಸ್ತ್ರಗಳನ್ನು ಹೊತ್ತುಬಂದರೂ ಬರಲಿ! ಇದೋ ತೀಕ್ಷ್ಣವಾದ ಈ ಶೂಲದಿಂದ ಅವರ ತಲೆಗಳನ್ನು ಕತ್ತರಿಸಿ, ಭೂತಗಳಿಗೆ ಬಲಿಯಿಕ್ಕುವೆನು. ಎಲೆ ದೇವೇಂದ್ರಾ! ನನ್ನ ಸಾವಿಗಾಗಿ ನಾನು ಹೆದರುವುದಿಲ್ಲ! ನೀನು ನಿನ್ನ ವಜ್ರಾಯುಧದಿಂದ ನನ್ನ ತಲೆಯನ್ನು ಭೇದಿಸಿದರೂ ನನಗೆ ಸಮ್ಮತವೇ! ಆಗ ನಾನು ನನ್ನ ದೇಹದಿಂದ ಭೂತಬಲಿಯನ್ನು ಮಾಡಿ, ಅದರಿಂದ

ಕರ್ಮಬಂಧವನ್ನು ನೀಗಿ, ಜ್ಞಾನಿಗಳು ಹೋಗತಕ್ಕ ಮಾರ್ಗವನ್ನನುಸರಿಸು ವೆನು. ಇಂದ್ರಾ! ಏಕೆ ಸುಮ್ಮನಿರುವೆ! ನಿನ್ನ ವಜ್ರಾಯುಧವನ್ನು ಮುಂದೆ ನಿಂತಿರುವ ನನ್ನಮೇಲೆ ಏತಕ್ಕೋಸ್ಕರ ಪ್ರಯೋಗಿಸದಿರುವೆ? ಲೋಭಿಗ ಳಲ್ಲಿ ಮಾಡಿದ ಯಾಚನೆಯಂತೆ, ಹಿಂದೆ ನೀನು ಪ್ರಯೋಗಿಸಿದ ಗದೆಯು ವ್ಯರ್ಥವಾದುದಕ್ಕಾಗಿ, ವಜ್ರಾಯುಧವೂ ನಿಷ್ಫಲವಾಗುವುದೆಂದು ಸಂದೇಹ ಪಡುವೆಯೇನು? ಹಾಗೆ ಸಂದೇಹಪಡಬೇಡ! ಈ ನಿನ್ನ ವಜ್ರವು ಎಂದಿಗೂ ವ್ಯರ್ಥವಾಗಲಾರದು. ಇದು ಭಗವಂತನ ತೇಜಸ್ಸಿನಿಂದಲೂ, ದಧೀಚಿ ಮಹರ್ಷಿಯ ತಪೋಬಲದಿಂದಲೂ ಅಮೋಘವೆನಿಸಿಕೊಂಡಿರುವುದು. ಆದುದರಿಂದ ಧೈರ್ಯವಾಗಿ ಪ್ರಯೋಗಿಸು ! ಸಾಕ್ಷಾನ್ಮಹಾವಿಷ್ಣುವೇ ನಿನಗೆ ಆಜ್ಞಾಪಿಸಿಕಳುಹಿರುವನಲ್ಲವೆ? ಅದನ್ನು ನೆನೆಸಿಕೊಂಡು ನಿನ್ನ ಸಂದೇಹ ವನ್ನುಬಿಟ್ಟು, ಆಯುಧವನ್ನು ನನ್ನಮೇಲೆ ಪ್ರಯೋಗಿಸು! ಆ ಭಗವಂತನು ಯಾರಲ್ಲಿ ಅನುಗ್ರಹವನ್ನಿಡುವನೋ, ಅಲ್ಲಿ ಜಯವೂ, ರಾಜ್ಯಸಂಪತ್ತೂ, ಪ್ರ ಭುತ್ವಾದಿಗುಣಗಳೂ ತಪ್ಪದೆ ಉಂಟಾಗುವುವು. ಆದುದರಿಂದ ಇವೆಲ್ಲವೂ ಈಗ ನಿನಗೆ ಕೈಗೂಡಿಬರುವುದರಲ್ಲಿ ಸಂದೇಹವಿಲ್ಲ. ಇದಲ್ಲದೆ ಹಿಂದೆ ನನ್ನ ಗುರುವಾದ ಸಂಕರ್ಷಣಭಗವಂತನು, ಈಗ ತನ್ನ ಪಾದಾರವಿಂದಗಳಲ್ಲಿ ಮನ ಸ್ಸನ್ನು ನೆಲೆಗೊಳಿಸುವಂತೆ ನನಗೂ ಉಪದೇಶಿಸಿರುವನು. ಅದರಂತೆ ಈಗ ನಾನು ವಿಷಯಾಭಿಲಾಷೆಯನ್ನು ಬಿಟ್ಟು ಆತನ ಪಾದಪದ್ಮಗಳನ್ನು ಧ್ಯಾನಿ ಸುತ್ತಿರುವೆನು. ಈಗ ನೀನು ನಿನ್ನ ವಜ್ರಾಯುಧದಿಂದ ನನ್ನನ್ನು ಭೇದಿಸಿದ ಪಕ್ಷದಲ್ಲಿ, ಇದರಿಂದ ನನ್ನ ಸಂಸಾರಬಂಧವು ನೀಗಿಹೋಗುವುದು! ನಾನು ರಾಕ್ಷಸನಾದರೂ ಮಹಾಯೋಗಿಗಳುಹೊಂದತಕ್ಕ ಮೋಕ್ಷವನ್ನು ಹೊಂದು ವೆನೇಹೊರತು ನರಕವನ್ನು ಹೊಂದಲಾರೆನು. ನನ್ನ ಪ್ರಭುವಾದ ಸಂಕರ್ಷಣ ಮೂರ್ತಿಯು, ಅನನ್ಯ ಪ್ರಯೋಜನರಾಗಿ ತನ್ನನ್ನು ಭಜಿಸತಕ್ಕ ಭಕ್ತರಿಗೆ, ಭೂಲೋಕದಲ್ಲಿ ಯಾಗಲಿ, ಸ್ವರ್ಗದಲ್ಲಿಯಾಗಲಿ, ಪಾತಾಳಾದಿಲೋಕಗ ಳಲ್ಲಿಯಾಗಲಿ ಅನುಭವಿಸತಕ್ಕ ಅಲ್ಪಭಾಗ್ಯಗಳೊಂದನ್ನೂ ಕೊಡದೆ ಮೋಕ್ಷ ವನ್ನೇ ಕೊಡುವನು. ಈ ಸಂಪತ್ತುಗಳೆಲ್ಲವೂ ನಶ್ವರಗಳಾದುದರಿಂದ, ಆಗಾ ಗ ಮನಸ್ಸಿಗೆ ಭಯವನ್ನೂ, ದುಃಖವನ್ನೂ, ಮದವನ್ನೂ, ದ್ವೇಷವನ್ನೂ,

ರಾಗಾದಿಗಳನ್ನೂ ಉಂಟುಮಾಡುವುವು. ಇವೆಲ್ಲವೂ ಮೋಕ್ಷವಿರೋಧಿಗಳು!' ಆದುದರಿಂದ ಭಗವಂತನು, ತಾನು ಅನುಗ್ರಹಿಸಬೇಕೆಂದಿರುವ ಭಕ್ತರಿಗೆ ಮೊದಲು ಧರ್ಮಕಾಮಾರ್ಥಗಳೆಂಬ ತ್ರಿವರ್ಗಗಳ ಸಿಕ್ಕನ್ನು ತಪ್ಪಿಸುವನು

ಅದರಿಂದ ಇಂದ್ರಾ! ಮೋಕ್ಷಕಾರಣವಾದ ಅಂತಹ ಭಗವದನುಗ್ರಹವು, ನಿಷ್ಕಾಮರಾದ ನನ್ನಂತಹ ಭಕ್ತರಿಗೆ ಲಭಿಸುವುದೇಹೊರತು. ನಿನ್ನಂತವರಿಗೆ ಲಭಿಸಲಾರದು. ನಮ್ಮಂತವರಲ್ಲಿಯೇ ಭಗವಂತನು ಪ್ರಸನ್ನನಾಗುವನೇಹೊರತು. ಸ್ವರ್ಗಾದಿವಿಷಯಸುಖಗಳಲ್ಲಿ ಆಸೆಯಿಟ್ಟಿರುವ ನಿಮ್ಮಂತವರಿಗೆ, ಎಂದಿಗೂ ಪ್ರಸನ್ನನಾಗಲಾರನು. ಆಭಗವದನುಗ್ರಹವನ್ನು ಸಂಪಾದಿಸಲಾರದವರಿಗೆ, ಸ್ಥಿರವಾದ ಮೋಕ್ಷವೂ ಲಭಿಸದು" ಎಂದು ಹೇಳಿ, ತನ್ನಲ್ಲಿ ತಾನು ಆ ಭಗವಂತನನ್ನು ಭಕ್ತಿಯಿಂದ ಹೀಗೆಂದು ಧ್ಯಾನಿಸುವನು. "ಹೇ ನಾರಾಯಣಾ! ನಿನ್ನ ಪಾದಾಶ್ರಿತರಾದ ಭಕ್ತರಿಗೆ ನಾನು. ದಾಸಾನುದಾಸನು. ನನ್ನ ಮನಸ್ಸು ಯಾವಾಗಲೂ ನಿನ್ನ ಗುಣಗಳನ್ನೇ ಸ್ಮರಿಸುತ್ತಿರಲಿ! ನನ್ನ ವಾಗಿಂದ್ರಿಯವು ಯಾವಾಗಲೂ ನಿನ್ನ ಗುಣಗಳನ್ನೇ ಕೊಂಡಾಡುತ್ತಿರಲಿ! ಈ ನನ್ನ ದೇಹವು ಯಾವಾಗಲೂ ನಿನ್ನ ಪಾದಸೇವೆಯಲ್ಲಿಯೇ ನಿರತವಾಗಿರಲಿ! ಓ ಪರಮಪುರುಷಾ! ಸಕಲಸೌಭಾಗ್ಯನಿಧಿಯಾದ ನಿನ್ನ ಪಾದಸಾನ್ನಿಧ್ಯವನ್ನು ಬಿಟ್ಟು, ನಾನು ವೈಕುಂಠವನ್ನಾಗಲಿ, ಬ್ರಹ್ಮಲೋಕವನ್ನಾಗಲಿ, ಚಕ್ರವರ್ತಿಪದವಿಯನ್ನಾಗಲಿ, ಪಾತಾಳಾದಿಲೋಕಾಧಿಪತ್ಯವನ್ನಾಗಲಿ, ಅಣಿಮಾದ್ಯಷ್ಟಸಿದ್ಧಿಗಳನ್ನಾಗಲಿ, ಪುನರ್ಜನ್ಮವಿಲ್ಲದ ಕೈವಲ್ಯವನ್ನಾಗಲಿ ಅಪೇಕ್ಷಿಸತಕ್ಕವನಲ್ಲ. ಇನ್ನೂ ರೆಕ್ಕೆಹುಟ್ಟದ ಹಕ್ಕಿಯ ಮರಿಗಳು ತಮ್ಮತಾಯಿಯನ್ನೂ, ಹಸಿದಮಕ್ಕಳು ತಾಯಿಯ ಮೊಲೆಹಾಲನ್ನೂ, ವಿರಹಾತುರೆಯಾದ ನಾಯಿಕೆಯು ತನ್ನ ನಾಯಕನನ್ನೂ ಅತ್ಯಾತುರದಿಂದ ಇದಿರುನೋಡುವಂತೆ, ನನ್ನ ಮನಸ್ಸು ನಿನ್ನರೂಪವನ್ನು ನೋಡುವುದಕ್ಕಾಗಿ ತವಕಿಸುತ್ತಿರುವುದು. ಓ ವಾಸುದೇವಾ! ಇದುವರೆಗೆ ನಿನ್ನ ಮಾಯೆಯಿಂದ ಮೋಹಿತನಾಗಿ, ಕರ್ಮಗಳಲ್ಲಿ ಬಿದ್ದು, ಸಂಸಾರಚಕ್ರದಲ್ಲಿ ತೊಳಲುತ್ತ, ಹೆಂಡಿರು ಮಕ್ಕಳಲ್ಲಿಯೂ, ಮನೆಮಠಗಳಲ್ಲಿಯೂ, ಆಸೆಯಿಟ್ಟಿದ್ದ ನನಗೆ, ಇನ್ನು ಮೇಲಾದರೂ ಆ ವಿಷಯಾಸಕ್ತಿಯು ನೀಗಿ ನಿನ್ನ ಭಕ್ತರೊಡನೆ

ಸಹವಾಸವು ಲಭಿಸುವಂತೆ ಅನುಗ್ರಹಿಸು.” ಎಂದು ಕೈಮುಗಿದು ಪ್ರಾರ್ಥಿಸುತಿದ್ದನು. ಇಲ್ಲಿಗೆ ಹನ್ನೊಂದನೆಯ ಅಧ್ಯಾಯವು.

---

## ವೃ ತ್ರ ವ ಧ ವು.

ಹೀಗೆ ವೃತ್ರಾಸುರನು ತನ್ನ ದೇಹವನ್ನು ತೊರೆಯುವುದಕ್ಕಾಗಿ ನಿಶ್ಚಯಿಸಿಕೊಂಡು, ಆ ಯುದ್ಧದಲ್ಲಿ ತನಗೆ ಜಯಕ್ಕಿಂತಲೂ ಮರಣವೇ ಮೇಲೆಂದು ಭಾವಿಸಿ, ಕೈಯಲ್ಲಿ ಶೂಲವನ್ನು ಗ್ರಹಿಸಿ, ಹಿಂದೆ ಪ್ರಳಯಕಾಲದಲ್ಲಿ ಕೈಟಭಾಸುರನು ಮಹಾವಿಷ್ಣುವನ್ನಿದಿರಿಸಿದಂತೆ ಇಂದ್ರನನ್ನಿದಿರಿಸಿ ಬಂದನು. ಪ್ರಳಯಕಾಲಾಗ್ನಿಯ ಜ್ವಾಲೆಯಂತೆ ತೀಕ್ಷ್ಣವಾದ ಅಲಗುಳ್ಳ ಆ ಶೂಲವನ್ನು ಗಿರುಗಿರನೆ ತಿರುಗಿಸಿ, ಸಿಂಹನಾದವನ್ನು ಮಾಡುತ್ತ, “ಎಲಾ ಪಾಪಿ ಇದೋ ಇದರಿಂದ ನೀನು ಸತ್ತೆ” ಎಂದು ಆ ಇಂದ್ರನಮೇಲೆ ಬೀಸಿದನು. ಆಕಾಶದಲ್ಲಿ ತಿರುಗುತ್ತಿರುವ ಕೊಳ್ಳಿಯಂತೆ, ಕಣ್ಣಿಂದ ನೋಡಲಸಾಧ್ಯವಾದ ತೇಜಸ್ಸಿನಿಂದ ಜ್ವಲಿಸುತ್ತ, ತನಗಿದಿರಾಗಿ ಬರುತ್ತಿರುವ ಆ ಶೂಲವನ್ನು ನೋಡಿದಾಗಲೂ ಇಂದ್ರನು ಧೈರ್ಯಗುಂದದೆ, ನೂರಲಗುಳ್ಳ ತನ್ನ ವಜ್ರದಿಂದ ಆ ಶೂಲವನ್ನು ನಡುದಾರಿಯಲ್ಲಿಯೇ ಕತ್ತರಿಸಿ ಕೆಡಹಿದನು. ಮತ್ತು ಅದೇ ವಜ್ರಪ್ರಯೋಗದಿಂದ ಸರ್ಪದೇಹದಂತಿದ್ದ ಆ ವೃತ್ರನ ಬಲಭುಜವೂ ಕತ್ತರಿಸಿಬಿದ್ದಿತು. ಒಂದು ಭುಜವು ಕತ್ತರಿಸಿಬಿದ್ದರೂ ವೃತ್ರನು ಹಿಂತೆಗೆಯದೆ, ಅತಿಕ್ರುದ್ಧನಾಗಿ, ಬೇರೊಂದು ಪರಿಘವನ್ನು ಕೈಗೆತ್ತಿಕೊಂಡು, ವಜ್ರಧಾರಿಯಾಗಿ ನಿಂತಿದ್ದ ಇಂದ್ರನ ಸಮೀಪಕ್ಕೆ ಹೋಗಿ ಇಂದ್ರನ ಕಪಾಲಕ್ಕೂ ಆ ಐರಾವತದ ಕುಂಭಸ್ಥಳಕ್ಕೂ ಗುರಿಯಿಟ್ಟು ಅಪ್ಪಳಿಸಿದನು. ಈ ಪ್ರಹಾರವೇಗದಿಂದ ಇಂದ್ರನ ಕೈಯಲ್ಲಿದ್ದ ವಜ್ರಾಯುಧವು ಜಾರಿಬಿತ್ತು. ಈ ಅದ್ಭುತಸಾಹಸವನ್ನು ನೋಡಿ ದೇವಾಸುರಸಿದ್ಧಚಾರಣರೆಲ್ಲರೂ ಆ ವೃತ್ರಾಸುರನ ವೀರ್ಯವನ್ನು ಶ್ಲಾಘಿಸುತ್ತ, ಇತ್ತಲಾಗಿ ಇಂದ್ರನ ದುಸ್ಥಿತಿಯನ್ನು ನೋಡಿ “ಹಾಹಾ” ಎಂದು ಕೂಗುತಿದ್ದರು. ಆಗ ದೇವೇಂದ್ರನು ತನ್ನ ಕೈಯಿಂದ ಜಾರಿಬಿದ್ದ ಆ ಆಯುಧವನ್ನು ತಿರುಗಿ ಕೈಗೆತ್ತಿಕೊಳ್ಳುವುದಕ್ಕೆ ನಾಚಿಕೆಪಟ್ಟು, ಶತ್ರುವಿನ ಮುಂದೆ

ಸ್ವಲ್ಪಕಾಲದವರೆಗೆ ಸುಮ್ಮನೆ ನಿಂತಿದ್ದನು. ಆಗ ವೃತ್ರನು ಇಂದ್ರನನ್ನು ಕುರಿತು “ಇಂದ್ರಾ! ಇದು ವಿಷಾದಕ್ಕೆ ಕಾಲವಲ್ಲ! ಆಯುಧವನ್ನು ಕೈಗೆತ್ತಿಕೊಂಡು ಶತ್ರುವಾದ ನನ್ನನ್ನು ಕೊಲ್ಲು. ಯುದ್ಧಕ್ಕೆ ಬಂದು ನಿಂತ ಮೇಲೆ, ಯಾವಾಗಲೂ ಜಯವಾಗುವುದೆಂಬ ನಿಶ್ಚಯವಿಲ್ಲ. ಎಷ್ಟೋ ಪರಾಕ್ರಮಶಾಲಿಗಳಿಗೂ ಒಮ್ಮೊಮ್ಮೆ ಪರಾಜಯವುಂಟು. ಸಮಸ್ತಪ್ರಪಂಚವೂ ಪರಮಾತ್ಮನಿಗೆ ಸ್ವಾಧೀನವಾಗಿರುವುದು. ಆ ಭಗವಂತನೇ ಎಲ್ಲರಲ್ಲಿಯೂ ಅಂತರಾತ್ಮದಾಗಿದ್ದು, ಅವರವರ ಕರ್ಮಾನುಸಾರವಾಗಿ ಜಯಪರಾಜಯಗಳನ್ನುಂಟುಮಾಡುವನು. ಹೀಗಿರುವಾಗ ಯಾರೇನು ಮಾಡಬಲ್ಲರು ? ಈಶ್ವರಾಧೀನವಾಗಿ ನಡೆಯತಕ್ಕ ಕಾರ್ಯಗಳಿಗೆ ನಾವು ಲಜ್ಜೆಪಡುವುದೇಕೆ ? ಸೃಷ್ಟಿಸ್ಥಿತಿಲಯಗಳಿಗೆ ಕಾರಣನಾಗಿಯೂ, ಸರ್ವಜ್ಞನಾಗಿಯೂ, ಇರುವ ಆ ಭಗವಂತನಿಗೊಬ್ಬನಿಗೆಹೊರತು, ಬೇರೆ ಯಾರಿಗೂ ಜಯವೆಂಬುದು ಸ್ಥಿರವಲ್ಲ. ಲೋಕಪಾಲರೊಡಗೂಡಿದ ಸಮಸ್ತಲೋಕಗಳೂ, ಹಗ್ಗದಲ್ಲಿ ಬಿಗಿದ ಹಕ್ಕಿಗಳಂತೆ, ಆತನ ವಶದಲ್ಲಿರುವುವು ಆದುದರಿಂದ ಜಯಪರಾಜಯಗಳಿಗೆಲ್ಲಾ ಆತನೇ ಕಾರಣನು! ಜಯಾಪಜಯಗಳಿಗೆಮಾತ್ರವೇನು ? ಯಾವುದಾದರೂ ಒಂದು ಕಾರ್ಯದಲ್ಲಿ ಪ್ರವೃತ್ತಿಸಾಮರ್ಥ್ಯವಾಗಲಿ, ವೇಗವಾಗಲಿ, ಬಲವಾಗಲಿ, ಪ್ರಾಣವಾಗಲಿ, ಮೋಕ್ಷವಾಗಲಿ, ಸಂಸಾರವಾಗಲಿ, ಯಾವುದು ಲಭಿಸಬೇಕಾದರೂ ಈಶ್ವರಾಜ್ಞೆಯಿಂದಲೇ ಲಭಿಸಬೇಕು. ಈ ತತ್ವವನ್ನು ತಿಳಿಯದ ಅನೇಕಮೂಢರು, ಜಯಾಪಜಯಗಳಿಗೆ ತಮ್ಮನ್ನೇ ಕಾರಣವೆಂದು ತಿಳಿಯುವರು. ಈ ಭ್ರಾಂತಿಗೆ ಅಜ್ಞತೆಯೇ ಕಾರಣವಲ್ಲದೆ ಬೇರೆಯಲ್ಲ. ಓ ಇಂದ್ರಾ! ಸಮಸ್ತಭೂತಗಳೂ ಮರದ ಬೊಂಬೆಯಂತೆಯೂ ಯಂತ್ರದಮೃಗಗಳಂತೆಯೂ ಆ ಈಶ್ವರನಿಗಧೀನವಾಗಿ ನಡೆಯುವುವು. ಪ್ರಕೃತಿ, ಪುರುಷ, ಮಹತ್ತು, ಅಹಂಕಾರ, ಪಂಚಭೂತಗಳು, ಇಂದ್ರಿಯಗಳು, ಅಂತಃಕರಣ, ಈ ಮೊದಲಾದುವೆಲ್ಲವೂ ಪ್ರಪಂಚಕ್ಕೆ ಕಾರಣಗಳಂತೆ ತೋರಿದರೂ, ಆ ಒಂದೊಂದರಲ್ಲಿಯೂ ಭಗವಂತನು ಅಂತರ್ಯಾಮಿಯಾಗಿದ್ದು ಅನುಗ್ರಹಿಸಿದಹೊರತು, ಅವು ಸೃಷ್ಟ್ಯಾದಿಗಳನ್ನು ನಡೆಸುವುದಕ್ಕೆಸಮರ್ಥಗಳಲ್ಲ! ಹೆಚ್ಚೇಕೆ? ಚತುರ್ಮುಖನಾದರೂ ಭಗವದನುಗ್ರಹವಿಲ್ಲದೆ ಸೃ

ಷ್ಟಿಕಾರ್ಯಕ್ಕೆ ಸಮರ್ಥನಾಗಲಿಲ್ಲ. ಹೀಗಿರುವಾಗಲೂ. ಅಜ್ಞನಾದವನು, ತಾನು ಯಾವ ಕಾರ್ಯಕ್ಕೂ ಅಸಮರ್ಥನಾಗಿದ್ದರೂ, ತನ್ನನ್ನು ಸಮರ್ಥನೆಂದೇ ಭಾವಿಸುವನು. ಆ ಭಗವಂತನೇ ಭೂತಗಳ ಮೂಲಕವಾಗಿ ಭೂತಗಳನ್ನು ಸೃಷ್ಟಿಸುವನು. ಕೊನೆಗೆ ಅವುಗಳಿಂದಲೇ ಅವುಗಳನ್ನು ಕೊಲ್ಲಿಸುವನು. ಆಯಸ್ಸು, ಲಕ್ಷ್ಮಿ, ಪ್ರಭುತ್ವ, ಕೀರ್ತಿ, ಮುಂತಾದುವೆಲ್ಲವೂ ಆ ಪರಮಪುರುಷನಿಗಧೀನವಾಗಿಯೇ ನಡೆಯುವುವು. ಇವೆಲ್ಲವೂ, ಆಯಾ ಕರ್ಮಗಳಿಗೆ ಫಲವಾಗಿ ಒಂದೊಂದು ಕಾಲದಲ್ಲಿ ಸಂಭವಿಸುವುವು ದಾರಿದ್ರ್ಯ, ವ್ಯಾಧಿ, ಮರಣ, ಮುಂತಾದುವುಗಳು ಅಪೇಕ್ಷಿಸದಿದ್ದರೂ ಪ್ರಾಣಿಗಳಿಗೆ ಆಯಾಕಾಲದಲ್ಲಿ, ತಪ್ಪದೆ ಬರುವಂತೆ, ಈ ಆಯುಸ್ಸು ಮೊದಲಾದುವುಗಳೂ ಮನುಷ್ಯನ ಇಷ್ಟಾನಿಷ್ಟಗಳನ್ನು ನಿರೀಕ್ಷಿಸದೆ ಬಂದು ಸೇರುವುವು. ಆದುದರಿಂದ ಕೀರ್ತ್ಯಪಕೀರ್ತಿಗಳಿಗಾಗಲಿ, ಜಯಾಪಜಯಗಳಿಗಾಗಲಿ, ಭಗವದನುಗ್ರಹವೇ ಕಾರಣವು. ಆದುದರಿಂದ ಮನುಷ್ಯನು ಆಗಾಗ ಸಂಭವಿಸುವ ಸುಖದುಃಖಗಳಲ್ಲಿಯಾಗಲಿ, ಜೀವಿತಮರಣಗಳಲ್ಲಿಯಾಗಲಿ, ಮನಸ್ಸು ಕಲಗದೆ, ಸಮಬುದ್ಧಿಯಿಂದಿರಬೇಕು. ಸತ್ವ, ರಜಸ್ಸು, ತಮಸ್ಸುಗಳೆಂಬೀಮೂರು ಗುಣಗಳೂ ಪ್ರಕೃತಿಯಲ್ಲಿರತಕ್ಕವುಗಳೇ ಹೊರತು, ಜೀವನಲ್ಲಿರತಕ್ಕವುಗಳಲ್ಲ. ಈ ಸತ್ವಾದಿಗಳ ಪರಿಣಾಮದಿಂದುಂಟಾದ ದೇಹದಲ್ಲಿ ತಾನು ಕೇವಲಸಾಕ್ಷೀಭೂತನಾಗಿರುವೆನೆಂದು ಯಾವನು ತಿಳಿದುಕೊಳ್ಳುವನೋ, ಆತನು ಸಂಸಾರದಲ್ಲಿ ಕಟ್ಟಿ ಬೀಳಲಾರನು. ಆದುದರಿಂದ ಇಂದ್ರಾ! ನೀನು ಲಜ್ಜೆಯನ್ನು ಬಿಟ್ಟು, ವಿವೇಕವನ್ನು ತಂದುಕೊಂಡು ಯುದ್ಧಮಾಡು. ಯುದ್ಧಕ್ಕೆ ಭಯಪಡಬಾರದು. ಇದೋ ನನ್ನನ್ನು ನೋಡು! ನೀನು ಈಗ ಯುದ್ಧದಲ್ಲಿ ನನ್ನ ಒಂದು ತೋಳನ್ನು ಕತ್ತರಿಸಿರುವಾಗಲೂ, ನಾನು ಹಿಂಜರಿಯದೆ, ನಿನ್ನ ಪ್ರಾಣಗಳನ್ನು ತೆಗೆಯಬೇಕೆಂಬ ಹಟದಿಂದ ಶಕ್ತಿಯಿದ್ದಷ್ಟು ಹೋರಾಡುತ್ತಿರುವೆನಲ್ಲವೆ? ದೇವೇಂದ್ರಾ! ಈ ಯುದ್ಧವೆಂಬುದನ್ನೂ ಒಂದು ಜೂಜಾಟವೆಂದು ತಿಳಿ! ಈ ಜೂಜಿನಲ್ಲಿ ನಮ್ಮ ಪ್ರಾಣಗಳೇ ಒತ್ತೆಯಿಟ್ಟ ಹಣವು! ಆನೆ ಕುದುರೆ ಮುಂತಾದ ಚತುರಂಗಸೈನ್ಯಗಳೇ ಆಟದ ಹಲಗೆ! ಬಾಣಗಳೇ ದಾಳಗಳು! ಈ ಜೂಜಿನಲ್ಲಿ ಯಾರಿಗೆ ಜಯವೋ

ಯಾರಿಗೆ ಪರಾಜಯವೋ ಇದನ್ನು ಯಾರೂ ನಿರ್ಣಯಿಸಿ ತಿಳಿಯಲಾರರು! ಆದರೆ ಒಂದನ್ನುಮಾತ್ರ ಹೇಳಬಹುದು. ನಿನಗೆ ಭಗವತ್ಸಹಾಯವಿರುವುದ ರಿಂದ, ಕೊನೆಗೆ ನೀನೇ ಜಯಿಸಬಹುದೆಂದು ನನ್ನ ಮನಸ್ಸಿಗೆ ನಿಶ್ಚಯವಿರು ವುದು. ಆದುದರಿಂದ ಹೆದರದೆ ಯುದ್ಧಮಾಡು" ಎಂದನು. ವೃತ್ರನ ನಿಷ್ಕ ಪಟವಾದ ಈ ಮಾತನ್ನು ಕೇಳಿ ದೇವೇಂದ್ರನು, ಮನಸ್ಸಿನಲ್ಲಿ ಮೆಚ್ಚಿ ನಗುತ್ತ ಕೆಳಗೆಬಿದ್ದ ವಜ್ರಾಯುಧವನ್ನು ಕೈಗೆತ್ತಿಕೊಂಡು "ಓ ದಾನವೇಂದ್ರಾ ! ನಿನಗೆ ಈವಿಧವಾದ ಸದ್ಬುದ್ಧಿಯು ಹುಟ್ಟಿರುವುದನ್ನು ನೋಡಿದರೆ ನೀನೇ ಧನ್ಯನೆಂದೆಣಿಸುವೆನು. ಈಗ ನಿನ್ನ ಪುಣ್ಯವು ಸಿದ್ಧಿಸಿತು. ಸರ್ವವಿಧದಿಂದ ಲೂ ನಿನಗೆ ಪ್ರಿಯನಾಗಿಯೂ, ಅಂತರಾತ್ಮನಾಗಿಯೂ ಇರುವ ಭಗವಂತ ನನ್ನು ಸೇವಿಸಿ ಲೋಕಮೋಹಕವಾದ ವಿಷ್ಣುಮಾಯೆಯನ್ನೂ ನೀನು ಜಯಿ ಸಿದೆ! ನಿನಗಿದ್ದ ರಾಕ್ಷಸಸ್ವಭಾವವು ಬಿಟ್ಟುಹೋಗಿ ಈಗ ನೀನು ಕೇವಲ ಸಾತ್ವಿಕನಾದ ಮಹಾಪುರುಷನೆನಿಸಿಕೊಂಡೆ! ಕೇವಲ ರಾಜಸಸ್ವಭಾವವುಳ್ಳ ನಿನಗೆ ಆ ವಾಸುದೇವನಲ್ಲಿ ದೃಢಭಕ್ತಿಯುಂಟಾದುದಲ್ಲವೇ ಆಶ್ಚರ್ಯವು! ಮೋಕ್ಷಾಧೀಶ್ವರನಾದ ಆ ಭಗವಂತನಲ್ಲಿ ಭಕ್ತಿಯಿಟ್ಟು, ಅದರಿಂದ ಬ್ರಹ್ಮಾನಂದಸಮುದ್ರದಲ್ಲಿ ವಿಹರಿಸುವ ನಿನ್ನಂತವರು, ಕಾಲುವೆಯ ನೀರಿ ನಂತೆ ಅತ್ಯಲ್ಪವಾದ ಇತರಸುಖಗಳನ್ನು ಕಣ್ಣೆತ್ತಿಯೂ ನೋಡಲಾರರು" ಎಂದನು. ಓ ಪರೀಕ್ಷಿದ್ರಾಜಾ ! ಹೀಗೆ ಇಂದ್ರವೃತ್ರರಿಬ್ಬರೂ ಧರ್ಮವಿ ಚಾರವನ್ನು ಮಾಡುತಿದ್ದು, ಕೊನೆಗೆ ತಮ್ಮ ವೀರ್ಯವನ್ನು ತೋರಿಸಿ ಯು ದ್ಧಮಾಡತೊಡಗಿದರು. ವೃತ್ರನು ಭಯಂಕರವಾದ ಒಂದು ಉಕ್ಕಿನ ಪರಿ ಘವನ್ನು ತೆಗೆದು, ಎಡಗೈಯಿಂದಲೇ ಅದನ್ನು ಇಂದ್ರನಮೇಲೆ ಬೀಸಿದನು. ಆಕ್ಷಣವೇ ಇಂದ್ರನು ಆ ಪರಿಘವನ್ನೂ, ವೃತ್ರಾಸುರನ ಎಡದ ಭುಜ ವನ್ನೂ ಏಕಕಾಲದಲ್ಲಿ ತನ್ನ ವಜ್ರಾಯುಧದಿಂದ ಕತ್ತರಿಸಿ ಕೆಡಹಿದನು. ವೃತ್ರನ ಎರಡು ತೋಳುಗಳೂ ಬಿದ್ದುಹೋದುವು. ಉಭಯಪಾರ್ಶ್ವಗ ಳಲ್ಲಿಯೂ ಆತನ ಬಾಹುಮೂಲದಿಂದ ರಕ್ತವು ಸ್ರವಿಸುತಿತ್ತು. ವಜ್ರ ಪ್ರಹಾರದಿಂದ ರೆಕ್ಕೆಮುರಿದು ಬಿದ್ದ ಪರ್ವತದಂತೆ ನಿಂತಿದ್ದನು. ಆಗಲೂ ಹೆದರದೆ, ಆ ರಾಕ್ಷಸನು, ಕೆಳಗೆ ಭೂಮಿಯನ್ನೂ, ಮೇಲೆ ಅಂತರಿಕ್ಷವನ್ನೂ

ಮುಟ್ಟುವಂತೆ ದೊಡ್ಡದಾಗಿ ಬಾಯನ್ನಗಲಿಸಿ, ಸರ್ಪದಂತಿರುವ ಭಯಂಕರವಾದ ನಾಲಗೆಯನ್ನು ನೀಡಿ, ಮೃತ್ಯುಸಮಾನಗಳಾದ ಕೋರೆಹಲ್ಲುಗಳನ್ನು ತೋರಿಸುತ್ತ ಮೂರುಲೋಕವನ್ನೂ ನುಂಗುವಂತೆ ಮುಂದೆಬಂದನು. ಜಂಗಮಪರ್ವತದಂತೆ ಮಹಾಕಾಯವುಳ್ಳ ಆರಾಕ್ಷಸನು, ನಡೆದುಬರುವಾಗ ತನ್ನ ನಡೆಯಿಂದ ಭೂಮಿಯನ್ನು ಭೇದಿಸಿ ಚೂರ್ಣಮಾಡುತ್ತ, ಅತ್ತಿತ್ತ ಕಾಣುವ ಪರ್ವತಗಳನ್ನೆತ್ತಿಬೀಸುತ್ತ ಬಂದು, ವಾಹನವಾದ ಐರಾವತದೊಡನೆ ಇಂದ್ರನನ್ನು ಹಿಡಿದೆತ್ತಿ, ಒಂದೇ ತುತ್ತಾಗಿ ನುಂಗಿಬಿಟ್ಟನು. ಮಹಾಸರ್ಪದಿಂದ ನುಂಗಲ್ಪಟ್ಟ ಆನೆಯಂತೆ ದೇವೇಂದ್ರನು ವೃತ್ರನ ಬಾಯಿಗೆತುತ್ತಾದುದನ್ನು ಕಂಡು, ಅಲ್ಲಿದ್ದ ದೇವತೆಗಳೂ, ಮಹರ್ಷಿಗಳೂ, ಪ್ರಜಾಧಿಪತಿಗಳೂ "ಅಯ್ಯೋ ಇದೇನನರ್ಥವು!" ಎಂದು ಕೂಗಿ ಹಾಹಾಕಾರವನ್ನು ಮಾಡುತಿದ್ದರು ಇಂದ್ರನು ವೃತ್ರನ ಗರ್ಭದಲ್ಲಿ ಪ್ರವೇಶಿಸಿದ್ದರೂ, ಭಗವಂತನ ಮಾಯಾಬಲದಿಂದಲೂ, ನಾರಾಯಣಕವಚವೆಂಬ ಮಂತ್ರದ ಸಿದ್ಧಿಯಿಂದಲೂ ರಕ್ಷಿತನಾಗಿ ತನ್ನ ವಜ್ರದಿಂದ ಆ ವೃತ್ರನ ಹೊಟ್ಟೆಯನ್ನು ಸೀಳಿಕೊಂಡು, ಹೊರಗೆ ಬಂದು, ಅದೇ ವಜ್ರದಿಂದ ಪರ್ವತಶಿಖರವನ್ನು ಭೇದಿಸುವಂತೆ ವೃತ್ರನ ತಲೆಯನ್ನೂ ಕತ್ತರಿಸಿ ಕೆಡಹಿದನು. ಓ ಪರೀಕ್ಷಿದ್ರಾಜಾ! ತೀಕ್ಷ್ಣವಾದ ಅಲಗುಳ್ಳ ಆ ವಜ್ರವು ವೃತ್ರನ ಕಂಠಭಾಗವನ್ನು ಸುತ್ತಿಸುತ್ತಿ ಕತ್ತರಿಸುತ್ತ ಬಂದರೂ, ಆವನ ತಲೆಯು ಕೆಳಗೆ ಬೀಳುವುದಕ್ಕೆ ಒಂದು ಸಂವತ್ಸರಕಾಲವು ಹಿಡಿಯಿತು ವೃತ್ರನ ತಲೆಯು ಕೆಳಗೆ ಬಿದ್ದೊಡನೆ, ಆಕಾಶದಿಂದ ಪುಷ್ಪವೃಷ್ಟಿಯು ಸುರಿಯಿತು! ದೇವದುಂದುಭಿಗಳು ಮೊಳಗಿದುವು! ಸಿದ್ಧಗಂಧರ್ವಾದಿಗಳೆಲ್ಲರೂ ಸಂತೋಷಧ್ವನಿಗಳನ್ನು ಮಾಡುತಿದ್ದರು. ಮಹರ್ಷಿಗಳೆಲ್ಲರೂ ವೃತಸಂಹಾರಿಯಾದ ದೇವೇಂದ್ರನ ವೀರ್ಯವನ್ನು ಪ್ರಕಾಶಗೊಳಿಸತಕ್ಕ ಮಂತ್ರಗಳಿಂದ ಆತನನ್ನು ಸ್ತುತಿಸುತಿದ್ದರು. ವೃತ್ರನ ಶರೀರವು ಕೆಳಗೆ ಬಿದ್ದೊಡನೆ, ಅದರಿಂದ ಒಂದಾನೊಂದು ತೇಜಸ್ಸು, ಹೊರಟು, ಎಲ್ಲರೂ ನೋಡುತಿದ್ದಹ್ಹಾಗೆಯೇ ಅಂತರಿಕ್ಷಮಾರ್ಗವಾಗಿ ವೈಕುಂಠವನ್ನು ಸೇರಿತು. ಇಲ್ಲಿಗೆ ಹನ್ನೆರಡನೆಯ ಅಧ್ಯಾಯವು.



1200. ಇಂದ್ರನು ವೃತ್ರಾಸುರನನ್ನು ವಧಿಸಿದುದು.

{ಬ್ರಹ್ಮಹತ್ಯೆಗೆ ಭಯಪಟ್ಟು ಇಂದ್ರನು ಮಾನಸಸರೋ ವರದಲ್ಲಿ ಅವಿತುಕೊಂಡುದು.}

“ರಾಜೇಂದ್ರಾ! ಕೇಳು! ವೃತ್ರನು ಹತನಾದುದರಿಂದ, ಸಮಸ್ತ ಲೋಕಗಳೂ, ಲೋಕಪಾಲಕರೂ, ಮನೋವ್ಯಥೆಯನ್ನು ಬಿಟ್ಟು ನಿರ್ಭಯ ರಾಗಿ ಸಂತೋಷದಿಂದಿದ್ದರು. ಇಂದ್ರನಿಗೆಮಾತ್ರ ಮನಸ್ಸಿನಲ್ಲಿ ಸಂತೋಷ ವಿರಲಿಲ್ಲ. ಈ ವೃತ್ರವಧವಾದಮೇಲೆ, ದೇವತೆಗಳು, ಋಷಿಗಳು, ಪಿತೃಗಳು, ಭೂತಗಳು, ದೈತ್ಯರು ಮೊದಲಾಗಿ ಬ್ರಹ್ಮರುದ್ರೇಂದ್ರಾದಿಗಳೆಲ್ಲರೂ ತ ಮ್ಮತಮ್ಮ ಸ್ಥಾನಕ್ಕೆ ಸೇರಿ ಸುಖದಿಂದಿದ್ದರು” ಎಂದನು. ಈ ನಡುವೆ ಪರೀ ಕ್ಷಿದ್ರಾಜನು ಶುಕಮುನಿಯನ್ನು ಕುರಿತು “ಓ ಮಹರ್ಷೀ! ಸಮಸ್ತದೇವತೆ ಗಳಿಗೂ ವೃತ್ರವಧದಿಂದ ಸಂತೋಷವುಂಟಾದಾಗ, ಇಂದ್ರನಿಗೆಮಾತ್ರ ಆ ಸಂತೋಷವಿಲ್ಲದೇಥಕ್ಕೆ ಕಾರಣವೇನು?” ಎಂದನು.ಅದಕ್ಕಾ ಶುಕಮುನಿಯು “ರಾಜೇಂದ್ರಾ ಕೇಳು! ಮೊದಲು ವೃತ್ರಾಸುರನ ಬಾಧೆಗೆ ಭಯಪಟ್ಟು, ಮಹರ್ಷಿಗಳೂ, ದೇವತೆಗಳೂ, ಇಂದ್ರನ ಬಳಿಗೆ ಬಂದು ಆ ವೃತ್ರನನ್ನು ಹೇಗಾದರೂ ಕೊಲ್ಲಬೇಕೆಂದು ಪ್ರೇರಿಸಿದರು. ಇಂದ್ರನಾದರೋ ಬ್ರಹ್ಮಹ ತ್ಯೆಗಾಗಿ ಭಯಪಟ್ಟು, “ಎಲೈ ದೇವರ್ಷಿಗಳಿರಾ! ಮೊದಲು ವಿಶ್ವರೂಪನ ನ್ನು ಕೊಂದಾಗಲೇ ಬ್ರಹ್ಮಹತ್ಯೆಯು ನನ್ನನ್ನು ಬಹಳವಾಗಿ ಬಾಧಿಸಿತು. ಆ ಪಾಪವನ್ನು ಸ್ತ್ರೀಯರಿಗೂ, ಭೂಮಿಗೂ, ಜಲಕ್ಕೂ, ವೃಕ್ಷಗಳಿಗೂ ಹಂಚಿ ಕೊಟ್ಟು ಅದರಿಂದ ನಿವೃತ್ತನಾದೆನು. ತಿರುಗಿ ಮತ್ತೊಂದು ಬ್ರಹ್ಮಹತ್ಯೆ ಯನ್ನು ಕಟ್ಟಿಕೊಂಡರೆ, ಆ ಪಾಪದಿಂದ ನಾನು ಮುಕ್ತನಾಗುವುದು ಹೇ ಗೆ” ಎಂದನು. ಆದಕ್ಕಾ ಋಷಿಗಳು, “ಎಲೈ ದೇವೇಂದ್ರನೆ! ಭಯಪಡಬೇಡ! ನಿನ್ನಿಂದ ಅಶ್ವಮೇಧವನ್ನು ಮಾಡಿಸಿ ಆ ಪಾಪವನ್ನು ನೀಗಿಸಬಲ್ಲೆವು. ಅದ ರಿಂದ ನಿನಗೆ ಕ್ಷೇಮವುಂಟು.ಆ ಅಶ್ವಮೇಧಯಾಗದಿಂದ ಪರಮಪುರುಷನಾ ದಶ್ರೀಮನ್ನಾರಾಯಣನನ್ನು ಆರಾಧಿಸಿದಪಕ್ಷದಲ್ಲಿ, ನೀನು ಪಾಪವಿಮುಕ್ತ ನಾಗುವೆ!ಬ್ರಹ್ಮಹತ್ಯೆಯೊಂದುಮಾತ್ರವೇ ಅಲ್ಲ! ತ್ರೈಲೋಕ್ಯವನ್ನು ಕೊಂ ದಪಾಪವೂಕೂಡ ಅದರಿಂದ ನೀಗುವುದು. ಆ ಭಗವಂತನನ್ನು ಭಕ್ತಿಯಿಂದ ಕೀರ್ತಿಸಿದಮಾತ್ರಕ್ಕೆ, ಬ್ರಹ್ಮಹತ್ಯೆ,ಪಿತೃಹತ್ಯೆ, ಗೋಹತ್ಯೆ,ಮಾತೃಹತ್ಯೆ,ಗು

ರುಹತ್ಯೆ, ಮುಂತಾದ ಘೋರಪಾತಕಗಳನ್ನು ಮಾಡಿದ್ದರೂ, ಶ್ವಪಚನಾಗಿ ದ್ದರೂ, ಪುಲ್ಕಸವೆಂಬ ಪಾಪಜಾತಿಯಲ್ಲಿ ಹುಟ್ಟಿದ್ದರೂಕೂಡ, ಆಯಾಪಾ ಪಗಳಿಂದ ಮುಕ್ತನಾಗಿಶುದ್ಧಿಯನ್ನು ಹೊಂದುವನು. ನಾವು ಹೇಳುವಕ್ರಮ ದಲ್ಲಿನೀನು ಶ್ರದ್ಧೆಯಿಂದ ಅಶ್ವಮೇಧವೆಂಬ ಮಹಾಯಜ್ಞವನ್ನು ನಡೆಸಿದಪ ಕ್ಷದಲ್ಲಿ, ಬ್ರಹ್ಮಾತ್ಮಕವಾದ ಸಮಸ್ತಪ್ರಪಂಚವನ್ನೂ ಕೊಂದ ಪಾಪವೇ ನೀಗುವಾಗ, ಲೋಕಕಂಟಕನಾದ ಆ ವೃತ್ರನನ್ನು ಕೊಂದ ಪಾಪವು ಬಿ ಟ್ಟುಹೋಗುವುದರಲ್ಲಿ ಸಂದೇಹವೇನಿದೆ?" ಎಂದರು. ಹೀಗೆ ಬ್ರಾಹ್ಮಣರೆಲ್ಲ ರೂ ಪ್ರೋತ್ಸಾಹಿಸಿದುದರಿಂದ ಇಂದ್ರನು ಮನಸ್ಸಿನ ಶಂಕೆಯನ್ನು ಬಿಟ್ಟು ವೃತ್ರನನ್ನು ಸಂಹರಿಸಿದನು. ಒಡನೆಯೇ ಬ್ರಹ್ಮಹತ್ಯಾಪಾತಕವು ಇಂದ್ರನ ನ್ನು ಸುತ್ತಿಕೊಂಡಿತು. ಅದರ ತಾಪವನ್ನು ಸಹಿಸಲಾರದೆ ದೇವೇಂದ್ರನು ಬ ಹಳವಾಗಿ ದಃಖಿಸುತಿದ್ದನು. ಲಜ್ಜೆಗೂ, ಲೋಕಾಪವಾದಕ್ಕೂ ಒಳಗಾದವ ನು, ಎಷ್ಟೇಳ್ವೆರ್ಯಶಾಲಿಯಾಗಿದ್ದರೂ, ಅವನಲ್ಲಿ ಎಷ್ಟೇಗುಣಗಳಿದ್ದರೂ ಅವೊಂದೂ ಅವನ ಮನಸ್ಸಿಗೆ ನೆಮ್ಮದಿಯನ್ನುಂಟುಮಾಡಲಾರವು. ಬ್ರಹ್ಮ ಹತ್ಯೆಯು ಚಂಡಾಲಸ್ತ್ರೀಯಂತೆ ಇಂದ್ರನಮುಂದೆ ಬಂದು ನಿಂತಿತು. ಆಕೆಗಾ ದರೋ ಮುಪ್ಪಿನಿಂದ ನಡುಗುವ ಮೈ! ಕ್ಷಯರೋಗವುಳ್ಳವಳಂತೆ ಕೃ ಶವಾದ ಅಂಗಗಳು! ರಕ್ತದಂತೆ ಕೆಂಪಾದ ಜಟೆಗಳು, ಕೊಳೆತ ಮೀನಿ ನಂತೆ ದುರ್ಗಂಧವನ್ನು ಹೊರಡಿಸುವ ಉಸುರಿನ ಗಾಳಿ! ಇದರಿಂದ ಅ ವಳು ಸಂಚಾರಮಾಡತಕ್ಕ ಮಾರ್ಗಗಳೆಲ್ಲವೂ ಅಸಹ್ಯವಾದ ದುರ್ಗಂಧ ದಿಂದ ತುಂಬಿ ಹೋಗುತಿತ್ತು. ಇಂತಹ ಘೋರರೂಪವುಳ್ಳ ಸ್ತ್ರೀವ್ಯಕ್ತಿ ಯು ಕೆದರಿದ ತಲೆಯೊಡನೆ ಇಂದ್ರನನ್ನಡ್ಡಗಟ್ಟಿ "ಎಲಾನಿಲ್ಲು! ನಿಲ್ಲು!" ಎಂದು ಕೂಗಿಡುತಿತ್ತು. ಆ ಘೋರಾಕೃತಿಯನ್ನು ನೋಡಿದೊಡನೆ, ಇಂದ್ರನು ನಾ ನಾದಿಕ್ಕುಗಳಿಗೂ ಓಡಲಾರಂಭಿಸಿದನು. ಎಲ್ಲಿ ಹೋದರೂ ಅದನ್ನು ತಪ್ಪಿ ಸಿಕೊಳ್ಳುವುದಕ್ಕೆ ಸಾಧ್ಯವಿಲ್ಲದೆ ಹೋಯಿತು. ಕೊನೆಗೆ ಈಶಾನ್ಯದಿಕ್ಕಿಗೆ ತಿರುಗಿ, ಅಲ್ಲಿ ಮಾನಸಸರೋವರದಲ್ಲಿ ಪ್ರವೇಶಿಸಿ, ಅದರಲ್ಲಿದ್ದ ಒಂದಾನೊಂ ದು ತಾವರೆಯ ದಂಟಿನಲ್ಲಿ ಸೂಕ್ಷ್ಮರೂಪದಿಂದ ಮರೆಸಿಕೊಂಡನು. ತನಗೆ ಆಗಾಗ ಹವಿಸ್ಸನ್ನು ತಂದುಕೊಡುತಿದ್ದ ಅಗ್ನಿಗೆ ನೀರಿನಲ್ಲಿ ಪ್ರವೇಶವಿಲ್ಲದುದ

ರಿಂದ, ಸಹಸ್ರಸಂವತ್ಸರಗಳವರೆಗೆಅನ್ನಾಹಾರಗಳೂ ಇಲ್ಲದೆ ಅಲ್ಲಿಯೇ ಅವಿತುಕೊಂಡಿದ್ದು,ಅನವರತವೂ ತನ್ನ ಪಾಪನಿವೃತ್ತಿಗೆ ಉಪಾಯವೇನೆಂದು ಚಿಂತಿಸುತಿದ್ದನು. ಈ ಸಮಯದಲ್ಲಿ ಇತ್ತಲಾಗಿ ಸ್ವರ್ಗಲೋಕವು ಅನಾಯಕವಾದುದರಿಂದ, ವಿದ್ಯೆ, ತಪಸ್ಸು, ಯೋಗ, ಮುಂತಾದುವುಗಳಲ್ಲಿ ನಿಪುಣನಾದ ನಹುಷನು ಆ ಸ್ವರ್ಗಾಧಿಪತ್ಯವನ್ನು ನಡೆಸುತಿದ್ದನು. ಇದರಲ್ಲಿ ನಹುಷನಿಗೆ ಬೇಕಾದ ಭೋಗ್ಯವಸ್ತುಗಳೂ, ಭೋಗೋಪಕರಣಗಳೂ,ಸಮೃದ್ಧವಾಗಿ ಸಿಕ್ಕುತಿದ್ದುದರಿಂದ,ಅವನಿಗೂ ಕ್ರಮಕ್ರಮವಾಗಿ ಅಹಂಕಾರವೂ, ಮದವೂ, ಹೆಮ್ಮೆಯೂ ಹೆಚ್ಚಿ ಹೋಯಿತು. ಈ ಐಶ್ವರ್ಯಮದದಿಂದ ನಹುಷನು ವಿವೇಕಶೂನ್ಯನಾಗಿ, ಇಂದ್ರಪತ್ನಿಯಾದ ಶಚೀದೇವಿಯಲ್ಲಿ ಕಣ್ಣಿಟ್ಟನು. ಈ ಅಕೃತ್ಯದಿಂದ ಅವನ ಐಶ್ವರ್ಯವೆಲ್ಲವೂ ನಷ್ಟವಾಗಿ, ಋಷಿಗಳ ಶಾಪದಿಂದ ಸರ್ಪಜನ್ಮವನ್ನು ಹೊಂದಿ ಭೂಮಿಯಲ್ಲಿ ಜನಿಸಿದನು. ಇತ್ತಲಾಗಿ ಇಂದ್ರನು ಬಹುಕಾಲದವರೆಗೆ ಕಮಲನಾಳದಲ್ಲಿಯೇ ಅಡಗಿದ್ದು, ಕೊನೆಗೆ ಬ್ರಾಹ್ಮಣರ ಮಾತನ್ನು ಸ್ಮರಿಸಿಕೊಂಡು, ಭಗವಂತನನ್ನು ಧ್ಯಾನಿಸತೊಡಗಿದನು. ಹೀಗೆ ಬಹುಕಾಲದವರೆಗೆ ಭಗವಂತನನ್ನು ಧ್ಯಾನಮಾಡಿದಮೇಲೆ, ಆ ಮಾನಸಸರೋವರದ ಕಮಲದಲ್ಲಿ ವಿಹರಿಸುತಿದ್ದ ಲಕ್ಷ್ಮೀದೇವಿಯು, ಇಂದ್ರನ ಭಕ್ತಿಗೆ ಮೆಚ್ಚಿ, ಅವನಿಗೆ ಬ್ರಹ್ಮಹತ್ಯೆಯಿಂದುಂಟಾದ ಭಯವನ್ನು ತಪ್ಪಿಸಿದಳು. ಈ ಲಕ್ಷ್ಮಿಯ ಅನುಗ್ರಹದಿಂದ ದೇವೇಂದ್ರನು,ನಿರ್ಭಯನಾಗಿ ತಿರುಗಿ ತನ್ನಲೋಕಕ್ಕೆ ಬಂದು ಸೇರಿದನು. ಆಮೇಲೆ ಋಷಿಗಳೆಲ್ಲರೂ ಅವನಿಗೆ ದೀಕ್ಷೆಯನ್ನು ಕೊಟ್ಟು, ಅಶ್ವಮೇಧಯಾಗವನ್ನು ಯಥೋಕ್ತವಾಗಿ ನಡೆಸಿದರು. ಮಹರ್ಷಿಗಳೇ ಆ ಯಾಗದಲ್ಲಿ ಋತ್ವಿಕ್ಕುಗಳಾಗಿ ಕಾರ್ಯಗಳನ್ನು ನಡೆಸುತಿದ್ದರು. ಇಂದ್ರನು ಆ ಯಾಗದಲ್ಲಿ ಬಹಳಶ್ರದ್ಧಾಪೂರ್ವಕವಾಗಿ ಪರಮಪುರುಷನನ್ನಾರಾಧಿಸಿದನು. ಅವನ ಪಾಪವು ಮಹತ್ತಾಗಿದ್ದರೂ, ಸೂರ್ಯೋದಯದಿಂದ ಮಂಜು ಹೇಗೋಹಾಗೆ ಅದರಿಂದ ನಿಶ್ಶೇಷವಾಗಿ ನೀಗಿತು.,ಇಂದ್ರನು ಸ್ವರ್ಗರಾಜ್ಯವನ್ನುಹೊಂದಿ ಸುಖದಿಂದಿದ್ದನು. ಓ ರಾಜೇಂದ್ರಾ! ಸಮಸ್ತಪಾಪನಿವಾರಕವಾಗಿಯೂ, ಭಗವಚ್ಚರಿತ್ರವನ್ನೊಳಕೊಂಡುದಾಗಿಯೂ, ಭಕ್ತಿವರ್ಧಕವಾಗಿಯೂ, ಭಗವದ್ಭಕ್ತರ ಗುಣಗಳನ್ನು ಸೂಚಿಸತಕ್ಕುದಾಗಿ

ಯೂ, ಇರುವ ಈ ಉಪಾಖ್ಯಾನವು ಬಹಳಮಹಿಮೆಯುಳ್ಳುದು. ಇಂದ್ರನ ಜಯವನ್ನೂ, ಆತನ ಪಾಪವಿಮೋಚನವನ್ನೂ ತಿಳಿಸತಕ್ಕ ಈ ಕಥೆಯನ್ನು ಒಂದೊಂದು ಪರ್ವಕಾಲದಲ್ಲಿಯೂ, ಯಾರು ಪಠಿಸುವರೋ! ಅಂತವರಿಗೆ ಐ ಶ್ವರ್ಯವೂ, ಯಶಸ್ಸೂ, ಜಯವೂ, ಆಯುಸ್ಸೂ ಸಮಸ್ತಮಂಗಳಗಳೂ ಕೈ ಗೂಡಿಬರುವುವು. ಅಂತವರು ಸರ್ವಪಾಪಗಳಿಂದಲೂ ಮುಕ್ತರಾಗುವರು" ಎಂದನು. ಇದು ಹದಿಮೂರನೆಯ ಅಧ್ಯಾಯವು.

---

## ಚಿತ್ರಕೇತೂಪಾಖ್ಯಾನವು.

ತಿರುಗಿ ರಾಜನು ಶುಕನನ್ನು ಕುರಿತು, "ಓ ಮುನೀಂದ್ರಾ! ಈನಡುವೆ ನಾನೊಂದು ಸಂದೇಹವನ್ನು ಕೇಳಬೇಕಾಗಿರುವುದು. ವೃತ್ರಾಸುರನಾದ ರೋ ಮಹಾಪಾಪಿಯು! ಕೇವಲ ತಮೋಗುಣದಿಂದಲೂ, ರಜೋಗುಣದಿಂ ದಲೂ ತುಂಬಿದ ಸ್ವಭಾವವುಳ್ಳವನು! ಇಂತವನು ಇಂದ್ರನೊಡನೆ ಯುದ್ಧಕ್ಕೆ ನಿಂತಿದ್ದಾಗ, ಅವನಿಗೆ ಅಕಸ್ಮಾತ್ತಾಗಿ ಶ್ರೀಮನ್ನಾರಾಯಣನಲ್ಲಿ ಭಕ್ತಿಯು ಹುಟ್ಟಿದುದು ಹೇಗೆ? ಕೇವಲ ಸತ್ವಗುಣವುಳ್ಳ ದೇವತೆಗಳಿಗಾಗಲಿ, ಶುದ್ಧ ಮನಸ್ಸುಳ್ಳ ಮಹರ್ಷಿಗಳಿಗಾಗಲಿ, ಪ್ರಾಯಕವಾಗಿ ಭಗವಂತನಲ್ಲಿ ಭಕ್ತಿ ಯು ಹುಟ್ಟುವುದೇ ಕಷ್ಟವು. ನೆಲದಲ್ಲಿರುವ ರೇಣುಗಳಂತೆ ಈ ಪ್ರಪಂಚ ದಲ್ಲಿ ಲೆಕ್ಕವಿಲ್ಲದಷ್ಟು ಪ್ರಾಣಿವರ್ಗಗಳುಂಟು. ಈ ಪ್ರಾಣಿವರ್ಗಗಳಲ್ಲಿ ಎಲ್ಲಿ ಯೋ ಕೆಲವರುಮಾತ್ರವೇ ಮನುಷ್ಯಜನ್ಮವನ್ನೆತ್ತಿ, ಶಾಸ್ತ್ರೋಕ್ತವಾದ ಧ ರ್ಮಾನುಷ್ಠಾನದಲ್ಲಿ ಸಾಮರ್ಥ್ಯವುಳ್ಳವರಾಗುವರು. ಈ ಕರ್ಮಾಧಿಕಾರವಿದ್ದವ ರಲ್ಲಿಯೂ ಅನೇಕರು, ಧರ್ಮಾರ್ಥಕಾಮಗಳೆಂಬ ತ್ರಿವರ್ಗರೂಪವಾದ ಶ್ರೇ ಯಸ್ಸನ್ನು ಕೋರುವರೇಹೊರತು, ಶಾಶ್ವತಸುಖವಾದ ಮುಕ್ತಿಯನ್ನು ಬ ಯಸತಕ್ಕವರು ಬಹಳಕಡಿಮೆ! ಮೋಕ್ಷಾಭಿಲಾಷೆಯಿದ್ದವರಲ್ಲಿಯೂಕೂಡ, ಸಾವಿರಕ್ಕೊಬ್ಬನುಮಾತ್ರ ರಾಗಾದಿದೋಷದಿಂದ ಬಿಡಲ್ಪಟ್ಟು, ಯೋಗದಲ್ಲಿ ನಿಲ್ಲುವನು. ಹೀಗೆ ದೋಷವಿಮುಕ್ತರಾಗಿ ಯೋಗಸಾಧನೆಗೆ ನಿಂತವರಲ್ಲಿಯೂ ಕೂಡ, ಶಾಂತಚಿತ್ತನಾಗಿ, ಭಗವಂತನೊಬ್ಬನಲ್ಲಿಯೇ ಭಕ್ತಿಯನ್ನಿಟ್ಟು, ನ ಡುವೆ ಆಗಂತುಕಗಳಾಗಿಬಂದ ಇತರ ಶ್ರೇಯಸ್ಸುಗಳನ್ನೆಲ್ಲಾ ಅನಾದರಿಸ

ತಕ್ಕವನು ಕೋಟಿಗೊಬ್ಬನಂತೆ ಸಿಕ್ಕುವುದೂ ಕಷ್ಟವು! ಹೀಗಿರುವಾಗ ಪರ ಮಪಾಪಿಯಾಗಿಯೂ, ಲೋಕಕಂಟಕನಾಗಿಯೂ ಇದ್ದ ಆವೃತ್ರನು, ಬ ಲಾತ್ಕಾರದಿಂದ ಮನಸ್ಸನ್ನೆಳೆಯತಕ್ಕ ಶಬ್ದಾದಿವಿಷಯಗಳೊಂದರಲ್ಲಿಯೂ ಆಸೆಯನ್ನಿಡದೆ ಹೋದುದು ಹೇಗೆ? ಅವನಿಗೆ ಭಗವಂತನಲ್ಲಿ ಭಕ್ತಿಯು ಹೇಗೆ ಹುಟ್ಟಿತು? ತನ್ನ ಪರಾಕ್ರಮದಿಂದ ಇಂದ್ರನನ್ನೇ ಮೆಚ್ಚಿಸಿದ ಆ ವೃತ್ರಾ ಸುರನು, ಆಯುದ್ಧದಲ್ಲಿ ಭಯಪಟ್ಟು, ಭಗವಂತನಲ್ಲಿ ಮರೆಹೊಕ್ಕನೆಂ ದೂ ಎಣಿಸುವುದಕ್ಕಿಲ್ಲ. ಈ ನನ್ನ ಸಂದೇಹವನ್ನು ಪರಿಹರಿಸಬೇಕು.” ಎಂದನು. ಹೀಗೆ ಶ್ರದ್ಧೆಯಿಂದ ಕೇಳುತ್ತಿರುವ ಪರೀಕ್ಷಿದ್ರಾಜನ ಪ್ರ ಶ್ನೆಗಳಿಗಾಗಿ ಶುಕಮಹರ್ಷಿಯು ಸಂತೋಷಗೊಂಡು, ಹೀಗೆಂದು ಹೇಳುವನು. “ರಾಜೇಂದ್ರಾ! ಇದೇ ವಿಷಯದಲ್ಲಿ ಒಂದುಪಾಖ್ಯಾನ ವನ್ನು ಹೇಳುವೆನು. ಕೇಳು! ಈ ಚರಿತ್ರವನ್ನು ನಾನು ನಮ್ಮ ತಂ ದೆಯಾದ ವ್ಯಾಸರ ಮುಖದಿಂದಲೂ, ನಾರದರಿಂದಲೂ, ದೇವಲರಿಂದಲೂ ಮೂರಾವರ್ತಿ ಕೇಳಿರುವೆನು. ಅದನ್ನೇ ನಿನಗೆ ತಿಳಿಸುವೆನು. ಹಿಂದೆ ಶೂರಸೇ ನದೇಶದಲ್ಲಿ ಚಿತ್ರಕೇತುವೆಂಬ ಪ್ರಸಿದ್ಧನಾದ ಚಕ್ರವರ್ತಿಯು ಆಳುತಿದ್ದನು. ಅವನ ರಾಜ್ಯದಲ್ಲಿ ಭೂಮಿಯು ಇಷ್ಟವಸ್ತುಗಳೆಲ್ಲವನ್ನೂ ಸಮೃದ್ಧವಾಗಿ ಕ ರೆಯುತಿತ್ತು. ಅವನಿಗೆ ಕೋಟಿಪತ್ನಿಯರಿದ್ದರೂ, ಒಬ್ಬಳಲ್ಲಿಯೂ ಒಂದು ಸಂತಾನವಾದರೂ ಆಗಲಿಲ್ಲ. ಅವನು, ಕುಲ, ರೂಪ, ವಯಸ್ಸು, ವಿದ್ಯೆ, ತೇಜಸ್ಸು, ಐಶ್ವರ್ಯ, ಔದಾರ್ಯ ಮುಂತಾದ ಸಕಲಭಾಗ್ಯಸಮೃದ್ಧಿಗಳಿಂದ ಕೂಡಿದ್ದರೂ, ಬಹಳ ಗುಣಾಢ್ಯನೆಂಬ ಕೀರ್ತಿಯನ್ನು ಪಡೆದಿದ್ದರೂ, ಸಂತಾ ನವಿಲ್ಲವೆಂಬ ವ್ಯಸನದಿಂದ ಮನಸ್ಸಿನಲ್ಲಿ ಸ್ವಲ್ಪಮಾತ್ರವೂ ಸಂತೋಷವಿಲ್ಲದೆ ಕೊರಗುತಿದ್ದನು. ನಿರತಿಶಯವಾದ ಭೋಗಸಮೃದ್ಧಿಯಾಗಲಿ, ಸಾರ್ವಭೌ ಮಪದವಿಯಾಗಲಿ, ಕಳತ್ರಸುಖವಾಗಲಿ ಯಾವುದೂ ಅವನ ಮನಸ್ಸಿಗೆ ಹಿತವಾಗಿ ತೋರಲಿಲ್ಲ. ಹೀಗೆ ಅವನು ಸಂತಾನವ್ಯಸನದಿಂದ ಅನವರತವೂ ದುಃಖಿಸುತ್ತಿದ್ದಾಗ, ಒಮ್ಮೆ ಮಹಾಜ್ಞಾನಿಯಾಗಿಯೂ, ಲೋಕಸಂಚಾರಿ ಯಾಗಿಯೂ, ಪೂಜ್ಯನಾಗಿಯೂ ಇದ್ದ ಆಂಗಿರಸ್ಸನೆಂಬ ಮಹರ್ಷಿಯು, ಆ ರಾಜನ ಅರಮನೆಗೆ ಬಂದನು. ಚಿತ್ರಕೇತುವು ಅತಿಥಿಯಾಗಿ ಬಂದ ಆ ಮಹ

ರ್ಷಿಯನ್ನು ಯಥೋಚಿತವಾಗಿ ಸತ್ಕರಿಸಿ, ಆಸನವನ್ನು ಕೊಟ್ಟು ಕುಳ್ಳಿರಿಸಿ, ತಾನೂ ಅವನ ಪಕ್ಕದಲ್ಲಿ ವಿನಯದಿಂದ ಕುಳಿತಿದ್ದನು. ಸುಖಾಸೀನನಾದ ಆ ಮಹರ್ಷಿಯು, ತನ್ನ ಸಮೀಪದಲ್ಲಿ ವಿನಯದಿಂದ ನೆಲದಮೇಲೆ ಕುಳಿತಿದ್ದ ಆರಾಜನನ್ನು ಕುಶಲಪ್ರಶ್ನಾದಿಗಳಿಂದ ಮನ್ನಿಸಿ, ಹೀಗೆಂದು ಪ್ರಶ್ನೆಮಾಡುವನು. “ರಾಜೇಂದ್ರಾ! ಇದೇನು! ನೀನು ಚಿಂತಾಕುಲನಾಗಿರುವಂತೆ ಕಾಣುವೆ? ನಿನಗೆ ಆರೋಗ್ಯವಷ್ಟೆ? ನಿನ್ನ ಬಂಧುವರ್ಗದವರೆಲ್ಲರೂ ಕ್ಷೇಮದಿಂದಿರುವರಷ್ಟೆ? ನಿನ್ನ ಸೈನ್ಯ, ಭಂಡಾರ, ಮೊದಲಾದ ರಾಜ್ಯಾಂಗಗಳೆಲ್ಲವೂ ಸುರಕ್ಷಿತವಾಗಿರುವುವಷ್ಟೆ? ಜೀವನು,ಮಹತ್ತು,ಅಹಂಕಾರ,ಪಂಚತನ್ಮಾತ್ರಗಳೆಂಬ ಏಳುಪ್ರಕೃತಿವಿಕಾರಗಳಿಂದ ರಕ್ಷಿತನಾಗಿ, ಅವುಗಳ ಮೂಲಕವಾಗಿಯೇ ಸುಖವನ್ನನುಭವಿಸುವಂತೆ, ರಾಜನೂಕೂಡ ತನ್ನ ಸಪ್ತರಾಜ್ಯಾಂಗಗಳಲ್ಲಿ ಪ್ರಜಾಭಾರವನ್ನಿಟ್ಟು,ಅದರಿಂದ ತಾನು ಸುಖವನ್ನು ಹೊಂದಬಹುದು. ಈ ರಾಜ್ಯಾಂಗಗಳೇ ರಾಜನಿಗೆ ವಿಶೇಷಸುಖಕಾರಣಗಳಾಗಿರುವುವು. ಈ ರಾಜ್ಯಾಂಗಗಳಿಂದ ರಾಜನು. ಸುಖವನ್ನು ಹೊಂದುವಂತೆ, ರಾಜನ ಮೂಲಕವಾಗಿಯೇ ರಾಜ್ಯಾಂಗಗಳೂ ಹಿತವನ್ನು ಹೊಂದುವುವು. ಆದುದರಿಂದ ರಾಜನ ಮತ್ತು ಪ್ರಜೆಗಳ ಕ್ಷೇಮವು ಅನ್ಯೋನ್ಯಾಧೀನವಾಗಿರುವುವು. ಆದರೆ ರಾಜನ ಕ್ಷೇಮವು ಪ್ರಜೆಗಳ ಅಧೀನವಾಗಿದ್ದರೂ, ಪ್ರಜೆಗಳು ಅಷ್ಟುಮಾತ್ರಕ್ಕೆ ಸ್ವಾತಂತ್ರ್ಯವನ್ನು ವಹಿಸಬಾರದು. ಯಾವ ರಾಜ್ಯದಲ್ಲಿ ರಾಜನಿಗೆ ಪುತ್ರಕಳತ್ರಾದಿ ಬಂಧುಗಳೂ, ಅಧಿಕಾರಿಗಳೂ, ಮಂತ್ರಿಗಳೂ, ಪ್ರಜೆಗಳೂ. ಮಿತ್ರರೂ, ಪರಿಜನರೂ, ಪುರವಾಸಿಗಳೂ, ದೇಶವಾಸಿಗಳೂ, ಸಾಮಂತರಾಜರೂ ಆಜ್ಞಾಧೀನರಾಗಿ ನಡೆಯುವರೋ, ಅಲ್ಲಿ ಮಾತ್ರವೇ ರಾಜನಿಗೂ, ಪ್ರಜೆಗಳಿಗೂ,ರಾಜ್ಯಕ್ಕೂ ಮೇಲಾದ ಕ್ಷೇಮವುಂಟು! ಯಾವ ರಾಜನು ವಿಷಯಾಸಕ್ತನಾಗದೆ, ಮೊದಲು ತನ್ನ ಮನಸ್ಸನ್ನು ತಾನು ಸ್ವಾಧೀನವಾಗಿಟ್ಟುಕೊಳ್ಳಬಲ್ಲನೋ,ಅವನಿಗೆ ಪ್ರಜೆಗಳೆಲ್ಲರೂ ತಾವಾಗಿಯೇ ವಶವರ್ತಿಗಳಾಗುವರು. ಮನಸ್ಸನ್ನು ಜಯಿಸಲಾರದ ರಾಜನಿಗೆ ಯಾರೂ ಅಧೀನವಾಗಿರಲಾರರು. ಮನೋಜಯವುಳ್ಳ ರಾಜನಿಗೆ ಆತನ ಪ್ರಜೆಗಳು ವಶವರ್ತಿಗಳಾಗಿರುವುದುಮಾತ್ರವಲ್ಲದೆ, ಅವನಿಗೆ ಲೋಕಪಾಲರೊಡಗೂಡಿದ ಸ

ಮಸ್ತಲೋಕಗಳೂ ತಾವಾಗಿ ಬಂದು ಪೂಜೆಯನ್ನೊಪ್ಪಿಸುವುವು. ಅಂತಹ ರಾಜರು. ನಿತ್ಯಸಂತುಷ್ಟರಾಗಿರುವರು. ರಾಜೇಂದ್ರಾ! ನಿನ್ನಲ್ಲಿ ಈ ಎಲ್ಲಾ ಅನುಕೂಲ್ಯಗಳೂ ಸೇರಿರುವುವಷ್ಟೆ.ಆದುದರಿಂದ ನೀನು ಸದಾ ಸಂತೋಷಿ ಯಾಗಿರಬೇಕಾದುದು ಯುಕ್ತವು. ಆದರೆ ಈಗ ಕಳೆಗುಂದಿದ ನಿನ್ನ ಮುಖ ವು ನಿನ್ನ ಮನೋದುಃಖವನ್ನು ಸೂಚಿಸುತ್ತಿರುವುದು. ದುಃಖಕಾರಣವೇ ನು? ನಿನಗೆ ನೀನೇ ಚಿಂತೆಯನ್ನು ತಂದುಕೊಂಡು ಕೊರಗುವೆಯಾ? ಇಲ್ಲವೇ ಬೇರೆಯವರಿಂದ ನಿನಗೇನಾದರೂ ಕೇಡಾಯಿತೆ? ಆಲೋಚಿಸಿದರೆ, ಯಾ ವುದೋ ಇಷ್ಟವಸ್ತುವು ನಿನಗೆ ಕೈಸೇರದುದರಿಂದ, ನೀನು ಚಿಂತಾಕುಲ ನಾಗಿರುವಂತೆ ಕಾಣುತ್ತಿದೆ. ಅದರ ಕಾರಣವೇನೆಂದು ತಿಳಿಸು" ಎಂದ ನು. ಹೀಗೆ ಅಂಗಿರಸನು ರಾಜನ ದುಃಖಕಾರಣವನ್ನು ಚೆನ್ನಾಗಿ ಬಲ್ಲವ ನಾಗಿದ್ದರೂ, ನಾನಾವಿಧವಿಕಲ್ಪಗಳಿಂದ ಪ್ರಶ್ನಮಾಡುತ್ತಿರುವುದನ್ನು ಕೇಳಿ ರಾಜನು ವಿನಯಪೂರ್ವಕವಾಗಿ ಹೀಗೆಂದು ವಿಜ್ಞಾಪಿಸುವನು. "ಓ ಮಹಾತ್ಮಾ! ಕರ್ಮಜ್ಞಾನ ಭಕ್ತಿಯೋಗಗಳಿಂದ ಸಮಸ್ತಪಾಪಗಳನ್ನೂ ನೀಗಿ, ಶುದ್ಧಮನಸ್ಸುಳ್ಳ ನಿಮ್ಮಂತವರಿಗೆ, ತಿಳಿಯದ ಸಂಗತಿಯಾವುದುಂ ಟು ? ಪ್ರತ್ಯಕ್ಷದಲ್ಲಿಯೂ, ಪರೋಕ್ಷದಲ್ಲಿಯೂ ನಡೆಯತಕ್ಕ ವಿಷಯಗಳೆಲ್ಲ ವೂ ನಿಮ್ಮ ಮನಸ್ಸಿಗೆ ಗೋಚರಿಸುವುವು ಆಯಾ ಪ್ರಾಣಿಗಳ ಮನಸ್ಸಿನಲ್ಲಿ ರುವುದನ್ನೂ ನೀವು ತಿಳಿಯಬಲ್ಲಿರಿ!ಹಾಗಿದ್ದರೂ ನೀವು ಪ್ರಶ್ನೆಮಾಡಿದುದರಿಂ ದ, ನಿಮ್ಮಲ್ಲಿ ವಿಜ್ಞಾಪಿಸಬೇಕಾದುದು ನನ್ನ ಕೃತ್ಯವೆಂಬುದಕ್ಕಾಗಿ ತಿಳಿಸು ಪೆನು. ಮುನೀಂದ್ರಾ ! ಲೋಕಪಾಲಕರಿಗೂ ಆಶೆಹುಟ್ಟಿಸತಕ್ಕ ಸಮ ಸ್ತ ಸಂಪತ್ತುಗಳೂ ನನ್ನ ಕೈವಶವಾಗಿದ್ದರೂ, ಸಂತತಿಯಿಲ್ಲದುದರಿಂದ ಅವೊಂದೂ ನನ್ನ ಮನಸ್ಸಿಗೆ ಸಂತೋಷವನ್ನುಂಟುಮಾಡುವುದಿಲ್ಲ. ಹಸಿವು ಬಾಯಾರಿಕೆಗಳಿಂದ ಪೀಡಿತನಾಗಿ,ಅನ್ನಪಾನಗಳಲ್ಲಿ ಆತುರವುಳ್ಳವನಿಗೆ, ಹೂ ಗಂಧ, ಸ್ತ್ರೀಯರು ಮುಂತಾದ ಇತರ ಭೋಗಸಾಮಗ್ರಿಗಳೆಷ್ಟಿದ್ದ ರೂ ಮನಸ್ಸಿಗೆ ಸೇರದಂತೆ, ಸಂತಾನವಿಲ್ಲದ ನನಗೆ ಬೇರೆ ಐಶ್ವರ್ಯವೊಂ ದೂ ಮನಸ್ಸಿಗೆ ತುಷ್ಟಿಯನ್ನುಂಟುಮಾಡುವುದಿಲ್ಲ. ಆದುದರಿಂದ ಓ ಮ ಹಾತ್ಮಾ ! ನನ್ನ ಪಿತೃಗಳನ್ನೂ, ನನ್ನನ್ನೂ ಕ್ರೂರನರಕದಿಂದ ದಾಟಿಸತ

ಕ್ಕ ಪುತ್ರಸಂತಾನವು ನನಗೆ ಲಭಿಸುವಂತೆ ಅನುಗ್ರಹಿಸಬೇಕು" ಎಂದನು. ಹೀಗೆ ರಾಜನು ದೈನ್ಯದಿಂದ ಯಾಚಿಸುತ್ತಿರುವುದನ್ನು ನೋಡಿ, ಬ್ರಹ್ಮಪುತ್ರನಾದ ಆ ಆಂಗಿರಸನು, ಅವನಲ್ಲಿ ಕನಿಕರಗೊಂಡು, ಅವನಿಂದ ಪುತ್ರಕಾಮೇಷ್ಟಿಯನ್ನು ಮಾಡಿಸತೊಡಗಿದನು. ಅದರಲ್ಲಿ ತಾನೇ ಋತ್ವಿಕ್ಕಾಗಿ ನಿಂತು, ತ್ವಷ್ಟೃದೇವತಾಪ್ರೀತ್ಯರ್ಥವಾದ ಚರುವನ್ನು ಮಾಡಿಸಿ, ಹೋಮಮಾಡಿದನು. ಆ ಯಾಗಶೇಷವನ್ನು ಚಿತ್ರಕೇತುವಿನ ಪತ್ನಿಯರಲ್ಲಿ ಹಿರಿಯವಳಾಗಿಯೂ, ಉತ್ತಮಳಾಗಿಯೂ ಇದ್ದ ಕೃತದ್ಯುತಿಯೆಂಬವಳಿಗೆ ಕೊಟ್ಟು ಭೋಜನಮಾಡಿಸಿ. ರಾಜನನ್ನು ಕುರಿತು "ರಾಜೇಂದ್ರಾ! ಇದರಿಂದ ನಿನಗೆ ಪುತ್ರಸಂತಾನವಾಗುವುದು. ಆದರೆ ಆ ಪುತ್ರನು ನಿನಗೆ ಹರ್ಷಶೋಕಗಳೆರಡಕ್ಕೂ ಕಾರಣನಾಗುವನು"ಎಂದು ಹೇಳಿ ಹೊರಟುಹೋದನು. ಇತ್ತಲಾಗಿ ರಾಜಮಹಿಷಿಯಾದ ಕೃತದ್ಯುತಿಯು,ಆಯಜ್ಞಶೇಷವನ್ನು ಭುಜಿಸಿದೊಡನೆ ಗರ್ಭವನ್ನು ಧರಿಸಿದಳು. ಆ ಗರ್ಭವು ಶುಕ್ಲಪಕ್ಷದ ಚಂದ್ರನಂತೆ ಕ್ರಮಕ್ರಮವಾಗಿ ವೃದ್ಧಿಹೊಂದುತ್ತ ಬಂದಿತು. ಸ್ವಲ್ಪಕಾಲದಲ್ಲಿಯೇ ಆ ದೇಶದ ಪ್ರಜೆಗಳೆಲ್ಲರಿಗೂ ಸಂತೋಷವುಂಟಾಗುವಂತೆ ರಾಜಕುಮಾರನು ಜನಿಸಿದನು. ರಾಜನು ತನಗೆ ಪುತ್ರಜನನವಾದುದನ್ನು ಕೇಳಿ, ಪರಮಾನಂದಭರಿತನಾಗಿ, ಸ್ನಾನಮಾಗಿ ಶುದ್ಧನಾಗಿಬಂದು, ವಸ್ತ್ರಾಲಂಕಾರಗಳನ್ನು ಧರಿಸಿ ಕುಮಾರನಿಗೆ ಜಾತಕರ್ಮವನ್ನು ನಡೆಸಿ, ಬ್ರಾಹ್ಮಣರಿಂದ ಸ್ವಸ್ತಿವಾಚನಗಳನ್ನೂ ಮಾಡಿಸಿದನು. ಆ ಬ್ರಾಹ್ಮಣರಿಗೆಲ್ಲಾ ಚಿನ್ನಬೆಳ್ಳಿ ನಾಣ್ಯಗಳನ್ನೂ, ವಸ್ತ್ರಾಭರಣಗಳನ್ನೂ, ಗ್ರಾಮಗಳನ್ನೂ, ಆನೆ ಕುದುರೆಗಳನ್ನೂ, ಹಸುಗಳನ್ನೂ ಯಥೇಷ್ಟವಾಗಿ ದಾನಮಾಡಿದನು.ಹೀಗೆ ಆರರ್ಬುದಸಂಖ್ಯೆಯುಳ್ಳ ಬ್ರಾಹ್ಮಣರನ್ನು ದಾನಾದಿಗಳಿಂದ ತೃಪ್ತಿಪಡಿಸಿದನು. ಮತ್ತು ತನ್ನ ಕುಮಾರನ ಆಯುರಾರೋಗ್ಯಾದಿಗಳ ಅಭ್ಯುದಯಕ್ಕಾಗಿ, ಮೇಘವು ಮಳೆಯನ್ನು ಕರೆಯುವಂತೆ ಇನ್ನೂ ಅನೇಕರಿಗೆ.ಬೇಕುಬೇಕಾದ ಕೋರಿಕೆಗಳನ್ನೆಲ್ಲಾ ಈಡೇರಿಸಿ ಸಂತೋಷಗೊಳಿದನು.ಕಷ್ಟಪಟ್ಟು ಸಂಪಾದಿಸಿದ ಹಣದಲ್ಲಿ ಬಡವನಿಗೆ ಹೇಗೋಹಾಗೆ, ಬಹಳ ಪ್ರಯಾಸದಿಂದ ಲಭಿಸಿದ ತನ್ನಕುಮಾರನಲ್ಲಿ ಚಿತ್ರಕೇತುವಿಗೆ ದಿನದಿನಕ್ಕೆ ಪ್ರೇಮವು ಹೆಚ್ಚುತ್ತಬಂದಿತು. ಹೀಗೆಯೇ ಅವನ

ಪತ್ನಿಯಾದ ಕೃತದ್ಯುತಿಗೂಕೂಡ ತನ್ನ ಮಗನಲ್ಲಿ ನಿರತಿಶಯವಾದ ಪ್ರೇಮವು ಹೆಚ್ಚುತ್ತಬಂದಿತು. ಇದನ್ನು ನೋಡಿ ಆಕೆಯ ಸವತಿಯರಿಗೆಲ್ಲಾ ಅವಳಲ್ಲಿ ಅಸೂಯೆ ಹಟ್ಟಿತು. ಆ ರಾಜಪತ್ನಿಯರೆಲ್ಲರೂ ತಮಗೆ ಸಂತಾನವಿಲ್ಲದುದಕ್ಕಾಗಿ ಕೊರಗುತಿದ್ದರು. ಇದಲ್ಲದೆ ಚಿತ್ರಕೇತುವಿಗೆ ಇತರ ಪತ್ನಿಯರಲ್ಲಿರುವುದಕ್ಕಿಂತಲೂ, ಪುತ್ರವತಿಯಾದ ಕೃತದ್ಯುತಿಯಲ್ಲಿ ಪ್ರೇಮವು ಹೆಚ್ಚುತ್ತಬಂದಿತು.ಅನವರತವೂ ಆ ಪುತ್ರನನ್ನು ಲಾಲಿಸುತ್ತ ಇತರಪತ್ನಿಯರನ್ನು ಔದಾಸೀನ್ಯದಿಂದ ಕಾಣುತಿದ್ದನು. ಇದರಿಂದ ಆ ರಾಜಪತ್ನಿಯರೆಲ್ಲರೂ, ಪತಿಯು ತಮ್ಮನ್ನು ತಿರಸ್ಕರಿಸುವುದೊಂದು, ತಮಗೆ ಸಂತಾನವಿಲ್ಲದುದೊಂದು, ಈ ಎರಡುಬಗೆಯ ವ್ಯಸನಗಳಿಂದ ಬಹಳವಾಗಿ ಕೊರಗುತಿದ್ದರು. ಅವರಿಗೆ ತಮ್ಮ ಸವತಿಯಾದ ಕೃತದ್ಯುತಿಯಲ್ಲಿ ಮೇಲೆಮೇಲೆ ಅಸೂಯೆಯೂ ಹೆಚ್ಚುತ್ತ ಬರಲು, ತಮ್ಮೊಳಗೆ ತಾವು ಹೀಗೆಂದು ದುಃಖಿಸುವರು. “ಅಯ್ಯೋ! ಸಂತಾನವಿಲ್ಲದ ನಮ್ಮಂತಹ ಪಾಪಿಗಳ ಬಾಳೇಕೆ! ನಮ್ಮ ಜನ್ಮವನ್ನು ಸುಡಬೇಕಲ್ಲವೆ? ನಮಗೆ ಸಂತಾನವಿಲ್ಲದುದರಿಂದಲ್ಲವೇ ಪತಿಯೂ ನಮ್ಮನ್ನು ತಿರಸ್ಕರಿಸುತ್ತಿರುವನು! ಸವತಿಯರಲ್ಲಿ ಒಬ್ಬಳಿಗೆ ಮಕ್ಕಳಾಗಿ, ಇತರರಿಗೆ ಸಂತಾನವಿಲ್ಲದಪಕ್ಷದಲ್ಲಿ, ಅವಳು ಮಕ್ಕಳಿಲ್ಲದ ನಮ್ಮಂತಹ ಬಂಜೆಯರನ್ನು ತನ್ನ ದಾಸಿಯರಿಗಿಂತಲೂ ಹೀನವಾಗಿ ಕಾಣುವಳು. ಅಥವಾ ಮಕ್ಕಳಿಲ್ಲದ ಬಂಜೆಯಾಗಿರುವುದಕ್ಕಿಂತಲೂ ದಾಸಿಯಾಗಿರುವುದೇ ಮೇಲು! ಏಕೆಂದರೆ,ದಾಸಿಯರು ತಮ್ಮ ಪ್ರಭುವನ್ನು ತಕ್ಕ ಉಪಚಾರಗಳಿಂದ ಸಂತೋಷಪಡಿಸಿದರೆ, ಅವನಿಂದ ಬೇಕುಬೇಕಾದ ಪದಾರ್ಥಗಳನ್ನುಪಡೆದು, ಬೇರೆ ಚಿಂತೆಯೇ ಇಲ್ಲದೆ ಸಂತೋಷದಿಂದಿರುವರು. ರಾಜಪತ್ನಿಯರೆನಿಸಿಕೊಂಡಿದ್ದರೂ ನಮ್ಮಂತಹ ಗೊಡ್ಡಿಯರಿಗೆ ಯಾವವಿಧದಲ್ಲಿಯೂ ಸುಖವಿಲ್ಲ. ಆದುದರಿಂದ ನಾವು ಗೌಡಿಯರಿಗಿಂತಲೂ ಭಾಗ್ಯಹೀನರಲ್ಲವೆ?” ಹೀಗೆಂದು ರಾಜಪತ್ನಿಯರೆಲ್ಲರೂ ತಮ್ಮ ಸವತಿಯ ಮಗನನ್ನು ನೋಡಿನೋಡಿ ಅಸೂಯೆಯಿಂದ ಕುದಿಯುತ್ತಿದ್ದರು. ಅವರಿಗೆ ತಮ್ಮ ಸವತಿಯಾದ ಕೃತದ್ಯುತಿಯಲ್ಲಿಯೂ, ಆವಳ ಮಗನಲ್ಲಿಯೂ ಬಹಳವಾಗಿ ದ್ವೇಷವು ಬೆಳೆಯುತ್ತಬಂದಿತು. ಈ ದ್ವೇಷದಿಂದ ವಿವೇಕಹೀನರಾಗಿ, ಮನಸ್ಸಿನಲ್ಲಿ ಮರುಕವನ್ನು ಬಿ

ಟ್ಟು, ಅವರೆಲ್ಲರೂ ಸೇರಿ ರಹಸ್ಯವಾಗಿ ಆ ಬಾಲಕನಿಗೆ ವಿಷವನ್ನು ಕೊಟ್ಟ ರು. ಆ ವಿಷವೇಗದಿಂದ ರಾಜಕುಮಾರನು ಮೂರ್ಛಿತನಾಗಿ, ಪ್ರಜ್ಞೆಯಿಲ್ಲ ದೆ ಬಿದ್ದಿದ್ದನು. ತಾಯಿಯಾದ ಕೃತದ್ಯುತಿಗೆ ಈ ಸಂಗತಿಯೊಂದೂ ತಿಳಿ ಯದುದರಿಂದ, ತನ್ನ ಮಗನು ನಿದ್ರೆಮಾಡುತ್ತಿರುವುದಾಗಿ ತಿಳಿದು ತಾನು ಕಾರ್ಯಾಂತರದಲ್ಲಿದ್ದುಬಿಟ್ಟಳು. ಬಹಳ ಹೊತ್ತಿನಮೇಲೆ ಅವಳಿಗೆ ತನ್ನ ಬಾಲಕನ ಸ್ಮರಣವುಂಟಾಗಿ ದಾದಿಯನ್ನು ಕರೆದು “ಭದ್ರೆ! ಮಗುವು ಮ ಲಗಿ ಬಹಳ ಹೊತ್ತಾಯಿತು ! ಇಷ್ಟು ದೀರ್ಘಕಾಲದವರೆಗೆ ಎಚ್ಚರವಿಲ್ಲದೆ ನಿದ್ರೆಮಾಡುವುದನ್ನು ನೋಡಿದರೆ ಆಶ್ಚರ್ಯವಾಗುವುದು! ನೀನು ಈಗಲೇ ಹೋಗಿ ಆ ಕುಮಾರನನ್ನು ಎಚ್ಚರಗೊಳಿಸಿ ಕರೆದುಕೊಂಡು ಬಾ” ಎಂದು ಕಳುಹಿಸಿದಳು. ಆ ದಾದಿಯು ಬಂದು ನೋಡುವಷ್ಟರಲ್ಲಿ, ಆಮಗುವಿಗೆ ಕಣ್ಣಾಲೆಗಳೆರಡೂ ಮೇಲೆ ನಾಟಿಕೊಂಡಿದ್ದುವು ಅವನಲ್ಲಿ ಪ್ರಾಣಗಳ ಮತ್ತು ಇಂದ್ರಿಯಗಳ ವ್ಯಾಪಾರವೆಲ್ಲವೂ ನಿಂತು ಹೋಗಿದ್ದುವು. ನಿರ್ಜೀ ವವಾಗಿ ಶವದಂತೆ ಬಿದ್ದಿದ್ದನು. ಇದನ್ನು ನೋಡಿ ದಾದಿಯು ಬೆಜ್ಜರಬಿ ದ್ದು “ಅಯ್ಯೋ ಕೆಟ್ಟೆನು! ಕೆಟ್ಟೆನು! ಇನ್ನೇನುಗತಿ!” ಎಂದು ಕೂಗು ತ್ತ ಮೂರ್ಛಿತಳಾಗಿ ಕೆಳಗೆಬಿದ್ದಳು. ಈ ದಾದಿಯ ಆಕ್ರಂದನವನ್ನು ಕೇಳಿ ರಾಣಿಯು ಬಹಳವಾಗಿ ಭಯಪಟ್ಟು, ತನ್ನ ಮಗನಿಗೆ ಏನೋ ಅಪಾ ಯವುಂಟಾಗಿರಬಹುದೆಂದು ತಿಳಿದು, ಎದೆಯನ್ನು ಬಡಿದುಕೊಂಡು, ಉಚ್ಚ ಧ್ವನಿಯಿಂದ ಗೋಳಿಡುತ್ತ ಬಾಲಕನಿದ್ದ ಸ್ಥಳಕ್ಕೆ ಓಡಿಬಂದಳು. ಅಲ್ಲಿ ಸತ್ತುಬಿದ್ದಿದ್ದ ಬಾಲಕನನ್ನು ನೋಡಿದೊಡನೆ, ಅವಳಿಗೂ ಪ್ರಜ್ಞೆತಪ್ಪಿತು, ಉಟ್ಟಬಟ್ಟೆಯು ಸಡಿಲಿ, ಕೆದರಿದ ಕೇಶಪಾಶಗಳೊಡನೆ ಕೆಳಗೆ ಬಿದ್ದು ಬಿಟ್ಟಳು. ಇವಳ ರೋದನಧ್ವನಿಯನ್ನು ಕೇಳಿ ಅಂತಃಪುರದಲ್ಲಿದ್ದ ಹೆಂಗಸ ರು,ಗಂಡಸರು ಮೊದಲಾಗಿ ಎಲ್ಲರೂ ಓಡಿಬಂದರು.ಮಗುವಿಗೆ ವಿಷಪ್ರಯೋ ಗವನ್ನುಮಾಡಿದ ಇತರರಾಜಪತ್ನಿಯರೂ ಗುಂಪಾಗಿ ಬಂದು, ಎಲ್ಲರಂತೆ ತಾವೂ ಮಹಾವ್ಯಸನವನ್ನು ನಟಿಸುತ್ತ ಗಟ್ಟಿಯಾಗಿ ಅಳುವುದಕ್ಕೆ ತೊಡ ಗಿದರು. ಈ ವೃತ್ತಾಂತವು ರಾಜನ ಕಿವಿಗೂ ಮುಟ್ಟಿತು. ತನ್ನ ಪುತ್ರನು ಅ ಕಸ್ಮಾತ್ತಾಗಿ ಮೃತಿಹೊಂದಿದುದನ್ನು ಕೇಳಿ ಅವನಿಗೂ ದುಃಖದಿಂದ

ಪ್ರಜ್ಞೆತಪ್ಪಿ, ಕಣ್ಣುಕತ್ತಲಿಸಿತು. ಆಗಾಗ ದಾರಿಯಲ್ಲಿ ಮೂರ್ಛೆಬಿದ್ದೇಳು ತ್ತ, ತನ್ನ ಮಂತ್ರಿಪುರೋಹಿತಾದಿಗಳೊಡನೆ, ಆ ಸ್ಥಳಕ್ಕೆ ಬಂದನು. ಮಗನು ಮೃತನಾಗಿರುವುದನ್ನುಕಂಡು ಪ್ರಜ್ಞೆತಪ್ಪಿ ಆ ಕುಮಾರನ ಕಾಲಕೆಳಗೆ ಬಿ ದ್ದುಬಿಟ್ಟನು. ಉಟ್ಟಬಟ್ಟೆಯು ಸಡಿಲಿ, ತಲೆಕೆದರಿ, ಕೆಳಗೆ ಬಿದ್ದು ಉದ್ದವಾಗಿ ನಿಟ್ಟುಸಿರನ್ನು ಬಿಡುತಿದ್ದನು. ದುಃಖಬಾಷ್ಪವು ಬಂದು ಕಂಠದಲ್ಲಿ ತಡೆದು ಕೊಳ್ಳುತಿದ್ದುದರಿಂದ,ಮಾತಾಡುವುದಕ್ಕೂ ಶಕ್ತಿಯಿಲ್ಲದೆ ಹೊರಳುತಿದ್ದನು. ಸ್ವಲ್ಪಕಾಲದಮೇಲೆ ಅವನ ಪತ್ನಿಯಾದ ಕೃತದ್ಯುತಿಯು, ಮೆಲ್ಲಗೆ ಚೇತ ರಿಸಿಕೊಂಡು ಕಣ್ಣುತೆರೆದಳು. ಇತ್ತಲಾಗಿ ಪತಿಯು ಸಂಕಟದಿಂದ ಗೋಳಿ ಡುವುದನ್ನೂ, ಅತ್ತಲಾಗಿ ತನ್ನ ಒಬ್ಬನೇ ಮಗನು ಮೃತಿಹೊಂದಿರುವು ದನ್ನೂ ಕಂಡು ದುಃಖವನ್ನುತಡೆಯಲಾರದೆ, ಅಲ್ಲಿ ನೆರೆದಿದ್ದ ಜನರನ್ನೂ, ಮಂತ್ರಿಗಳನ್ನೂ, ತನ್ನ ಪತಿಯನ್ನೂ ಮತ್ತಷ್ಟು ವ್ಯಸನಪೀಡಿತರನ್ನಾಗಿ ಮಾಡುವಂತೆ, ವಿಲಪಿಸುವುದಕ್ಕೆ ತೊಡಗಿದಳು. ಧಾರೆಧಾರೆಯಾಗಿ ಸುರಿ ಯುವ ಅಂಜನಮಿಶ್ರವಾದ ಕಣ್ಣೀರುಗಳಿಂದ ಆಕೆಯ ಸ್ತನದ ಮೇಲಿನ ಕುಂ ಕುಮವೆಲ್ಲವೂಕಲಗಿ ಬೀಳುತಿದ್ದುವು. ಮುಡಿದ ಹೂಗಳೊಡನೆ ತಲೆಕೂದಲು ಕೆದರಿಹೋಗಿದ್ದಿತು. ತನ್ನ ಮಗನ ಮರಣವನ್ನು ಕುರಿತು ಕುರರಪಕ್ಷಿಯಂತೆ ಹೀಗೆಂದು ರೋದಿಸುವಳು. “ಅಕಟಾ! ಅಯ್ಯೋ! ದೈವವೆ! ನಿನಗೆ ಸ್ವಲ್ಪ ವಾದರೂ ಕರುಣವಿಲ್ಲವೆ? ಪ್ರಾಣಿಗಳನ್ನು ಸೃಷ್ಟಿಸಿದಂತೆ ಕೊಲ್ಲದೆ, ಸೃ ಷ್ಟಿಗೆ ವಿರುದ್ಧವಾಗಿ ಕಾರ್ಯವನ್ನು ನಡೆಸುವೆಯಲ್ಲಾ! ಪಿತ್ರಾದಿಗಳ ಮೂಲ ಕವಾಗಿ ಮಕ್ಕಳನ್ನು ಸೃಷ್ಟಿಸಿದ ನೀನು, ಮೊದಲು ಹುಟ್ಟಿದವರನ್ನು ಕೊಲ್ಲು ವುದಕ್ಕೆ ಮುಂಚೆ, ಅವರಕಣ್ಣೆದಿರಿಗೆ ಹಿಂದೆ ಹುಟ್ಟಿದ ಮಕ್ಕಳನ್ನು ಕೊಲ್ಲು ವುದು ಯುಕ್ತವೆ? ಇದು ನಿನ್ನ ಸೃಷ್ಟಿಕಾರ್ಯಕ್ಕೆ ಕೇವಲವಿಪರೀತವಲ್ಲವೆ? ನೀನು ವಿವೇಕಿಯಾಗಿದ್ದರೆ ಹೀಗೆ ವಿಪರೀತಕಾರ್ಯವನ್ನು ನಡೆಸುತ್ತಿರಲಿಲ್ಲ! ಅದೂ ಹೋಗಲಿ! ಈ ಪ್ರಕೃತಿಮಂಡಲದಲ್ಲಿ ಜನನಮರಣಗಳಿಗಾದರೂ ಒಂದು ಕ್ರಮವನ್ನು ಕಲ್ಪಿಸದಿದ್ದಪಕ್ಷದಲ್ಲಿ, ನೀನು ಮಾಡಬೇಕಾದುದೇನಿದೆ? ಉತ್ಪತ್ತಿಮರಣಗಳೆಲ್ಲವೂ ಅವರವರ ಪುಣ್ಯಾಪಾಪಗಳನ್ನನುಸರಿಸಿಯೇ ನಡೆ ದುಹೋಗುವುವು. ಅದಕ್ಕೆ ಯಾವ ಕ್ರಮವೂ ಬೇಕಾದುದಿಲ್ಲ. ಆಗ ನೀನು

ಮಾಡಬೇಕಾದ ಕೆಲಸವೂ ಇರುವುದಿಲ್ಲ! ನೀನು ಈಶ್ವರನಾಗಿದ್ದು ನಡೆಸ ಬೇಕಾದುದೇನು? ಆದರೆ “ಆಯಾಪ್ರಾಣಿಗಳಿಗೆ ಕರ್ಮಾನುಸಾರವಾಗಿ ನಾನೇ ಫಲವನ್ನು ಕೊಡುವೆನು.” ಎಂದು ಹೇಳುವೆಯಾ? ಹಾಗಿದ್ದರೆ, ನೀನು, ಸೃಷ್ಟಿಕಾರ್ಯವನ್ನು ವೃದ್ಧಿಪಡಿಸುವುದಕ್ಕಾಗಿ ಪ್ರಾಣಿಗಳಿಗೆ ಹೆಂಡಿರು, ಮಕ್ಕಳು ಮೊದಲಾದ ಸ್ನೇಹಪಾಶವನ್ನೇಕೆ ಕಲ್ಪಿಸಿರುವೆ? ಆ ಸ್ನೇಹಪಾಶವನ್ನಾದರೂ ಕಿತ್ತುಹಾಕಬಾರದೆ? ಅಯ್ಯೋ! ನೀನು ಎಷ್ಟುಕ್ರೂರನು” ಎಂದು ದೈವವನ್ನು ನಿಂದಿಸುತ್ತ, ಮೃತನಾದ ತನ್ನ ಕುಮಾರನನ್ನುನೋಡಿ “ಓ ಕುಮಾರಾ! ದಿಕ್ಕಿಲ್ಲದ ನನ್ನನ್ನು ಈ ದುಃಖಸಾಗರದಲ್ಲಿ ಮುಳುಗಿಸಿಹೋಗುವೆಯಾ? ಇದು ನಿನಗೆ ಯುಕ್ತವೆ? ನಿನಗಾಗಿ ದುಃಖದಿಂದ ಕುದಿಯುತ್ತಿರುವ ನಿನ್ನ ತಂದೆಯನ್ನು ಕಣ್ಣುಬಿಟ್ಟು ನೋಡು! ಅಯ್ಯೋ! ಸಂತತಿಯಿಲ್ಲದ ದುಃಖವನ್ನಾದರೂ ಸಹಿಸಬಹುದು! ಈ ಪುತ್ರಶೋಕವೆಂಬುದು ಸಹಿಸಬಾರದ ಸಂಕಟವನ್ನುಂಟುಮಾಡುವುದು. ಬಾಲಕಾ! ದುಃಖಿತರಾದ ನಮ್ಮನ್ನು ನೋಡಬಾರದೆ? ಅಥವಾ ನಮ್ಮನ್ನೂ ನಿನ್ನೊಡನೆಯೇ ಯಮನ ಸಮೀಪಕ್ಕೆ ಕರೆದುಕೊಂಡುಹೋಗು! ವತ್ಸಾ! ಇದೋ! ಇಲ್ಲಿ ನಿನ್ನ ಸಂಗಡಿಗರಾದ ಬಾಲಕರು ಕ್ರೀಡಾರ್ಥವಾಗಿ ನಿನ್ನನ್ನು ಕರೆಯುತ್ತಿರುವರು. ಇದೇಕೆ ಇನ್ನೂ ಮಲಗಿರುವೆ? ಹಸಿವನ್ನು ತಡೆಯಲಾರದೆ ಮಲಗಿರುವೆಯೇನು? ಮುದ್ದುಕುಮಾರಾ! ಏಳು ಸ್ತನ್ಯವನ್ನು ಕೊಡುವೆನು! ಮೇಲೆದ್ದು ನಮ್ಮ ಸಂಕಟವನ್ನು ನೀಗಿಸು! ಓ ಪುತ್ರಾ! ದೃಷ್ಟಿದೋಷವು ತಾಕುವುದೆಂಬ ಭಯದಿಂದ ಇದುವರೆಗೆ ನಾನು, ಕನ್ನೈದಿಲೆಯಂತೆ ಕಣ್ಣುಳ್ಳ ಮಂದಹಾಸ ಸುಂದರವಾದ ನಿನ್ನ ಮುಖಬಿಂಬವನ್ನು ಚೆನ್ನಾಗಿ ಕಣ್ಣೆತ್ತಿನೋಡುವುದಕ್ಕೂ ಹೆದರುತಿದ್ದೆನಲ್ಲಾ! ಮಂದಭಾಗ್ಯೆಯಾದ ನನಗೆ ನಿನ್ನ ಮುಖದರ್ಶನದಿಂದುಂಟಾದಸಂತೋಷವನ್ನೂ ಅನುಭವಿಸುವುದಕ್ಕಿಲ್ಲದೆಹೋಯಿತು. ಅವ್ಯಕ್ತಮಧುರವಾದ ನಿನ್ನ ಮುದ್ದುಮಾತುಗಳನ್ನೂ ಕೇಳದೆ ಹೋದೆನು. ಅಯ್ಯೋ ಈಗ ನಿನ್ನಮುಖವನ್ನು ನೋಡುತ್ತಿರುವೆನಲ್ಲಾ! ಕುಮಾರಾ! ದಯಾಶೂನ್ಯವಾದ ದೈವವು ನಿನ್ನನ್ನು ಪುನರ್ಜನ್ಮವಿಲ್ಲದ ಪರಲೋಕಕ್ಕೆ ಸಾಗಿಸಿತೇನು?” ಎಂದು ನಾನಾವಿಧವಾಗಿ ವಿಲಪಿಸುತಿದ್ದಳು. ಪತ್ನಿಯ ರೋದನವನ್ನು ನೋಡಿ ಚಿತ್ರ

ಕೇತುವು ಮತ್ತಷ್ಟು ದುಃಖಿತನಾಗಿ, ಅವಳಿಗಿಂತಲೂ ಗಟ್ಟಿಯಾಗಿ ರೋದಿಸ ತೊಡಗಿದನು. ಇವರಿಬ್ಬರ ರೋದನವನ್ನು ನೋಡಿ ಗಂಡಸರು, ಹೆಂಗಸರು ಮೊದಲಾಗಿ ಅಲ್ಲಿದ್ದ ಅನುಚರರೆಲ್ಲರೂ ದುಃಖದಿಂದ ನಿಶ್ಚೇಷ್ಟರಾಗಿ ನಿಂತು ಬಿಟ್ಟರು. ಹೀಗೆ ಚಿತ್ರಕೇತುವು ವಿವೇಕವಿಲ್ಲದೆ ದುಃಖಿಸುತ್ತಿರುವುದನ್ನು ತಿಳಿದು, ಅಂಗಿರಸನು ನಾರದನೊಡಗೂಡಿ ಅಲ್ಲಿಗೆ ಬಂದು ಸೇರಿದನು. ಇದು ಹದಿನಾಲ್ಕನೆಯ ಅಧ್ಯಾಯವು.

---

{ ನಾರದಾಂಗಿರಸರಿಬ್ಬರೂ ಚಿತ್ರಕೇತುವಿಗೆ ಹಿತವನ್ನು ಹೇಳಿ ಸಮಾಧಾನಪಡಿಸಿದುದು. }

ರಾಜೇಂದ್ರಾ! ಕೇಳು! ಸತ್ತುಬಿದ್ದ ಮಗನ ಸಮೀಪದಲ್ಲಿ ತಾನೂ ಶವದಂತೆ ಬಿದ್ದು ದುಃಖದಿಂದ ಮೈಮರೆತು ಗೋಳಿಡುತಿದ್ದ ಚಿತ್ರಕೇತುವನ್ನು ನೋಡಿ, ನಾರದನೂ,ಅಂಗಿರಸನೂ ಮುಂದೆಬಂದು, ತತ್ವಜ್ಞಾನಬೋಧಕಗಳಾದ ಮಾತುಗಳಿಂದ ಒಬ್ಬರಾದ ಮೇಲೊಬ್ಬರು ಸಮಾಧಾನಮಾಡುವರು. "ರಾಜೇಂದ್ರಾ! ಈಗ ನೀನು ಯಾವುದಕ್ಕಾಗಿ ದುಃಖಿಸುತ್ತಿರುವೆ? ಈತನು ಯಾವನು? ಒಂದುವೇಳೆ "ನಾವಿಬ್ಬರೂ ತಂದೆ ಮಕ್ಕಳೆಂದೂ ಆ ಸಂಬಂಧವು ತಪ್ಪಿಹೋದುದಕ್ಕಾಗಿ ದುಃಖಿಸುವೆನೆಂದೂ ನೀನು ಹೇಳುವೆಯೇನು? ನೀನು ಯಾರು? ಅವನು ಯಾರು? ನನಗೆಬೇರೆ ನಿಮ್ಮಿಬ್ಬರಿಗೂ ಯಾವ ಸಂಬಂಧವೂ ಇರುವಂತೆ ತೋರಲಿಲ್ಲ. ಪ್ರವಾಹರೂಪವಾಗಿ ನಡೆಯುತ್ತಿರುವ ಸೃಷ್ಟಿಯಲ್ಲಿ ಹಿಂದೆಯಾಗಲಿ, ಮುಂದೆಯಾಗಲಿ, ತತ್ಕಾಲದಲ್ಲಿಯಾಗಲಿ ನಿಮ್ಮಿಬ್ಬರಿಗೆ ಇರಬಹುದಾದ ಸಂಬಂಧವೇನು? ಪ್ರವಾಹವೇಗದಲ್ಲಿ ಕೊಚ್ಚಿಬಂದ ರೇಣುಗಳೆಲ್ಲವೂ ಅಲ್ಲಲ್ಲಿ ಒಂದಾಗಿ ಕಲೆತಿದ್ದು, ಕ್ಷಣಕಾಲದ ಮೇಲೆ ಅವು ಪ್ರವಾಹವೇಗದಿಂದಲೇ ಚದರಿಹೋಗುವಂತೆ, ಪ್ರಾಣಿಗಳೂ ಕಾಲವೆಂಬ ಪ್ರವಾಹವೇಗದಲ್ಲಿ, ತಂದೆಮಕ್ಕಳು, ಗಂಡಹೆಂಡಿರೆಂಬ ಕ್ಷಣಕಾಲಸಂಬಂಧದಿಂದ ಒಂದಾಗಿ ಕಲೆತಿದ್ದು, ಕಾಲವು ಬಂದಾಗ ಅಗಲಿಹೋಗುವರು. ಮತ್ತು ಬೀಜಗಳಿಂದ ಬೀಜಗಳು ಹುಟ್ಟಿ, ಹಾಗೆಯೇ ನಶಿಸುವಂತೆ, ಈಶ್ವರಸಂಕಲ್ಪದಿಂದ ಭೂತಗಳಲ್ಲಿ ಭೂತಗಳು ಹುಟ್ಟಿ ಕಾಲಕ್ರಮದಿಂದ

ನಾಶಹೊಂದುಬೇಕಾದುದೇಸಹಜವು.ಈನಿಮ್ಮ ಪಿತೃಪುತ್ರಭಾವಸಂಬಂಧವು ದೇಹದಮೂಲಕವಾಗಿ ಪ್ರಾಪ್ತವಾದುದರಿಂದ ಸೋಪಾಧಿಕವೆನಿಸುವುದೇ ಹೊರತು ಸಹಜವಾದುದಲ್ಲ. ಉಪಾಧಿಯೆನಿಸಿದ ದೇಹವು ಯಾವಾಗ ನಷ್ಟವಾಗುವುದೋ ಆಗ ಆ ಸಂಬಂಧವೂ ತಪ್ಪಿಹೋಗುವುದು ಜೀವನಿಗೆ ದೇಹಸಂಬಂಧವೇ ಉತ್ಪತ್ತಿಯೆನಿಸುವುದು! ಆ ದೇಹವಿಯೋಗವೇ ಮರಣವೆನಿಸುವುದು ಈ ವಿಧವಾದ ಉತ್ಪತ್ತಿವಿನಾಶಗಳು ಈಶ್ವರಸಂಕಲ್ಪಾಧೀನವಾಗಿ ನಡೆಯುವುದರಿಂದ, ಅದಕ್ಕಾಗಿ ನಾವು ದುಃಖಿಸಬಾರದು. "ಈ ದೇಹವಿಯೋಗಕ್ಕಾಗಿಯೇ ದುಃಖಿಸುವೆ" ನೆಂದು ಹೇಳುವೆಯೇನು? ಅದೂ ಯಕ್ತವಲ್ಲ. ಏಕೆಂದರೆ, ದೇಹವೆಂಬುದು ಎಂದಿಗೂ ಶಾಶ್ವತವಲ್ಲ. ಇದೋ! ಇಲ್ಲಿ ಕಾಣುವ ನಿನ್ನ ದೇಹವಾಗಲಿ, ನಮ್ಮ ದೇಹವಾಗಲಿ, ಇತರ ಚರಾಚರಗಳ ದೇಹವಾಗಲಿ, ತತ್ಕಾಲಕ್ಕೆ ಕಾಣಿಸುತಿದ್ದರೂ, ಇವು ಈ ಜನ್ಮಕ್ಕೆ ಮೊದಲಿದ್ದುವಲ್ಲ ! ಮರಣಾನಂತರದಲ್ಲಿಯೂ ಇರತಕ್ಕವುಗಳಲ್ಲ ! ಆದುದರಿಂದ ಪ್ರಕೃತದಲ್ಲಿ ಸ್ವಲ್ಪಕಾಲದವರೆಗೆ ಕಣ್ಣಿಗೆ ಕಾಣಿಸುತಿದ್ದರೂ, ಇವುಗಳನ್ನು ಇಲ್ಲದಂತೆಯೇ ಎಣಿಸಬೇಕು. ಹೀಗೆ ಅಶಾಶ್ವತವಾದ ಈ ದೇಹವನ್ನು ಕುರಿತು ದುಃಖಿಸುವುದೇಕೆ? ಮತ್ತು ಸರ್ವೇಶ್ವರನೊಬ್ಬನೇ ಸಮಸ್ತ ಭೂತಗಳಲ್ಲಿಯೂ ಅಂತರಾತ್ಮನಾಗಿದ್ದು, ಆಯಾಜೀವಗಳನ್ನು ಅವರವರ ಕರ್ಮಾನುಸಾರವಾಗಿ ನಡೆಸುತ್ತಿರುವನು. ಆದುದರಿಂದ ಯಾವಭೂತಗಳೂ ಸ್ವತಂತ್ರಗಳಲ್ಲ. ಆ ಭಗವಂತನು ಭೂತಗಳಮೂಲಕವಾಗಿಯೇ ಭೂತಗಳನ್ನು ಸೃಷ್ಟಿಸಿ, ಅವುಗಳಮೂಲಕವಾಗಿಯೇ ಅವುಗಳನ್ನು ಪಾಲಿಸುತಿದ್ದು, ಕೊನೆಗೆ ಅವುಗಳಿಂದಲೇ ಅವುಗಳನ್ನು ಕೊಲ್ಲಿಸುವನು. ಈ ಕಾರ್ಯಗಳೆಲ್ಲವೂ ಅವನಿಗೆ ಮಕ್ಕಳಾಟದಂತೆ ಲೀಲಾರ್ಥವಾದುದೇಹೊರತು, ಇದರಿಂದ ಅವನು ಪಡೆಯಬೇಕಾದ ಪ್ರಯೋಜನವೇನೂ ಇರುವುದಿಲ್ಲ. ನೆಲದಲ್ಲಿ ಬಿತ್ತಿದ ಒಂದು ಬೀಜದಿಂದ ಮತ್ತೊಂದು ಬೀಜವು ಹುಟ್ಟುವಂತೆ, ಒಂದು ದೇಹಸಂಬಂಧದಿಂದ ಹುತ್ತೊಂದುದೇಹದಲ್ಲಿ ಅದೇವಿಧವಾದ ಮತ್ತೊಂದುದೇಹವು ಹುಟ್ಟುವುದು. ಹುಟ್ಟು ಸಾವು ಎಂಬಿವೆರಡೂ ದೇಹಕ್ಕೆ ಸಹಜವಾದ ಗುಣವು, ಹೀಗೆ ದೇಹಕ್ಕೆ ಸ್ವಭಾವಸಿದ್ಧವಾದ ನಾಶವನ್ನು ಕುರಿತು ದುಃಖಿಸತಕ್ಕವನು,

ಬೆಂಕಿಯಲ್ಲಿರುವ ಉಷ್ಣವನ್ನು ನೋಡಿ ದುಃಖಿಸುವ ಮೂಢನಂತೆಯೇ ಹೊರ
ತು ಬೇರೆಯಲ್ಲ. ಆದುದರಿಂದ ಈ ದೇಹವಿಯೋಗಕ್ಕಾಗಿ ದುಃಖಿಸಲೇಬಾರದು.
ಇನ್ನು ಜೀವನನ್ನು ಕುರಿತು ದುಖಿಸುವುದಾಗಿ ಹೇಳುವೆಯೇನು? ಅದೂ
ಯುಕ್ತವಲ್ಲ. ಜೀವನಿಗೆ ಎಂದಿಗೂ ಸಾವಿಲ್ಲ. ಅವನಿಗೆ ಯಾವವಿಧವಾದ ರೂ
ಪಾಂತರವೂ ಇರುವುದಿಲ್ಲ. ಯಾವಾಗಲೂ ಒಂದೇರೂಪದಿಂದ ಶಾಶ್ವತನಾ
ಗಿರತಕ್ಕವನು. ಆ ಆತ್ಮನನ್ನು ಕುರಿತು ದುಃಖಿಸುವುದಕ್ಕೆ ಕಾರಣವೇನಿರು
ವುದು? ದೇಹವಿಯುಕ್ತವಾದ ಆತ್ಮವೇ ನಿತ್ಯಾನಂದಸ್ವರೂಪವಾದ ಪುರು
ಷಾರ್ಥವೆನಿಸುವುದು. ಮುತ್ತುಚಿಪ್ಪನ್ನು ನೋಡಿ ಬೆಳ್ಳಿಯೆಂದು ಭ್ರಮಿಸು
ವಂತೆ, ದೇಹವನ್ನೇ ಆತ್ಮವೆಂದು ಯಾರು ಭ್ರಮಿಸುವರೋ, ಅಂತಹ ಅ
ವಿವೇಕಿಗಳು ಇದಕ್ಕಾಗಿ ದುಃಖಿಸಬೇಕೇಹೊರತು ತತ್ವವನ್ನು ತಿಳಿದವರು
ಎಂದಿಗೂ ದುಃಖಿಸಲಾರರು." ಎಂದರು. ಹೀಗೆ ಆ ಮಹರ್ಷಿಗಳಿಬ್ಬರೂ ತ
ತ್ವವನ್ನು ಹೇಳಿದಮೇಲೆ, ಚಿತ್ರಕೇತುವು ದುಃಖದಿಂದ ಬಾಡಿದ ತನ್ನ ಮುಖ
ವನ್ನು ಕೈಯಿಂದೊರೆಸಿಕೊಂಡು ದುಃಖಸಮಾಧಾನದಿಂದ ಹೀಗೆಂದು ಹೇ
ಳುವನು. "ಎಲೈ ಮಹಾತ್ಮರೆ! ಪೂಜ್ಯರಿಗೂ ಪೂಜ್ಯರೆನಿಸಿಕೊಂಡ ನೀವು
ಯಾರು? ನಿಮ್ಮ ತೇಜಸ್ಸನ್ನು ಮರೆಸಿಕೊಂಡು ಹೀಗೆ ಕ್ಷುದ್ರವೇಷದಿಂದ
ಸಂಚರಿಸುತ್ತಿರುವ ಕಾರಣವೇನು? ನೀವು ಇಲ್ಲಿಗೆ ಬಂದುದೇಕೆ? ಅಥವಾ ಭ
ಗವದ್ಭಕ್ತರಾದ ಅನೇಕಬ್ರಾಹ್ಮಣೋತ್ತಮರು, ಗ್ರಾಮ್ಯಬುದ್ಧಿಯುಳ್ಳ ನ
ಮ್ಮಂತಹ ಮೂಢರನ್ನು ಜ್ಞಾನೋಪದೇಶದಿಂದ ಉದ್ಧರಿಸುವುದಕ್ಕಾಗಿ
ಯೇ, ಹುಚ್ಚರಂತೆ ವೇಷಧಾರಿಗಳಾಗಿ ವಿಶೇಷವಾಗಿ ಭೂಮಿಯಮೇಲೆ ತಿರು
ಗುವುದುಂಟು. ಸನತ್ಕುಮಾರ, ನಾರದ, ಋಭು, ಅಂಗಿರಸ, ದೇವಲ, ಅಸಿತ.
ವ್ಯಾಸ, ಮಾರ್ಕಂಡೇಯ, ಗೌತಮ, ವಸಿಷ್ಠ, ಪರಶುರಾಮ, ಕಪಿಲ,
ಪರಾಶರ, ಶುಕ, ದೂರ್ವಾಸ, ಯಾಜ್ಞವಲ್ಕ್ಯ, ಜಾತುಕರ್ಣಿ, ಆರುಣಿ, ವೇ
ದಶಿರಸ್ಸು, ರೋಮಶ, ಚ್ಯವನ, ದತ್ತಾತ್ರೇಯ, ಆಸುರಿ, ಪತಂಜಲಿ, ಪರಾ
ಶರ, ಮೈತ್ರೇಯ, ಭರದ್ವಾಜ, ವಾರುಣಿ, ಬೌದ್ಧ, ಪಂಚಶಿಖ, ಹಿರಣ್ಯನಾ
ಭ, ಕೌಸಲ್ಯ, ಶ್ರುತದೇವ, ಋತಧ್ವಜ ಇವರೇ ಮೊದಲಾಗಿ ಇನ್ನೂ ಅನೇ
ಕಮಹಾತ್ಮರು, ಜ್ಞಾನೋಪದೇಶದಿಂದ ಲೋಕಾನುಗ್ರಹಾರ್ಥವಾಗಿ ನಿ

ಮ್ಮಂತೆಯೇ ಉನ್ಮತ್ತವೇಷದಿಂದ ಸಂಚರಿಸುತ್ತಿರುವುದಾಗಿ ಕೇಳಿರುವೆನು. ಆದರೆ ನೀವು ಯಾರೆಂದು ಕಾಣೆನು. ಯಾರಾದರೂ ಆಗಲಿ! ಮಹಾಜ್ಞಾನಿಗಳಾದ ನೀವು, ಗ್ರಾಮ್ಯಪಶುವಿನಂತೆ ಮೂಢಬುದ್ಧಿಯಿಂದ ಅಜ್ಞಾನಾಂಧಕಾರದಲ್ಲಿ ಮುಳುಗಿ ಹೋಗುತ್ತಿರುವ ನನಗೆ ಜ್ಞಾನದೀಪವನ್ನು ತೋರಿಸಿ ಉದ್ಧರಿಸಬೇಕು"ಎಂದು ಹೇಳಿದನು. ಅದಕ್ಕಾ ಅಂಗಿರಸನು 'ರಾಜೇಂದ್ರಾ! ನನ್ನನ್ನು ನೀನು ಮರೆತೆಯೇನು? ನೀನು ಸಂತಾನವಿಲ್ಲದೆ ದುಃಖಿಸುತ್ತಿರುವಾಗ ನಿನಗೆ ನಾನೇ ಸಂತಾನವನ್ನು ಕೊಡಿಸಿದವನು. ನನಗೆ ಅಂಗಿರಸನೆಂದು ಹೆಸರು. ಈತನು ಬ್ರಹ್ಮಪುತ್ರನಾದ ನಾರದಮಹರ್ಷಿಯು. ನೀನು ಪುತ್ರಶೋಕದಿಂದ ವಿವೇಕವಿಲ್ಲದೆ ದುಃಖಿಸುತ್ತಿರುವುದನ್ನುನೋಡಿ ನಿನ್ನನ್ನು ಅನುಗ್ರಹಿಸುವುದಕ್ಕಾಗಿ ನಾವಿಬ್ಬರೂ ಬಂದೆವು. ಭಗವದನುಗ್ರಹಕ್ಕೆ ಪಾತ್ರನಾದ ನೀನು, ಹೀಗೆ ದುಃಖಿಸುವುದು ಸರಿಯಲ್ಲ. ಆಗಲೂ ನಾನು ನಿನಗೆ ಜ್ಞಾನೋಪದೇಶವನ್ನು ಮಾಡಬೇಕೆಂಬ ಉದ್ದೇಶದಿಂದಲೇ ಬಂದಿದ್ದೆನು. ಆದರೆ ನಿನ್ನ ಉದ್ದೇಶವು ಆ ಜ್ಞಾನಾಭಿವೃದ್ಧಿಗೆ ಪ್ರತಿಬಂಧಕವಾಗಿದ್ದುದರಿಂದ, ನಿನ್ನ ಕೋರಿಕೆಯಂತೆ ನಿನಗೆ ಪುತ್ರನನ್ನೇ ಕೊಟ್ಟು ಹೊರಟುಹೋದೆನು. ನಾನು ಬಂದಕಾರ್ಯವನ್ನು ನಡೆಸುವುದಕ್ಕೆ ಅವಕಾಶವಿಲ್ಲದೆ ಹೋಯಿತು ರಾಜೇಂದ್ರಾ! ಮಕ್ಕಳನ್ನು ಪಡೆಯುವುದರಿಂದುಂಟಾಗುವ ದುಃಖವು ಎಷ್ಟೆಂಬುದು ನಿನ್ನ ಅನುಭವಕ್ಕೆ ಬಂದಿತಲ್ಲವೆ? ಇದರಂತೆಯೇ ಪತ್ನಿಯರೂ, ಮನೆಗಳೂ, ಧನವೂ, ಇತರಸಂಪತ್ತುಗಳೂ, ವಿಷಯಸುಖಗಳೂ, ರಾಜ್ಯಸಂಪತ್ತುಗಳೂ ಚತುರಂಗಬಲವೂ, ರಾಜ್ಯಕೋಶಗಳೂ, ಪರಿಜನಸಮೃದ್ಧಿಯೂ, ಮಂತ್ರಿಗಳೂ, ಭೃತ್ಯರೂ, ಮಿತ್ರರೂ ಕ್ಷಣಕಾಲವಿದ್ದು ಅಗಲಿಹೋಗತಕ್ಕವರೆಂದು ತಿಳಿ! ಇವೆಲ್ಲವೂ ಆದಿಯಲ್ಲಿ ಸುಖಭ್ರಾಂತಿಯನ್ನು ಹುಟ್ಟಿಸಿದರೂ, ಕೊನೆಗೆ ದುಃಖಹೇತುಗಳಾಗಿಯೇ ಪರಿಣಮಿಸುವುವು. ಓ ರಾಜಾ! ಈ ನಿನ್ನ ಸಮಸ್ತಭಾಗ್ಯಗಳನ್ನೂ ಸ್ವಪ್ನಪದಾರ್ಥಗಳಂತೆ ತಿಳಿ! ಕನಸಿನಲ್ಲಿ ಒಮ್ಮೆ ರಾಜ್ಯಾಭಿಷಿಕ್ತನಾದಂತೆ ಕಂಡರೂ, ಉತ್ತರಕ್ಷಣದಲ್ಲಿಯೇ ಕಾಣದೆ ಹೋಗುವುದು. ಆದರಂತೆಯೇ ನಿನ್ನ ಸಂಪತ್ತುಗಳೆಲ್ಲವೂ ಶಾಶ್ವತಗಳಲ್ಲ! ಸ್ವಪ್ನಪದಾರ್ಥಗಳಿಗಿಂತಲೂ ಇವು ಸ್ವಲ್ಪಹೆಚ್ಚುಕಾಲದವರೆಗೆ ಅನುಭವಕ್ಕೆ ಬಂದರೂ, ಇವೂ

ನಶ್ವರಗಳೆಂದೇ ತಿಳಿ. ಅನಾದಿಯಾದ ಕರ್ಮವಾಸನೆಯೆಂಬುದು ಮನಸ್ಸಿನ ಲ್ಲಿ ಅಂಟಿಬರುತ್ತಿರುವುದು. ಆ ಮನಸ್ಸಿನಿಂದ ಪ್ರೇರಿಸಲ್ಪಟ್ಟ ಇಂದ್ರಿಯಗ ಳು ವಿಷಯಗಳನ್ನೇ ಬಯಸುತ್ತಿರುವುದರಿಂದ, ಕರ್ಮಗಳಲ್ಲಿ ಪ್ರವೃತ್ತಿಯುಂ ಟಾಗುವುದು. ಆ ಕರ್ಮಫಲಗಳನ್ನನುಭವಿಸುವುದಕ್ಕಾಗಿ ಪಂಚಭೂತ ಗಳಿಂದಲೂ, ಜ್ಞಾನಕರ್ಮೇಂದ್ರಿಯಗಳಿಂದಲೂ, ಏರ್ಪಟ್ಟಿರುವ ಈದೇಹ ವು ಪ್ರಾಪ್ತವಾಗುವುದು. ಈ ದೇಹವು ಜೀವನಿಗೆ ನಾನಾವಿಧಗಳಾದ ಕ ಷ್ಟಗಳನ್ನುಂಟುಮಾಡಿ ಕೊನೆಗೆ ನಾಶಹೊಂದುವುದು, ಆದುದರಿಂದ ನೀ ನು ಈ ತತ್ವವನ್ನು ಯೋಚಿಸಿ, ಹೆಂಡಿರುಮಕ್ಕಳಲ್ಲಿರುವ ಮೋಹವನ್ನು ಬಿಟ್ಟು ಶಾಂತಚಿತ್ತನಾಗಿರು ! ನಿನ್ನ ಆತ್ಮವು ಬುದ್ಧೀಂದ್ರಿಯಾದಿಗಳಿಗಿಂತಲೂ, ಈ ಶರೀರಕ್ಕಿಂತಲೂ ಬೇರೆಯಾಗಿ, ಪರಮಾತ್ಮನಿಗೆ ಶರೀರವಾಗಿರುವುದೆಂದು ತಿಳಿ ! ಆದುದರಿಂದ ನೀನು ಈ ಶರೀರಾದಿಗಳಲ್ಲಿ ಅಭಿಮಾನವನ್ನು ಬಿಟ್ಟು ವಿರಕ್ತನಾಗಿರು” ಎಂದನು. ಆಮೇಲೆ ನಾರದನೂ ಅದೇವಾಕ್ಯವ ನ್ನನುಮೋದಿಸುತ್ತ, “ರಾಜೇಂದ್ರಾ! ನಾನು ನಿನಗೆ ಅತಿರಹಸ್ಯವಾದ ಒಂ ದು ಮಂತ್ರವನ್ನು ಉಪದೇಶಿಸುವೆನು. ಶ್ರದ್ಧೆಯಿಂದ ಅದನ್ನು ಸ್ವೀಕರಿಸು. ಈ ಮಂತ್ರವನ್ನು ನೀನು ಭಕ್ತಿಯಿಂದ ಧಾರಣಮಾಡಿಕೊಂಡರೆ, ಏಳುರಾತ್ರಿಗಳೊಳಗಾಗಿ ಸಂಕರ್ಷಣರೂಪಿಯಾದ ಭಗವಂತನನ್ನು ನಿನ್ನ ಕಣ್ಣೆದಿರಿಗೆ ನೋಡಬಹುದು. ರುದ್ರಾದಿದೇವತೆಗಳೆಲ್ಲರೂ ಯಾವನ ಪಾದ ಮೂಲವನ್ನಾಶ್ರಯಿಸಿ ದೇಹಾತ್ಮಭ್ರಮವನ್ನೂ, ತಾವೇ ಸ್ವತಂತ್ರರೆಂಬ ಭ್ರಾಂತಿಯನ್ನೂ, ತಾವು ಬ್ರಹ್ಮಾತ್ಮಕರಲ್ಲವೆಂಬ ಭ್ರಮವನ್ನೂ ಬಿಟ್ಟು, ಎಣೆಯಿಲ್ಲದೆಯೂ, ಎಲ್ಲೆಯಿಲ್ಲದೆಯೂ ಇರುವ ಆ ಭಗವಂತನ ಮಹಾಮ ಹಿಮೆಯನ್ನು ಹೊಂದಿದರೋ, ಅದೇ ಮಹಿಮೆಯನ್ನು ನೀನೂ ಶೀಘ್ರದಲ್ಲಿ ಪಡೆಯಬಹುದು” ಎಂದನು. ಇದು ಹದಿನೈದನೆಯ ಅಧ್ಯಾಯವು.

---

ನಾರದನು ಚಿತ್ರಕೇತುವಿಗೆ ಮಂತ್ರರೂಪವಾದ ಉಪನಿಷತ್ತನ್ನು ಉಪದೇಶಿಸಿದುದು. ಚಿತ್ರಕೇತುವು ಸಂಕರ್ಷಣನನ್ನು ಸ್ತುತಿಸಿದುದು.

ರಾಜೇಂದ್ರಾ! ಕೇಳು! ಆಮೇಲೆ ನಾರದನು ತನ್ನ ಯೋಗಮಹಿಮೆಯಿಂದ ಆ ರಾಜಕುಮಾರನ ಮೃತಶರೀರಕ್ಕೆ ಜೀವವನ್ನು ಕೊಡಿಸಿ, ಅವನಿಗಾಗಿ ಸುತ್ತುಮುತ್ತಲೂ ದುಃಖಿತರಾಗಿ ನಿಂತಿದ್ದ ಬಂಧುವರ್ಗದವರೆಲ್ಲರಿಗೂ ತೋರಿಸಿದನು. ಅವರೆಲ್ಲರೂ ಆಶ್ಚರ್ಯದಿಂದ ನೋಡುತ್ತಿರುವಾಗ ಆ ಜೀವಾತ್ಮನನ್ನು ಕುರಿತು ಹೀಗೆಂದು ಹೇಳುವನು. “ಓ ಜೀವಾತ್ಮ ! ಇದೋ! ನಿನಗಾಗಿ ದುಃಖಿಸುತ್ತಿರುವ ನಿನ್ನ ತಾಯಿತಂದೆಗಳನ್ನೂ, ಮಿತ್ರರನ್ನೂ, ಬಾಂಧವರನ್ನೂ ನೋಡು ! ನಿನಗೆ ಕ್ಷೇಮವಾಗಲಿ! ನೀನು ಅಪಮೃತ್ಯುವಿನಿಂದ ಈ ಶರೀರವನ್ನು ಬಿಟ್ಟಿದ್ದೆಯೇಹೊರತು. ನಿನಗೆ ಆಯುಸ್ಸು ಇನ್ನೂ ತೀರಲಿಲ್ಲ! ನೀನು ತಿರುಗಿ ಈಶರೀರದಲ್ಲಿ ಸೇರಿದ್ದು,ನಿನ್ನ ಮಿತ್ರರೊಡನೆ ಆ ನಿನ್ನ ಉಳಿದ ಆಯುಸ್ಸನ್ನು ಕಳೆಯುವನಾಗು! ನಿನ್ನ ರಾಜಸಿಂಹಾಸನವನ್ನೇರಿ, ನಿನ್ನ ತಂದೆಯು ಕೊಡತಕ್ಕ ಭೋಗ್ಯವಸ್ತುಗಳೆಲ್ಲವನ್ನೂ ಅನುಭವಿಸು” ಎಂದನು. ಅದಕ್ಕಾ ಜೀವನು ಚಿತ್ರಕೇತು ಮೊದಲಾದ ತನ್ನ ಬಂಧುಗಳೆಲ್ಲರೂ ಕೇಳುತ್ತಿರುವಹಾಗೆ ನಾರದನನ್ನು ಕುರಿತು “ಓ ಮುನೀಂದ್ರಾ ! ಪುಣ್ಯಪಾಪಕರ್ಮಗಳನ್ನನುಸರಿಸಿ, ದೇವತಿರ್ಯಙ್ಮನುಷ್ಯಾದಿಯೋನಿಗಳಲ್ಲಿ ತೊಳಲುತ್ತಲೇ ಇರುವ ನನಗೆ, ಈಗಹೊರತು ಬೇರೆ ಯಾವ ಜನ್ಮದಲ್ಲಿ ತಾನೇ ಈ ತಂದೆತಾಯಿಗಳೊಡನೆ ಸಂಬಂಧವುಂಟು ? ಜನ್ಮಜನ್ಮಕ್ಕೂ ಹೀಗೆ ಬೇರೆಬೇರೆ ಅನೇಕರೊಡನೆ ಬಂಧುತ್ವವುಂಟಾಗುವುದರಿಂದ, ಈ ಚಿತ್ರಕೇತುಕೃತದ್ಯುತಿಗಳಿಬ್ಬರೇ ನನಗೆ ಒಂದೊಂದು ಜನ್ಮದಲ್ಲಿಯೂ ಬಂಧುಗಳೆಂಬ ನಿಶ್ಚಯವಿಲ್ಲ. ಹೀಗೆಯೇ ಸಮಸ್ತಜೀವಗಳೂ, ಅನೇಕ ಜನ್ಮಗಳನ್ನೆತ್ತಬೇಕಾದುದರಿಂದ, ಜನ್ಮಜನ್ಮಕ್ಕೆ ಬೇರೆಬೇರೆ ಬಂಧುಗಳೂ, ಜ್ಞಾತಿಗಳೂ, ಮಿತ್ರರೂ, ಶತ್ರುಗಳೂ, ಉದಾಸೀನರೂ ಸಂಭವಿಸುವರು. ಹೀಗೆ ಜನ್ಮಪರಂಪರೆಗಳಿಂದ ಬಂಧುತ್ವವೂ ಮಾರ್ಪಡುತ್ತಬರುವುದು. ಚಿನ್ನ, ಬೆಳ್ಳಿ, ಮೊದಲಾದ ವಿಕ್ರಯವಸ್ತುಗಳು, ಆಗಾಗ ಬೆಲೆಕೊಟ್ಟವನಿಗೆ ಅಧೀ

ನವಾಗಿ,ಒಬ್ಬನಿಂದ ಮತ್ತೊಬ್ಬನಿಗೆ ಹೋಗಿಸೇರುವಂತೆ,ಜೀವಗಳೂಕೂಡ, ಕರ್ಮಾನುಸಾರವಾಗಿ ದೇವಮನುಷ್ಯಾದಿಯೋನಿಗಳಲ್ಲಿ ತೊಳಲುತ್ತ, ಒ ಬ್ಬನ ಸಂಬಂಧವನ್ನು ಬಿಟ್ಟು ಮತ್ತೊಬ್ಬನ ಸಂಬಂಧವನ್ನು ಹೊಂದುವುವು. ಜೀವನು ನಿತ್ಯನಾಗಿದ್ದರೂ ಅವನಿಂದ ಸಂಪಾದಿಸಲ್ಪಟ್ಟ ವಸ್ತುಗಳಿಗೂ, ಅವನಿಗೂ ಇರತಕ್ಕ ಸಂಬಂಧವು ನಿತ್ಯವಲ್ಲ. ಮತ್ತು ಮನುಷ್ಯನಿಗೆ ಆಯಾ ವಸ್ತುಗಳ ಸಂಬಂಧವಿರುವವರೆಗೆಮಾತ್ರ ಅವುಗಳಲ್ಲಿ ತನ್ನದೆಂಬ ಬುದ್ಧಿಯೂ ಹುಟ್ಟುವುದು.ಕ್ರಯವಿಕ್ರಯಾದಿಗಳಿಂದ ಆ ಸಂಬಂಧವು ತಪ್ಪಿಹೋದೊಡ ನೆ ಅದರಲ್ಲಿ ಮಮತೆಯೂ ತಪ್ಪಿಹೋಗುವುದು. ಜೀವನು ಸಹಜಸ್ಥಿತಿಯ ಲ್ಲಿ ದೇಹಾತ್ಮಾಭಿಮಾನವಿಲ್ಲದವನಾಗಿದ್ದರೂ, ಕರ್ಮಸಂಬಂಧದಿಂದ ದೇ ವಾದಿಶರೀರಗಳಲ್ಲಿ ಪ್ರವೇಶಿಸಿದಾಗ, ಆ ದೇಹದಲ್ಲಿಯೂ, ದೇಹಸಂಬಂಧಿಗಳ ಲ್ಲಿಯೂ ತನ್ನದೆಂಬ ಅಭಿಮಾನವನ್ನಿಟ್ಟಿರುವನು. ಆ ದೇಹವೇ ಬಿಟ್ಟುಹೋದ ಮೇಲೆ, ಆದೇಹದಮೂಲಕವಾಗಿ ಏರ್ಪಟ್ಟ ತಂದೆ, ಮಕ್ಕಳು ಮುಂತಾದಸಂ ಬಂಧವುಹೇಗೆ ನಿಲ್ಲುವುವು?ಜೀವನಿಗೆ ಮೊದಲುಕೊನೆಯೆಂಬುದೊಂದೂಇಲ್ಲ. ಜೀವನು ಅತಿಸೂಕ್ಷ್ಮವಾದುದರಿಂದ ಆಯುಧಗಳಿಂದಿರಿಯುವುದಕ್ಕಾಗಲಿ, ಬೆಂಕಿಯಿಂದ ಸುಡುವುದಕ್ಕಾಗಲಿ ಸಾಧ್ಯವಲ್ಲ. ಒಂದೇವಿಧವಾದ ಜ್ಞಾ ನಾಕಾರದಿಂದಿರತಕ್ಕವನು. ಬುದ್ಧಿ, ಇಂದ್ರಿಯಗಳು, ಮನಸ್ಸು, ಪ್ರಾ ಣಗಳು, ಇವೆಲ್ಲಕ್ಕೂ ಆಧಾರನಾಗಿರತಕ್ಕವನು. ಸ್ವಯಂಪ್ರಕಾಶನು. ಇಂತಹ ಜೀವಾತ್ಮನನ್ನು ಪರಮಪುರುಷನು, ಸತ್ವ, ರಜಸ್ಸು, ತಮ ಸ್ಸುಗಳೆಂಬ ತನ್ನ ಮಾಯೆಯಗುಣಗಳಿಂದ, ದೇವಮನುಷ್ಯಾದಿರೂಪ ಗಳಲ್ಲಿ ಸೇರಿಸಿ, ಈ ಪ್ರಪಂಚರೂಪವಾಗಿ ಹರಡುವನು. ಆಪರಮಪುರುಷ ನು ಯಾರಲ್ಲಿಯೂ ತನ್ನವನೆಂದೂ, ಅನ್ಯನೆಂದೂ, ಶತ್ರುವೆಂದೂ, ಮಿತ್ರ ನೆಂದೂ ಭೇದಬುದ್ಧಿಯೇ ಇಲ್ಲದೆ. ಸರ್ವಸಮನಾಗಿರುವನು. ಆಯಾ ಜೀವ ಗಳು ನಡೆಸಿದ ಪುಣ್ಯಪಾಪಕರ್ಮಗಳನ್ನು ವಿಮರ್ಶಿಸಿ, ಅವರವರಗೆ ಆಯಾ ಕರ್ಮಫಲಕ್ಕನುಸಾರವಾದ ಸ್ಥಿತಿಯನ್ನು ಕೊಟ್ಟು, ತಾನೂ ಅವರಲ್ಲಿ ಒಳ ಹೊಕ್ಕು ಸಾಕ್ಷಿಯಾಗಿ ನೋಡುತ್ತಿರುವನು. ಜೀವಾತ್ಮರೇ ಕರ್ಮವಶವಾಗಿ ತಮ್ಮ ಕರ್ಮಾನುಸಾರವಾದ ದೇವಾದಿರೂಪಗಳನ್ನು ಹೊಂದುವುದರಿಂದ

ಸೃಷ್ಟಿಯಲ್ಲಿ ಅನೇಕವ್ಯತ್ಯಾಸಗಳು ಕಾಣಬರುವುವು. ಭಗವಂತನು ಸರ್ವಸ ಮನೆಂಬುದಕ್ಕೆ ಅದೇನೂ ಪ್ರತಿಬಂಧಕವಾಗಲಾರದು. ಮತ್ತು ಆ ವಸ್ತುಗಳ ಗುಣದೋಷಗಳಾಗಲಿ, ಸುಖದುಃಖಾದಿಫಲಗಳಾಗಲಿ, ಆ ಪರಮಪುರುಷನಿಗೆ ಸೇರಲಾರವು. ಅವನು ಕೇವಲತಟಸ್ಥನಾಗಿಯೇ ನೋಡುತ್ತಿರುವನು. ಆದರೆ ಜೀವನೂ ಹೀಗೆಯೇ ಸಹಜವಾಗಿ ಕರ್ಮರಹಿತನು. ಅವನು ನಡೆಸತಕ್ಕ ಪುಣ್ಯಪಾಪಗಳಿಗೆ ಅವನ ದೇಹವಲ್ಲದೆ ಅವನು ಕರ್ತನಲ್ಲ.ದೇಹೇಂದ್ರಿಯಾದಿಗಳನ್ನು ಕರ್ಮಗಳಲ್ಲಿ ನಿಯಮಿಸುವುದುಮಾತ್ರ ಜೀವನ ಕಾರ್ಯವು. ಆದರೆ“ಜೀವನೂ,ಪರಮಪುರುಷನೂ ಇಬ್ಬರೂ ಕರ್ಮರಹಿತರಾಗಿರುವಾಗ,ಜೀವನುಮಾತ್ರ ಕರ್ಮಫಲಗಳನ್ನನುಭವಿಸುವುದೇಕೆ?ಪರಮಪುರುಷನಿಗೆ ಆ ಫಲಾನುಭವವಿಲ್ಲದಿರುವುದೇಕೆ?” ಎಂದರೆ, ಈ ವಿಚಾರದಲ್ಲಿ ಜೀವನಿಗೂ ಪರಮಪುರುಷನಿಗೂ ಬಹಳ ತಾರತಮ್ಯವುಂಟು. ಪರಮಪುರುಷನು ಪ್ರಕೃತಿಪುರುಷರಿಬ್ಬರಿಗೂ ನಿಯಾಮಕನು. ಅವೆರಡಕ್ಕಿಂತಲೂ ವಿಲಕ್ಷಣನು. ಯಾವಾಗಲೂ ಕುಂದಿಕುಂದದ ಜ್ಞಾನಾತಿಶಯದಿಂದ, ತನಗೂ, ಆ ಪ್ರಕೃತಿಪುರುಷರಿಗೂ ಇರುವ ಭೇದವನ್ನು ಚೆನ್ನಾಗಿ ತಿಳಿದವನು. ಆದುದರಿಂದ ಪರಮಪುರುಷನಿಗೆ ಶರೀರಗತದೋಷವಾಗಲಿ, ಕರ್ಮಫಲಗಳಾಗಲಿ ಯಾವುದೂ ತಗುಲಲಾರವು. ಜೀವನಾದರೋ, ಕರ್ಮವಶನಾಗಿ ಮಾಯಾಗುಣಗಳಿಂದುಂಟಾದ ದೇಹವನ್ನೇ ತಾನೆಂದು ಭ್ರಮಿಸುವನು. ತಾನೇ ಕರ್ತೃವೆಂದೂ ಅಭಿಮಾನಿಸುವನು. ಆ ಭ್ರಾಂತಿಗೆ ತಕ್ಕಂತೆ ಆ ಕರ್ಮಫಲಗಳನ್ನೂ ಅನುಭವಿಸುವನು. ಹೀಗೆ ಕರ್ಮಾನುಸಾರವಾಗಿ ತಗುಲುಕಟ್ಟಿದ ಈ ಬಂಧುಗಳಿಂದಲೂ ಈ ರಾಜ್ಯಕೋಶಾದಿಗಳಿಂದಲೂ ಇನ್ನು ನನಗೇನು” ಎಂದು ಹೇಳಿ ಜೀವನು ತಿರುಗಿ ಆ ದೇಹವನ್ನು ಬಿಟ್ಟು ಹೊರಟುಹೋದನು. ಇದನ್ನು ಕಂಡು ಅಲ್ಲಿದ್ದ ಬಂಧುವರ್ಗದವರೆಲ್ಲರೂ ಆಶ್ಚರ್ಯಭರಿತರಾದರು. ಅವರಿಗೆ ಅವನಲ್ಲಿದ್ದ ಮೋಹಪಾಶವೂ ಬಿಟ್ಟುಹೋಯಿತು. ಅವರೆಲ್ಲರೂ ಬಂಧುಸ್ನೇಹದಿಂದುಂಟಾದ ದುಃಖವನ್ನು ಬಿಟ್ಟು, ಆ ರಾಜಕುಮಾರನ ಮೃತದೇಹಕ್ಕೆ ದಹನಾದಿಸಂಸ್ಕಾರಗಳೆಲ್ಲವನ್ನೂ ನಡೆಸಿದರು. ವಿಷಪ್ರಯೋಗದಿಂದ ಆ ಬಾಲಕನನ್ನು ಕೊಂದ ರಾಜಪತ್ನಿಯರೆಲ್ಲರೂ, ಈ ತತ್ತ್ವೋಪದೇಶವನ್ನು ಕೇಳಿದಮೇಲೆ, ತ

ಮ್ಮ ನೀಚಕೃತ್ಯಕ್ಕಾಗಿ ಬಹಳ ಲಜ್ಜಿಪಟ್ಟು, ಮುಖದಲ್ಲಿ ಸ್ವಲ್ಪವಾದರೂ ಕಳೆಯಿಲ್ಲದೆ, ಆ ಶಿಶುಹತ್ಯಾಪಾತಕವನ್ನು ತೊಲಗಿಸಿಕೊಳ್ಳುವುದಕ್ಕಾಗಿ ಬ್ರಾಹ್ಮಣರ ಮಾತಿನಿಂದ ಯಮುನಾನದಿಗೆ ಹೋಗಿ, ಅಲ್ಲಿ ಪ್ರಾಯಶ್ಚಿತ್ತವನ್ನುನಡೆಸಿಕೊಂಡರು. ಇತ್ತಲಾಗಿ ಚಿತ್ರಕೇತುವೂಕೂಡ ನಾರದನ ಉಪದೇಶದಿಂದಲೂ, ಅಂಗಿರಸನ ಹಿತೋಕ್ತಿಗಳಿಂದಲೂ, ಆ ಜೀವನ ತತ್ವಬೋಧನೆಯಿಂದಲೂ ವಿವೇಕವನ್ನು ತಂದುಕೊಂಡು, ಕೊಳದ ಕೆಸರಿನಿಂದ ಮೇಲೆದ್ದುಬಂದ ಮದದಾನೆಯಂತೆ, ತನ್ನ ಅರಮನೆಬೊಕ್ಕಸಗಳೆಂಬ ಮಹಾಂಧಕಾರದಿಂದ ತಪ್ಪಿಸಿಕೊಂಡು, ಯಮುನೆಯಲ್ಲಿ ಸ್ನಾನಮಾಡಿ, ತನ್ನ ಪಿತೃಗಳಿಗೆ ತರ್ಪಣಾದಿಗಳನ್ನು ಬಿಟ್ಟು, ಮೌನವನ್ನು ಹಿಡಿದು, ಇಂದ್ರಿಯಗಳನ್ನು ಜಯಿಸಿನಾರದನಬಳಿಗೆ ಬಂದು ನಮಸ್ಕರಿಸಿದನು. ಭಗವಂತನಾದ ನಾರದನು ಗುರುಭಕ್ತಿಯಿಂದ ನಮಸ್ಕರಿಸುತ್ತಿರುವ ಆ ಚಿತ್ರಕೇತುವನ್ನು ನೋಡಿ, ಅವನ ವಿನಯಾದಿಗುಣಗಳಿಗೆ ಸಂತೋಷಪಟ್ಟು ಈ ಕೆಳಗೆ ಹೇಳುವ ಮಂತ್ರೋಪನಿಷತ್ತೆಂಬ ವಿದ್ಯೆಯನ್ನುಪದೇಶಿಸುವನು.

"ಓ ದೇವಾ! ವಾಸುದೇವ ಪ್ರದ್ಯುಮ್ನ ಅನಿರುದ್ಧ ಸಂಕರ್ಷಣರೆಂಬ ನಾಲ್ಕು ವ್ಯೂಹಗಳಿಂದ ಪ್ರಕಾಶಿಸುವ ನಿನಗೆ ನಮಸ್ಕಾರವು. ಕೇವಲ ಜ್ಞಾನಾನಂದಸ್ವರೂಪನಾದ ನಿನಗೆ ನಮಸ್ಕಾರವು. ಹಸಿವು, ಬಾಯಾರಿಕೆ, ಶೋಕ, ಮೋಹ, ಜರೆ, ಮರಣಗಳೆಂಬ ಷಡೂರ್ಮಿಗಳಿಲ್ಲದೆ, ಆತ್ಮಾನುಭವದಿಂದಲೇ ಆನಂದಿಸುತ್ತಿರುವ ನಿನಗೆ ನಮಸ್ಕಾರವು. ಜಾತಿ, ಗುಣ, ರೀತಿ, ರೂಪಾದಿವಿಕಲ್ಪಗಳಿಲ್ಲದ ನಿನಗೆ ನಮಸ್ಕಾರವು. ಇಂದ್ರಿಯಗಳಿಗೂ, ಇಂದ್ರಿಯಾಧಿದೇವತೆಗಳಿಗೂ ನಿಯಾಮಕನಾದ ನಿನಗೆ ನಮಸ್ಕಾರವು. ಸ್ವರೂಪದಿಂದಲೂ, ಗುಣದಿಂದಲೂ ಮೇಲೆನಿಸಿದ ನಿನಗೆ ನಮಸ್ಕಾರವು. ಅನಂತಶಕ್ತಿಯುಳ್ಳ ನಿನಗೆ ನಮಸ್ಕಾರವು. ಓ ಮಹಾತ್ಮಾ! ವೇದಗಳಾಗಲಿ, ಯೋಗಿಗಳ ಮನಸ್ಸಾಗಲಿ, ನಿನ್ನ ಸ್ವರೂಪವನ್ನು ತಿಳಿಯಬೇಕೆಂದು ಎಷ್ಟೆಷ್ಟು ಪ್ರಯತ್ನಪಟ್ಟರೂ ತಿಳಿಯಲಾರದೆ ಹಿಂತಿರುಗುವುವು. ಅಂತಹ ಅಪರಿಚ್ಛಿನ್ನಸ್ವರೂಪನಾದ ನಿನ್ನನ್ನು ಯಾರುತಾನೇ ತಿಳಿಯಬಲ್ಲರು? ನೀನು ಕೇವಲ ಜ್ಞಾನಸ್ವರೂಪನು. ನಿನಗಿಂತಲೂ ಉತ್ತಮರಾಗಲಿ, ನಿನಗೆ ಸಮಾನ

ರಾಗಲಿ ಬೇರೊಬ್ಬರಿಲ್ಲವು. ಚೇತನಾಚೇತನಗಳಿಗಿಂತಲೂ ನೀನು ವಿಲಕ್ಷಣ ನು. ಅಂತಹ ನೀನು ನಮ್ಮನ್ನು ರಕ್ಷಿಸುತ್ತಿರಬೇಕು. ಮಣ್ಣಿನಿಂದ ಗಡಿಗೆ ಯು ಹೇಗೋಹಾಗೆ, ಚೇತನಾಚೇತನರೂಪವಾದ ಈ ಪ್ರಪಂಚವೆಲ್ಲವೂ ನಿನಗೆ ಶರೀರವಾದ ಸೂಕ್ಷ್ಮಚಿದಚಿತ್ತುಗಳಿಂದಲೇ ಉಂಟಾಗಿ, ನಿನ್ನ ರೂಪದಿಂ ದಲೇ ಇದ್ದು, ಕೊನೆಗಾಲಕ್ಕೂ ನಿನ್ನ ರೂಪದಿಂದಲೇ ಉಳಿಯುವುದು. ಹೀ ಗೆ ಸೃಷ್ಟಿ ಸ್ಥಿತಿ ಸಂಹಾರಗಳಲ್ಲಿ ಮೂರುಬಗೆಯಾಗಿ ತೋರುವ ಸ್ವರೂಪವು ಳ್ಳನಿನಗೆ ನಮಸ್ಕಾರವು. ಲೋಕದ ಒಳಹೊರಗೆಲ್ಲಾ ನೀನು ವ್ಯಾಪಿಸಿದ್ದ ರೂ, ಆಕಾಶಶರೀರಕನಾಗಿ ಹರಡಿರುವ ನಿನ್ನನ್ನು, ಮನಸ್ಸಾಗಲಿ, ಬು ದ್ಧಿಯಾಗಲಿ, ಇಂದ್ರಿಯಗಳಾಗಲಿ ಕಂಡುಕೊಳ್ಳಲಾರವು. ಅಂತಹಅದ್ಭುತ ಶಕ್ತಿಯುಳ್ಳ ನಿನಗೆ ನಮಸ್ಕಾರವು. ಅಗ್ನಿಸಂಬಂಧದಿಂದ ಲೋಹಾದಿಗಳಿ ಗೂ ದಹನಶಕ್ತಿಯುಂಟಾಗಿ, ಅವು ಇತರಪದಾರ್ಥಗಳನ್ನು ದಹಿಸಬಲ್ಲವಾ ಗಿದ್ದರೂ, ಆ ಅಗ್ನಿಸಂಬಂಧವಿಲ್ಲದಿದ್ದಾಗ ದಹನಶಕ್ತಿಯೂ ಇಲ್ಲದಿರುವಂ ತೆಯೇ, ದೇಹ, ಇಂದ್ರಿಯ, ಪ್ರಾಣ, ಮನಸ್ಸು ಬುದ್ಧಿ ಇವೆಲ್ಲವೂ, ನಿನ್ನ ಅಂಶವಿದ್ದಾಗಲೇ ಜ್ಞಾನಕ್ರಿಯಾಶಕ್ತಿಗಳನ್ನು ಹೊಂದಿ, ಕರ್ಮಗಳಲ್ಲಿ ಪ್ರ ವರ್ತಿಸುವುವು. ಆ ಶಕ್ತಿಯಿಲ್ಲದಿದ್ದಾಗ, ತಾವೂ ಕೆಲಸಮಾಡುವುದಕ್ಕೆ ಅಸ ಮರ್ಥಗಳಾಗುವುವು. ಮತ್ತು ಅಗ್ನಿಸಂಬಂಧದಿಂದ ಲೋಹಗಳಿಗೆ ದಹನ ಶಕ್ತಿಯುಂಟಾದಾಗಲೂಕೂಡ, ಅದು ಇತರಪದಾರ್ಥಗಳನ್ನು ದಹಿಸಬಲ್ಲು ದೇಹೊರತು ಆ ಬೆಂಕಿಯನ್ನು ಸುಡಲಾರದಲ್ಲವೆ? ಅದರಂತೆಯೇ ದೇ ಹೇಂದ್ರಿಯಾದಿಗಳೂಕೂಡ ನಿನ್ನಿಂದ ಜ್ಞಾನಕ್ರಿಯಾಸಾಮರ್ಥ್ಯವನ್ನು ಪ ಡೆದಿದ್ದರೂ, ಇತರ ಪದಾರ್ಥಗಳಲ್ಲಿ ಆ ಶಕ್ತಿಯನ್ನು ನಡೆಸುವಂತೆ ನಿನ್ನಲ್ಲಿ ನಡೆಸಲಾರವು. ಅದಕ್ಕಾಗಿಯೇ ಬುದ್ಧೀಂದ್ರಿಯಾದಿಗಳು ನಿನ್ನನ್ನು ಸಾಕ್ಷಾ ತ್ಕರಿಸಲಾರವು. ಆದರೆ ಜೀವನುಮಾತ್ರ ಸ್ವತಸ್ಸಿದ್ಧವಾದ ಜ್ಞಾನಶಕ್ತಿ ಯುಳ್ಳವನಾದುದರಿಂದ, ನಿನ್ನ ಅನುಗ್ರಹಕ್ಕೆ ಪಾತ್ರನಾದಾಗ, ನಿನ್ನನ್ನು ಸಾಕ್ಷಾತ್ಕರಿಸಬಲ್ಲನು. ಓ ದೇವಾ! ಜ್ಞಾನಾದಿಷಡ್ಗುಣಗಳಿಂದ ತುಂಬಿ, ಮಹಾಪುರುಷನೆಂದೂ, ಮಹಾನುಭಾವನೆಂದೂ, ಮಹಾವಿಭೂತಿಯುಳ್ಳವ ನೆಂದೂ ಕೀರ್ತಿಸಲ್ಪಡುವ ನಿನಗೆ ನಮಸ್ಕಾರವು! ಅನೇಕಭಕ್ತರ ಕೈಗಳಿಂ

ದ ಪೂಜಿಸಲ್ಪಟ್ಟ [illegible]ವಿಂದಗಳುಳ್ಳವನಾಗಿ, ಎಲ್ಲಕ್ಕಿಂತಲೂ ಮೇಲಾ
ದ ಸ್ಥಾನದಲ್ಲಿ, ಎಣೆಯಿಲ್ಲದ ಮಹಿಮೆಯಿರಿದ ಬೆಳಗುತ್ತಿರುವ ನಿನಗೆ ನಮ
ಸ್ಕಾರವು.”

ಓ ಪರೀಕ್ಷಿದ್ರಾಜಾ! ನಾರದಮಹರ್ಷಿಯು ಭಕ್ತನಾದ ಚಿತ್ರ
ಕೇತುವಿಗೆ, ಭಗವಂತನ ಸ್ತುತಿರೂಪವಾದ ಈ ಮಂತ್ರವಿದ್ಯೆಯನ್ನುಪದೇಶಿ
ಸಿ, ಅಂಗಿರಸನೊಡನೆ ಹಿಂತಿರುಗಿ ಸತ್ಯಲೋಕಕ್ಕೆ ಹೊರಟುಹೋದನು. ಇ
ತ್ತಲಾಗಿ ಚಿತ್ರಕೇತುವು, ನಾರದನು ಹೊರಟುಹೋದಮೇಲೆ, ಏಳುದಿನಗಳ
ವರೆಗೆ ಕೇವಲಜಲಾಹಾರದಿಂದ ಕಾಲವನ್ನು ಕಳೆಯುತ್ತ ಆ ಮಂತ್ರವಿದ್ಯೆ
ಯನ್ನು ಎಚ್ಚರದಿಂದ ಜಪಿಸುತಿದ್ದನು. ಏಳುದಿನಗಳು ಕಳೆದಮೇಲೆ ಆ
ಮಂತ್ರಮಹಿಮೆಯಿಂದ, ಅವನು ವಿದ್ಯಾಧರಪತಿತ್ವವನ್ನು ಹೊಂದಿದನು.
ಆಮೇಲೆ ಇನ್ನೂ ಕೆಲವು ದಿನಗಳವರೆಗೆ ಅದೇಮಂತ್ರವನ್ನು ಬಿಡದೆ ಜಪಿಸುತಿ
ದ್ದನು. ಅದರ ಮಹಿಮೆಯಿಂದ ಅವನಿಗೆ ಇಷ್ಟಬಂದ ಲೋಕಕ್ಕೆ ಹೋಗಬ
ಹುದಾದ ಶಕ್ತಿಯುಂಟಾಯಿತು. ಒಡನೆಯೇ ಪಾತಾಳದಕಡೆಗೆ ಹೊರ
ಟು, ಅಲ್ಲಿ ತಾವರೆದಂಟಿನಂತೆ ಶುಭ್ರವಾದ ದೇಹಕಾಂತಿಯುಳ್ಳವನಾಗಿ
ಯೂ, ನೀಲವಸ್ತ್ರವನ್ನು ಧರಿಸಿದವನಾಗಿಯೂ, ಕಿರೀಟ, ಕೇಯೂರ, ಕಟಿ
ಸೂತ್ರ, ಕಂಕಣಗಳೇ ಮೊದಲಾದ ದಿವ್ಯಭೂಷಣಗಳನ್ನು ತೊಟ್ಟವನಾಗಿ
ಯೂ, ಪ್ರಸನ್ನಮುಖದಿಂದಲೂ, ರಕ್ತಾಂತವಾದ ನೇತ್ರದಿಂದಲೂ ಶೋ
ಭಿತನಾಗಿಯೂ,ಅನೇಕ ಸಿದ್ಧಗಣಗಳಿಂದ ಪರಿವೃತನಾಗಿಯೂ ಇದ್ದ,ದೇವ
ದೇವನಾದ ಸಂಕರ್ಷಣಮೂರ್ತಿಯನ್ನು ಕಂಡನು. ಆದಿಪುರುಷನಾದ ಆಭ
ಗವಂತನ ಸ್ವರೂಪವನ್ನು ಕಂಡಮಾತ್ರಕ್ಕೆ, ಅವನ ಪಾಪಗಳೆಲ್ಲವೂ ನೀಗಿ,
ಅವನ ಮನಸ್ಸು ನಿರ್ಮಲವಾಯಿತು. ಆ ಭಗವದ್ದರ್ಶನದಿಂದುಂಟಾದಭಕ್ತಿ
ವಿಶೇಷದಿಂದ, ಅವನ ಕಣ್ಣುಗಳಲ್ಲಿ ಆನಂದಬಾಷ್ಪವು ತುಳುಕುತಿತ್ತು. ಅವನ
ಮೈಯ್ಯೆಲ್ಲವೂ ಪುಳಕಿತವಾಯಿತು. ತನ್ನ ಆನಂದಬಾಷ್ಪಗಳಿಂದಲೇ ಭಗ
ವಂತನ ಪಾದಪೀಠವನ್ನು ತೊಳೆಯುವಂತೆ, ಬಾರಿಬಾರಿಗೂ ಆತನ ಪಾದಾ
ರವಿಂದಗಳಿಗೆ ತಲೆಯನ್ನು ಸೋಕಿಸಿ ನಮಸ್ಕರಿಸುತಿದ್ದನು, ಆಭಗವಂತನ
ನ್ನು ಸ್ತೋತ್ರಮಾಡುವುದಕ್ಕಾಗಿ ಬಾಯೆತ್ತುವಷ್ಟರಲ್ಲಿ, ಆನಂದಾತಿಶಯ

ದಿಂದ ಬಾಯಲ್ಲಿ ಅಕ್ಷರಗಳೇ ಹೊರಡದಂತಾಯಿತು. ಕೊನೆಗೆ ಚಿತ್ರಕೇತು ವು ತನ್ನ ಬುದ್ಧಿಬಲದಿಂದ ಮನಸ್ಸನ್ನು ಸಮಾಧಾನಸ್ಥಿತಿಗೆ ತಂದುಕೊಂಡು, ವಚನಸಾಮರ್ಥ್ಯವನ್ನು ಪಡೆದು, ಇಂದ್ರಿಯಗಳಿಗೆ ಹೊರಗಿನ ವ್ಯಾಪಾರಗ ಳೆಲ್ಲವನ್ನೂ ತಪ್ಪಿಸಿ, ಲೋಕಗುರುವಾಗಿಯೂ, ಪಾಂಚರಾತ್ರಪ್ರತಿಪಾದ್ಯ ನಾಗಿಯೂ ಇರುವ ಆ ಭಗವಂತನನ್ನು ಹೀಗೆಂದು ಸ್ತುತಿಸುವನು.

"ಓ ದೇವಾ! ನೀನು ಬೇರೊಬ್ಬರಿಗೆ ದುರ್ಜಯನಾಗಿದ್ದರೂ, ಸಮ ಸ್ತವನ್ನೂ ಬ್ರಹ್ಮಾತ್ಮಕವೆಂದು ಅನುಸಂಧಾನಮಾಡತಕ್ಕ ಜಿತೇಂದ್ರಿಯ ರಾದ ಸಾಧುಗಳಿಗೆ ನೀನಾಗಿಯೇ ಅಧೀನನಾಗಿ ನಿಲ್ಲುವೆ! ಅನನ್ಯಪ್ರಯೋ ಜನರಾಗಿ ನಿನ್ನನ್ನು ಭಜಿಸತಕ್ಕವರಿಗೆ, ನಿನ್ನನ್ನೇ ನೀನು ಕೊಡತಕ್ಕವನು. ಜ್ಞಾನಿಗಳು ಭಕ್ತಿಯಿಂದ ನಿನ್ನನ್ನು ವಶಪಡಿಸಿಕೊಳ್ಳುವಂತೆ, ನೀನೂನಿನ್ನ ಅಸಾಧಾರಣವಾತ್ಸಲ್ಯದಿಂದ ಅವರನ್ನು ವಶಪಡಿಸಿಕೊಳ್ಳುವೆ. ಓ ಪರಮ ಪುರುಷಾ! ಜಗತ್ತಿನ ಸೃಷ್ಟಿಸ್ಥಿತಿಲಯಗಳೆಲ್ಲವೂ ನಿನ್ನ ಲೀಲೆಗಳು! ಸೃಷ್ಟಿ ಕರ್ತರೆಂದು ಕರೆಯಲ್ಪಡುವ ಬ್ರಹ್ಮರುದ್ರಾದಿಗಳೆಲ್ಲರೂ ಬೆಂಕಿಯಿಂದ ಹೊರಡುವ ಕಿಡಿಗಳಂತೆ, ನಿನ್ನ ಅಂಶಾಂಶದಿಂದ ಹುಟ್ಟಿದವರು! ಇಷ್ಟುಮಾ ತ್ರಕ್ಕೆ ಅವರು ನಿನ್ನ ಮಾಯೆಯಿಂದ ಮೋಹಿತರಾಗಿ, ತಾವೇ ಆ ಕಾರ್ಯವ ನ್ನು ನಡೆಸುವೆವೆಂಬ ಹೆಮ್ಮೆಯಿಂದ ಹೋರಾಡುವುದೊಂದೇಹೊರತು,ಅವ ರಿಗೆ ಸರ್ವೇಶ್ವರತ್ವವು ಎಂದಿಗೂ ಸಿದ್ಧಿಸಲಾರದು. ಎಲ್ಲಕ್ಕಿಂತಲೂ ಸಣ್ಣ ದಾದ ಪರಮಾಣುವೊದಲುಗೊಂಡು,ಎಲ್ಲಕ್ಕಿಂತಲೂ ಮಹತ್ತಾದ ಪರಮ ಮಹತ್ತಿನವರೆಗೆ ನಡೆಯತಕ್ಕ ಎಲ್ಲಾ ವಿಕಾರಗಳಲ್ಲಿಯೂ, ಆಯಾ ವಿಕಾರ ದಿಂದುಂಟಾದ ವಸ್ತುಗಳ ಉತ್ಪತ್ತಿ, ಸ್ಥಿತಿ, ಲಯಾವಸ್ಥೆಗಳಲ್ಲಿಯೂ, ನೀನು ಅಂತರಾತ್ಮನಾಗಿರತಕ್ಕವನು. ನೀನುಮಾತ್ರ ಆದಿಮಧ್ಯಾಂತಗಳಿಲ್ಲದವನು. ಕಾರ್ಯರೂಪವಾಗಿ ಕಾಣತಕ್ಕ ಈ ಸಮಸ್ತಪ್ರಪಂಚಕ್ಕೂ ಆದಿಯಲ್ಲಿ ಯೂ,ಕೊನೆಯಲ್ಲಿಯೂ ಇರತಕ್ಕ ಸ್ವರೂಪವು ಯಾವುದುಂಟೋ ಅದೇಸ್ಥಿ ರವಾದುದು. ಎಂದರೆ, ನಿನ್ನ ರೂಪವೇ ಮೊದಲು ಕಾರಣವಾಗಿದ್ದು, ನಡು ವೆ ಕಾರ್ಯರೂಪವಾಗಿ ಪರಿಣಮಿಸಿ, ತಿರುಗಿ ಮೊದಲಿದ್ದಂತೆಯೇ ಕಾರಣ ರೂಪವಾಗಿ ಉಳಿಯುವುದು. ಹೊನ್ನು, ಮಣ್ಣು ಮುಂತಾದುವು ಮೊದ

ಲು ನಿಜಸ್ವರೂಪದಿಂದ ಕಾರಣವಾಗಿದ್ದು, ನಡುವೆ ಗಡಿಗೆ, ಆಭರಣ, ಮುಂತಾದ ಆಕಾರಗಳನ್ನು ಹೊಂದಿದ್ದು, ಕೊನೆಗೆ ತನ್ನ ರೂಪದಿಂದಲೇ ಹೊನ್ನಾಗಿಯೂ, ಮಣ್ಣಾಗಿಯೂ ಉಳಿಯುವುದಲ್ಲವೆ? ಹೀಗೆಮೊದಲು ನೀನೇ ಕಾರಣವಸ್ತುವಾಗಿಯೂ, ನಡುವೆ ಬಂದ ಕಾರ್ಯರೂಪವು ಹೋದಮೇಲೆ ನಿಲ್ಲತಕ್ಕವಸ್ತುವಾಗಿಯೂ ಇರುವುದರಿಂದ,ಇವುಗಳ ನಡುವೆ ನಡೆಯತಕ್ಕಸೃಷ್ಟ್ಯಾದಿಗಳೂ ನಿನ್ನ ವೈಭವಗಳೆಂಬುದರಲ್ಲಿ ಸಂದೇಹವೇನಿದೆ? ಬ್ರಹ್ಮರುದ್ರಾದಿಗಳೂ ಹೀಗೆ ಕಾರ್ಯರೂಪವಾಗಿ ನಡುವೆ ಬಂದವರು! ಕೊನೆಗೆ ನಿಲ್ಲತಕ್ಕವರಲ್ಲ! ಕಾಲಪರಿಚ್ಛೇದವಿಲ್ಲದೆ ಆದಿಮಧ್ಯಾಂತಗಳಲ್ಲಿಯೂ ಒಂದೇವಿಧವಾಗಿರತಕ್ಕ ನೀನಲ್ಲದೆ, ಬೇರೊಬ್ಬರಿಗೆ ಈ ಸೃಷ್ಟ್ಯಾದಿಗಳ ಅಧಿಕಾರವಿಲ್ಲ. ಮೇಲೆಮೇಲೆ ನಡೆಯುವ ವಿಕಾರಗಳಿಂದ ಹತ್ತುಪಾಲು ಹೆಚ್ಚುತ್ತಹೋಗುವ ಭೂಮಿ, ನೀರು, ಅಗ್ನಿ, ವಾಯು, ಆಕಾಶ, ಅಹಂಕಾರ, ಮಹತ್ತುಗಳೆಂಬ ಏಳುತತ್ವಗಳಿಂದ ಆವರಿಸಲ್ಪಟ್ಟ ಇಂತಹ ಅಂಡಕೋಶಗಳು, ಅನೇಕ ಕೋಟಿಗಳುಂಟು! ಇವೆಲ್ಲವೂ ನಿನ್ನಲ್ಲಿ ಪರಮಾಣುಪ್ರಾಯವಾಗಿ ಕಾಣುತ್ತಿರುವುವು. ಆದುದರಿಂದ ಚೇತನಾಚೇತನರೂಪವಾದ ಈ ಎಲ್ಲಾ ಬ್ರಹ್ಮಾಂಡಗಳಲ್ಲಿಯೂ ನೀನು ದೇಶನಿಯಮವಿಲ್ಲದೆ ವ್ಯಾಪಿಸಿರತಕ್ಕವನು. ಹೀಗೆ ನಿನಗೆ ದೇಶಕಾಲಪರಿಚ್ಛೇದಗಳಿಲ್ಲದಿರುವುದರಿಂದಲೇ ನೀನು ಅನಂತನೆಂದು ಕರೆಯಲ್ಪಡುವೆ. ಹೀಗೆ ಸರ್ವೋತ್ತಮನಾದ ನೀನು, ಆಶ್ರಿತರಿಗೆ ಉತ್ತಮಪುರುಷಾರ್ಥವನ್ನು ಕೊಡುವುದಕ್ಕೆ ಸಿದ್ಧನಾಗಿರುವಾಗಲೂ, ಪಶುಪ್ರಾಯರಾದ ಮನುಷ್ಯರು, ಶಬ್ದಾದಿವಿಷಯಗಳಲ್ಲಿ ಆಸೆಪಟ್ಟು, ನಿನ್ನ ಪರಿವಾರಗಳೆನಿಸಿಕೊಂಡ ಇಂದ್ರಾದಿದೇವತೆಗಳನ್ನುಪಾಸನೆಮಾಡಿ, ನಶ್ವರಗಳಾದ ಸ್ವರ್ಗಾದಿಫಲಗಳನ್ನಪೇಕ್ಷಿಸುವರು. ಅರಮನೆಯು ಸುಟ್ಟುಹೋದಮೇಲೆಅದನ್ನುನಂಬಿ ಬದುಕುತಿದ್ದ ಸೇವಕರೆಲ್ಲರೂ ದಿಕ್ಕಿಲ್ಲದೆ ಅಲೆಯುವಂತೆ, ಇಂದ್ರಾದಿದೇವತೆಗಳು ನಾಶಹೊಂದಿದಮೇಲೆ, ಅವರನ್ನು ನಂಬಿದ್ದವರೂ ನಿರಾಧಾರವಾಗಿಕೆಟ್ಟುಹೋಗುವರು. ಆದುದರಿಂದ ಆಸ್ವರ್ಗಾದಿಸುಖಗಳೆಲ್ಲವೂತಿರುಗಿ ಸಂಸಾರಬಂಧಕ್ಕೇ ಕಾರಣವಾಗುವುದು. ಯಾವಾಗಲೂಕಂದುಕುಂದಿಲ್ಲದಜ್ಞಾನವೇ ಸ್ವರೂಪವಾಗಿ ಉಳ್ಳವನಾಗಿಯೂ,ಸತ್ವಾದಿಗುಣಗ

ಳಿಂದುಂಟಾದ ವಿಕಾರವಿಲ್ಲದವನಾಗಿಯೂ ಇರುವ ನಿನ್ನನ್ನೇ ಉತ್ತಮಪುರು ಷಾರ್ಥವೆಂದುನಂಬಿ,ನಿನ್ನನ್ನು ಕುರಿತು ಮಾಡತಕ್ಕ ಉಪಾಸನಗಳುಮಾತ್ರವೇ ನಿತ್ಯಾನಂದವನ್ನುಂಟುಮಾಡುವುವು. ಬೆಂದ ಬೀಜಗಳು ಹೇಗೆ ಮೊಳೆಯನ್ನು ಹೊರಡಿಸಲಾರವೋ,ಹಾಗೆ ನಿನ್ನ ಉಪಾಸನದಿಂದುಂಟಾದ ತೇಜಸ್ಸು ಪುನ ರ್ಜನ್ಮಕ್ಕೆ ಕಾರಣವಾಗಲಾರದು. ಚತುರ್ಮುಖನು ಮೊದಲುಗೊಂಡು ಸಾ ಮಾನ್ಯಜಂತುವಿನವರೆಗಿರತಕ್ಕ ಇತರಜೀವವರ್ಗಗಳೆಲ್ಲವೂ ಸತ್ವಾದಿಗುಣಗ ಳ ಪರಿಣಾಮದಿಂದಲೇ ಉಂಟಾದುವುಗಳು. ಇವರೆಲ್ಲರೂ ಕರ್ಮವಶ್ಯರಾಗಿ ರುವರು. ಹೀಗಿರುವಾಗಲೂ ನಿನ್ನನ್ನು ಬಿಟ್ಟು ಇತರದೇವತೆಗಳನ್ನು ಭಜಿಸಿದ ರೆ, ತನ್ನಂತೆಯೇ ಕರ್ಮವಶರಾದ ಬೇರೆಯವರನ್ನು ಭಜಿಸಿದಂತಾಗುವುದೇ ಹೊರತು, ಅದರಲ್ಲಿ ವಿಶೇಷವೇನೂ ಇಲ್ಲ. ಈವಿಧವಾದ ಉಪಾಸನದಿಂದ ತಿರುಗಿ ಸುಖದುಃಖಾದಿದ್ವಂದ್ವಗಳಲ್ಲಿಯೇ ಸಿಕ್ಕಿಬೀಳಬೇಕಾಗುವುದಲ್ಲದೆ, ಶಾಶ್ವತಸುಖವು ಲಭಿಸಲಾರದು. ಆದುದರಿಂದ ಲೋಕಕ್ಕೆಲ್ಲವೂ ನೀ ನೊಬ್ಬನೇ ಉಪಾಸ್ಯದೇವತೆಯು. ದೇವಾ! ನೀನು ಸಮಸ್ತವನ್ನೂ ಸ್ವಾ ಧೀನಮಾಡಿಕೊಂಡು, ಸರ್ವೋತ್ತಮನೆನಿಸಿರುವುದರಿಂದಲೇ ಅಜಿತನೆಂಬ ಹೆಸರಿನಿಂದಕೀರ್ತಿಸಲ್ಪಡುವೆ. ಅದರಂತೆಯೇ ನಿನ್ನಿಂದ ಪಾಂಚರಾ ತ್ರಾದಿಶಾಸ್ತ್ರಗಳ ಮೂಲಕವಾಗಿ ನಿರೂಪಿಸಲ್ಪಟ್ಟ ಧರ್ಮವೇ ನಿರ್ದುಷ್ಟ ವಾದ ಉತ್ತಮಧರ್ಮವೆನಿಸುವುದು. ಬೇರೆ ಪ್ರಯೋಜನಾಪೇಕ್ಷೆಯಿಲ್ಲದೆ ಮೋಕ್ಷದಲ್ಲಿಯೇ ದೃಷ್ಟಿಯಿಟ್ಟು, ಬ್ರಹ್ಮಾನುಭವದಲ್ಲಿ ನಿರತರಾದ ಯಾವ ಯೋಗಿಗಳು, ಈ ಧರ್ಮವನ್ನೇ ಅವಲಂಬಿಸುವರೋ, ಅವರೇ ಉಪಾಸಕ ರಲ್ಲಿಯೂ ಮೇಲೆನಿಸುವರು. ಆದುದರಿಂದ ಲೋಕದಲ್ಲಿ ನೀನೇ ಉತ್ತಮಪು ರುಷನು! ನಿನ್ನಿಂದುಪದೇಶಿಸಲ್ಪಟ್ಟ ಭಾಗವತಧರ್ಮವೇ ಧರ್ಮಗಳಲ್ಲಿ ಸ ರ್ವೋತ್ತಮವಾದುದು! ಆ ಧರ್ಮವನ್ನನುಸರಿಸತಕ್ಕವರೇ ಉಪಾಸಕರಲ್ಲಿ ಮೇಲೆನಿಸುವರು. ಮತ್ತು ನಿನ್ನಿಂದುಪದೇಶಿಸಲ್ಪಟ್ಟ ಭಾಗವತಧರ್ಮದಲ್ಲಿ ನೀನೊಬ್ಬನೇ ಉದ್ದೇಶ್ಯವಸ್ತುವಾದುದರಿಂದ, "ನೀನು,ತಾನು,ನಿನ್ನದು,ತನ್ನ ದು" ಎಂಬ ಅಹಂಕಾರಮಮಕಾರಗಳು ಹುಟ್ಟುವುದಕ್ಕೆ ಎಳ್ಳಷ್ಟಾದ ರೂ ಅವಕಾಶವಿಲ್ಲ. ಇಂದ್ರಾದಿದೇವತಾಂತರಗಳನ್ನಾರಾಧಿಸತಕ್ಕ ಯ

ಜ್ಞಯಾಗಾದಿಧರ್ಮಗಳು, ರಾಗದ್ವೇಷಾದಿಗಳಿಂದ ತುಂಬಿರುವುದು. ಆ ಅಹಂಕಾರಮಮಕಾರಗಳಿಂದ ನಡೆಸತಕ್ಕ ಉಪಾಸನವು ಅಶುದ್ಧವಾಗಿಯೂ, ಅಸ್ಥಿರವಾಗಿಯೂ, ಅಧರ್ಮಪ್ರಚುರವಾಗಿಯೂ ಇರುವುದು. ಯಜ್ಞಾದಿಧರ್ಮಗಳನ್ನು ನಡೆಸುವುದರಲ್ಲಿ ಬರೀದೇಹಶ್ರಮವಲ್ಲದೆ,ಶ್ರಮಪಟ್ಟು ಕೊನೆಗೆ ಆ ಕರ್ಮಬಂಧದಿಂದ ಸಂಸಾರರೂಪವಾದ ಮತ್ತೊಂದನರ್ಥವನ್ನು ತಂದುಕೊಳ್ಳಬೇಕಾಗುವುದರಿಂದ, ಆತ್ಮದ್ರೋಹವನ್ನು ಮಾಡಿದಂತಾಗುವುದು. ಶತ್ರುಹಿಂಸೆ ಮೊದಲಾದುವುಗಳನ್ನು ಬಯಸಿ ನಡೆಸುವುದರಿಂದ ಪರರಿಗೂ ದ್ರೋಹಮಾಡಿದಂತಾಗುವುದು. ಹೀಗೆ ತನಗೂ, ಪರರಿಗೂ ದ್ರೋಹಕರವಾದ ಕರ್ಮಗಳನ್ನು ನಡೆಸುವುದರಿಂದ ಯಾವ ವಿಧದಲ್ಲಿ ಕ್ಷೇಮವುಂಟು ? ಇದರಿಂದ ಸಂಪಾದಿಸತಕ್ಕ ಈ ಸುಖದುಃಖಗಳೆಲ್ಲವೂ ಅಸ್ಥಿರಗಳು. ಆತ್ಮದ್ರೋಹದಿಂದ ನಿನ್ನ ಕೋಪಕ್ಕೂ, ಪರದ್ರೋಹದಿಂದ ಅಧರ್ಮಕ್ಕೂ ಗುರಿಯಾಗುವುದು ಹೊರತು ಬೇರೆ ಫಲವಿಲ್ಲ. ದೇವಾ! ಸತ್ಯಸಂಕಲ್ಪನಾದ ನೀನು ಆಶ್ರಿತರಕ್ಷಣವಿಷಯದಲ್ಲಿ ಮಾಡಿರುವ ಪ್ರತಿಜ್ಞೆಯು ಎಂದಿಗೂ ತಪ್ಪಲಾರದು. ಆ ಉದ್ದೇಶದಿಂದಲೇ ಪಾಂಚರಾತ್ರಮೂಲಕವಾಗಿ ನೀನು ನಿನ್ನ ಪಾದಾಶ್ರಯಕ್ಕೆ ದಾರಿಯನ್ನು ತೋರಿಸತಕ್ಕ ಭಾಗವತಧರ್ಮಗಳನ್ನುಪದೇಶಿಸಿರುವೆ? ಅದರಂತೆ ನಡೆಸತಕ್ಕವರಿಗೆ ಇಷ್ಟಪ್ರಾಪ್ತಿಯನ್ನೂ, ಅನಿಷ್ಟಪರಿಹಾರವನ್ನೂ ಉಂಟುಮಾಡುವೆ! ಈ ನಿನ್ನ ಸಂಕಲ್ಪವನ್ನು ತಿಳಿದೇ ಮಹಾತ್ಮರು, ಚರಾಚರಾತ್ಮಕವಾದ ಸಮಸ್ತಭೂತಗಳನ್ನೂ ನಿನ್ನ ಶರೀರವನ್ನಾಗಿಯೇ ಭಾವಿಸಿ, ನಿನ್ನನ್ನು ಭಜಿಸುವರು. ಓ ದೇವಾ! ನಿನ್ನ ಸಂದರ್ಶನವು ಸಮಸ್ತ ಪಾಪನಿವಾರಕವೆಂಬುದೇನೂ ಆಶ್ಚರ್ಯವಲ್ಲ! ಒಂದಾವರ್ತಿ ನಿನ್ನ ನಾಮಾಕ್ಷರವನ್ನು ಕಿವಿಯಿಂದ ಕೇಳಿದಮಾತ್ರಕ್ಕೆ, ಚಂಡಾಲನಾದರೂ ಸಂಸಾರದಿಂದ ಬಿಡಲ್ಪಟ್ಟು ಮೋಕ್ಷವನ್ನುಹೊಂದುವನು. ಹೀಗಿರುವಾಗ ನಿನ್ನ ಸಾಕ್ಷಾದ್ದರ್ಶನದಿಂದ ಪಾಪಕ್ಷಯವೆಂಬುದನ್ನು ಕೇಳಬೇಕೆ? ಓ ಪರಮಪುರುಷಾ! ಈಗ ನಿನ್ನ ದರ್ಶನದಿಂದ ನನ್ನ ಮನಸ್ಸು ನಿರ್ಮಲವಾಯಿತು! ನಾನು ಕೃತಾರ್ಥನಾದೆನು ! ನಿನ್ನ ಭಕ್ತನಾದ ನಾರದಮಹರ್ಷಿಯು ಹೇಳಿದ

ಮಾತಿನಂತೆ, ಅವನ ಮಂತ್ರೋಪದೇಶದಿಂದಲೇ ನನಗೆ ಈ ಭಾಗ್ಯವು ಲಭಿಸಿತು. ಓ ದೇವಾ! ಸರ್ವಾಂತರ್ಯಾಮಿಯಾದ ನಿನಗೆ ನಮ್ಮಂತಹ ಸಾಮಾನ್ಯಜನರ ಉದ್ದೇಶಗಳೂ, ಕಾರ್ಯಗಳೂ ತಿಳಿದೇ ಇರುವುವು. ಯಾವ ವಿಷಯದಲ್ಲಿಯೂ ಅಸಮರ್ಥರಾದ ನಾವು, ಅನಂತಕಲ್ಯಾಣಗುಣಾಕರ ನಾದ ನಿನ್ನ ಗುಣಗಳಲ್ಲಿ ಲೇಶಮಾತ್ರವನ್ನಾದರೂ, ಕಂಡುಕೊಳ್ಳಲಾರೆ ವೆಂಬುದೂ ನಿನಗೆ ವಿದಿತವೆ? ನೀನು ಜ್ಞಾನಪ್ರದರಾದ ನಾರದಾದಿಗಳಿಗೂ ಜ್ಞಾನಪ್ರದಾನಮಾಡತಕ್ಕವನು. ಇಂತಹ ನಿನ್ನಲ್ಲಿ ನಾವು ಬಾಯೆತ್ತಿ ನುಡಿಯುವುದು, ತ್ರೈಲೋಕ್ಯವನ್ನೂ ಬೆಳಗುತ್ತಿರುವ ಸೂರ್ಯನಿಗೆ ಮಿಂಚು ಹುಳುಗಳು ಬೆಳಕನ್ನು ತೋರಿಸುವಂತೆ, ಅತ್ಯಲ್ಪವೆಂಬುದನ್ನು ಹೇಳಬೇಕಾ ದುದೇ ಇಲ್ಲ. ದೇವಾ! ಸಮಸ್ತಜಗತ್ತಿನ ಸೃಷ್ಟಿಸ್ಥಿತಿಲಯಗಳಿಗೆ ಪ್ರಭು ವಾಗಿಯೂ, ಷಾಡ್ಗುಣ್ಯಪರಿಪೂರ್ಣನಾಗಿಯೂ, ಭೇದಬುದ್ಧಿಯುಳ್ಳ ಕುತ್ಸಿತಯೋಗಿಗಳಿಗೆ ಗೋಚರಿಸದ ಸ್ವರೂಪವುಳ್ಳವನಾಗಿಯೂ, ಪರಮ ಪರಿಶುದ್ಧನಾಗಿಯೂ ಇರುವ ನಿನಗೆ ನಮಸ್ಕಾರವು. ಬ್ರಹ್ಮಾದಿಗಳೆಲ್ಲರೂ ನಿನ್ನನ್ನು ಅನುಸರಿಸಿಯೇ ಜೀವಿಸುತ್ತಿರುವರು. ಚಿತ್ತವೃತ್ತಿಗಳೆಲ್ಲವೂ ಸರ್ವಸಾಕ್ಷಿಯಾದ ನಿನ್ನನ್ನುಕುರಿತೇ ಪ್ರಸರಿಸುವುವು. ಈ ಸಮಸ್ತ ಭೂಮಂಡಲವೂ ನಿನ್ನ ತಲೆಯಮೇಲೆ ಒಂದು ಸಾಸಿವೆಯಕಾಳಿನಂತೆ ಅಂಟಿ ಕೊಂಡಿರುವುದು. ಸಹಸ್ರಶಿರಸ್ಸುಳ್ಳ ಅಂತಹ ನಿನಗೆ ನಮಸ್ಕಾರವು" ಎಂದನು.

ಹೀಗೆ ಚಿತ್ರಕೇತುವು ಸ್ತೋತ್ರಮಾಡುವುದನ್ನು ಕೇಳಿ, ಭಗವಂತನು ಸಂತುಷ್ಟನಾಗಿ, ಅವನನ್ನು ಕುರಿತು, "ರಾಜೇಂದ್ರಾ! ನಾರದಾಂಗಿರಸ ರಿಬ್ಬರೂ ನಿನಗೆ ಪ್ರಕೃತಿಪುರುಷೇಶ್ವರವಿಭಾಗವನ್ನು ಸ್ಪಷ್ಟವಾಗಿ ಉಪ ದೇಶಿಸಿದರಲ್ಲವೆ? ಅದನ್ನೇ ನನ್ನ ಉಪದೇಶವೆಂದು ತಿಳಿ! ನನ್ನ ಸಂಕಲ್ಪಾನು ಸಾರವಾಗಿಯೇ ಅವರು ನಿನಗೆ ಆ ತತ್ವವನ್ನುಪದೇಶಿಸಿರುವರು! ನನ್ನ ಅನುಗ್ರಹವಿಲ್ಲದಿದ್ದರೆ, ನಿನಗೆ ಅಂತಹ ಆಚಾರ್ಯರೂ ಲಭಿಸುತ್ತಿರಲಿಲ್ಲ. ಅವರು ಉಪದೇಶಿಸಿದ ಮಂತ್ರವಿದ್ಯೆಯಿಂದಲೂ, ನನ್ನ ಸಂದರ್ಶನದಿಂದಲೂ ನೀನು ಸಿದ್ಧಿಯನ್ನುಹೊಂದಿದೆ; ರಾಜಾ! ಆ ನಿನ್ನ ಆಚಾರ್ಯರನ್ನೂ! ನನ್ನನ್ನೂ

ಬೇರೆಯೆಂದು ಭಾವಿಸಬೇಡ! ಸಮಸ್ತಭೂತಗಳೂ ನಾನೇ ಎಂದು ತಿಳಿ. ಈ ಪ್ರಪಂಚವೆಲ್ಲವೂ ನನ್ನ ಶರೀರವು. ನನ್ನ ಶರೀರದಿಂದಲೇ ನಾನು ಈ ಪ್ರಪಂಚರೂಪವಾಗಿ ಕಾಣುವೆನು. ಆದುದರಿಂದ ಸಮಸ್ತಭೂತಗಳಿಗೂ, ನನಗೂ ಶರೀರಶರೀರಿಭಾವದಿಂದಲೂ, ಕಾರ್ಯಕಾರಣಭಾವದಿಂದಲೂ ಅಭೇದವು ಸ್ಪಷ್ಟವು. ಆದರೆ "ಆ ಮಹರ್ಷಿಗಳ ಬಾಯಿಂದ ಹೊರಟಮಾತ್ರಕ್ಕೆ, ಸಾಕ್ಷಾತ್ತಾಗಿ ನಿನ್ನ ಬಾಯಿಂದ ನಾನು ಕೇಳಿದ ಹಾಗಾಯಿತೆ" ಎಂದು ನೀನು ಸಂದೇಹಿಸಬೇಡ! ಶಬ್ದಗಳೂ, ಅದರಿಂದ ವಾಚ್ಯವಾದ ವಸ್ತುಗಳೂ, ಇವೆರಡೂ ನನ್ನ ಶರೀರವಾಗಿರುವುವು. ಆ ನಾರದಾಂಗಿರಸರಿಬ್ಬರೂ ಅರ್ಥಾತ್ಮಕವಾದ ನನ್ನ ಶರೀರದಲ್ಲಿ ಅಂತರ್ಭೂತರಾಗಿರುವಾಗ, ಅವರ ಬಾಯಿಂದ ಹೊರಟ ವಾಕ್ಯಗಳೂ ಶಬ್ದಬ್ರಹ್ಮರೂಪವಾದ ನನ್ನ ಶರೀರದಲ್ಲಿಯೇ ಅಂತರ್ಗತವೆಂಬುದನ್ನು ಕೇಳಬೇಕೆ? ಓ ರಾಜೇಂದ್ರಾ! ದೇವಾದಿಶರೀರಗಳಲ್ಲಿ ಪ್ರವೇಶಿಸಿ, ಅವುಗಳಿಗೆ ಧಾರಕನಾಗಿರುವ ಜೀವಾತ್ಮನಲ್ಲಿಯೂ, ಆ ಜೀವಾತ್ಮನಿಂದ ಧರಿಸಲ್ಪಡುವ ಶರೀರದಲ್ಲಿಯೂ, ನಾನು ಅಂತರ್ಯಾಮಿಯಾಗಿ ಪ್ರವೇಶಿಸಿ, ಅವೆರಡಕ್ಕೂ ನಾನೇ ಧಾರಕನಾಗಿರುವೆನು. ಇವೆಲ್ಲವೂ ನನ್ನ ಆಧಾರದಿಂದಲೇ ಇರುವುವು. ಮಲಗಿದವನು ಸ್ವಪ್ನಾವಸ್ಥೆಯಲ್ಲಿ ತನ್ನ ಒಂದೇ ಆತ್ಮಕ್ಕೆ ಬೇರೆಬೇರೆ ಬಗೆಯ ಶರೀರಗಳನ್ನೂ, ಅವುಗಳಿಂದ, ಒಮ್ಮೆ ಪಟ್ಟದಲ್ಲಿ ಕುಳ್ಳಿರುವುದು, ಮತ್ತೊಮ್ಮೆ ತಲೆಯನ್ನು ಕಡಿಸಿಕೊಳ್ಳುವುದು, ಇನ್ನೊಮ್ಮೆ ಆನೆಯನ್ನೇರುರುವುದು, ಮತ್ತೊಮ್ಮೆ ದೇಶಭ್ರಷ್ಟನಾಗಿ ಹೋಗುವುದು, ಇವೇ ಮೊದಲಾದ ಸುಖದುಃಖಗಳನ್ನೆಲ್ಲಾ ಕಾಣುವನು.ಆ ಮನುಷ್ಯನೇ ಎಚ್ಚರಗೊಂಡು ನೋಡಿದಾಗ, ತನ್ನ ಆತ್ಮವು ಒಂದೇಶರೀರದಲ್ಲಿ ಒಂದೇ ಸ್ಥಿತಿಯಲ್ಲಿರುವಂತೆ ತಿಳಿಯುವನು. ಈ ದೃಷ್ಟಾಂತದಿಂದ, ಸ್ವಪ್ನಾವಸ್ಥೆಯಲ್ಲಿ ಕಾಣುವ ನಾನಾಬಗೆಯ ಶರೀರಗಳೂ, ಜೀವನಿಗೆ ಅಲ್ಪಕರ್ಮಸಂಬಂಧದಿಂದ ಉಂಟಾದುದೇಹೊರತು ಸಹಜವಲ್ಲವೆಂದು ಸ್ಪಷ್ಟವಾಗುವುದು. ಹಾಗೆಯೇ ಜಾಗರಾವಸ್ಥೆಯೂಕೂಡ ಪ್ರಬಲಕರ್ಮಸಂಬಂಧವಾದುದೇಹೊರತು ಸ್ವರೂಪಪ್ರಯುಕ್ತವಾದುದಲ್ಲ. ಪ್ರಕೃತಿಗಿಂತಲೂ ವಿಲಕ್ಷಣನಾಗಿ, ಮೇಲೆ ಹೇಳಿದ ಸ್ವಪ್ನಾದ್ಯವಸ್ಥೆಗಳಿಗೆ

ಸಾಕ್ಷಿಯಾಗಿರುವವನೇ ಜೀವನೆಂದು ತಿಳಿಯಬೇಕು. ಈ ಅವಸ್ಥೆಗಳೆಲ್ಲವೂ ಪ ರಮಾತ್ಮನಾದ ನನ್ನ ಮಾಯೆಯಿಂದಲೇ ಉಂಟಾಗುವುವು. ಇನ್ನು ಈಪ್ರ ಕೃತಿಪುರುಷರಿಬ್ಬರಿಗಿಂತಲೂ ವಿಲಕ್ಷಣವಾದ ನನ್ನ ಸ್ವರೂಪವನ್ನು ತಿಳಿ ಸುವೆನು ಕೇಳು!

ನನ್ನ ಸ್ವರೂಪವು, ಎಚ್ಚರ, ಕನಸು, ಇವೆರಡನ್ನೂ ಮೀರಿದ ಸು ಷುಪ್ತಿಯಲ್ಲಿಮಾತ್ರವೇ ತಿಳಿಯುವುದು. ಸುಷುಪ್ತಿಯಲ್ಲಿರುವಾಗ ಜೀವನಿಗೆ ಮನೋವ್ಯಾಪಾರವಾಗಲಿ, ಇಂದ್ರಿಯಗಳ ವ್ಯಾಪಾರವಾಗಲಿ, ತನ್ನ ಶರೀರ ವಾಗಲಿ, ತನ್ನ ಜಾತಿ, ಕುಲ, ಗೋತ್ರಗಳಾಗಲಿ ಯಾವುದೂ ತಿಳಿಯಲಾರ ದು. ಆಗ ನಾನೆಂಬ ಭಾವನೆಯೊಂದು, ನಿಶ್ಚಿಂತವಾದ ಸುಖವೊಂದು, ಇ ವೆರಡೇ ತೋರುವುದು. ಆಗ ಯಾರೊಡನೆ ಸೇರಿ ಜೀವನು ಈ ಸುಖವನ್ನ ನುಭವಿಸುವನೋ ಅದೇ ಬ್ರಹ್ಮವೆಂದೂ, ಆ ಬ್ರಹ್ಮವೇ ನಾನೆಂದೂ ತಿಳಿ! ಜೀವನಿಗೆ ಆ ಅವಸ್ಥೆಯನ್ನು ಕಲ್ಪಿಸಿ, ಸುಖವನ್ನು ತೋರಿಸತಕ್ಕವನೂ ನಾ ನೇ! ಶರೀರವನ್ನು ಹೊತ್ತಿರುವ ಜೀವನಿಗೂ ನಾನು ಅಂತರ್ಯಾಮಿಯಾಗಿ, ಅವನನ್ನು ಧರಿಸಿರುವುದರಿಂದ, ಜೀವಪ್ರಕೃತಿಗಳೆರಡಕ್ಕೂ ನಾನೇ ಆಧಾ ರನು. ಶರೀರಭೇದದಿಂದ ಜೀವಭೇದವಿದ್ದರೂ, ಎಚ್ಚರ, ಕನಸು, ಮುಂ ತಾದ ಅವಸ್ಥಾಭೇದಗಳು ಒಂದೇ ಜೀವನಲ್ಲಿ ಕಾಣುವುವು. ಜ್ಞಾನಮಯ ವಾದ ಜೀವಸ್ವರೂಪವು ಈ ಎಲ್ಲಾ ಅವಸ್ಥೆಗಳಲ್ಲಿಯೂ ಒಂದೇವಿಧವಾ ಗಿ, ಅವಕ್ಕಿಂತಲೂ ವಿಲಕ್ಷಣವಾಗಿರುವುದು. ಈ ಜೀವಸ್ವರೂಪಕ್ಕಿಂತಲೂ ವಿಲಕ್ಷಣವಾಗಿದ್ದು, ಅದನ್ನು ಧರಿಸಿರತಕ್ಕುದೇ ಬ್ರಹ್ಮಸ್ವರೂಪವೆಂದು ತಿಳಿ! ಹೀಗೆ ಕನಸು, ಎಚ್ಚರ,ಮುಂತಾದ ಸರ್ವಾವಸ್ಥೆಗಳಲ್ಲಿಯೂ ಒಂದೇವಿಧವಾ ಗಿ ಅನುಸರಿಸಿಬಂದು, ಆ ಅವಸ್ಥೆಗಳಿಗೆ ಸಾಕ್ಷಿಯಾಗಿ ನೋಡುತ್ತಿರುವುದೂ, ನಾನೆಂಬ ಭಾವನೆಯೂ, ಜ್ಞಾನಾನಂದಮಯವಾಗಿರುವುದೂ ಜೀವನಿಗೆ ಸ ಹಜಧರ್ಮವಾಗಿರುವಂತೆ, ನನಗೆ ಶರೀರವೆನಿಸಿಕೊಂಡಿರುವುದೂ ಅವನಿಗೆಸ್ವ ರೂಪಸಿದ್ಧವು. ಈ ವಿಧವಾದ ತನ್ನ ಸ್ವರೂಪವನ್ನು ಮರೆತು, ಜೀವನು ನನ ಗಿಂತಲೂ ತನ್ನನ್ನು ಬೇರೆಯಾಗಿ ಭಾವಿಸುವವರೆಗೂ, ಅವನಿಗೆ ಜನನಮರಣ ರೂಪವಾದ ಸಂಸಾರವು ಬಿಟ್ಟುಹೋಗದು. ಎಚ್ಚರ, ಕನಸು, ಮೊದಲಾದ

ಸರ್ವಾವಸ್ಥೆಗಳಲ್ಲಿಯೂ, ಜೀವನಿಗೆ ಅಂತರ್ಯಾಮಿಯಾಗಿಯೂ, ನಿಯಾಮಕ
ನಾಗಿಯೂ, ಧಾರಕನಾಗಿಯೂ, ಸಾಕ್ಷಿಯಾಗಿಯೂ ಇದ್ದು, ಅವನಿಗೆ ಬಂ
ದು ಸೇರುವ ಸುಖದುಃಖಾದಿಗಳಿಗೆಮಾತ್ರ ಗುರಿಯಾಗದೆ, ಅವನಿಗಿಂತಲೂ
ವಿಲಕ್ಷಣವಾಗಿರುವುದೇನನ್ನ ಸ್ವರೂಪವೆಂದುತಿಳಿ!ಆದುದರಿಂದರಾಜೇಂದ್ರಾ!
ಕೇಳು! ಲೋಕದಲ್ಲಿ ಶಾಸ್ತ್ರಜ್ಞಾನವನ್ನಾಗಲಿ,ಉಪಾಸನಾರೂಪವಾದಜ್ಞಾ
ನವನ್ನಾಗಲಿ ಸಂಪಾದಿಸುವುದಕ್ಕೆ ಮನುಷ್ಯಜನ್ಮವೇ ಮೇಲಾದುದು.ಈ ಮ
ನುಷ್ಯಜನ್ಮವಿದ್ದಾಗಲೇ ಜೀವನು ಸಂಸಾರರೂಪವಾದ ಅನರ್ಥವನ್ನು ಪರಿಹ
ರಿಸಿಕೊಳ್ಳುವುದಕ್ಕೆ ಪ್ರಯತ್ನಿಸಬೇಕು. ಪಶುಪಕ್ಷ್ಯಾದಿಜನ್ಮಗಳಲ್ಲಿ ಹುಟ್ಟಿದ
ಜೀವಗಳಿಗೆ ಇದು ಸಾಧ್ಯವಲ್ಲ. ಆದುದರಿಂದ ಮನುಷ್ಯಜನ್ಮವನ್ನು ಹೊಂ
ದಿಯೂ ಈ ಅನರ್ಥವನ್ನು ತಪ್ಪಿಸಿಕೊಳ್ಳಲಾರದ ಜೀವನಿಗೆ ಎಂದಿಗೂ
ಕ್ಷೇಮವಿಲ್ಲ! ಅವನು ಯಾವಾಗಲೂ ಸಂಸಾರಕೂಪದಲ್ಲಿಯೇ ಬಿದ್ದಿರಬೇ
ಕಾಗುವುದು. ಪ್ರವೃತ್ತಿಧರ್ಮವನ್ನು ನಡೆಸುವುದರಿಂದ ತಾತ್ಕಾಲಿಕವಾದ
ಶರೀರಾಯಾಸವೂ, ಕೊನೆಗೆ ದುಃಖಪ್ರಾಪ್ತಿಯೂ ಉಂಟಾಗುವುದು! ನಿವೃ
ತ್ತಿಧರ್ಮವನ್ನು ಹಿಡಿಯುವುದರಿಂದ ನಿರ್ಭಯವಾದ ಮೋಕ್ಷವನ್ನು ಪಡೆಯ
ಬಹುದು.ಮನುಷ್ಯನು ಈ ತಾರತಮ್ಯವನ್ನು ತಿಳಿದು ಪ್ರವೃತ್ತಿಧರ್ಮವನ್ನು
ಬಿಟ್ಟುಬಿಡಬೇಕು. ಲೋಕದಲ್ಲಿ ಪ್ರತಿಯೊಬ್ಬರೂ ದುಃಖನಿವೃತ್ತಿಗಾಗಿಯೋ
ಸುಖಪ್ರಾಪ್ತಿಗಾಗಿಯೋ ಕೆಲಸಮಾಡಬೇಕಲ್ಲವೆ ? ಹೀಗಿರುವಾಗ ಪ್ರವೃ
ತ್ತಿಧರ್ಮವನ್ನು ನಡೆಸುವುದರಿಂದ, ಅವೆರಡೂ ಇಲ್ಲದೆಹೋಗುವುದುಮಾತ್ರ
ವಲ್ಲದೆ, ಸುಖವನ್ನು ದೂರಮಾಡಿ, ಮೇಲೆಮೇಲೆ ದುಃಖವನ್ನೇ ತಂದು
ಕೊಂಡಂತಾಗುವುದು. ಹೀಗೆ ಪ್ರವೃತ್ತಿಧರ್ಮದಿಂದುಂಟಾಗುವ ವಿಪರೀತಫ
ಲವನ್ನು ತಿಳಿದುಕೊಂಡು, ಜಾಗರ, ಸ್ವಪ್ನ, ಸುಷುಪ್ತಿಯೆಂಬ ಮೂರವಸ್ಥೆಗ
ಳಿಗಿಂತಲೂ ವಿಲಕ್ಷಣವಾಗಿಯೂ, ವಿಷಯಾಸಕ್ತಿಯುಳ್ಳವರಿಗೆ ತಿಳಿಯಲಸಾ
ಧ್ಯವಾಗಿಯೂ ಇರುವ ಪ್ರತ್ಯಗಾತ್ಮಸ್ವರೂಪವನ್ನು ತಿಳಿದ ಮನುಷ್ಯನು,
ಕಣ್ಣಿಂದಕಾಣತಕ್ಕವುಗಳಾಗಿಯೂ,ಕಿವಿಯಿಂದ ಕೇಳತಕ್ಕವುಗಳಾಗಿಯೂಇ
ರುವ ಎಲ್ಲಾವಿಷಯಸುಖಗಳಲ್ಲಿಯೂ ವಿರಕ್ತಿಯನ್ನು ತಂದುಕೊಂಡು,ಶಾಸ್ತ್ರ
ಜ್ಞಾನದಿಂದಲೂ, ಉಪಾಸನಾಜ್ಞಾನದಿಂದಲೂ ಸಂತುಷ್ಟನಾಗಿ, ನನ್ನಲ್ಲಿಭ

ಕ್ತಿಯನ್ನು ಬೆಳೆಸಬೇಕು. ಮನುಷ್ಯರಿಗೆ, ಪರಮಾತ್ಮನಾದ ನನಗೂ, ತಮ
ಗೂ, ಎಡೆಬಿಡದ ಸಂಬಂಧವುಂಟೆಂಬುದನ್ನು ಯೋಗನಿಪುಣವಾದ ಬುದ್ಧಿ
ಯಿಂದ ತಿಳಿಯಬೇಕಾದುದೊಂದೇ ಮುಖ್ಯವು. ಓ ಚಿತ್ರಕೇತೂ! ನೀನು ಶ್ರ
ದ್ಧೆಯಿಂದ ಕೇಳಿದ ಈ ಶಾಸ್ತ್ರಜ್ಞಾನವನ್ನೂ, ಆತ್ಮಜ್ಞಾನವನ್ನೂ ಪ್ರಮಾ
ದರಹಿತನಾಗಿ ಅನುಸಂಧಾನಮಾಡುತ್ತಿರು! ಇದರಿಂದ ನೀನು ತಪ್ಪದೆ
ಸಿದ್ಧಿಯನ್ನು ಹೊಂದುವೆ" ಎಂದನು. ಲೋಕಗುರುವಾದ ಭಗವಂತನು
ಹೀಗೆ ಚಿತ್ರಕೇತುವನ್ನು ಸಮಾಧಾನಪಡಿಸಿ, ಅವನು ನೋಡುತ್ತಿರುವ
ಹಾಗೆಯೇ ಕಣ್ಮರೆಯಾದನು. ಇಲ್ಲಿಗೆ ಹದಿನಾರನೆಯ ಅಧ್ಯಾಯವು.

---

## ಚಿತ್ರಕೇತುವಿಗೆ ಪಾರ್ವತೀದೇವಿಯ ಶಾಪವು.

ವಿದ್ಯಾಧರಶ್ರೇಷ್ಠನಾದ ಚಿತ್ರಕೇತುವು, ಭಗವಂತನು ಅಂತರ್ಧಾನ
ವನ್ನು ಹೊಂದಿದಮೇಲೆ,ಆ ದಿಕ್ಕಿಗೆ ನಮಸ್ಕರಿಸಿ, ಗಗನಸಂಚಾರಿಯಾಗಿ ಹೊ
ರಟುಹೋದನು. ಮಹಾಯೋಗಿಯೆನಿಸಿಕೊಂಡ ಆ ಚಿತ್ರಕೇತುವು, ಅಪ್ರತಿ
ಹತವಾದ ಇಂದ್ರಿಯಪಟುತ್ವವುಳ್ಳವನಾಗಿ, ತನ್ನ ಮನಸ್ಸಿಗೆ ತೋರಿದಭೋ
ಗ್ಯವಸ್ತುಗಳೆಲ್ಲವನ್ನೂ ಅನುಭವಿಸುತ್ತ, ಮಹರ್ಷಿಗಳಿಂದಲೂ, ಸಿದ್ಧಚಾರ
ಣರಿಂದಲೂ ಸ್ತುತಿಸಲ್ಪಡುವ ಮಹಾಮಹಿಮೆಯುಳ್ಳವನಾಗಿ, ಲಕ್ಷೋಪಲ
ಕ್ಷವರುಷಗಳವರೆಗೆ, ಮೇರು ಮೊದಲಾದ ಕುಲಪರ್ವತಗಳ ತಪ್ಪಲುಗಳಲ್ಲಿ
ಸಂಚರಿಸುತಿದ್ದನು. ಅನವರತವೂ ತನ್ನನ್ನು ಸುತ್ತಿಮುತ್ತಿರುವ ವಿದ್ಯಾಧರ
ಸ್ತ್ರೀಯರಿಂದ ಹರಿಕೀರ್ತನೆಗಳನ್ನು ಮಾಡಿಸುತ್ತ, ಅದನ್ನು ಕೇಳಿ ಆನಂದಿಸು
ತಿದ್ದನು. ಹೀಗೆಯೇ ಬಹುಕಾಲದವರೆಗೆ ಸುಖದಿಂದ ಕಾಲವನ್ನು ಕಳೆಯು
ತಿದ್ದು, ಒಮ್ಮೆ ತನಗೆ ಭಗವದನುಗ್ರಹದಿಂದ ಸಿಕ್ಕಿದ ವಿಮಾನವನ್ನೇರಿ,ಅಲ್ಲಲ್ಲಿ
ಸಂಚರಿಸುತ್ತಿರುವಾಗ, ಒಂದಾನೊಂದುಕಡೆಯಲ್ಲಿ ಸಿದ್ಧಚಾರಣಸಮೂಹಗ
ಳಿಂದ ಪರಿವೃತನಾದ ರುದ್ರನನ್ನುಕಂಡನು. ಆಗ ರುದ್ರನು ಅನೇಕಮಹ
ರ್ಷಿಗಳನಡುವೆ ತನ್ನ ಪತ್ನಿಯಾದ ಪಾರ್ವತಿಯನ್ನು ತೊಡೆಯಮೇಲೆ ಕುಳ್ಳಿ
ರಿಸಿಕೊಂಡು, ತನ್ನ ತೋಳಿನಿಂದ ಆಕೆಯ ಕಂಠವನ್ನಾಲಿಂಗಿಸಿ ಕುಳಿತಿದ್ದ
ನು.ಈ ಸ್ಥಿತಿಯನ್ನು ಕಂಡೊಡನೆ ಚಿತ್ರಕೇತುವು,ಆ ಪಾರ್ವತಿಯ ಕಿವಿಗೂ ಬೀ

ಳುವಂತೆ ಅಟ್ಟಹಾಸದಿಂದ ನಕ್ಕು ಗಟ್ಟಿಯಾಗಿ ಹೀಗೆಂದು ಕೂಗುವನು. “ಅಯ್ಯೋ! ಲೋಕದಲ್ಲಿ ಇಂತವರೂ ಉಂಟೆ? ಈ ರುದ್ರನಾದರೋ ಲೋಕಗುರುವೆನಿಸಿಕೊಂಡು ಇತರಪ್ರಾಣಿಗಳೆಲ್ಲಕ್ಕೂ ಧರ್ಮವನ್ನು ಬೋಧಿಸತಕ್ಕವನು. ಈ ಮಹರ್ಷಿಗಳ ಸಭೆಯಲ್ಲಿ ಅಗ್ರಾಸನವನ್ನೂ ವಹಿಸಿ ಕುಳಿತಿರುವನು. ಈಕಾಲದಲ್ಲಿಯೂ ಹೆಂಡತಿಯನ್ನು ಬಿಟ್ಟಿರಲಾರದೆ, ಈ ಮಹಾಸಭೆಯ ಮಧ್ಯದಲ್ಲಿ ಅವಳ ಕಂಠವನ್ನಪ್ಪಿ ಕುಳಿತಿರುವನಲ್ಲಾ! ಆಹಾ ! ತಲೆಯಲ್ಲಿ ಅಷ್ಟು ದೊಡ್ಡ ಜಡೆಯನ್ನು ಬೆಳೆಬಿಟ್ಟಿರುವನು! ತೀವ್ರವಾದ ತಪಸ್ಸುಗಳನ್ನು ನಡೆಸಿರುವನು. ಎಷ್ಟೋಜನಗಳಿಗೆ ಬ್ರಹ್ಮಜ್ಞಾನವನ್ನುಪದೇಶಿಸತಕ್ಕವನು! ಸತ್ಪುರುಷರಿಗೆ ತಾನೇ ಪ್ರಭುವೆನಿಸಿಕೊಂಡಿರುವನು. ಇಂತವನು ಕೇವಲಪ್ರಾಕೃತಮನುಷ್ಯನಂತೆ ನಾಚಿಕೆಯಿಲ್ಲದೆ ಈ ಮಹಾಸಭೆಯಲ್ಲಿ ಪತ್ನಿಯನ್ನಪ್ಪಿಕೊಂಡು ಕುಳಿತಿರುವನಲ್ಲಾ! ಇದಕ್ಕಿಂತಲೂ ಆಶ್ಚರ್ಯವೇನುಂಟು? ಲೋಕದಲ್ಲಿ ಪ್ರಾಯಕವಾಗಿ ಏನೂ ತಿಳಿಯದ ಮೂಢಜನರೂಕೂಡ, ರಹಸ್ಯದಲ್ಲಿಯೇ ತಮ್ಮ ಸ್ತ್ರೀಯರೊಡನೆ ಸರಸಸಲ್ಲಾಪಗಳನ್ನು ಮಾಡುವುದುಂಟು! ಮಹಾತಪಸ್ವಿಯೆನಿಸಿಕೊಂಡ ಈ ರುದ್ರನು, ದೊಡ್ಡ ಸಭೆಯನಡುವೆ ಹೆಂಡತಿಯನ್ನು ತೊಡೆಯಮೇಲೆಕುಳ್ಳಿರಿಸಿ, ಅವಳ ಕಂಠವನ್ನಪ್ಪಿಕೊಂಡಿರುವನಲ್ಲಾ! ಸ್ವಲ್ಪವಾದರೂ ನಾಚಿಕೆಯೇ ಬೇಡವೆ” ಎಂದನು. ಹೀಗೆ ತಡಬಡೆಯಿಲ್ಲದೆ ಕೂಗುತ್ತಿರುವ ಚಿತ್ರಕೇತುವಿನ ವಾಕ್ಯವನ್ನು ಕೇಳಿಯೂ, ರುದ್ರನು ಗಂಭೀರಸ್ವಭಾವವುಳ್ಳವನಾದುದರಿಂದ, ಬಾಯೆತ್ತದೆ ಸುಮ್ಮನೆ ಒಂದಾವರ್ತಿ ಮಂದಹಾಸದಿಂದ ನಕ್ಕು ಮೌನದಿಂದಿದ್ದನು. ಆತನ ಅನುಚರರಾದ ಭೂತಗಣಗಳೂ, ಇತರಸಭೆಯವರೂ, ಈ ರುದ್ರನ ಅಭಿಪ್ರಾಯವನ್ನು ತಿಳಿದು, ತಾವೂ ಕೋಪವನ್ನಡಗಿಸಿಕೊಂಡು ಬಾಯೆತ್ತದೆ ಸುಮ್ಮನಿದ್ದರು. ಆದರೆ ಪಾರ್ವತೀದೇವಿಗೆ ತಡೆಯಲಾರದ ಕೋಪವುಂಟಾಯಿತು. ಚಿತ್ರಕೇತುವು, ತನ್ನ ಪತಿಯಾದ ರುದ್ರನ ಪ್ರಭಾವವನ್ನು ತಿಳಿಯದೆ,ತಾನೇ ಜಿತೇಂದ್ರಿಯನೆಂಬ ಗರ್ವದಿಂದ ಹೇಳಿದಮಾತಿಗಾಗಿ ಅತ್ಯಾಕ್ರೋಶಗೊಂಡು, ಚಿತ್ರಕೇತುವನ್ನು ನೋಡಿ, ಆ ಸಭೆಯವರೆಲ್ಲರೂ ಕೇಳುವಂತೆ ಹೀಗೆಂದು ಹೇಳುವಳು. “ಆಹಾ! ಲೋಕದ

ಲ್ಲಿ ನಾಚಿಕೆಯಿಲ್ಲದ ನಮ್ಮಂತವರಿಗೆ ಯುಕ್ತಾಯುಕ್ತವನ್ನು ಬೋಧಿಸುವುದ ಕ್ಕಾಗಿಯೇ ಇವನು ಅವತರಿಸಿದಂತಿದೆ! ತನ್ನ ಉಪದೇಶವನ್ನು ಅತಿಕ್ರಮಿಸಿ ನಡೆದವರನ್ನು ದಂಡಿಸುವುದಕ್ಕೂ ತಾನೇ ಸಮರ್ಥನೆಂದು ತಿಳಿದಂತಿದೆ! ಆ ಹಾ! ಈದುಷ್ಟನನ್ನು ಇಲ್ಲಿಗೆ ಬಿಟ್ಟವರಾರು? ನಮ್ಮನ್ನು ದಂಡಿಸುವುದಕ್ಕಾ ಗಿಯೇ ಇಲ್ಲಿಗೆ ಬಂದನೇನು? ಈ ಸಭೆಯಲ್ಲಿ ಅನೇಕಮಹಾತ್ಮರು ನೆರೆದಿ ರುವರು. ಅವರೆಲ್ಲರೂ ನಮ್ಮನ್ನುನೋಡಿ ಬಾಯೆತ್ತದೆ ಸುಮ್ಮನಿರುವರು. ಇ ಲ್ಲಿ ಸಾಕ್ಷಾಚ್ಚತುರ್ಮುಖಬ್ರಹ್ಮನು ಕುಳಿತಿರುವನು! ಆತನ ಕುಮಾರರಾದ ಭೃಗು, ನಾರದರೇ ಮೊದಲಾದವರೆಲ್ಲರೂ ಕುಳಿತಿರುವರು! ಸನತ್ಕುಮಾರ ನಿರುವನು! ಕಪಿಲಮಹರ್ಷಿಯಿರುವನು! ಇವರಲ್ಲಿ ಒಬ್ಬರಾದರೂ ನನ್ನ ಪ ತಿಯಾದ ರುದ್ರನನ್ನು ಧರ್ಮವನ್ನತಿಕ್ರಮಿಸಿದುದಾಗಿ ನಿಷೇಧಿಸಲಿಲ್ಲ. ಅವ ರೊಬ್ಬರೂ ಧರ್ಮಾಧರ್ಮಗಳನ್ನು ತಿಳಿದವರಲ್ಲವೇನು? ಇವರೊಬ್ಬೊಬ್ಬ ರೂ ಧರ್ಮವನ್ನು ಬಲ್ಲವರಾಗಿದ್ದರೂ, ಲೋಕಗುರುವಾದ ನನ್ನ ಪತಿಯಲ್ಲಿ ಗೌ ರವವನ್ನಿಟ್ಟುಬಾಯೆತ್ತದೆ ಸುಮ್ಮನಿರುವರು.ಬ್ರಹ್ಮಾದಿಗಳೆಲ್ಲರೂ ಈ ನ ನ್ನಪತಿಯಪಾದಪದ್ಮವನ್ನು ಪೂಜಿಸುವರು. ಈತನು ಸಮಸ್ತಮಂಗಳಗಳಿಗೂ ತಾನೇ ಮಂಗಳಸ್ವರೂಪವೆನಿಸಿಕೊಂಡಿರುವನು. ಇಂತಹ ಮಹಾತ್ಮನಾದ ಈಶ್ವರನನ್ನು, ಈ ಕ್ಷತ್ರಿಯಾಧಮನು, ಇಲ್ಲಿನ ಮಹರ್ಷಿಗಳನ್ನೂ ಲಕ್ಷ್ಯಮಾ ಡದೆ ನಿಂದಿಸುತ್ತಿರುವನಲ್ಲಾ!ಈ ದುರಾತ್ಮನನ್ನು ಶಿಕ್ಷಿಸದೆ ತೀರದು! ಈತನು ಮೋಕ್ಷವನ್ನು ತನ್ನ ಹಸ್ತಗತವಾಗಿರುವಂತೆ ತಿಳಿದು ಗರ್ವಪಡುವನು. ಪರ ಮಸಾಧುಗಳಿಗೆಮಾತ್ರ ಲಭಿಸತಕ್ಕ ಭಗವಂತನ ಪಾದಾರವಿಂದವನ್ನು ಸೇ ರುವುದಕ್ಕೆ ಈ ದುರಾತ್ಮನಿಗೆ ಎಂದಿಗೂ ಯೋಗ್ಯತೆಯಿಲ್ಲ" ಎಂದು ಹೇಳಿ ಆ ಚಿತ್ರಕೇತುವಿನ ಕಡೆಗೆ ತಿರುಗಿ, "ಎಲ! ಅವಿವೇಕೀ! ನೀನು ಪಾಪಿ ಷ್ಠವಾದ ರಾಕ್ಷಸಯೋನಿಯಲ್ಲಿ ಜನಿಸು! ಅದರಿಂದಲಾದರೂ ಇನ್ನು ಮೇಲೆ ನಿನಗೆ ಇಂತಹ ಮಹಾತ್ಮರ ವಿಷಯದಲ್ಲಿ ತಿರಸ್ಕಾರಬುದ್ಧಿಯಿ ಲ್ಲದಂತಾಗಲಿ" ಎಂದಳು. ಪಾರ್ವತಿಯ ಶಾಪವಾಕ್ಯವನ್ನು ಕೇಳಿದೊಡನೆ ಚಿತ್ರಕೇತುವು, ಥಟ್ಟನೆ ವಿಮಾನದಿಂದ ಕೆಳಗಿಳಿದು, ಪಾರ್ವತಿಯ ಪಾದಗಳ ನ್ನುಹಿಡಿದು ನಮಸ್ಕರಿಸಿ,ಅವಳ ಮನ್ನಣೆಯನ್ನು ಬೇಡುವುದಕ್ಕಾಗಿ ಹೀಗೆಂದು

ಪ್ರಾರ್ಥಿಸುವನು. “ದೇವಿ! ನಿನ್ನ ಶಾಪವನ್ನು ನಾನು ಇದೋ! ಅಂಜಲಿಪೂ ರ್ವಕವಾಗಿ ಸ್ವೀಕರಿಸುವೆನು! ನಿನ್ನ ಶಾಪಕ್ಕಾಗಿ ನಾನು ದುಃಖಿಸುವವನಲ್ಲ! ನಿನ್ನಮೇಲೆ ಕೋಪಿಸುವವನೂ ಅಲ್ಲ! ಇದನ್ನು ನಿನ್ನ ಅನುಗ್ರಹವೆಂದೇ ಭಾ ವಿಸುವೆನು! ನಿಮ್ಮಂತಹ ದೇವತೆಗಳು ಭೂತವರ್ಗಗಳಲ್ಲಿ ಯಾವಾಗಲೂ ಕ ರುಣೆಯುಳ್ಳವರು! ನಿಮ್ಮಿಂದ ಪ್ರಾಣಿಗಳಿಗೆ ತೋರಿಸಲ್ಪಟ್ಟ ನಿಗ್ರಹವೂ ಅ ನುಗ್ರಹವೇ! ಅವರವರ ಪೂರ್ವಕರ್ಮಾನುಸಾರವಾಗಿ ಸುಖದುಃಖಗಳುಂ ಟಾಗುವುವು. ವಿಷ್ಣುಭಕ್ತನಾದ ನನಗೆ ಇದುವರೆಗೆ ನನ್ನ ಪ್ರಾಚೀನಕ ರ್ಮವು ಮೋಕ್ಷಪ್ರಾಪ್ತಿಗೆ ಪ್ರತಿಬಂಧಕವಾಗಿದ್ದಿತು! ಈಗ ನೀನು ಕೊಟ್ಟ ಶಾಪದಿಂದ ಆ ನನ್ನ ಕರ್ಮಶೇಷವು ಕಳೆದು, ಮೋಕ್ಷವು ಲಭಿಸುವುದರಲ್ಲಿ ಸಂದೇಹವಿಲ್ಲ. ಆದುದರಿಂದ ನಿನ್ನ ಶಾಪವನ್ನು ನಾನು ಅನುಗ್ರಹವೆಂದೇ ತಿಳಿದು ಸಂತೋಷಿಸುವೆನು! ಪ್ರಾಣಿಗಳು ಚಕ್ರದಂತೆ ತಿರುಗುತ್ತಿರುವ ಜನನಮರಣರೂಪವಾದ ಸಂಸಾರದಲ್ಲಿ ಸಿಕ್ಕಿ, ಅನಾದಿಯಾಗಿ ಬಂದ ಕ ರ್ಮವಾಸನೆಯಿಂದ ಆತ್ಮಸ್ವರೂಪವನ್ನು ತಿಳಿಯಲಾರದೆ, ಕರ್ಮಾನುಗುಣ ವಾದ ಸುಖದುಃಖಗಳನ್ನನುಭವಿಸುತ್ತಿರುವರು. ಹೀಗೆ ಅನುಭವಿಸುತ್ತಿರು ವಾಗಲೇ ಮುಂದೆಮುಂದೆ ಅದೇವಿಧವಾದ ಸುಖದುಃಖಗಳಿಗೆ ಕಾರಣ ಗಳಾದ ಕರ್ಮಗಳನ್ನೂ ನಡೆಸುವರು. ದೇಹಾಭಿಮಾನದಿಂದ ಹೀಗೆನಡೆ ಯುತ್ತಿರುವುದು, ನಿನಗೂ, ನನಗೂ, ಇತರರಿಗೂ ಸಮಾನವಾದುದೇ? ಈಗ ನಾನು ಮಾಡಿದ ಹಾಸ್ಯದಿಂದ ನಿನಗುಂಟಾದ ಕಿಂಕೃತಿಯೂ,ಕೋಪ ವೂ, ನಿನಗೂ ಪೂರ್ವಕರ್ಮಾನುಸಾರವಾಗಿ ಬಂದುದೇ ಹೊರತು ಬೇರೆಯ ಲ್ಲ. ಇದರಿಂದ ನಮ್ಮಂತೆ ನೀನೂ ದೇಹಾತ್ಮಾಭಿಮಾನವುಳ್ಳವಳೆಂಬುದು ಸ್ಪಷ್ಟವಾಗುವುದು. ಪ್ರಾಣಿಗಳು ತಮಗೆತಾವಾಗಿ ಸುಖದುಃಖಗಳನ್ನು ತಂದುಕೊಳ್ಳಲಾರವು. ಇತರರನ್ನೂ ಅದಕ್ಕೆ ಕಾರಣವೆಂದು ತಿಳಿಯಬಾರ ದು. ಇವೆಲ್ಲವೂ ಅವರವರ ಪೂರ್ವಕರ್ಮಗಳಿಂದಲೇ ಸಂಭವಿಸುವುವು. ಆ ಯಾಪ್ರಾಣಿಗಳ ಪಾಪಪುಣ್ಯಕರ್ಮಗಳನ್ನು ಪರಿಶೀಲಿಸಿ, ಭಗವಂತನು ತೋ ರಿಸತಕ್ಕ ನಿಗ್ರಹಾನುಗ್ರಹಗಳೇ ಸುಖದುಃಖಗಳನ್ನುಂಟುಮಾಡುವುವು. ಆದುದರಿಂದ ಪ್ರಾಜ್ಞನಾದವನು, ತನಗುಂಟಾದ ಸುಖದುಃಖಗಳಿಗೆ

ತನ್ನ ಕರ್ಮಗಳನ್ನೇ ಮುಖ್ಯಕಾರಣವೆಂದು ತಿಳಿಯಬೇಕು. ಸತ್ವಾದಿಗುಣ ಗಳ ಪ್ರವಾಹರೂಪವಾದ ಈ ಪ್ರಕೃತಿಮಂಡಲದಲ್ಲಿ ಸಿಕ್ಕಿದಮೇಲೆ ಶಾಪ ವಾದರೇನು ? ಅನುಗ್ರಹವಾದರೇನು?ಸ್ವರ್ಗವಾದರೇನು? ನರಕವಾದರೇನು? ಸುಖವೇನು?ದುಃಖವೇನು?ಎಲ್ಲವೂ ಒಂದೇ!ಇವುಗಳ ತಾರತಮ್ಯವನ್ನು ನಿರ್ಣ ಯಿಸಿಹೇಳುವುದು ಕಷ್ಟವು! ಏಕೆಂದರೆ,ಸ್ವರ್ಗವು ಮೊದಲು ಸುಖಕರವಾಗಿ ದ್ದರೂ ಕೊನೆಗೆ ದುಃಖವನ್ನೇ ತಂದಿಡುವುದು. ನರಕವು ದುಃಖಪ್ರಚುರವಾಗಿ ದ್ದರೂ ಅದರಿಂದ ಪಾಪಶೇಷವು ಕಳೆದು ಕೊನೆಗೆ ಸುಖಕ್ಕೂ ಕಾರಣವಾಗುವು ದು. ಆದುದರಿಂದ ಇವುಗಳ ಭೇದವನ್ನು ನಿರ್ಣಯಿಸುವುದಕ್ಕೆ ಸಾಧ್ಯವಿಲ್ಲ. ಭಗವಂತನು ತನ್ನ ಮಾಯೆಯಿಂದಲೇ ಸಮಸ್ತಭೂತಗಳನ್ನೂ ಸೃಷ್ಟಿಸು ವನು, ಹೀಗೆ ಸೃಷ್ಟಿಕಾರ್ಯವನ್ನು ನಡೆಸುತಿದ್ದರೂ, ತಾನು ಕರ್ಮಾಧೀನ ವಾದ ದೇಹವಿಲ್ಲದಂತಿರುವನು. ಆಯಾಪ್ರಾಣಿಗಳ ಕರ್ಮಾನುಗುಣವಾಗಿ ಸಂಸಾರವನ್ನೂ, ಮೋಕ್ಷವನ್ನೂ, ಸುಖವನ್ನೂ ದುಃಖವನ್ನೂ ಕಾಣಿಸುತ್ತಿ ರುವನು. ಜೀವನು ಯಾವಾಗಲೂ ಜ್ಞಾನಸ್ವರೂಪನಾಗಿ ಒಂದೇ ವಿಧವಾ ಗಿರುವನು. ಅವನು ಎಲ್ಲಾಶರೀರಗಳಲ್ಲಿಯೂ ಸಮನಾಗಿರತಕ್ಕವನು. ಅವ ನಿಗೆ ಒಬ್ಬನು ಶತ್ರುವೆಂದೂ, ಒಬ್ಬನು ಮಿತ್ರನೆಂದೂ, ಇವನು ಜ್ಞಾತಿಯೆಂ ದೂ, ಇವನು ಬಂಧುವೆಂದೂ, ಇವನು ತನ್ನವನೆಂದೂ, ಇವನು ಇತರನೆಂ ದೂ ಭೇದವೇ ಇಲ್ಲ. ಹೀಗೆ ನಿರಂಜನನಾಗಿ (ರೂಪಾಂತರವಿಲ್ಲದೆ) ಸಮ ನಾಗಿ ವರ್ತಿಸುವ ಆ ಜೀವನಿಗೆ, ರಾಗದ್ವೇಷಗಳು ಹುಟ್ಟುವುದಕ್ಕೆ ಅವ ಕಾಶವೆಲ್ಲಿ? ಜೀವನು ಸಹಜಸ್ಥಿತಿಯಲ್ಲಿ ಈ ವಿಕಾರಗಳೊಂದೂ ಇಲ್ಲದವನಾ ಗಿದ್ದರೂ, ಅನಾದಿಯಾದ ಕರ್ಮವಾಸನೆಯು ಅವನಿಗೆ ತಗುಲುಕಟ್ಟಿಬ ರುವುದು. ಅದರ ಪ್ರೇರಣೆಯಿಂದ ಕರ್ಮಗಳನ್ನು ನಡೆಸುವನು. ಮೇಲೆ ಮೇಲೆ ನಡೆಸತಕ್ಕ ಆ ಕರ್ಮಗಳೇ ಜೀವನಿಗೆ ಸುಖದುಃಖಗಳನ್ನೂ, ಹಿತಾ ಹಿತಗಳನ್ನೂ, ಬಂಧಮೋಕ್ಷಗಳನ್ನೂ, ಜನನಮರಣಗಳನ್ನೂ ಉಂಟುಮಾ ಡುವುವು. (ಮೋಕ್ಷವೆಂಬುದೂಕೂಡ ಈಶ್ವರಾನುಗ್ರಹವನ್ನು ಸಂಪಾದಿ ಸುವುದಕ್ಕೆ ತಕ್ಕ ಪುಣ್ಯಕರ್ಮವಿಶೇಷದಿಂದಲೇ ಲಭಿಸುವುದು !) ದೇವೀ! ನಾನು ಮೊದಲು ನಿನ್ನಲ್ಲಿ ನುಡಿದ ನಿಂದಾವಾಕ್ಯವನ್ನು ಕ್ಷಮಿಸಬೇಕೆಂದು

ಈಗ ಪ್ರಾರ್ಥಿಸುವೆನೇಹೊರತು, ಈಗಲೂ ನಾನು ಶಾಪವಿಮೋಚನ ಕ್ಕಾಗಿ ನಿನ್ನಲ್ಲಿ ಪ್ರಾರ್ಥಿಸತಕ್ಕವನಲ್ಲ!" ಎಂದನು. ಹೀಗೆ ಚಿತ್ರಕೇತುವು ಪಾ ರ್ವತೀಪರಮೇಶ್ವರರನ್ನು ಪ್ರಸನ್ನರನ್ನಾಗಿ ಮಾಡಿ ಅವರೆಲ್ಲರೂ ಆಶ್ಚರ್ಯ ದಿಂದ ನೋಡುತ್ತಿರುವಾಗ, ತನ್ನ ವಿಮಾನವನ್ನೇರಿ ಹೊರಟುಹೋದನು. ಆಮೇಲೆ ಇತ್ತಲಾಗಿ ಪರಮೇಶ್ವರನು, ದೇವರ್ಷಿಗಳೂ, ದೈತ್ಯರೂ, ಸಿದ್ಧ ರೂ ಪ್ರಮಥಗಣಗಳೂ ಕೇಳುತ್ತಿರುವಹಾಗೆಯೇ ಪಾರ್ವತಿಯನ್ನು ಕುರಿತು "ದೇವಿ! ಆಶ್ಚರ್ಯಚರಿತ್ರೆಯುಳ್ಳ ಆ ಶ್ರೀಮಹಾವಿಷ್ಣುವಿನ ಭಕ್ತರ ಮಹಾಮ ಹಿಮೆಯನ್ನು ನೋಡಿದೆಯಾ? ಅವರು ಅಪಕಾರಿಗಳಿಗೂ ಉಪಕಾರವನ್ನೆ ಣಿಸತಕ್ಕವರು! ಆ ಭಗವದ್ಭಕ್ತರು ಯಾರ ಕೋಪಕ್ಕೂ ಎಳ್ಳಷ್ಟಾದರೂ ಭ ಯಪಡತಕ್ಕವರಲ್ಲ. ಸ್ವರ್ಗವನ್ನಾಗಲಿ, ಮೋಕ್ಷವನ್ನಾಗಲಿ, ನರಕವನ್ನಾ ಗಲಿ, ಸಮವಾಗಿಯೇ ಭಾವಿಸತಕ್ಕವರು. ಭಗವಂತನಲ್ಲಿ ದಾಸ್ಯವೊಂದನ್ನು ಹೊರತು ಬೇರೊಂದನ್ನೂ ಅಪೇಕ್ಷಿಸತಕ್ಕವರಲ್ಲ ಯಾವ ವಿಷಯದಲ್ಲಿಯೂ ಆಸೆಯಿಲ್ಲದವರು! ಮಹಾಪ್ರಭಾವವುಳ್ಳವರು! ಈಶ್ವರನ ಲೀಲೆಯಾದ ಜ ಗತ್ಸೃಷ್ಟಿಯಿಂದಲೇ, ಜೀವಗಳಿಗೆ ದೇಹಸಂಬಂಧವುಂಟಾಗಿ, ಆ ದೇಹದ ಮೂಲಕವಾಗಿ ಸುಖದುಃಖಗಳು, ಜನನಮರಣಗಳು, ಶಾಪಾನುಗ್ರಹಗ ಳು, ಮೊದಲಾದ ದ್ವಂದ್ವಗಳೆಲ್ಲವೂ ಸಂಭವಿಸುವುವೇಹೊರತು, ಅವು ಸ್ವರೂಪಪ್ರಯುಕ್ತಗಳಾದುವಲ್ಲ. ಜ್ಞಾನವೆಂಬ ಒಂದೇ ಆಕಾರವುಳ್ಳ ಜೀ ವನಲ್ಲಿ, ದೇವಮನುಷ್ಯಾದಿಭೇದಗಳನ್ನಾಗಲಿ, ಸುಖದುಃಖಾದಿಗುಣದೋ ಷಗಳನ್ನಾಗಲಿ ವಿಕಲ್ಪಿಸುವುದು ಅವಿವೇಕದಿಂದುಂಟಾದ ಭ್ರಮವೇ ಹೊರತು ಬೇರೆಯಲ್ಲ. ಈ ವಿಧವಾದ ಭ್ರಾಂತಿಗಳೆಲ್ಲವೂ ಕನಸನ್ನು ಕಾ ಣುವವನಿಗೆ ತೋರುವ ವಿಕಾರಗಳಂತೆಯೇ ಇರುವುವು. ತತ್ವಜ್ಞಾನದಿಂದ ವೈರಾಗ್ಯವನ್ನವಲಂಬಿಸಿ, ಭಗವಂತನಲ್ಲಿ ಭಕ್ತಿಯನ್ನು ಮಾಡತಕ್ಕವರಿಗೆ ಎಂದಿಗೂ ಈ ವಿಧವಾದ ಭೇದಬುದ್ಧಿಯೇ ಹುಟ್ಟದು. ಇವೆಲ್ಲಕ್ಕೂ ಈ ಚಿತ್ರಕೇತುವೇ ತಕ್ಕ ನಿದರ್ಶನವೆಂದು ತಿಳಿ! ಎಲೆ ಪ್ರಾಣಕಾಂತೆ! ಮುಖ್ಯ ವಾಗಿ ಒಂದಂಶವನ್ನು ತಿಳಿಸುವೆನು ಕೇಳು. ನಾನು, ಈ ಚತುರ್ಮುಖನು, ಸ ನತ್ಕುಮಾರನು, ನಾರದನು, ಬ್ರಹ್ಮಪುತ್ರರಾದ ಇನ್ನೂ ಅನೇಕಮಹರ್ಷಿಗ

ಳು, ಇಂದ್ರಾದಿಗಳು, ಈ ನಾವೆಲ್ಲರೂ ಆ ಭಗವಂತನ ಅಂಶಾಂಶದಿಂದಲೇ ಹುಟ್ಟಿ, ಅವನಿಂದ ಅನುಗ್ರಹಿಸಲ್ಪಟ್ಟ ಅಲ್ಪಜ್ಞಾನವನ್ನು ಪಡೆಬದ್ದರೂ ಅವನ ವ್ಯಾಪಾರವನ್ನಾಗಲಿ, ಸ್ವರೂಪವನ್ನಾಗಲಿ ನಾವೂ ಚೆನ್ನಾಗಿ ತಿಳಿಯಲಾರೆವು ಏಕೆಂದರೆ, ನಾವೂ ಆ ಭಗವಂತನ ಮಾಯೆಯಿಂದ ಮೋಹಿತರಾಗಿ "ನಾವೇ ಪ್ರಭುಗಳೆಂಬ" ಅಭಿಮಾನವನ್ನು ವಹಿಸಿರುವೆವು ಈ ಅಹಂಭಾವದಿಂದಲೇ ನಾವೂ ಅವನನ್ನು ತಿಳಿಯಲಾರೆವು. ಆ ಭಗವಂತನಿಗೆ ಶತ್ರುವೆಂದೂ, ಮಿತ್ರನೆಂದೂ, ತನ್ನವನೆಂದೂ, ಇತರನೆಂದೂ ಭೇದಬುದ್ಧಿಯೇ ಇಲ್ಲವು. ಅವನು ಸಮಸ್ತಭೂತಗಳಲ್ಲಿಯೂ ಸಮವಾಗಿ ಸೇರಿರುವುದರಿಂದ, ಅವನಿಗೆ ಎಲ್ಲವೂ ಪ್ರಿಯವಸ್ತುಗಳೇ ! ಅಂತಹ ಭಗವಂತನಿಗೆ ಸಮದೃಷ್ಟಿಯುಳ್ಳವನೂ ಶಾಂತನೂ ಆದ ಈ ಚಿತ್ರಕೇತುವು ಕೇವಲಭಕ್ತನು. ನಾನೂ ಅವನಂತೆಯೇ ಆ ಭಗವಂತನಿಗೆ ಭಕ್ತನೇ ಹೊರತು ನನ್ನನ್ನು ಪ್ರಭುವೆಂದೆಣಿಸಬೇಡ ! ಆದುದರಿಂದ ಭಗವದ್ಭಕ್ತರಾದ ಮಹಾತ್ಮರವಿಷಯದಲ್ಲಿ ನಾವು ಗರ್ವಪಡಬಾರದು." ಎಂದನು ಇದನ್ನು ಕೇಳಿ ಪಾರ್ವತಿಯು ತನ್ನ ಮನಸ್ಸಿನಲ್ಲಿದ್ದ ಕೋಪಾಶ್ಚರ್ಯಗಳೆಲ್ಲವನ್ನೂ ಬಿಟ್ಟು, ಶಾಂತಚಿತ್ತಳಾದಳು. ಓ ಪರೀಕ್ಷಿದ್ರಾಜಾ! ಹರಿಭಕ್ತೋತ್ತಮನಾದ ಚಿತ್ರಕೇತುವು, ಪಾರ್ವತಿಯ ಶಾಪಕ್ಕೆ ಪ್ರತಿಶಾಪವನ್ನು ಕೊಡಲು ಸಮರ್ಥನಾಗಿದ್ದರೂ, ಅದನ್ನು ಶಿರಸಾವಹಿಸಿ ಪ್ರತಿಗ್ರಹಿಸಿಡನಲ್ಲವೆ! ಇದೇ ಸಾಧುಗಳ ಲಕ್ಷಣವೆಂದುತಿಳಿ! ಅದು ಹಾಗಿರಲಿ! ವೃತ್ರಾಸುರನಿಗೆ ತತ್ವಜ್ಞಾನವು ಹೇಗೆ ಹುಟ್ಟಿತೆಂದು ಕೇಳಿದೆಯಷ್ಟೆ?ತ್ವಷ್ಟನು ಹೋಮಮಾಡಿದಾಗ ಈ ಚಿತ್ರಕೇತುವೇ ದಕ್ಷಿಣಾಗ್ನಿಯಲ್ಲಿ ವೃತ್ರಾಸುರನಾಗಿ ಉದ್ಭವಿಸಿದನು. ಪೂರ್ವಜನ್ಮದಲ್ಲಿ ಅವನು ವಿಷ್ಣುಭಕ್ತೋತ್ತಮನಾಗಿದ್ದು, ಸಂಕರ್ಷಣನಿಂದ ತತ್ವೋಪದೇಶವನ್ನು ಪಡೆದಿದ್ದುದರಿಂದಲೇ, ರಾಕ್ಷಸನಾಗಿ ಹುಟ್ಟಿದಾಗಲೂ ಅಷ್ಟು ಜ್ಞಾನಿಯಾಗಿದ್ದನು. ಅವನಿಗೆ ವಿಷ್ಣುಭಕ್ತಿ ಹುಟ್ಟುವುದಕ್ಕೂ ಅದೇ ಕಾರಣವು ! ರಾಜೇಂದ್ರಾ ! ನಿನಗೆ ವೃತ್ರನ ಪೂರ್ವೋತ್ತರವೃತ್ತಾಂತಗಳೆಲ್ಲವನ್ನೂ ತಿಳಿಸಿದುದಾಯಿತು. ವಿಷ್ಣುಭಕ್ತರ ಮಹಿಮೆಯನ್ನು ಸೂಚಿಸತಕ್ಕ ಪರಿಶುದ್ಧವಾದ ಈ ಚಿತ್ರಕೇತೂಪಾಖ್ಯಾನವನ್ನು ಕಿವಿಯಿಂದ ಕೇಳಿದಮಾ

ತ್ರಕ್ಕೆ ಮನುಷ್ಯನು ಸಂಸಾರದಿಂದ ವಿಮುಕ್ತನಾಗುವನು. ಪ್ರಾತಃಕಾಲದಲ್ಲಿ ನಿಯಮನಿಷ್ಠನಾಗಿ ಭಗವಂತನನ್ನು ಸ್ಮರಿಸಿ, ಈ ಚರಿತ್ರವನ್ನು ಪಠನ ಮಾಡತಕ್ಕವನು, ಸರ್ವೋತ್ತಮವಾದ ವಿಷ್ಣುಸಾನ್ನಿಧ್ಯವನ್ನೂ ಹೊಂದುವನು. ಇದು ಹದಿನೇಳನೆಯ ಅಧ್ಯಾಯವು.

---

### { ಸವಿತೃ ಮೊದಲಾದ ದಿತಿಪುತ್ರರ ವಂಶಾನುಕ್ರಮವು ಇಂದ್ರನು ದಿತಿಯ ಗರ್ಭವನ್ನು ಖಂಡಿಸಿದುದೂ }

“ರಾಜೇಂದ್ರಾ! ಅದಿತಿಯ ಮಕ್ಕಳಲ್ಲಿ ನಾಲ್ಕನೆಯವನಾದ ತ್ವಷ್ಟೃವಿನ ಸಂತತಿಯು ಹೀಗಾಯಿತಷ್ಟೆ? ಇತರಪುತ್ರರ ಸಂತಾನಕ್ರಮವನ್ನು ತಿಳಿಸುವೆನು ಕೇಳು! ಸವಿತೃವೆಂಬವನಿಗೆ ಪೃಶ್ನಿಯೆಂಬ ಭಾರ್ಯೆಯಲ್ಲಿ ಸಾವಿತ್ರೀ ಮಂತ್ರದ ಮತ್ತು ವ್ಯಾಹೃತಿಮಂತ್ರಗಳ ಅಭಿಮಾನಿದೇವತೆಗಳೂ, ಸೋಮಯಾಗ, ಪಶುಯಾಗ, ಅಗ್ನಿಹೋತ್ರ, ಚಾತುರ್ಮಾಸ್ಯ, ಪಂಚಮಹಾಯಜ್ಞಗಳೆಂಬ ಕರ್ಮಗಳ ಅಭಿಮಾನಿದೇವತೆಗಳೂ ಹುಟ್ಟಿದರು ಭಗನ ಪತ್ನಿಯಾದ ಸಿದ್ಧಿಯೆಂಬವಳಲ್ಲಿ, ಅಂಗ, ಮಹಿಮ, ವಿಭು, ಪ್ರಭುವೆಂಬ ನಾಲ್ಕುಮಕ್ಕಳೂ ಬಹಳ ಸುಶೀಲೆಯಾಗಿಯೂ, ಅತ್ಯಂತಸುಂದರಿಯಾಗಿಯೂ ಇರುವ ಆಶಿಷೆಯೆಂಬ ಕನ್ಯೆಯೊಬ್ಬಳೂ ಹುಟ್ಟಿದರು ಧಾತೃವೆಂಬವನಿಗೆ ಕುಹು, ಸಿನೀವಾಲಿ, ರಾಕೆ, ಅನುಮತಿಯೆಂದು ನಾಲ್ವರು ಪತ್ನಿಯರಿದ್ದರು. ಈ ನಾಲ್ವರಲ್ಲಿಯೂ ಕ್ರಮವಾಗಿ, ಸಾಯಂ, ದರ್ಶ, ಪ್ರಾತಃ, ಪೂರ್ಣಿಮನೆಂಬ ನಾಲ್ವರು ಮಕ್ಕಳು ಹುಟ್ಟಿದರು. ವಿಧಾತೃವೆಂಬವನಿಗೆ ಕ್ರಿಯೆಯೆಂಬ ಭಾರ್ಯೆಯಲ್ಲಿ ಪುರೀಷ್ಯರೆಂದು ಕರೆಯಲ್ಪಡುವ ಅಗ್ನಿದೇವತೆಗಳು ಹುಟ್ಟಿದರು. ವರುಣನಿಗೆ ಚರ್ಷಣಿಯೆಂಬ ಪತ್ನಿಯಿದ್ದಳು. ಮೊದಲು ಬ್ರಹ್ಮಪುತ್ರನಾಗಿದ್ದ ಭೃಗುಮಹರ್ಷಿಯೂ, ಮತ್ತು ಹುತ್ತದಿಂದ ಹುಟ್ಟಿದ ವಾಲ್ಮೀಕಿಯೆಂಬ ಮಹಾಯೋಗಿಯೂ ಈ ವರುಣಪುತ್ರರಾಗಿ ಜನಿಸಿದರು. ಮಿತ್ರನಿಗೆ ರೇವತಿಯೆಂಬ ಭಾರ್ಯೆಯಲ್ಲಿ ಉತ್ಸರ್ಗನೆಂದೂ, ಅರಿಷ್ಟನೆಂದೂ, ಪಿಪ್ಪಲನೆಂದೂ ಮೂವರುಮಕ್ಕಳು ಹುಟ್ಟಿದರು. ಮೇಲೆ ಹೇಳಿದಂತೆ ಮಿತ್ರನಿಗೂ, ವರುಣನಿಗೂ, ಅವರವರ ಪತ್ನಿಯರಲಿ ಬೇರೆಬೇರೆಮಕ್ಕಳು ಹುಟ್ಟಿದುದಲ್ಲದೆ, ಇವರಿ

ಬ್ಬರಿಗೂ ಸೇರಿ ಅಗಸ್ತ್ಯವಸಿಷ್ಠರೆಂಬ ಬೇರೆ ಇಬ್ಬರು ಮಕ್ಕಳು ಜನಿಸಿದರು ಇದಕ್ಕಾಗಿಯೇ ಇವರಿಬ್ಬರೂ ಮಿತ್ರಾವರುಣರಿಬ್ಬರಿಗೂ ಸಮಾನಪುತ್ರರೆನಿಸಿ ಕೊಂಡರು. ಇದರ ಕಾರಣವನ್ನು ತಿಳಿಸುವೆನು ಕೇಳು. ಹಿಂದೊಮ್ಮೆ ಮಿತ್ರಾವರುಣರಿಬ್ಬರೂ ಏಕಕಾಲದಲ್ಲಿ ಊರ್ವಶಿಯನ್ನು ನೋಡಿ ಮೋಹಿಸಿದರು ಕಾಮಾತಿಶಯದಿಂದ ಅವರಿಬ್ಬರಿಗೂ ಏಕಕಾಲದಲ್ಲಿ ವೀರ್ಯಸ್ಖಲನವಾಯಿತು. ಆವೀರ್ಯವನ್ನು ಒಂದು ಗಡಿಗೆಯಲ್ಲಿ ತುಂಬಿಡಲು, ಅದರಿಂದ ಈ ಅಗಸ್ತ್ಯ ವಸಿಷ್ಠರಿಬ್ಬರೂ ಉದಿಸಿದರು.

ಅದರಿಂದಾಚೆಗೆ ಅದಿತಿಪುತ್ರನಾದ ಇಂದ್ರನು, ಶಚೀದೇವಿಯಲ್ಲಿ, ಜಯಂತ, ಋಷಭ, ಮೀಢುಷರೆಂಬ ಮೂವರು ಮಕ್ಕಳನ್ನು ಪಡೆದನು, ಈ ಇಂದ್ರನ ತಮ್ಮನೇ ಅದಿತಿಯ ಗರ್ಭದಲ್ಲಿ ವಾಮನನರೂಪದಿಂದವತರಿಸಿದ ಭಗವಂತನು! ಮಾಯಾವಾಮನನಾಗಿ ಬಂದು, ಮೂರಡಿಗಳಿಂದಲೇ ಮೂರುಲೋಕಗಳನ್ನೂ ಆಳಿದ ಮಹಾಮಹಿಮೆಯುಳ್ಳ ಈ ತ್ರಿವಿಕ್ರಮನಿಗೆ, ಕೀರ್ತಿಯೆಂಬ ಭಾರ್ಯೆಯಲ್ಲಿ ಬೃಹಚ್ಛ್ಲೋಕನೆಂಬ ಪುತ್ರನು ಜನಿಸಿದನು ಈ ಬೃಹಚ್ಛ್ಲೋಕನಿಗೆ ಸೌಭಗರೇ ಮೊದಲಾದ ಅನೇಕಪುತ್ರರು ಜನಿಸಿದರು. ರಾಜೇಂದ್ರಾ! ಶ್ರೀಮಹಾವಿಷ್ಣುವು ಅದಿತಿದೇವಿಯಲ್ಲಿ ವಾಮನರೂಪದಿಂದವತರಿಸಿ ನಡೆಸಿದ ಅದ್ಭುತಕಾರ್ಯಗಳನ್ನೂ, ಆತನ ಗುಣವೀರ್ಯಾದಿಗಳನ್ನೂ, ಆ ಅವತಾರಕಾರಣವನ್ನೂ ಮುಂದೆ ಎಂಟನೆಯ ಸ್ಕಂಧದಲ್ಲಿ ನಿನಗೆ ವಿವರಿಸಿ ತಿಳಿಸುವೆನು. ಇನ್ನು ದಿತಿವಂಶವನ್ನು ತಿಳಿಸುವೆನು ಕೇಳು. ಈ ದಿತಿವಂಶದಲ್ಲಿ ಹುಟ್ಟಿದವರೆಲ್ಲರೂ ವಿಷ್ಣುದ್ವೇಷಿಗಳೆಂದೂ, ಇವರ ವೃತ್ತಾಂತವನ್ನು ಕೇಳುವುದು ಪಾಪಹೇತುವೆಂದೂ ತಿಳಿಯಬೇಡ! ಪರಮಭಾಗವತೋತ್ತಮರಾದ ಪ್ರಹ್ಲಾದನೂ, ಬಲಿಚಕ್ರವರ್ತಿಯೂ ಈ ವಂಶದಲ್ಲಿಯೇ ಹುಟ್ಟಿದವರು! ಇವರಿಬ್ಬರ ಚರಿತ್ರಗಳಿಂದ ಆ ದೈತ್ಯಕುಲವೇ ಪವಿತ್ರವೆನಿಸಿಕೊಂಡು ಲೋಕವಿಖ್ಯಾತವಾಗಿರುವುದು. ಮೊದಲು ದಿತಿಯ ಗರ್ಭದಲ್ಲಿ ಹಿರಣ್ಯಾಕ್ಷಹಿರಣ್ಯಕಶಿಪುಗಳೆಂದು ಹೆಸರುಗೊಂಡ ಇಬ್ಬರೇ ಮಕ್ಕಳು ಜನಿಸಿದರು. ಇವರಲ್ಲಿ ಹಿರಣ್ಯಕಶಿಪುವಿನ ಹೆಂಡತಿಗೆ ಕಯಾಧುವೆಂದು ಹೆಸರು. ಇವಳು ದನುವಂಶದವಳು. ಜಂಭನೆಂಬ

ದೈತ್ಯನ ಪತ್ನಿಮಗಳು. ಇವಳಿಗೆ ಪ್ರಹ್ಲಾದನೆಂದೂ, ಅನುಹ್ಲಾದನೆಂದೂ,ಸಂಹ್ಲಾದನೆಂದೂ ಹ್ಲಾದನೆಂದೂ,ಕ್ರಮವಾಗಿ ನಾಲ್ಕುಮಂದಿಪುತ್ರರು ಜನಿಸಿದರು. ಇವರೆಲ್ಲರಿಗೂ ಕಿರಿಯವಳಾಗಿ ಸಿಂಹಿಕೆಯೆಂಬ ಕನ್ಯೆಯೊಬ್ಬಳು ಹುಟ್ಟಿದಳು. ಈ ಸಿಂಹಿಕೆಯು ವಿಪ್ರಜಿತ್ತೆಂಬ ರಾಕ್ಷಸನನ್ನು ವರಿಸಿ ರಾಹುವೆಂಬ ಮಗನನ್ನು ಪಡೆದಳು. ಈ ರಾಹುವು ಅಮೃತಮಥನಕಾಲದಲ್ಲಿ ಮೋಸದಿಂದ ದೇವತೆಗಳ ಗುಂಪಿನಲ್ಲಿ ಸೇರಿ, ಅಮೃತವನ್ನು ಕುಡಿಯುತಿದ್ದಾಗ, ಭಗವಂತನು ಇವನ ತಲೆಯನ್ನು ಚಕ್ರಾಯುಧದಿಂದ ಕತ್ತರಿಸಿಬಿಟ್ಟನು. ಕಯಾಧುವಿನ ನಾಲ್ವರು ಪುತ್ರರಲ್ಲಿ ಸಂಹ್ಲಾದನಿಗೆ ಮತಿಯೆಂಬ ಭಾರ್ಯೆಯಲ್ಲಿ ಪಂಚಜನನೂ, ಹ್ಲಾದನಿಗೆ ಧಮನಿಯೆಂಬ ಭಾರ್ಯೆಯಲ್ಲಿ ಇಲ್ವಲವಾತಾಪಿಗಳೆಂಬ ಇಬ್ಬರು ಪುತ್ರರೂ ಜನಿಸಿದರು.ಈಇಲ್ವಲ ವಾತಾಪಿಗಳೆಂಬ ಮಕ್ಕಳಿಬ್ಬರೂ ಬಹಳಮಾಯಾವಿಗಳು. ಇಲ್ವಲನು ಅಗಸ್ತ್ಯನಿಗೆ ಆತಿಥ್ಯವನ್ನು ಮಾಡುವ ನೆವದಿಂದ.ತಮ್ಮನಾದ ವಾತಾಪಿಯನ್ನು ಮೇಕೆಯನ್ನಾಗಿ ಮಾಡಿ, ಅವನ ಮಾಂಸವನ್ನು ಆಗಸ್ತ್ಯನಿಗೆಗ್ಗಡಿಸಿ, ಅವನನ್ನುಕೊಲ್ಲುವುದಕ್ಕೆ ಯತ್ನಿಸಿದನು.ಆಗಸ್ತ್ಯನು ಈ ಮೋಸವನ್ನು ತಿಳಿದು, ಆ ವಾತಾಪಿಯನ್ನು ತನ್ನ ಹೊಟ್ಟೆಯಲ್ಲಿಯೇ ಜೀರ್ಣಮಾಡಿದನು. ಅನುಹ್ಲಾದನ ಪತ್ನಿಯಾದ ಸೂರ್ಮ್ಯಯೆಂಬವಳಲ್ಲಿ, ಬಾಷ್ಕಲನೆಂದೂ,ಮಹಿಷನೆಂದೂ ಇಬ್ಬರು ಮಕ್ಕಳು ಹುಟ್ಟಿದರು. ಭಾಗವತೋತ್ತಮನಾದ ಪ್ರಹ್ಲಾದನಿಗೆ ಧುರಯೆಂಬ ಪತ್ನಿಯಲ್ಲಿ,ವಿರೋಚನನನೆಂಬ ದೈತ್ಯನು ಹುಟ್ಟಿದನು.ಆ ವಿರೋಚನನ ಮಗನೇ ಬಲಿಚಕ್ರವರ್ತಿಯು. ಆ ಬಲಿಚಕ್ರವರ್ತಿಗೆ ಅಶನೆಯೆಂಬ ಭಾರ್ಯೆಯಲ್ಲಿ ನೂರುಮಂದಿಮಕ್ಕಳು ಹುಟ್ಟಿದರು ! ರಾಜೇಂದ್ರಾ ! ಈ ಬಲಿಚಕ್ರವರ್ತಿಯ ಚರಿತ್ರವು ಬಹಳ ಪವಿತ್ರವಾದುದು. ಆ ಚರಿತ್ರವನ್ನು ಮುಂದೆ ತಿಳಿಸುವೆನು. ಬಲಿಯ ಮಕ್ಕಳಲ್ಲಿ ಬಾಣಾಸುರನೇ ಜ್ಯೇಷ್ಠಪುತ್ರನು. ಈತನು ರುದ್ರನನ್ನಾರಾಧಿಸಿ ಶಿವಗಣಗಳಲ್ಲಿ ಮೊದಲನೆಯವನೆನಿಸಿಕೊಂಡನು, ಇದಕ್ಕಾಗಿಯೇ ಈಗಲೂ ರುದ್ರನು ಆ ಬಾಣಾಸುರನ ಪಟ್ಟಣವನ್ನು ಕಾಯುತ್ತಿರುವನು. ರಾಜೇಂದ್ರಾ ! ದಿತಿಗೆ ಮರುತ್ತುಗಳೆಂಬ ಬೇರೆ ನಾಲ್ವತ್ತೊಂಬತ್ತು ಮಕ್ಕಳುಂಟು. ಅವರಿಗೆ ಸಂತತಿಯಿಲ್ಲ. ಈ ಮ

ರುತ್ತುಗಳಿಗೆ ಇಂದ್ರನು ದೇವತ್ವವನ್ನು ಕೊಟ್ಟುದರಿಂದ,ಅವರೂ ದೇವಗಣ
ಗಳಲ್ಲಿ ಸೇರಿಬಿಟ್ಟರೇಹೊರತು ದೇವಶತ್ರುಗಳೆನಿಸಿಕೊಳ್ಳಲಿಲ್ಲ" ಎಂದನು.
ಆಗ ಪರೀಕ್ಷಿದ್ರಾಜನು "ಓ ಗುರುವರ್ಯಾ! ದೇವೇಂದ್ರನು ಮರುತ್ತುಗಳಿಗೆಜ
ನ್ಮಸಿದ್ಧವಾದ ರಾಕ್ಷಸತ್ವವನ್ನು ತಪ್ಪಿಸಿ. ಅವರನ್ನು ದೇವತೆಗಳನ್ನಾಗಿ ಮಾ
ಡಿದುದೇಕೆ ? ಅವರು ಇಂದ್ರನಿಗೆ ಮಾಡಿದ ಉಪಕಾರವೇನು? ಆ ವೃ
ತ್ತಾಂತವನ್ನು ನನಗೆ ತಿಳಿಸಬೇಕು. ಈ ಚರಿತ್ರವನ್ನು ಕೇಳುವುದಕ್ಕಾಗಿ,
ಈ ಮಹರ್ಷಿಗಳೂ ಬಹಳಕುತೂಹಲಗೊಂಡಿರುವರು" ಎಂದನು, ಹೀ
ಗೆ ಪರೀಕ್ಷಿದ್ರಾಜನು ಅತ್ಯಾದರಪೂರ್ವಕವಾಗಿ ಪ್ರಶ್ನೆಮಾಡುತ್ತಿರುವುದನ್ನು
ಕೇಳಿ, ಸರ್ವಜ್ಞನಾದ ಶುಕಮಹರ್ಷಿಯು ಸಂತೋಷಪಟ್ಟು, ಹೀಗೆಂ
ದು ಹೇಳುವನು "ರಾಜೇಂದ್ರಾ ಕೇಳು ! ಶ್ರೀಮಹಾವಿಷ್ಣುವು ಇಂ
ದ್ರನ ಪಕ್ಷವನ್ನು ವಹಿಸಿ, ದಿತಿಯ ಮಕ್ಕಳಾದ ಹಿರಣ್ಯಾಕ್ಷ, ಹಿರ
ಣ್ಯಕಶಿಪುಗಳಿಬ್ಬರನ್ನೂ ವರಾಹನಾರಸಿಹ್ಮಾವತಾರಗಳಲ್ಲಿ ಸಂಹರಿಸಿದನು.
ದಿತಿಯು ಪುತ್ರಶೋಕವನ್ನು ಸಹಿಸಲಾರದೆ, ಇಂದ್ರನಮೇಲೆ ಕೋಪಾವೇಶ
ದಿಂದುರಿಯುತ್ತ ಹೀಗೆಂದು ಚಿಂತಿಸುವಳು. "ಅಯ್ಯೋ! ನೀಚನಾದ ಇಂ
ದ್ರನು, ಕೇವಲವಿಷಯಸುಖಕ್ಕಾಗಿ ಆಸೆಪಟ್ಟು, ವಿಷ್ಣುವಿನ ಸಹಾಯದಿಂದ
ನನ್ನ ಮಕ್ಕಳಿಬ್ಬರನ್ನೂ ಕೊಲ್ಲಿಸಿದನಲ್ಲವೆ? ಆತನು ಪರಮಪಾಪಿಯು ! ದು
ರಾತ್ಮನು ! ಕಠಿನಹೃದಯನು ! ಇವನನ್ನು ಕೊಂದಹೊರತು ನನಗೆ ಸುಖ
ವಾಗಿ ನಿದ್ರೆಬಾರದು ! ಯಾವ ಉಪಾಯದಿಂದ ಈತನನ್ನು ಕೊಲ್ಲಿಸಲಿ! ಆ
ದುರಾತ್ಮನು ಲೋಕಕ್ಷೇಮಕ್ಕಾಗಿಯೇ ನನ್ನ ಮಕ್ಕಳನ್ನು ಕೊಲ್ಲಿಸಿದನೆಂದು
ಕೆಲವರು ಹೇಳುವರು ಇದು ಸುಳ್ಳು ! ತಾನೇ ತ್ರೈಲೋಕ್ಯಕ್ಕೂ ಪ್ರಭು
ವಾಗಿರಬೇಕೆಂಬ ಅಭಿಮಾನದಿಂದಲೇ ಅವನು ಈ ಆಕೃತ್ಯವನ್ನು ಮಾಡಿಸಿರು
ವನು.ಅದರೇನು?ತಾನೇ ಈಶ್ವರನೆಂದು ಅಭಿಮಾನಿಸುವವನ ದೇಹವೂ ಕೊ
ನೆಗೆ ಭಸ್ಮವಾಗಿ ನಿಲ್ಲುವುದು. ಇಲ್ಲವೇ ಕ್ರಿಮಿಕೀಟಾದಿಗಳಿಗೆ ಆಹಾರವಾ
ಗುವುದು ಇಂತಹ ಅನಿತ್ಯವಾದ ಶರೀರಸುಖವನ್ನು ಬಯಸಿ, ಭೂತದ್ರೋ
ಹವನ್ನುಮಾಡುವವರು,ಕೇವಲಮೂಢರೇ ಹೊರತು ಪುರುಷಾರ್ಥವನ್ನು ತಿಳಿದ
ವರಲ್ಲ ನೀಚನಾದ ಇಂದ್ರನು,ಆ ಉದ್ದೇಶದಿಂದಲೇ ಈ ಅಕೃತ್ಯವನ್ನು ನಡೆ

ಸಿರುವನು. ಪುರುಷಾರ್ಥಗಳಲ್ಲಿ ಯಾವುದು ಮೇಲೆಂಬುದನ್ನು ತಿಳಿದಿದ್ದಪಕ್ಷದಲ್ಲಿ ಅವನು ಹೀಗೆ ಭೂತದ್ರೋಹವನ್ನು ಮಾಡುತ್ತಿದ್ದನೆ? ತನ್ನ ನೀಚವಾದ ಶರೀರವನ್ನೇ ಆತ್ಮವೆಂದು ತಿಳಿದು ಉನ್ಮಾರ್ಗದಲ್ಲಿ ಪ್ರವರ್ತಿಸುತ್ತಿರುವ ಆ ದೇವೇಂದ್ರನ ಕೊಬ್ಬನ್ನು ಮುರಿದು, ಅವನನ್ನು ಕೊಲ್ಲತಕ್ಕ ಪುತ್ರನು ನನಗೆ ಲಭಿಸುವನೇ? ಅಂತಹ ಪುತ್ರನನ್ನು ಪಡೆಯುವುದಕ್ಕೆ ನಾನು ಯಾವ ಉಪಾಯವನ್ನು ಮಾಡಲಿ" ಎಂದು ಚಿಂತಿಸುತ್ತ. ತನ್ನ ಪತಿಯಿಂದಲೇ ಈ ಅನುಗ್ರಹವನ್ನು ಪಡೆಯಬೇಕೆಂದು ನಿಶ್ಚಯಿಸಿ,ಕಶ್ಯಪನ ಬಳಿಗೆ ಬಂದಳು. ಅವನನ್ನು ನಾನಾವಿಧವಾದ ಉಪಚಾರಗಳಿಂದಲೂ, ಅನುರಾಗದಿಂದಲೂ, ವಿನಯದಿಂದಲೂ ಸಂತೋಷಪಡಿಸುತಿದ್ದಳು. ಮತ್ತು ಸ್ಥಿರಮನಸ್ಸಿನಿಂದಲೂ, ಉತ್ಕೃಷ್ಟವಾದ ಭಕ್ತಿಯಿಂದಲೂ, ಮೃದುವಾಕ್ಯದಿಂದಲೂ, ಮಂದಹಾಸದಿಂದಲೂ, ತಡೆಗಣ್ಣಿನ ನೋಟಗಳಿಂದಲೂ ಅವನ ಮನಸ್ಸನ್ನು ಆಕರ್ಷಿಸುತಿದ್ದಳು. ರಾಜೇಂದ್ರಾ! ಪುರುಷನು ಎಷ್ಟೇ ಜಿತೇಂದ್ರಿಯನಾಗಿದ್ದರೂ,ಸ್ತ್ರೀಯರಿಗೆ ಅವರನ್ನು ಮರುಳುಮಾಡತಕ್ಕ ಬುದ್ಧಿಚಾತುರ್ಯವುಂಟು. ಎಂಥವರನ್ನಾದರೂ ಮೋಹಗೊಳಿಸಿ, ಕಾಮ ಪರವಶರನ್ನಾಗಿ ಮಾಡಿ, ತಮ್ಮ ಇಷ್ಟಾನುಸಾರವಾಗಿ ಬರುವಂತೆ ಸೆಳೆದುಬಿಡುವರು. ಕಶ್ಯಪಪ್ರಜಾಪತಿಯು ಜಿತೇಂದ್ರಿಯನಾಗಿ ನಿಯಮನಿಷ್ಠೆಯಲ್ಲಿದ್ದರೂ, "ಸ್ತ್ರೀಪುರುಷರೂಪದಿಂದ ಕಾಣುವ ಸಮಸ್ತಭೂತಗಳೂ ಮೊದಲು ಒಂದಾಗಿಯೇ ಕಲೆತಿದ್ದುವೆಂದೂ,ಮುಂದೆಯೂ ಏಕಶರೀರದಂತೆ ಒಂದಾಗಿಯೇ ಕಲೆಯತಕ್ಕವುಗ"ಳೆಂದೂ, ತನ್ನ ಮನಸ್ಸಿನಲ್ಲಿ ಮೊದಲು ನಿಶ್ಚಯಿಸಿ, ಭೋಗಾಪೇಕ್ಷೆಯಿಂದ ಬಂದ ಆ ದಿತಿಯ ಕೋರಿಕೆಯಂತೆ, ಅವಳನ್ನು ತನ್ನ ಅರ್ಧದೇಹದಂತೆ ಸ್ವೀಕರಿಸಿ ಸಂಭೋಗಿಸಿದನು ರಾಜೇಂದ್ರಾ! ಹೀಗೆಯೇ ಲೋಕದಲ್ಲಿ ಸ್ತ್ರೀಯರು, ಪುರುಷರ ಬುದ್ಧಿಯನ್ನು ಅಪಹರಿಸಿಬಿಡುವರು. ಪೂಜ್ಯನಾದ ಕಶ್ಯಪನು, ದಿತಿದೇವಿಯ ರತಿಚಾತುರ್ಯಕ್ಕಾಗಿ ಬಹಳ ಸಂತೋಷಪಟ್ಟು, ಅವಳನ್ನು ಕುರಿತು, ಮಂದಹಾಸಪೂರ್ವಕವಾಗಿ ಹೀಗೆಂದು ಹೇಳುವನು. "ದೇವಿ! ನಾನು ಬಹಳ ಸಂತೋಷಪಟ್ಟೆನು. ನಿನಗೆ ಬೇಕಾದ ವರವನ್ನು ಕೇಳು!ಕೊಡುವೆನು. ಸ್ತ್ರೀಯರಿಗೆ ಪತಿಯು ಅನುಕೂಲನಾ

ಗಿ ಅನುಗ್ರಹಿಸಿದಪಕ್ಷದಲ್ಲಿ, ಅವರಿಗೆ ಇಹಲೋಕದಲ್ಲಿಯಾಗಲಿ,ಪರಲೋಕದ ಲ್ಲಿಯಾಗಲಿ ದುರ್ಲಭವಾದುದೊಂದೂ ಇಲ್ಲ. ಸ್ತ್ರೀಯರಿಗೆ ಪತಿಯೇ ಪರ ದೈವವು. ಆದರೆ "ಶ್ರಿಯಃಪತಿಯಾದ ಶ್ರೀಮನ್ನಾರಾಯಣನೇ ಸಮಸ್ತ ಲೋಕಕ್ಕೂ ಉತ್ತಮದೇವವೆನಿಸಿಕೊಂಡಿರುವಾಗ, ಪ್ರಾಕೃತಜನ್ಮವನ್ನೆತ್ತಿ ದಪತಿಯನ್ನು ದೈವವೆಂದು ನಂಬಬಹುದೆ?"ಎಂದು ನೀನು ಶಂಕಿಸಬೇಡ!ಆ ವಾಸುದೇವನೇ ಸರ್ವಾಂತರ್ಯಾಮಿಯಾಗಿ, ಎಲ್ಲರ ಹೃದಯದಲ್ಲಿಯೂ ಸಾಕ್ಷೀಭೂತನಾಗಿದ್ದು, ಅವರವರು ನಡೆಸತಕ್ಕ ಪೂಜಿತಗಳನ್ನು ಪರಿಗ್ರಹಿಸು ವನು. ಬೇರೆಬೇರೆ ನಾಮರೂಪಗಳಿಂದ ಕಾಣುತ್ತಿರುವ ಇಂದ್ರಾದಿದೇವತಾ ಸ್ವರೂಪದಿಂದಲೂ ಆತನೇ ಆರಾಧಿಸಲ್ಪಡುವನು ಪತಿರೂಪದಿಂದಿದ್ದು ಸ್ತ್ರೀಯರಿಂದ ಆರಾಧಿಸಲ್ಪಡತಕ್ಕವನೂ ಆ ಶ್ರೀಹರಿಯಲ್ಲದೆ ಬೇರೆಯಲ್ಲ. ಆದುದರಿಂದ ಈಗ ನೀನು ನನ್ನನ್ನು ಉಪಚರಿಸಿ ಸಂತೋಷಗೊಳಿಸಿದುದ ರಿಂದ,ನನ್ನಲ್ಲಿ ಅಂತರಾತ್ಮನಾದ ವಾಸುದೇವನೇ ನಿನ್ನಲ್ಲಿ ಪ್ರೀತನಾಗಿ ನಿನ್ನ ಕೋರಿಕೆಯನ್ನೀಡೇರಿಸುವನೆಂದು ತಿಳಿ! ಎಲೆ ಸುಂದರಾಂಗಿ! ಆದುದರಿಂದ ಶ್ರೇಯಸ್ಸನ್ನು ಕೋರತಕ್ಕ ಪತಿವ್ರತಾಸ್ತ್ರೀಯರು, ತಮ್ಮ ಪತಿಯನ್ನು ಪರ ದೈವವೆಂದೇ ಭಾವಿಸಿ ಪೂಜಿಸಬೇಕು. ನೀನೂ ಅದೇವಿಧವಾದ ದೃಢಭಕ್ತಿ ಯಿಂದ ನನ್ನನ್ನು ಪೂಜಿಸಿದುದಕ್ಕಾಗಿ ನಾನು ಬಹಳ ಸಂತೋಷಪಟ್ಟೆನು- ನಿನಗೆ ಬೇಕಾದ ವರವನ್ನು ಕೇಳು! ನಿನ್ನ ಕೋರಿಕೆಯು ಎಷ್ಟೇ ದುರ್ಲ ಭವಾಗಿದ್ದರೂ ಸಂಕೋಚಪಡಬೇಡ! ತಪ್ಪದೆ ನೆರವೇರಿಸುವೆನು! ಈ ಭಾ ಗ್ಯವು ಪತಿವ್ರತೆಯರಲ್ಲದ ಅಸತಿಯರಿಗೆ ಲಭಿಸಲಾರದು" ಎಂದನು. ಕಶ್ಯಪ ನ ಬಾಯಿಂದ ಪ್ರತಿಜ್ಞಾಪೂರ್ವಕವಾದ ಈ ವಾಕ್ಯವು ಹೊರಟಕೂಡಲೆ, ದಿತಿಯು ಸಂತೋಷದಿಂದ ಆತನನ್ನು ಕುರಿತು 'ನಾಥಾ! ನೀನು ನನ್ನಲ್ಲಿ ಪ್ರಸನ್ನನಾಗಿ ವರವನ್ನು ಕೊಡುವುದಾಗಿದ್ದರೆ, ಇಂದ್ರನನ್ನು ಕೊಲ್ಲತಕ್ಕ ಪುತ್ರನೊಬ್ಬನು ನನ್ನ ಗರ್ಭದಲ್ಲಿ ಜನಿಸುವಂತೆ ಅನುಗ್ರಹಿಸು! ಇಂದ್ರನು ನನ್ನ ಮಕ್ಕಳಿಬ್ಬರನ್ನೂ ಕೊಲ್ಲಿಸಿರುವದರಿಂದ, ಪುತ್ರಘಾತಿಯಾದ ಆ ಇಂ ದ್ರನಮೇಲೆ ನಾನು ಹಗೆತೀರಿಸಿಕೊಳ್ಳಬೇಕೆಂದಿರುವೆನು" ಎಂದಳು. ಪರ ಮಸಾಧುವಾದ ಕಶ್ಯಪನು, ಈ ಕ್ರೂರವಾಕ್ಯವನ್ನು ಕೇಳಿದೊಡನೆ ಬೆಜ್ಜರ

ಬಿದ್ದು, ತನ್ನಲ್ಲಿ ತಾನು ದುಃಖಿಸುತ್ತ "ಅಯ್ಯೋ! ಏನನರ್ಥವು! ನನಗೆ ನಾನೇ ದೊಡ್ಡ ಕಷ್ಟವನ್ನು ತಂದುಕೊಂಡಂತಾಯಿತು! ಇಂದ್ರಿಯಗಳಿಗೆ ವಶನಾದ ನಾನು. ಸ್ತ್ರೀರೂಪದಿಂದಿರುವ ಈ ಭಗವನ್ಮಾಯೆಗೆ ಮರುಳಾದೆನು. ಬುದ್ಧಿಗೆಟ್ಟ ನಾನು ಎಂತಹ ಪಾಪಕಾರ್ಯಕ್ಕೆ ಗುರಿಯಾದೆನು? ನಾನು ನರಕದಲ್ಲಿ ಬೀಳುವುದರಲ್ಲಿ! ಸಂದೇಹವಿಲ್ಲ. ಅಕಟಾ! ಈ ದಿತಿಯು ನನ್ನನ್ನು ಹೇಗೆ ವಂಚಿಸಿಬಿಟ್ಟಳು! ಛಿ! ಇಂದ್ರಿಯಚಾಪಲ್ಯದಿಂದ ನಿಜವಾದ ಪುರುಷಾರ್ಥವನ್ನು ಮರೆತು, ಮೋಹಪಾಶಕ್ಕೆ ಬಿದ್ದ ನನ್ನ ಜನ್ಮವನ್ನು ಸುಡಬೇಕಲ್ಲದೆ, ಇವಳನ್ನು ನಿಂದಿಸುವುದು ತಪ್ಪು! ಸ್ತ್ರೀಸ್ವಭಾವಕ್ಕೆ ತಕ್ಕಂತೆ ನಡೆಯುತ್ತಿರುವ ಇವಳನ್ನು ನಾನೇಕೆ ನಿಂದಿಸಲಿ! ಪುರುಷರನ್ನು ಮರುಳುಮಾಡುವುದೇ ಹೆಂಗಸರ ಸ್ವಭಾವವು. ಆಹಾ! ಸ್ತ್ರೀಯರ ಮುಖವು ಶರತ್ಕಾಲಚಂದ್ರನಂತೆ ಮನೋಹರವಾಗಿ, ನೋಡುವವರ ಕಣ್ಣುಗಳನ್ನ ಸೆಳೆಯುವುದು! ಅವರಬಾಯಿಂದ ಹೊರಡತಕ್ಕ ಒಂದೊಂದು ಮಾತೂ, ಅಮೃತಧಾರೆಯಂತೆ ಇಂಪಾಗಿರುವುದು! ಅವರ ಮನಸ್ಸಾದರೋ ಕತ್ತಿಯಲಗಿನಂತೆ ಕ್ರೂರವಾಗಿರುವುದು! ಇಂತಹ ಸ್ತ್ರೀಯರ ವ್ಯಾಪಾರವನ್ನು ಯಾರುತಾನೇ ನಂಬಬಹುದು. ಕೇವಲಸ್ವಾರ್ಥಪರರಾಗಿಯೇ ಇರುವ ಈ ಸ್ತ್ರೀಯರಿಗೆ, ಯಾರನ್ನುತಾನೇ ಪ್ರಿಯರೆಂದು ಹೇಳಬಹುದು! ಸಾಮಾನ್ಯವಾಗಿ ಸ್ತ್ರೀಯರು, ತಮ್ಮ ಕೋರಿಕೆಯನ್ನು ತೀರಿಸಿಕೊಳ್ಳಬೇಕಾದಾಗ, ಪತಿಯನ್ನಾಗಲಿ, ಮಗನನ್ನಾಗಲಿ, ಒಡಹುಟ್ಟಿದವನನ್ನಾಗಲಿ, ಕರುಣವಿಲ್ಲದೆ ಕೊಲ್ಲಿಸುವರು. ತಮ್ಮ ಕೈಯಿಂದ ತಾವೆಯಾದರೂ ಕೊಲ್ಲುವರು. ಅಯ್ಯೋ! ಇವಳಿಗೆ ನಾನು ಭಾಷೆಯನ್ನು ಕೊಟ್ಟು ಕೆಟ್ಟೆನಲ್ಲಾ! ಇನ್ನೇನುಮಾಡಲಿ! ನಾನು ಆಡಿದ ಮಾತು ಎಂದಿಗೂ.ಸುಳ್ಳಾಗಲಾರದು! ಇಂದ್ರನನ್ನು ಕೊಲ್ಲಿಸುವುದೂ ನನಗೆ ಸಮ್ಮತವಲ್ಲ! ಈ ಧರ್ಮಸಂಕಟಕ್ಕೆ ನಾನೇನು ಮಾಡಲಿ? ಇರಲಿ! ಇದಕ್ಕೊಂದುಪಾಯವನ್ನು ಮಾಡುವೆನು" ಎಂದು ನಿಶ್ಚಯಿಸಿ, ದಿತಿಯನ್ನು ನೋಡಿ ಕೋಪವನ್ನು ತೋರಿಸುತ್ತ ಹೀಗೆಂದು ಹೇಳುವನು. "ಎಲೆ ಸುಂದರಿ! ಮುಖ್ಯವಾಗಿ ಮೂಢನಾದ ನಾನು ನಿನ್ನಿಂದ ವಂಚಿಸಲ್ಪಟ್ಟೆನು. ಚಿಂತೆಯಿಲ್ಲ! ನಾನು ಆಡಿದ ಮಾತಿಗೆ ತಪ್ಪಲಾರೆನು. ನೀನು

ಕೋರಿದಂತೆಯೇ ಇಂದ್ರನನ್ನು ಕೊಲ್ಲತಕ್ಕ ಪುತ್ರನೊಬ್ಬನು ನಿನಗೆ ಹುಟ್ಟು ವನು ಆದರೆ ನಾನೊಂದು ವ್ರತವನ್ನು ಹೇಳುವೆನು. ಅದನ್ನುಮಾತ್ರ ನೀನು ಒಂದು ಸಂವತ್ಸರದವರೆಗೆ ಲೋಪವಿಲ್ಲದೆ ನಡೆಸುತ್ತಿರಬೇಕು. ಹಾಗೆ ನಡೆ ಸಿದರೆಮಾತ್ರವೇ ನಿನ್ನ ಕೋರಿಕೆಯು ಸಿದ್ಧಿಸುವುದು. ಹಾಗಿಲ್ಲದಪಕ್ಷದಲ್ಲಿ ನಿನಗೆ ಹುಟ್ಟತಕ್ಕ ಮಗನೂ ದೇವತೆಗಳ ಪಕ್ಷಕ್ಕೇ ಸೇರಿಬಿಡುವನು” ಎಂದ ನು ಅದಕ್ಕಾದಿತಿಯು“ನಾಥಾ! ಆ ವ್ರತವನ್ನು ನಾನು ತಪ್ಪದೆ ನಡೆಸುವೆನು. ಅದನ್ನುಪದೇಶಿಸಬೇಕು. ಆವ್ರತಕ್ಕೆ ಭಂಗವು ಬಾರದಂತೆ ಯಾವಯಾವ ಕಾರ್ಯವನ್ನು ನಡೆಸಬೇಕಾದರೂ ನಾನು ಸಿದ್ಧಳಾಗಿ ನಡೆಸುವೆನು. ಆದರೆ ನೀನೂ ಆ ವ್ರತಕ್ಕೆ ಭಂಗಕರವಾದ ಕಾರ್ಯಗಳನ್ನು ಆಜ್ಞಾಪಿಸಕೂಡದೆಂ ದು ಕೇಳಿಕೊಳ್ಳುವೆನು,”ಎಂದಳು, ಅದಕ್ಕಾಕಶ್ಯಪನು. “ಪ್ರಿಯೆ ಕೇಳು ! ಈ ಒಂದುಸಂವತ್ಸರಕಾಲದವರೆಗೆ, ಬೇರೆ ಯಾವ ಭೂತಗಳನ್ನೂ ಹಿಂಸಿಸಬಾ ರದು! ಕೋಪದಿಂದ ಮತ್ತೊಬ್ಬರನ್ನು ಶಪಿಸಬಾರದು! ಎಂತಹ ಸಂದ ರ್ಭದಲ್ಲಿಯೂ ಸುಳ್ಳಾಡಬಾರದು. ಉಗುರುಗಳನ್ನಾಗಲಿ, ಕೂದಲುಗಳನ್ನಾ ಗಲಿ ಕತ್ತರಿಸಬಾರದು ! ಅಶುದ್ಧವಸ್ತುಗಳನ್ನು ಮುಟ್ಟಬಾರದು. ನೀರಿನಲ್ಲಿಳಿದು ಸ್ನಾನಮಾಡಬಾರದು. ಎಂತಹ ಸಂದರ್ಭಗಳಲ್ಲಿಯೂ ಯಾರ ಮೇಲೆಯೂ ಕೋಪಿಸಬಾರದು ! ದುರ್ಜನರೊಡನೆ ಮಾತಾಡಬಾರದು. ಮೈಲಿಗೆಯ ಬಟ್ಟೆಯನ್ನುಡಬಾರದು!ಒಂದಾವರ್ತಿ ಮುಡಿದ ಹೂವನ್ನು ತಿರು ಗಿ ಧರಿಸಬಾರದು. ಮತ್ತೊಬ್ಬರು ತಿಂದು ಮಿಗಿಸಿದ ಎಂಜಲನ್ನಾಗಲಿ, ಕಾಳಿ,ದುರ್ಗಿ ಚಂಡಿ ಮುಂತಾದ ದೇವತೆಗಳಿಗೆ ನಿವೇದಿತವಾದ ಅನ್ನವನ್ನಾ ಗಲಿ, ಇರುವೆ, ನೊಣ ಮುಂತಾದ ಜಂತುಗಳು ಸೇರಿದ ಆಹಾರವನ್ನಾಗಲಿ, ನೀಚಜಾತಿಯವರು ಮುಟ್ಟಿದ ಆಹಾರವನ್ನಾಗಲಿ ತಿನ್ನಕೂಡದು! ಬೊಗಸೆ ಯಿಂದ ನೀರನ್ನು ಕುಡಿಯಕೂಡದು. ಎಂಜಲಾದ ಕೈಯನ್ನು ತೊಳೆಯದಿರ ಬಾರದು. ಪ್ರಾತಸ್ಸಾಯಂಕಾಲಗಳಲ್ಲಿ ತಲೆಕೂದಲನ್ನು ಬಿಡಿಸಬಾರದು! ದೇ ಹಸಂಸ್ಕಾರವಿಲ್ಲದೆ ಕ್ಷಣಮಾತ್ರವೂ ಇರಬಾರದು ! ಹೆಚ್ಚು ಮಾತುಗಳನ್ನಾ ಡಬಾರದು! ಮೈಮುಚ್ಚುವಂತೆ ಬಟ್ಟೆಯಿಲ್ಲದೆ ಬೀದಿಯಲ್ಲಿ ತಿರುಗಬಾರದು ! ಕಾಲನ್ನು ತೊಳೆಯದೆಯಾಗಲಿ,ಎಚ್ಚರತಪ್ಪಿಯಾಗಲಿ!ಒದ್ದೆಯಬಟ್ಟೆಯೊಡನೆ

ಯಾಗಲಿ,ಉತ್ತರ ಪಶ್ಚಿಮದಿಕ್ಕುಗಳಕಡೆಗೆ ತಲೆಯಿಟ್ಟಾಗಲಿ,ಮೈಮೇಲೆ ಬಟ್ಟೆ ಯಿಲ್ಲದೆಯಾಗಲಿ ಮಲಗಬಾರದು! ಸಂಧ್ಯಾಕಾಲಗಳಲ್ಲಿ ನಿದ್ರಿಸಬಾರದು. ಯಾವಾಗಲೂ ಮಡಿಬಟ್ಟೆಯನ್ನುಟ್ಟು ಶುಚಿಯಾಗಿರಬೇಕು! ಯಾವಾಗಲೂ ಅರಿಸಿನ, ಶ್ರೀಗಂಧ,ಕುಂಕುಮ ಮೊದಲಾದ ಮಂಗಳವಸ್ತುಗಳನ್ನು ಧರಿಸಿರ ಬೇಕು. ಈ ನಿಯಮಗಳೊಡನೆ ಪ್ರತಿದಿನವೂ ಪ್ರಾತಃಕಾಲದ ಭೋಜನಕ್ಕೆ ಮೊದಲು, ಗೋವುಗಳನ್ನೂ,ಬ್ರಾಹ್ಮಣರನ್ನೂ, ಲಕ್ಷ್ಮೀನಾರಾಯಣರನ್ನೂ ಆರಾಧಿಸಿ,ಪುತ್ರವತಿಯರಾದ ಮುತ್ತೈದೆಯರನ್ನು ಗಂಧ ಪುಷ್ಪ ತಾಂಬೂ ಲಾದಿಗಳಿಂದಲೂ, ಕಾಣಿಕೆಗಳಿಂದಲೂ, ಅಲಂಕಾರಗಳಿಂದಲೂ ಪೂಜಿಸಬೇ ಕು. ಹಾಗೆಯೇ ತನ್ನ ಪತಿಯನ್ನೂ ಪೂಜಿಸಿ, ಆತನನ್ನು ಹೃದಯದಲ್ಲಿಟ್ಟು ಧ್ಯಾನಿಸಬೇಕು. ಈ ಅಂಗಗಳೊಡಗೂಡಿದ ಪುಂಸವನವೆಂಬ ವ್ರತವನ್ನು ಒಂ ದುಸಂವತ್ಸರಕಾಲದವರೆಗೆ ತಪ್ಪದೆ ನೀನು ನಡೆಸುತ್ತಬಂದರೆ, ಇಂದ್ರ ಸಂಹಾರಿಯಾದ ಪುತ್ರನನ್ನು ಪಡೆಯಬಹುದು." ಎಂದನು. ದಿತಿಯು, ಆ ವ್ರತವನ್ನು ಹಾಗೆಯೇ ನಡೆಸುತ್ತಬರುವುದಾಗಿ ಸಮ್ಮತಿಸಿದಳು. ಪ ತಿಯ ಅನುಗ್ರಹದಿಂದ ಗರ್ಭವತಿಯಾಗಿ, ಅವನು ಹೇಳಿದ ಕ್ರಮದಿಂದಲೇ ದೃಢಮನಸ್ಕಳಾಗಿ ವ್ರತವನ್ನು ನಡೆಸುತ್ತಬಂದಳು. ಇಂದ್ರನಿಗೆ ಈ ವೃ ತ್ತಾಂತವು ತಿಳಿದು ಅವನ ಮನಸ್ಸಿನಲ್ಲಿ ಭಯವು ಹುಟ್ಟಿತು. ಏನಾದರೂ ಉ ಪಾಯದಿಂದ ಅವಳ ಉದ್ದೇಶವನ್ನು ಕೆಡಿಸಬೇಕೆಂದು ಯೋಚಿಸಿ, ಕಶ್ಯಪಾ ಶ್ರಮಕ್ಕೆ ಬಂದನು. ಅಲ್ಲಿ ವ್ರತನಿಷ್ಠಳಾಗಿದ್ದ ತನ್ನ ಚಿಕ್ಕತಾಯಿಯನ್ನು ನಾನಾವಿಧವಾದ ಉಪಚಾರಗಳಿಂದ ಶುಶ್ರೂಷೆಮಾಡತೊಡಗಿದನು, ಪ್ರತಿದಿನವೂ ಕಾಡಿಗೆ ಹೋಗಿ ಅವಳಿಗೆ ಬೇಕಾದ ಫಲಪುಷ್ಪಗಳನ್ನೂ, ಸಮಿತ್ತು, ದರ್ಭೆ, ಎಲೆ, ಚಿಗುರು, ಗರಿಕೆ, ಗಡ್ಡೆಗೆಣಸು, ಮೃತ್ತಿಕೆ ಮುಂ ತಾದ ಪೂಜಾಸಾಮಗ್ರಿಗಳೆಲ್ಲವನ್ನೂ ಕಾಲಕಾಲಕ್ಕೆ ತಂದೊಪಗಿಸುತಿದ್ದನು. ಬೇಟೆಗಾರರು ಕಾಡಿನಲ್ಲಿ ಮೃಗಗಳನ್ನು ಹಿಡಿಯುವುದಕ್ಕಾಗಿ, ಮೃಗರೂಪ ದಿಂದಲೇ ಹೋಗಿ ಅವುಗಳನ್ನು ವಂಚಿಸುವಂತೆ, ಇಂದ್ರನು, ದಿತಿಯ ವ್ರತವ ನ್ನು ಕೆಡಿಸಬೇಕೆಂಬ ಉದ್ದೇಶದಿಂದ, ಕಪಟಬುದ್ಧಿಯುಳ್ಳವನಾಗಿ ಅವಳನ್ನ ನುವರ್ತಿಸುತ್ತ, ಅವಳ ವ್ರತಭಂಗಕ್ಕೆ ಸಮಯವನ್ನು ಕಾಯುತಿದ್ದನು. ಬಹಳ

ದಿನಗಳವರೆಗೆ ಅವನಿಗೆ ತಕ್ಕ ಅವಕಾಶವು ಸಿಕ್ಕದೆ ಚಿಂತಿಸುತಿದ್ದಾಗ, ಕೊನೆಗೆ ಒಂದಾನೊಂದು ದಿನದಲ್ಲಿ ದಿತಿಯು, ವ್ರತಾಚರಣೆಯಿಂದ ಬಹಳವಾಗಿ ಶ್ರಮಪಟ್ಟು ಬಳಲಿದ್ದುದರಿಂದ, ನೀರನ್ನು ತಂದು ಕೈಕಾಲುತೊಳೆಯುವುದಕ್ಕೂ ಬೇಸರಿಸಿ, ಶರೀರಾಯಾಸದಿಂದ ಹಾಗೆಯೇ ಅಶುಚಿಯಾಗಿ ಸಂಧ್ಯಾಕಾಲದಲ್ಲಿ ಮಲಗಿಬಿಟ್ಟಳು. ಅಷ್ಟುದಿನಗಳವರೆಗೆ ನಿಯಮನಿಷ್ಠಳಾಗಿದ್ದ ದಿತಿಯು, ಕೊನೆಗೆ ದೈವದಿಂದ ವಂಚಿತೆಯಾಗಿ ಮೈಮರೆತು ಮಲಗಿರುವುದನ್ನು ದೇವೇಂದ್ರನು ನೋಡಿದನು.ಅವಳ ವ್ರತಭಂಗವನ್ನೇ ಕಾಯುತಿದ್ದ ದೇವೇಂದ್ರನಿಗೆ ತಕ್ಕ ಅವಕಾಶವು ಸಿಕ್ಕಿತು ಯೋಗಸಿದ್ಧಿಯಿಂದ ಪರಕಾಯ ಪ್ರವೇಶವೇ ಮೊದಲಾದ ಶಕ್ತಿಯುಳ್ಳ ಇಂದ್ರನು, ಆಗಲೇ ತನ್ನ ಯೋಗಬಲದಿಂದ ದಿತಿಯ ಗರ್ಭದೊಳಗೆ ಪ್ರವೇಶಿಸಿ, ಅಲ್ಲಿ ಬಂಗಾರದ ಗಟ್ಟಿಯಂತಿದ್ದ ಗರ್ಭಪಿಂಡವನ್ನು ತನ್ನ ವಜ್ರಾಯುಧದಿಂದ ಏಳುತುಂಡಾಗಿ ಕತ್ತರಿಸಿದನು. ತುಂಡಾಗಿಬಿದ್ದಮೇಲೆಯೂ ಆಗರ್ಭವು ಅಳುತ್ತಿರುವುದನ್ನು ನೋಡಿ“ಎಲೈ ಅಳಬೇಡ!ಅಳಬೇಡ!”“ಮಾರುದಃಮಾರುದಃ”ಎಂದುಕೂಗುತ್ತ,ತಿರುಗಿಬಂದೊಂದುತುಂಡನ್ನೂ ಏಳೇಳು ಭಾಗಗಳಾಗಿ ಕತ್ತರಿಸುತ್ತಬಂದನು.ಇಂದ್ರನು ಹೀಗೆ ‘ಮಾರುದಃ” ಎಂದು ಕೂಗುತಿದ್ದುದರಿಂದಲೇ ಅವರಿಗೆ ಮಾರುತರೆಂಬ ಹೆಸರಾಯಿತು.ಆಗ ಇಂದ್ರನಿಂದ ಕತ್ತರಿಸಲ್ಪಟ್ಟ ಆ ಖಂಡಗಳೆಲ್ಲವೂ ಕೈಕಾಲು ಮುಂತಾದ ಅವಯವಗಳನ್ನು ಹೊಂದಿ, ಪುರುಷಾಕಾರದಿಂದ ಇಂದ್ರನ ಮುಂದೆ ಕೈಜೋಡಿಸಿ ನಿಂತು “ಓಇಂದ್ರಾ! ನಾವು ನಿನ್ನ ಒಡಹುಟ್ಟಿದವರಲ್ಲವೆ? ನಮ್ಮನ್ನೇಕೆ ಕೊಲ್ಲುವೆ?” ಎಂದು ಮೊರೆಯಿಟ್ಟರು. ಆಗ ಇಂದ್ರನು ಅವರಲ್ಲಿ ಕನಿಕರಗೊಂಡು, “ಎಲೈ ಭಯಪಡಬೇಡಿರಿ! ನಿಮ್ಮನ್ನು ನಾನು ನನ್ನ ಸಹೋದರರೆಂದೇ ಭಾವಿಸುವೆನು. ಇನ್ನು ಮೇಲೆ ನೀವು ನನ್ನ ಅನುಚರರಾಗಿ, ಭಕ್ತಿಯಿಂದ ನನ್ನನ್ನು ಸೇವಿಸುತ್ತಿರಿ!” ಎಂದನು. ಓ ಪರೀಕ್ಷಿದ್ರಾಜಾ! ಹಿಂದೆ ಉತ್ತರೆಯಗರ್ಭದಲ್ಲಿ, ಅಶ್ವತ್ಥಾಮನ ಬ್ರಹ್ಮಾಸ್ತ್ರವು ನಿನ್ನನ್ನು ದಹಿಸುವುದಕ್ಕೆ ಬಂದಾಗ,ಶ್ರೀಕೃಷ್ಣನ ಕೃಪೆಯಿಂದ ನೀನು ಬದುಕಿಬಂದಂತೆ, ಈಗಲೂ ಇಂದ್ರನು ತನ್ನ ವಜ್ರಾಯುಧದಿಂದ ಅನೇಕವಿಧವಾಗಿ ಛೇದಿಸುತಿದ್ದರೂ, ದಿತಿಗರ್ಭವು ಭಗವಂತನ ಕೃಪೆಯಿಂದ ಸಾಯದೆ ಬದುಕಿ

ತೆಂದು ತಿಳಿ! ರಾಜೇಂದ್ರಾ! ಇದೇನೂ ಆಶ್ಚರ್ಯವಲ್ಲ! ಮನುಷ್ಯನು ಪರಮ ಪುರುಷನನ್ನು ಒಂದಾವರ್ತಿ ಆರಾಧಿಸಿದರೂ, ಆ ಭಗವಂತನೊಡನೆ ಸಾರೂಪ್ಯವನ್ನು ಹೊಂದುವನು. ಹೀಗಿರುವಾಗ ಸ್ವಲ್ಪ ಹೆಚ್ಚುಕಡಿಮೆಯಾಗಿ ಒಂದು ಸಂವತ್ಸರಕಾಲದವರೆಗೆ ದಿತಿಯು ಎಡೆಬಿಡದೆ ಭಗವದಾರಾಧನವನ್ನು ನಿಯಮದಿಂದ ನಡೆಸಿರುವಾಗ, ಅವಳ ಮಕ್ಕಳಿಗೆ ಹಾನಿಯಾಗುವುದುಂಟೆ ? ಆದುದರಿಂದ ಆಗ ಉಪೇಂದ್ರನಾದ ಭಗವಂತನೂ ಇಂದ್ರಸಹಿತನಾಗಿಯೇ ಗರ್ಭದಲ್ಲಿ ಪ್ರವೇಶಿಸಿ, ಇಂದ್ರನು ಭೇದಿಸಿದ ಗರ್ಭವನ್ನು ಅಪಾಯವಿಲ್ಲದೆ ರಕ್ಷಿಸಿದನಲ್ಲದೆ ಬೇರೆಯಲ್ಲ! ಈ ನಾಲ್ವತ್ತೊಂಬತ್ತು ಖಂಡಗಳೂ, ಮರುತ್ತುಗಳೆಂದು ಹೆಸರುಗೊಂಡು, ತಮಗೆ ಜನ್ಮಸಿದ್ಧವಾದ ರಾಕ್ಷಸತ್ವವನ್ನು ಬಿಟ್ಟು, ದೇವತೆಗಳಾಗಿ, ಯಜ್ಞಭಾಗಗಳನ್ನು ಹೊಂದುವುದಕ್ಕೂ ಅರ್ಹರಾಗಿ ಮಾಡಲ್ಪಟ್ಟರು. ಇಷ್ಟರಲ್ಲಿ ದಿತಿಯು ನಿದ್ರೆಯಿಂದೆಚ್ಚತ್ತು ನೋಡುವಾಗ, ಅಗ್ನಿಯಂತೆ ತೇಜಸ್ವಿಗಳಾದ ನಾಲ್ವತ್ತೊಂಬತ್ತುಮಂದಿ ದೇವಕುಮಾರರು ದೇವೇಂದ್ರನೊಡನೆ ಮುಂದೆ ನಿಂತಿದ್ದರು ಆಕೆಯು ಸುಸ್ವಭಾವವುಳ್ಳವಳಾದುದರಿಂದ, ತಟ್ಟನೆ ಕೋಪಿಸಿಕೊಳ್ಳದೆ, ಸಂತೋಷವನ್ನೇ ತೋರಿಸುತ್ತ, ಮೃದುವಾಕ್ಯದಿಂದ ಇಂದ್ರನನ್ನು ಕುರಿತು ಹೀಗೆಂದು ಹೇಳುವಳು. "ವತ್ಸ ದೇವೇಂದ್ರಾ! ನಾನು ಅದಿತಿಪುತ್ರರಾದ ನಿಮ್ಮೆಲ್ಲರಿಗೂ ಭಯವನ್ನು ಹುಟ್ಟಿಸುವಂತೆ, ಒಬ್ಬ ಕುಮಾರನನ್ನು ಪಡೆಯಬೇಕೆಂಬ ಉದ್ದೇಶದಿಂದ ದುಷ್ಕರವಾದ ಪುಂಸವನವೆಂಬ ವ್ರತವನ್ನು ನಡೆಸುತಿದ್ದೆನು. ನಾನು ಒಬ್ಬ ಪುತ್ರನನ್ನೇ ಕೋರಿದ್ದಾಗ ಈ ನಾಲ್ವತ್ತೊಂಬತ್ತುಮಂದಿ ಕುಮಾರರು ಹುಟ್ಟಿದುದೇಕೆ? ಇದರ ನಿಜಾಂಶವು ನಿನಗೆ ತಿಳಿದಿದ್ದರೆ ಸತ್ಯವನ್ನು ಹೇಳು ! ಸುಳ್ಳಾಡಬೇಡ!" ಎಂದಳು. ಅದಕ್ಕಾ ಇಂದ್ರನು ವಿನಯದಿಂದ "ಅಮ್ಮಾ! ಕೇಳು! ನಿನ್ನ ಉದ್ದೇಶವನ್ನು ತಿಳಿದೇ ನಾನೂ ಇಲ್ಲಿಗೆ ಬಂದೆನು. ನಿನಗೆ ಶುಶ್ರೂಷೆಯನ್ನು ಮಾಡುವ ನೆವದಿಂದ, ಸಮಯವನ್ನು ನಿರೀಕ್ಷಿಸುತಿದ್ದೆನು. ನೀನು ಕೈಕಾಲುಗಳನ್ನು ತೊಳೆಯದೆ ಸಂಧ್ಯಾಕಾಲದಲ್ಲಿ ಅಶುಚಿಯಾಗಿ ಮಲಗಿದ್ದುದನ್ನು ನೋಡಿದೆನು. ಇದೇ ತಕ್ಕ ಸಮಯವೆಂದು, ನಿನ್ನ ಹೊಟ್ಟೆಯಲ್ಲಿ ಪ್ರವೇಶಿಸಿ, ಅಲ್ಲಿ ಬೆಳೆಯುತಿದ್ದ ಗರ್ಭವನ್ನು ಕತ್ತರಿಸಿಬಿಟ್ಟೆನು. ನಾನು ಕೇವಲ

ಸ್ವಾರ್ಥಪರನಾಗಿ, ಧರ್ಮದಲ್ಲಿ ದೃಷ್ಟಿಯಿಡದೆ, ನಿನ್ನ ಗರ್ಭವನ್ನು ಏಳುಭಾಗ ವಾಗಿ ಕತ್ತರಿಸಿದಮೇಲೆ ಆ ಸಪ್ತಖಂಡಗಳೂ ಏಳು ಪುರುಷಾಕೃತಿಯಿಂದ ಕಾಣಿಸಿಕೊಂಡು ಅಳುವುದಕ್ಕೆ ತೊಡಗಿದುವು. ತಿರುಗಿ ನಾನು ಆ ಏಳುಮಂ ದಿಕುಮಾರರನ್ನೂ ಏಳೇಳು ತುಂಡುಗಳಾಗಿ ಖಂಡಿಸಿದೆನು. ಇದರಿಂದ ಈ ನಾಲ್ವತ್ತೊಂಬತ್ತುಮಂದಿ ಕುಮಾರರು ಜನಿಸಿದರು. ನಾನು ಎಷ್ಟೆಷ್ಟು ಕತ್ತರಿಸಿದರೂ ಇವರು ಮೃತಿಹೊಂದದೆ! ಜೀವಸಹಿತವಾಗಿಯೇ ಇದ್ದರು. ಅಮ್ಮಾ! ಈ ಆಶ್ಚರ್ಯವನ್ನು ನೋಡಿದಮೇಲೆ ನನಗೆ “ನೀನು ಭಕ್ತಿಯಿಂದ ಪರಮಪುರುಷನನ್ನಾರಾಧಿಸಿದುದರ ಫಲವೇ ಇದೆಂಬ ನಿಶ್ಚಯವು ಹುಟ್ಟಿತು. ಇವರು ನನ್ನ ವಜ್ರಪ್ರಹಾರಕ್ಕೂ ಸಾಯದೆ ಬದುಕಿದುದು ನೀನು ಮಾಡಿದ ಭಗವದಾರಾಧನದ ಫಲವಲ್ಲದೆ ಬೇರೆಯಲ್ಲ! ಲೋಕದಲ್ಲಿ ಯಾರು ಫಲಾಪೇಕ್ಷೆಯಿಲ್ಲದೆ! ಭಗವಂತನನ್ನಾರಾಧಿಸುವರೋ, ಅವರಿಗೆ ತಾವಾಗಿ ಅಪೇಕ್ಷಿಸದಿದ್ದ ಕೋರಿಕೆಗಳೂ ಕೈಗೂಡಿಬರುವುವು. ಮೋಕ್ಷವನ್ನೂ ಬಯಸದೆ ನಿಷ್ಕಾಮರಾಗಿ ಯಾರು ಭಗವಂತನನ್ನಾರಾಧಿಸುವರೋ ಅವರೇ ಪುರುಷಾರ್ಥವನ್ನು ಸಾಧಿಸುವುದರಲ್ಲಿ ನಿಪುಣರೆನಿಸಿಕೊಳ್ಳುವರು. ಆದುದರಿಂದ ನಿಷ್ಕಾಮರಾಗಿ ಭಗವಂತನನ್ನಾರಾಧಿಸು ವುದೇ ಮೇಲಾದ ಉಪಾಯವು. ಆಶ್ರಿತರಿಗೆ ತನ್ನನ್ನೇ ಕೊಡತಕ್ಕ ಪರಮದಯಾಳುವಾದ ಭಗವಂತನನ್ನಾರಾಧಿಸಿ, ಅವನು ಪ್ರಸನ್ನನಾಗಿರುವಾಗ, ವಿವೇಕಿಯಾದ ಯಾವನು ತಾನೇ ಅತ್ಯಲ್ಪವಾದ ವಿಷಯಸುಖವನ್ನು ಕೋರುವನು? ನರಕದಲ್ಲಿ ಬಿದ್ದವರಿಗೂ ಈ ಶಬ್ದಾದಿವಿಷಯಸುಖಗಳುಂಟು! ಭಗವದಾರಾಧನಕ್ಕೆ ಮುಕ್ತಿಯೇ ಪ್ರಧಾನಫಲವು. ನೀನೂ ಈಗ ಸಂತಾನರೂಪವಾದ ಫಲಾಪೇಕ್ಷೆಯಿಂದ ಭಗವಂತನನ್ನಾರಾಧಿಸಿದೆ! ಈ ನಡುವೆ ನಿನ್ನ ವ್ರತಭಂಗದಿಂದ ನಿನ್ನ ಕೋರಿಕೆಯು ಪೂರ್ಣವಾಗಿ ಕೈಗೂಡದಿದ್ದರೂ, ನಿನ್ನ ಮಕ್ಕಳು ಬದುಕಿದುದರಿಂದ ಅದರ ಫಲವನ್ನು ತೋರಿಸದೆ ಬಿಡಲಿಲ್ಲ. ನೀನು ನಿಷ್ಕಾಮಳಾಗಿ ಆ ಭಗವದಾರಾಧನ ವ್ರತವನ್ನು ನಡೆಸಿದ್ದರೆ ನಿನಗೆ ಇನ್ನೂ ಉತ್ತಮಫಲವು ಲಭಿಸುತಿತ್ತು. ಅದುಹೋಗಲಿ! ಎಲೈ ಪೂಜ್ಯಳೆ! ಈಗ ನಾನು ನಿನ್ನಲ್ಲಿಮಾಡಿದ ದುಷ್ಕೃತ್ಯಕ್ಕಾಗಿ ಮನ್ನಣೆಯನ್ನು ಬೇಡುವೆನು. ಅಜ್ಞಾತೆಯಿಂದ ಮಾಡಿದ ನನ್ನ ಅಪರಾಧ

ವನ್ನು ಕ್ಷಮಿಸಬೇಕು. ನಾನು ಕ್ರೂರಸ್ವಭಾವದಿಂದ ನಿನ್ನ ಗರ್ಭವನ್ನು ಖಂಡಿಸಿದರೂ, ಅದು ದೈವಕೃಪೆಯಿಂದ ಉಜ್ಜೀವಿತವಾಯಿತು." ಎಂದನು. ನಿಷ್ಕಪಟವಾಗಿ ಹೇಳಿದ ಇಂದ್ರನ ವಾಕ್ಯವನ್ನು ಕೇಳಿ ದಿತಿದೇವಿಯು ತಾಳ್ಮೆಯಿಂದ ಸುಮ್ಮನಿದ್ದಳು. ಆಮೇಲೆ ಇಂದ್ರನು ದಿತಿಗೆ ನಮಸ್ಕರಿಸಿ, ಆ ಮರುತ್ತುಗಳೊಡಗೂಡಿ ತನ್ನ ಪಟ್ಟಣಕ್ಕೆ ಹಿಂತಿರುಗಿದನು. ರಾಜೇಂದ್ರಾ! ಇದೇ ಸಪ್ತಮರುತ್ತುಗಳ ಜನ್ಮವೃತ್ತಾಂತವು ಇನ್ನೇನಾದರೂ ನೀನು ಕೇಳತಕ್ಕ ವಿಷಯಗಳಿದ್ದರೆ ಕೇಳು" ಎಂದನು. ಇಲ್ಲಿಗೆ ಹದಿನೆಂಟನೆಯ ಅಧ್ಯಾಯವು.

---

### { ಸ್ತ್ರೀಯರು ತಮ್ಮ ಶ್ರೇಯಸ್ಸಿಗಾಗಿ ನಡೆಸತಕ್ಕ ಪುಂಸವನವೆಂಬ ವ್ರತವು. }

ಪರೀಕ್ಷಿದ್ರಾಜನು ಶುಕಮುನಿಯನ್ನು ಕುರಿತು "ಓ ಮಹರ್ಷೀ! ದಿತಿದೇವಿಯು ಪುಂಸವನವೆಂಬ ವ್ರತವನ್ನು ನಡೆಸಿದುದಾಗಿ ಹೇಳಿದೆಯಲ್ಲವೆ? ವಿಷ್ಣುಪ್ರೀತ್ಯರ್ಥವಾಗಿ ನಡೆಸತಕ್ಕ ಆ ವ್ರತದ ನಿಯಮಗಳನ್ನೆಲ್ಲಾ ನನಗೆ ವಿವರಿಸಿ ತಿಳಿಸಬೇಕು" ಎಂದನು. ಅದಕ್ಕಾ ಶುಕಮಹರ್ಷಿಯು "ರಾಜೇಂದ್ರಾ ಕೇಳು! ಈ ವ್ರತವು ಸ್ತ್ರೀಯರಿಗೆ ವಿಧಿಸಲ್ಪಟ್ಟಿರುವುದು. ಮಾರ್ಗಶೀರ್ಷಮಾಸದ ಶುಕ್ಲಪಕ್ಷದಲ್ಲಿ, ಒಂದಾನೊಂದು ಶುಭತಿಥಿಯನ್ನು ನೋಡಿ, ಆದರಲ್ಲಿ ಸ್ತ್ರೀಯರು, ಈ ತಮ್ಮ ಪತಿಯ ಅನುಜ್ಞೆಯನ್ನು ಪಡೆದು, ಈ ವ್ರತವನ್ನಾರಂಭಿಸಬೇಕು. ಈ ವ್ರತವು ಸ್ತ್ರೀಯರಿಗೆ ಸಕಲವಿಧವಾದ ಶ್ರೇಯಸ್ಸನ್ನೂ ಕೈಗೂಡಿಸುವುದು. ಈ ವ್ರತವನ್ನಾರಂಭಿಸುವುದಕ್ಕೆ ಮೊದಲು, ಮರುತ್ತುಗಳ ಜನ್ಮವೃತ್ತಾಂತವನ್ನು ಭಕ್ತಿಯಿಂದ ಕೇಳಿ, ಬ್ರಾಹ್ಮಣರಿಂದ ಅನುಜ್ಞೆಯನ್ನು ಪಡೆದು, ಶುಭ್ರವಾಗಿ ಹಲ್ಲುಗಳನ್ನುಜ್ಜಿ, ಸ್ನಾನಮಾಡಿ ಬಂದು ಧೌತವಸ್ತ್ರಗಳನ್ನುಟ್ಟು, ಪ್ರಾತಃಕಾಲದ ಭೋಜನಕ್ಕೆ ಮೊದಲು, ಮಹಾಲ

ಕ್ಷ್ಮೀಸಮೇತನಾದ ಶ್ರೀಮನ್ನಾರಾಯಣನನ್ನು ಪೂಜಿಸಬೇಕು. ಪೂಜೆಗೆ ಮೊದಲು, ಈ ಕೆಳಗಿನ ಮಂತ್ರದಿಂದ ಸ್ತುತಿಸಿ ನಮಸ್ಕರಿಸಬೇಕು.

“ದೇವಾ! ಪರಮಪದೈಶ್ವರ್ಯವೆಂಬ ನಿತ್ಯವಿಭೂತಿಗೂ,ಇತರಪ್ರಪಂಚವೆಂಬ ಲೀಲಾವಿಭೂತಿಗೂ ನೀನೇ ಪ್ರಭುವು ನೀನು ಸಂಕಲ್ಪಮಾತ್ರದಿಂದಲೇ ಸಮಸ್ತ ಕಾರ್ಯಗಳನ್ನೂ ಸಾಧಿಸಬಲ್ಲವನು ಆದುದರಿಂದ ಪೂರ್ಣಕಾಮನಾದ ನಿನಗೆ ಅಪೇಕ್ಷಿಸಬೇಕಾದ ವಸ್ತುವೊಂದೂ ಇರುವುದಿಲ್ಲ!ಇಂತಹನಿನಗೆ ನಮಸ್ಕಾರವು. ದೇವಾ' ನಿನ್ನಲ್ಲಿ, ದಯೆ, ಐಶ್ವರ್ಯ, ತೇಜಸ್ಸು, ಮಹಿಮೆ,ಬಲ, ಸರ್ವಜ್ಞತೆ, ಸರ್ವಶಕ್ತತೆ,ಮೊದಲಾದ ಅದ್ಭುತಗುಣಗಳೆಲ್ಲವೂ ಒಂದಾಗಿ ಕಲೆತಿರುವುದರಿಂದಲೇ ನೀನು ಭಗವಂತನೆಂದೂ, ಲೋಕಪ್ರಭುವೆಂದೂ ಕೀರ್ತಿಸಲ್ಪಡುವೆ. ಓ ವಿಷ್ಣುಪತ್ನೀ! ನೀನು ಆಶ್ಚರ್ಯಶಕ್ತಿಯುಳ್ಳವಳು! ನಿನ್ನ ಸಂಬಂಧದಿಂದಲೇ ಭಗವಂತನಲ್ಲಿರುವ ಮಹಾಪುರುಷತ್ವವು ಮತ್ತಷ್ಟು ಪ್ರಕಾಶಗೊಂಡಿರುವುದು. ಪರಮಪುರುಷನ ಪ್ರಿಯಪತ್ನಿಯಾಗಿಯೂ ಸಮಸ್ತ ಭಾಗ್ಯಗಳಿಗೂ ಆಧಾರಭೂತೆಯಾಗಿಯೂ, ಇರುವ ಹೇ ಲೋಕಮಾತೇ! ನಿನಗೆ ನಮಸ್ಕಾರವು.” ಎಂಬೀ ಮಂತ್ರವನ್ನು ಹೇಳುತ್ತ ನಮಸ್ಕರಿಸಿದ ಮೇಲೆ ಕೆಳಗಿನ ಮಂತ್ರದಿಂದ ಪೂಜೆಯನ್ನು ನಡೆಸಬೇಕು.

“ಷಡ್ಗುಣಪರಿಪೂರ್ಣನಾದ ಓ ಭಗವಂತಾ! ಓ ಮಹಾಪುರುಷಾ ! ಓ ಮಹಾನುಭಾವಾ! ಓ ಲಕ್ಷ್ಮೀಕಾಂತಾ! ಇದೋ ನಿನಗೆ ನಮಸ್ಕಾರವು. ದೇವಾ! ಸಮಸ್ತಪಾರ್ಷದಗಣಗಳೊಡಗೂಡಿದ ನಿನಗೆ ಈ ಪೂಜೆಯನ್ನೊಪ್ಪಿಸುವೆನು” ಎಂಬೀ ಮಂತ್ರವನ್ನು ಹೇಳುತ್ತ, ಪ್ರತಿದಿನವೂ ಭಗವಂತನಿಗೆ ಆವಾಹನ, ಆಸನ, ಅರ್ಘ್ಯ, ಪಾದ್ಯ, ಆಚಮನೀಯ, ಸ್ನಾನ, ವಸ್ತ್ರ, ಉಪವೀತ, ಭೂಷಣಗಳು, ಗಂಧ, ಪುಷ್ಪ, ಧೂಪ, ದೀಪ, ನಿವೇದನ, ಮೊದಲಾದ ಷೋಡಶೋಪಚಾರಗಳನ್ನೂ ಭಕ್ತಿಯಿಂದ ಸಮರ್ಪಿಸಬೇಕು. ಆಮೇಲೆ ಭಗವಂತನಿಗೆ ನಿವೇದನಮಾಡಿದ್ದ ಹವಿಸ್ಸನ್ನು, ಅಗ್ನಿಯಲ್ಲಿ ಕೆಳಗಿನ ಮಂತ್ರದಿಂದ ಹನ್ನೆರಡಾವರ್ತಿ ಹೋಮಮಾಡಬೇಕು. “ಓಂ ನಮೋಭಗ

ವತೇ ಮಹಾಪುರುಷಾಯ ಮಹಾವಿಭೂತಯೇ ಸ್ವಾಹಾ" ಎಂಬುದೇ ಹೋಮಮಂತ್ರವು. ಒಂದೊಂದಾವೃತ್ತಿಯೂ ಅಗ್ನಿಯಲ್ಲಿ ಹವಿಸ್ಸನ್ನು ಬಿಡುವಾಗ ಈ ಮಂತ್ರವನ್ನು ಹೇಳುತ್ತಿರಬೇಕು.

ರಾಜೇಂದ್ರಾ! ಸಮಸ್ತಸಂಪತ್ತುಗಳನ್ನೂ ಪಡೆಯಬೇಕೆಂಬ ಅಪೇಕ್ಷೆಯುಳ್ಳವರು, ಈ ವಿಧವಾಗಿ,ಸರ್ವಾಭೀಷ್ಟಪ್ರದರಾದ ಲಕ್ಷ್ಮೀನಾರಾಯಣರಿಬ್ಬರನ್ನೂ ಶ್ರದ್ಧೆಯಿಂದ ನಿತ್ಯವೂ ಪೂಜಿಸಬೇಕು. ಪೂಜೆಯು ಮುಗಿದಮೇಲೆ ಭಕ್ತಿಯಿಂದ ದಂಡಪ್ರಣಾಮವನ್ನು ಮಾಡಿ, ತಲೆಬಗ್ಗಿನಿಂತು,ಹಿಂದೆ ಹೇಳಿದ ನಮಸ್ಕಾರಮಂತ್ರವನ್ನು ತಿರುಗಿ ಹತ್ತಾವರ್ತಿ ಜಪಿಸಿ,ಆಮೇಲೆಮುಂದೆ! ಹೇಳುವಂತೆ ಸ್ತೋತ್ರಮಾಡಬೇಕು. ಹೇ ಮಹಾಲಕ್ಷ್ಮೀ! ಹೇ ನಾರಾಯಣಾ! ನೀವಿಬ್ಬರೂ ಪ್ರಪಂಚಕ್ಕೆಲ್ಲಾ ಪ್ರಭುಗಳು! ನೀವಿಬ್ಬರೇ ಈ ಜಗತ್ತಿಗೆಪ್ರಧಾನಕಾರಣರು! ಹೇಗೆಂದರೆ! ಈ ಲಕ್ಷ್ಮಿಯೇ ಪ್ರಕೃತಿಯು! ಈ ಪ್ರಕೃತಿಯೇ ಕಾರಣಾವಸ್ಥೆಯಲ್ಲಿ,ಅತ್ಯಂತಸೂಕ್ಷ್ಮಸ್ವರೂಪಿಣಿಯಾಗಿ,ಆಶ್ಚರ್ಯಶಕ್ತಿಯಿಂದ ನಿನ್ನ ಸೃಷ್ಟಿಕಾರ್ಯಕ್ಕೆ ಸಹಾಯಕಳಾಗಿರುವಳು. ನಿನ್ನ ಭಕ್ತರಲ್ಲದವರನ್ನು ತನ್ನಲ್ಲಿ ನಿರ್ಬಂಧಿಸಿಡುವಳು. ಈ ಪ್ರಕೃತಿಯನ್ನು ನಿಯಮಿಸಬಲ್ಲ ಪ್ರಭುವು ನೀನೊಬ್ಬನೇ! ಆದುದರಿಂದಲೇ ನೀನು ಪುರುಷೋತ್ತಮನೆನಿಸಿಕೊಂಡಿರುವೆ! ಓ ನಾರಾಯಣಾ! ನೀನು ಯಜ್ಞಸ್ವರೂಪನು. ಈ ಲಕ್ಷ್ಮಿಯೇ ಯಜ್ಞಗಳಿಗೆ ಅಂಗಭೂತವಾದ ಇಷ್ಟಿ! ಈಕೆಯು ಯಾಗಕ್ರಿಯೆ! ಆ ಯಾಗಫಲವನ್ನು ಅನುಭವಿಸತಕ್ಕವನು ನೀನು! ಸಮಸ್ತವಸ್ತುಗಳಲ್ಲಿಯೂ ತೋರುವ ಗುಣವ್ಯಕ್ತಿಯೇ ಈ ಮಹಾಲಕ್ಷ್ಮಿಯು. ಆ ಗುಣಗಳನ್ನು ಪ್ರಕಾಶಗೊಳಿಸತಕ್ಕವನೂ ಅವುಗಳ ಫಲವನ್ನನುಭವಿಸತಕ್ಕವನೂ ನೀನೆ! ಈಕೆಯೇ ಭುಕ್ತಿ! ನೀನು ಭೋಕ್ತನು. ನೀನು ಸಮಸ್ತಜೀವಗಳನ್ನೂ ಶರೀರವಾಗಿ ಉಳ್ಳವನು. ಈಕೆಯು ಸರ್ವೇಂದ್ರಿಯಗಳಿಗೂ ಆಧಾರಭೂತೆಯು. ಈ ಲಕ್ಷ್ಮಿಯೇ ಸಮಸ್ತಪ್ರಪಂಚದ ನಾಮರೂಪಗಳು. ಅವುಗಳನ್ನು ನಿರ್ವಹಿಸತಕ್ಕವನು. ನೀನು. ಆದುದರಿಂದ ತ್ರೈಲೋಕ್ಯವೂ ನಿಮ್ಮಿಬ್ಬರ ಅಧೀನವು. ನೀವಿಬ್ಬರೇ ಮೂರುಲೋಕಗಳಿಗೂ ಅಭೀಷ್ಟಗಳನ್ನು ಕೊಡತಕ್ಕವರು. ನೀವಿಬ್ಬರೇ ಸ.

ಮಸ್ತಲೋಕಕ್ಕೂ ಮೇಲೆನಿಸಿದವರು. ನೀವಿಬ್ಬರೇ ಲೋಕನಿರ್ವಾಹಕರೆಂಬುದು ಸತ್ಯವಾಗಿರುವಂತೆ,ನನ್ನ ಪ್ರಾರ್ಥನೆಗಳೂ ನಿಮ್ಮಲ್ಲಿವಿಫಲವಾಗದಿರಲಿ” ಎಂಬೀ ವಾಕ್ಯಗಳಿಂದ ಲಕ್ಷ್ಮೀಸಮೇತನಾದ ನಾರಾಯಣನನ್ನು ಸ್ತುತಿಸಬೇಕು ಆಮೇಲೆ ಅಲ್ಲಿದ್ದ ಪೂಜಾಸಾಮಗ್ರಿಗಳೆಲ್ಲವನ್ನೂ ಬೇರೆಕಡೆಗೆ ಸಾಗಿಸಿ, ಭಗವಂತನಿಗೆ ತಿರುಗಿ ಆಚಮನವನ್ನು ಸಮರ್ಪಿಸಿ, ಹಿಂದಿನಂತೆಯೇ ತಿರುಗಿ ಸ್ತೋತ್ರಮಾಡಬೇಕು. ಭಕ್ತಿಯಿಂದ ಆ ಯಾಗಶೇಷವನ್ನಾಘ್ರಾಣಿಸಿ, ತಿರುಗಿ ಭಗವಂತನಿಗೆ ಉತ್ತರಪೂಜೆಯನ್ನು ಸಮರ್ಪಿಸಬೇಕು ಆಮೇಲೆ ಭಕ್ತಿಯಿಂದ ತನ್ನಪತಿಯ ಬಳಿಗೆಬಂದು. ಆತನನ್ನೇ ಪರಮಪುರುಷಸ್ವರೂಪದಿಂದ ಭಾವಿಸಿ, ಅವನಿಗೆ ಇಷ್ಟವಸ್ತುಗಳೆಲ್ಲವನ್ನೂ ಅರ್ಪಿಸಿ ಪೂಜಿಸಬೇಕು. ಪತಿಯಾದವನೂಕೂಡ, ಪತ್ನಿಯು ಮಾಡತಕ್ಕ ಉಪಚಾರಗಳಿಗೆ ಸಂತೋಷಿಸಿ, ಆಕೆಯು ನಡೆಸತಕ್ಕ ಕಾರ್ಯಗಳು ಅಲ್ಪವಾಗಲಿ,ಮಹತ್ತಾಗಲಿ, ಆ ಎಲ್ಲಾಕಾರ್ಯಗಳಲ್ಲಿಯೂ ಅವಳಿಗೆ ಅನುಕೂಲನಾಗಿದ್ದು, ಪ್ರೇಮದಿಂದ ಅದನ್ನು ನಿರ್ವಹಿಸಬೇಕು. ಹೀಗೆ ದಂಪತಿಗಳುಕಾರ್ಯನಿರ್ವಾಹದಲ್ಲಿ ಒಬ್ಬರಿಗೊಬ್ಬರು ಅನುಕೂಲರಾಗಿದ್ದಪಕ್ಷದಲ್ಲಿ, ಅವರಲ್ಲಿ ಒಬ್ಬರು ನಡೆಸತಕ್ಕ ಕಾರ್ಯಕ್ಕೆ ಇಬ್ಬರೂ ಫಲಭಾಗಿಗಳಾಗುವರು. ಈವ್ರತವನ್ನಾರಂಭಿಸಿದಮೇಲೆ ಸ್ತ್ರೀಯು, ಕೆಲವು ದಿನಗಳವರೆಗೆ ನಡೆಸಿ, ನಡುವೆ ಆಕಸ್ಮಿಕವಾದ ಅನಿವಾರ್ಯಗಳಿಂದ ಅಶಕ್ತಳಾದಪಕ್ಷದಲ್ಲಿ, ಪತಿಯು ಆ ಕಾರ್ಯಭಾರವನ್ನು ವಹಿಸಿ ಕೊನೆಗಾಣಿಸಬೇಕೇಹೊರತು ಮಧ್ಯಕಾಲದಲ್ಲಿ ಅದನ್ನು ಬಿಟ್ಟುಬಿಡಬಾರದು. ಈ ವ್ರತವನ್ನು ನಡೆಸುವಾಗ ಪ್ರತಿದಿನವೂ, ಬ್ರಾಹ್ಮಣರನ್ನೂ, ಪುತ್ರವತಿಯರಾದ ಮುತ್ತೈದೆಯರನ್ನೂ, ಗಂಧಪುಷ್ಪತಾಂಬೂಲಗಳಿಂದಲೂ, ಅಲಂಕಾರಗಳಿಂದಲೂ, ಕಾಣಿಕೆಗಳಿಂದಲೂ ಶ್ರದ್ಧೆಯಿಂದ ಪೂಜಿಸಿ ಸಂತೋಷಗೊಳಿಸಬೇಕು. ಪೂಜಾಕಾರ್ಯವು ಮುಗಿದಮೇಲೆ ಭಗವಂತನನ್ನು ಮೊದಲಿದ್ದ ಸ್ಥಾನದಲ್ಲಿಯಾಗಲಿ, ಹೃದಯದಲ್ಲಿಯಾಗಲಿ ಉದ್ವಾಸನಮಾಡಿ, ಭಗವಂತನಿಗೆ ನಿವೇದಿತವಾದ ಹವಿಸ್ಸನ್ನು, ಆತ್ಮಶುದ್ಧಿಗಾಗಿಯೂ, ತನ್ನ ಇಷ್ಟಪ್ರಾಪ್ತಿಗಾಗಿಯೂ ಭಕ್ತಿಯಿಂದ ಭುಜಿಸಬೇಕು. ಮೇಲೆ ಹೇಳಿದ ನಿಯಮದಿಂದ ಒಂದುವರ್ಷಕಾಲದವರೆಗೆ ನಡೆಸಿ, ಕಾರ್ತಿಕಮಾಸದ ಕೊನೆಯದಿನದಲ್ಲಿ ವ್ರ

ತಸಮಾಪ್ತಕಾಲದಲ್ಲಿ ಮಾಡಬೇಕಾದ ಭಗವದುಪಚಾರಗಳನ್ನೆಲ್ಲಾ ಕ್ರಮ ವಾಗಿ ನಡೆಸಬೇಕು. ಮರುದಿನದಬೆಳಗ್ಗೆ ಎದ್ದಕೂಡಲೆ ಸ್ನಾನಮಾಡಿಬಂದು, ಹಿಂದಿನಂತೆ ಭಗವಂತನನ್ನು ಯಥಾವಿಧಿಯಾಗಿ ಪೂಜಿಸಿ, ಘೃತಮಿಶ್ರವಾದ ಪಾಯಸಾನ್ನವನ್ನು ಸಿದ್ಧಪಡಿಸಬೇಕು. ಅದನ್ನು ಪತಿಯ ಕೈಯಿಂದ ಹನ್ನೆ ರಡಾವರ್ತಿ ಅಗ್ನಿಯಲ್ಲಿ ಹೋಮಮಾಡಿಸಿ, ಆಡಿನವೇ ಹನ್ನೆರಡುಮಂದಿ ಬ್ರಾ ಹ್ಮಣರನ್ನು ಕರೆಸಿ, ಅವರನ್ನು ಪರಮಾತ್ಮಸ್ವರೂಪದಿಂದ ಭಾವಿಸಿ, ಮೃ ಷ್ಟಾನ್ನ ಭೋಜನಗಳಿಂದ ಅವರನ್ನು ಸಂತೋಷಗೊಳಿಸಬೇಕು. ಆ ಬ್ರಾ ಹ್ಮಣರೆಲ್ಲರಿಗೂ, ಎಳ್ಳು, ಬೆಲ್ಲ, ಅರಳು ಇವುಗಳೊಡನೆ ಜಲಕುಂಭಗಳನ್ನು ದಾನಮಾಡಿ, ಅವರಿಗೆ ನಮಸ್ಕರಿಸಿ ಅವರ ಆಶೀರ್ವಾದಗಳನ್ನು ಪಡೆಯಬೇ ಕು. ಆಮೇಲೆ ಪತಿಯು ಅವರ ಅನುಮತಿಯನ್ನು ಪಡೆದುಬಂದು, ತನ್ನ ಬಂ ಧುವರ್ಗಗಳೊಡನೆ ಭೋಜನವನ್ನು ಮಾಡಬೇಕು. ಆಮೇಲೆ ಆಚಾರ್ಯನನ್ನು ಮುಂದಿಟ್ಟುಕೊಂಡು ಮೌನದಿಂದ ಬಂದು, ಸ್ತ್ರೀಯರಿಗೆ ಸಂತಾನವನ್ನೂ, ಸೌಭಾಗ್ಯವನ್ನೂ ಉಂಟುಮಾಡತಕ್ಕ ಚರುಶೇಷವನ್ನು, ಪತಿಯು ತನ್ನ ಪ ತ್ನಿಯಕೈಗೆಕೊಟ್ಟು ಭೋಜನಮಾಡಿಸಬೇಕು. ಈವ್ರತವನ್ನು ಮೇಲೆ ಹೇಳಿದ ನಿಯಮದಿಂದ ವಿಧ್ಯುಕ್ತವಾಗಿ ನಡೆಸಿದಪಕ್ಷದಲ್ಲಿ, ಪುರುಷನಿಗೆ ಇಷ್ಟಾರ್ಥಗಳೆ ಲ್ಲವೂ ಕೈಗೂಡಿ ಬರುವುವು. ಸ್ತ್ರೀಯರು ಈವ್ರತದಿಂದ ಸಂತಾನವನ್ನೂ, ಸೌಭಾಗ್ಯವನ್ನೂ, ಸಂಪತ್ತುಗಳನ್ನೂ, ಪತಿಗೆ ಚಿರಾಯುಷ್ಯವನ್ನೂ ಯಶ ಸ್ಸನ್ನೂ, ಸಮಸ್ತ ಸದ್ಗುಣಗಳನ್ನೂ, ಬೇಕುಬೇಕಾದ ಇಷ್ಟವಸ್ತುಗಳ ನ್ನೂ ಪಡೆಯುವರು.

ಈ ವ್ರತವನ್ನು ಸಾಂಗವಾಗಿ ನಡೆಸುವುದರಿಂದ ವಿವಾಹವಿಲ್ಲದ ಕನ್ಯೆ ಯರು ಉತ್ತಮಪತಿಯನ್ನೂ, ಭಾಗ್ಯಹೀನರು ಭಾಗ್ಯವನ್ನೂ, ವಿಧವೆಯರು ಸದ್ಗತಿಯನ್ನೂ, ಆಗಾಗ ಮಕ್ಕಳನ್ನು ಕಳೆದುಕೊಂಡವರೇ ಚಿರಾಯುಷ್ಯ ವುಳ್ಳ ಪುತ್ರರನ್ನೂ, ಬಡವರು ಐಶ್ವರ್ಯವನ್ನೂ, ಕುರೂಪಿಗಳು ಮೇಲಾದ ಸೌಂದರ್ಯವನ್ನೂ, ವ್ಯಾಧಿಪೀಡಿತರು ಇಂದ್ರಿಯಬಲವನ್ನೂ ಹೊಂದು ವರು. ರಾಜೇಂದ್ರಾ! ಬಂದುಸಂವತ್ಸರಕಾಲದವರೆಗೆ ಶ್ರಮಪಟ್ಟು. ಈ

ವ್ರತವನ್ನು ನಡೆಸುವುದು ಹಾಗಿರಲಿ! ಶ್ರೀಯಳಸ್ವಾಧಕಗಳಾದ ಇತರಕರ್ಮ ಗಳನ್ನು ನಡೆಸುವಾಗಲೂಕೂಡ, ನಡುವೆ ಈ ವ್ರತಕಲ್ಪವನ್ನು ಯಾರು ಪಠನಮಾಡುವರೋ, ಅವರಲ್ಲಿ ದೇವತೆಗಳೂ ಪಿತೃದೇವತೆಗಳೂ, ಪ್ರಸನ್ನರಾಗಿ, ಸರ್ವಾಭೀಷ್ಟಗಳನ್ನೂ, ಕೈಗೂಡಿಸುವರು. ಆಯಾಕರ್ಮಗಳಲ್ಲಿ ಪಿತೃಗಳಿಗೂ. ದೇವತೆಗಳಿಗೂ ತೃಪ್ತಿಕರವಾದ ಹೋಮವನ್ನು ನಡೆಸಿದಮೇಲೆ, ಶ್ರೀಹರಿಯೂ, ಅಗ್ನಿಹೋತ್ರನೂ ಪ್ರಸನ್ನರಾಗಿ, ಸಮಸ್ತವರಗಳನ್ನೂ ಕೊಡುವರು. ರಾಜೇಂದ್ರಾ! ಮರುತ್ತುಗಳ ಜನ್ಮವೃತ್ತಾಂತವನ್ನೂ, ದಿತಿದೇವಿಯು ನಡೆಸಿದ ಪುಂಸವನವೆಂಬ ವ್ರತವನ್ನೂ ನನಗೆ ತಿಳಿಸಿದುದಾಯಿತು" ಎಂದನು. ಇಲ್ಲಿಗೆ ಹತ್ತೊಂಬತ್ತನೆಯ ಅಧ್ಯಾಯವು.

ಆರನೆಯಸ್ಕಂಧವು ಸಮಾಪ್ತವು

ಶ್ರೀ ಕೃಷ್ಣಾಯ ಪರಬ್ರಹ್ಮಣೇ ನಮಃ

ಶ್ರೀ ಕೃಷ್ಣಾರ್ಪಣಮಸ್ತು

ಶ್ರೀಃ.

